# ಬೆಳೆಯುತ್ತಿರುವ ನಿಮ್ಮ ಅವಶ್ಯಕತೆಗಳಿಗೆ ತಕ್ಕಂತೆ ಉಳಿತಾಯ ಮಾಡಿರಿ ...




ಸೆಂಟ್ರಲ್ ಬ್ಯಾಂಕಿನ

## ಮನಿ ಮಲ್ಟಿಪ್ಲೆಯರ್ ಡಿಪಾಜಿಟ್ ಸ್ಕೀಮನಲ್ಲಿ

ಹಣತೊಡಗಿಸಿರಿ

ನೀವೇ ನೋಡಿರಿ. ನೀವು ತೊಡಗಿಸಿದ ರೂ 5000/- 7 ವರ್ಷಗಳಲ್ಲಿ ರೂ 10,040 ರಷ್ಟಾಗುತ್ತದೆ. ಹಾಗೆಯೆ 10 ವರ್ಷಗಳಲ್ಲಿ ಅದು ರೂ 13,535/- ರಷ್ಟಾಗುತ್ತದೆ.

ಹೀಗೆ ನಿಮ್ಮ ಹಣವು ಮನಿ ಮಲ್ಟಿಪ್ಲೆಯರ್ ಡಿಪಾಜಿಟ್ ಸ್ಕೀಮನಲ್ಲಿ ಬೆಳೆಯುತ್ತ ಹೋಗುತ್ತದೆ. ನಿಮ್ಮ ಅವಶ್ಯಕತೆಗಳನ್ನು ಮೀರಿಸುವಷ್ಟು ನಿಮ್ಮ ಉಳಿತಾಯವು ಬೆಳೆಯುತ್ತದೆ.

ಹೆಚ್ಚಿನ ವಿವರಗಳಿಗಾಗಿ ನಿಮ್ಮ ಸಮೀಪದ ಸೆಂಟ್ರಲ್ ಬ್ಯಾಂಕಿನ ಶಾಖೆಯನ್ನು ಸಂದರ್ಶಿಸಿರಿ.



**ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ**

(ಭಾರತ ಸರಕಾರದ ಸಂಸ್ಥೆ)

ಜನತೆ ಇದ್ದಲ್ಲಿಗೆ ಸ್ಥಳದಿಂದ ಸ್ಥಳಕ್ಕೆ ಹೋಗುವ ಬ್ಯಾಂಕ್

CBI-664-77 KN

ದೀಪಾವಳಿಯ ಹಾರ್ದಿಕ ಶುಭಾಶಯಗಳು

# ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್ ಲಿ.

ಹಣ ತೊಡಗಿಸಿರಿ

---

## ವಿಶೇಷ ಅವಧಿ ಠೇವಣಿ ಯೋಜನೆ

---

೫೦೦ ರೂ. ಮೇಲ್ಪಟ್ಟು ೧೦೦ ರೂ. ಗುಣಕದಲ್ಲಿ ೧೩ ರಿಂದ ೨೪೦ ತಿಂಗಳ ವರೆಗೆ ಠೇವಣಿಯನ್ನು ಸ್ವೀಕರಿಸಲಾಗುವದು.

ಬ್ಯಾಂಕಿನ ಬಡ್ಡಿ ಮೇಲೆ ೩೦೦೦ ರೂ. ವರೆಗೆ ತೆರಿಗೆ ವಿನಾಯಿತಿ ಇದೆ.

ಹೆಚ್ಚಿನ ವಿವರಗಳಿಗಾಗಿ ನಮ್ಮ ಬ್ಯಾಂಕಿನ ಯಾವುದೇ ಶಾಖೆಯಲ್ಲಿ ವಿಚಾರಿಸಿರಿ.

ಹಿರಿಯರಿರಲಿ, ಕಿರಿಯರಿರಲಿ, ಎಲ್ಲರಿಗಾಗಿ



**STATE BANK OF HYDERABAD**



# ದೀಪಾವಳಿ

## ಝುಗಝುಗಿಸುವ ಬೆಳಕಿನ ಉತ್ಸವ

Dattaram-ITI-4

## ಎಲ್ಲರೂ ಶುಭ ಬಯಸುವ ಸುದಿನ

ದೀಪಾವಳಿ ಉತ್ಸವ ಒಬ್ಬರಿಗೊಬ್ಬರು ಶುಭಕೋರುವ ಸುದಿನ. ಉತ್ತಮ ಸಂಪರ್ಕ ಸೌಲಭ್ಯಗಳು ಶುಭಸಂದೇಶಗಳನ್ನು ಕಳಿಸುವಲ್ಲಿ ನೇರವಾಗಿ ಜನರು ನಿಕಟವರ್ತಿಯಾಗುವಲ್ಲಿ ನೆರವಾಗಿವೆ.

ಐ.ಟಿ.ಐ. ಸ್ವತಂತ್ರ ಭಾರತದ ಮೊಟ್ಟಮೊದಲ ಸಾರ್ವಜನಿಕ ಉದ್ಯಮ. ಸುಮಾರು ೩೦ ವರ್ಷಗಳ ಪರಿಶ್ರಮ, ದಕ್ಷ ಟೆಲಿಸಂಪರ್ಕ ಒದಗಿಸುವಲ್ಲಿ ನೆರವಾಗಿದೆ. ಈ ಕಾಲಾವಧಿಯಲ್ಲಿ ಐ. ಟಿ. ಐ. ನ ಕಾರ್ಯನಿರ್ವಹಣೆ ಅತ್ಯಂತ ಪ್ರಕಾಶಮಾನವಾದದ್ದು. ಸಣ್ಣ ಪ್ರಮಾಣದಲ್ಲಿ ಸ್ಥಾಪಿತವಾದ ಐ.ಟಿ.ಐ. ಇಂದು ಒಂಬತ್ತು ಘಟಕಗಳೊಂದಿಗೆ ರಾಷ್ಟ್ರದಲ್ಲಿಯೇ ಅತಿ ದೊಡ್ಡ ಉದ್ಯಮಗಳಲ್ಲಿ ಒಂದಾಗಿದೆ. ಬೆಂಗಳೂರಿನಲ್ಲಿ ನಾಲ್ಕು, ನೈಬಿಯಲ್ಲಿ ಎರಡು, ಶ್ರೀನಗರ, ರಾಯ್‌ಬರೇಲಿ ಮತ್ತು ಪಾಲ್ಘಾಟ್‌ನಲ್ಲಿ ಒಂದೊಂದು ಘಟಕಗಳನ್ನು ಹೊಂದಿದೆ.

೨೪,೦೦೦ ಜನರಿಗೆ ಉದ್ಯೋಗ ಕಲ್ಪಿಸಿಕೊಟ್ಟಿರುವ ಐ.ಟಿ.ಐ. ಇಂದು ಟೆಲಿಫೋನ್ ಮತ್ತು ಮೈಕ್ರೋವೇವ್ ಒಳಗೊಂಡು ವಿವಿಧ ರೀತಿಯ ಸಂಪರ್ಕ ಉಪಕರಣಗಳನ್ನು ಒದಗಿಸುತ್ತಿದೆ. ರಾಷ್ಟ್ರದ ಬೇಡಿಕೆಗಳನ್ನು ಪೂರೈಸುವುದರ ಜೊತೆಗೆ ಪ್ರಪಂಚದ ಇತರ ೪೦ ರಾಷ್ಟ್ರಗಳಿಗೆ ರಫ್ತು ಮಾಡುತ್ತಿದೆ. ೧೯೬೬-೬೭ರ ಒಟ್ಟು ಮಾರಾಟ ೮೩ ಕೋಟಿ ರೂಪಾಯಿಗಳಿಗೂ ಮೀರಿ ಒಂದು ಹೊಸ ವಿಕ್ರಮ ಸ್ಥಾಪಿಸಿದೆ.

**ಇಂಡಿಯನ್ ಟೆಲಿಫೋನ್ ಇಂಡಸ್ಟ್ರೀಸ್ ಲಿಮಿಟೆಡ್, ಬೆಂಗಳೂರು.**



# ಕರ್ಮವೀರ

## ದೀಪಾವಳಿ ಸಂಚಿಕೆ



### ಬರುತ್ತಿರುತ್ತದೆ

ಮನೋಭಿಲಾಷೆಗೂ, ಮನೋವಿಕಾಸಕ್ಕೂ ಸೇತುವೆ ಹಾಕುವ ಮತ್ತೊಂದು ವರ್ಷ ಉರುಳಿ ಮತ್ತೆ ದೀಪಾವಳಿ ಬಂತು. ಬರುತ್ತಿರುತ್ತದೆ ಮನವನ್ನೂ, ಊರನ್ನೂ ಒಮ್ಮೆಲೇ ತೊಳೆದು ಹೊಸ ತನ್ನು ಕಾಣಿಸುವ ದೀಪಾವಳಿ ಹಬ್ಬದೊಂದಿಗೆ ಹಿಂದಿನದು ಹಿಂದಕ್ಕೆ ಹೋಗಿ, ಮುಂದಿನ ಹಾದಿಗೆ ಹೊಸ ವೇದಿಕೆ ಸಿದ್ಧವಾಗುತ್ತದೆ. ಇದುವರೆಗಿನ ಶ್ರಮ, ಸಾಧನೆಗಳು ಆಗ ಗೌಣ. ಆದರೆ ಉತ್ಸಾಹಕ್ಕೆ ಮಾತ್ರ ಎರಡು ಕೋಡು. ಕರ್ಮವೀರ ಮತ್ತೆ ನಿಮ್ಮೊಡನೆ ದೀಪಾವಳಿಯಲ್ಲಿ ಪಾಲ್ಗೊಳ್ಳುತ್ತಿದೆ. ಸಾಮಾಜಿಕ ಜೀವನದಲ್ಲಿ ಪಾಲ್ಗೊಳ್ಳುವ, ಜೊತೆಗೆ ಯುವ ಜನತೆಯ ಹಸ್ತಸ್ನೇಹಿತನಾಗುವ ಬದಲಾವಣೆ. ಈ ಅವಧಿಯ ಒಂದು ಹೆಜ್ಜೆ. ಈ ಸಂಚಿಕೆಗೆ ಸರ್ವ ವಿಧದ ಸರ್ವಪ್ರಕಾರದ ಹಿನ್ನೆಲೆ. ಜೊತೆಗೆ ಹೆಚ್ಚು ವಸ್ತು. ಸೂಕ್ಷ್ಮವಾಗಿ ನೋಡಿದಾಗ ಸಮಕಾಲೀನ-ತೆಯ ಗುಂಗು.

ಬಯಸುವುದನ್ನೇ ಕೊಡಬೇಕೆಂಬ ಬಯಕೆ. ಅದೇ ಕ್ಷೇತ್ರದಲ್ಲಿ ನುರಿತವರಿಂದ ಅದೇ ವಿಷಯದ ಬಗ್ಗೆ ಬರಹ. ಜೊತೆಗೆ ಯುವ ಬರಹಗಾರರು, ಹೊಸಬರು. ಎಲ್ಲರಿಗೂ ಸಮಾನ ಪ್ರಾಶಸ್ತ್ಯ. ಜೊತೆಗೆ ಹೊಸತನ. ಇದು ನಿಮಗೆ ಇಷ್ಟವಾಗ-ಬಹುದು ಎಂಬ ಅನಿಸಿಕೆ.

ಸಂಪಾದಕ

೧೯೭೭


ವ್ಯವಸ್ಥಾಪಕ ಸಂಪಾದಕ: ರಂಗನಾಥ ದಿವಾಕರ

ಪ್ರಧಾನ ಸಂಪಾದಕ: ಖಾದ್ರಿ ಶಾಮಣ್ಣ

ಸಂಪಾದಕ: ಕೆ. ಜನಾರ್ದನ

ಸಹಾಯಕರು:
• ಆರ್. ನರಸಿಂಹ • ಗಂಗಾಧರ ಮೊದಲಿಯಾರ್ • ಗೋಪಾಲ ವಾಜಪೇಯಿ • ಅರವಿಂದ ಆರ್ಯ

ರೇಖಾ ಚಿತ್ರಗಳು: • ಕೆ. ಬಿ. ಕುಲಕರ್ಣಿ • ಪಿ. ಆರ್. ಪಾಟೀಲ

# ಸಾಮಾನ್ಯ ಪೌಡರುಗಳಿಂದ ಸ್ವಚ್ಛಗೊಳಿಸುವಾಗ ಪುಡಿಯ ಶೇಷ ಉಳಿಯಬಹುದು



# ವಿಮ್ ಪರಿಶುದ್ಧ ಹೊಳಪನ್ನು ಕೊಡುತ್ತದೆ.

## ಅದರಲ್ಲಿ 50% ಹೆಚ್ಚಿಗೆ ಸ್ವಚ್ಛಗೊಳಿಸುವ ಶಕ್ತಿಯಿದೆ.

ವಿಮ್‌ನಲ್ಲಿ ಬೇರೆ ಯಾವುದೇ ಸ್ವಚ್ಛಗೊಳಿಸುವ ಪೌಡರ್‌ಗಿಂತ ಹೆಚ್ಚು ಡಿಟರ್ಜಂಟ್ ಇದೆ. ಆದ್ದರಿಂದಲೇ ಅದರ ಹೆಚ್ಚು ಸ್ವಚ್ಛಗೊಳಿಸುವ ಶಕ್ತಿ ಕೂಡಲೇ ಜಿಡ್ಡನ್ನು ಮತ್ತು ಕಲೆಗಳನ್ನು ಹೋಗಲಾಡಿಸುತ್ತದೆ, ಮತ್ತು ಪುಡಿ ಉಳಿಕೆಯನ್ನು ಇರಗೊಡುವುದಿಲ್ಲ. ಮಾತ್ರವಲ್ಲ, ಅದು ಅತಿ ಸೂಕ್ಷ್ಮವಾದ ಪೌಡರ್ ಆಗಿರುವುದರಿಂದ, ಅದು ನುಣುಪಾಗಿ ಗೀರು ಬೀಳದಂತೆ ಸ್ವಚ್ಛಗೊಳಿಸುತ್ತದೆ. ವಿಮ್‌ನಿಂದ ಎಲ್ಲವೂ ಲಕಲಕ ಹೊಳೆಯುತ್ತವೆ.







**ಈ ಪ್ಯಾಕ್ ಕೊಂಡಾಗ ನಿಮ 25% ಗಿಂತಲೂ ಹೆಚ್ಚು ಉಳಿತಾ**

ಹಿಂದುಸ್ತಾನ್ ಲೀವರ್ ಅವರ ಈ ಉತ್ಕೃಷ್ಟ ತಯಾರಿಕೆಯು 600 ಗ್ರಾಮ್ ಮತ್ತು 2.5 ಕಿ.ಜಿ. ಪ್ಯಾಕ್‌ಗಳಲ್ಲಿ ಮಾತ್ರ ದೊರೆಯುತ್ತದೆ. ಬಿಡಿಯಾಗಿ ಎಂದೂ ಮಾರಲಾಗುವುದಿಲ್ಲ.



## ● ಡಾ॥ ಹಾ ಮಾ ನಾಯಕ

ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಎಲ್ಲವೂ ಒಪ್ಪ ಓರಣ. ಕೆಲಸವೂ ಎಲ್ಲ ಸಲೀಸು. ಇದು ನಿರ್ದೇಶಕರಾದ ಡಾ॥ ಹಾ. ಮಾ. ನಾಯಕರ ಕಾರ್ಯವೈಖರಿ. ಭಾಷಾ ವಿಜ್ಞಾನದಲ್ಲಿ ಪರಿಣತಿ. ಭಾರತೀಯ ಎಲ್ಲ ಭಾಷಾ ಸಾಹಿತ್ಯದ ಬಗ್ಗೆಯೂ ಅಧಿಕಾರಯುತ ಮಾತು. ಕಲ್ಕತ್ತಾ, ಅಮೆರಿಕೆಗಳ ಇಂಡಿಯಾನಾ ವಿಶ್ವವಿದ್ಯಾನಿಲಯಗಳಲ್ಲಿ ಅಧ್ಯಯನ. ಪೆನ್ಸಿಲ್ವೇನಿಯಾ ವಿಶ್ವವಿದ್ಯಾನಿಲಯದಲ್ಲಿ ಗೌರವಾನ್ವಿತಸಂದರ್ಶಕ ವಿದ್ವಾಂಸರಾಗಿದ್ದರು. ಕನ್ನಡ ವಿಶ್ವಕೋಶದ ಪ್ರಧಾನ ಸಂಪಾದಕರು. ಇಂಗ್ಲೀಷ್–ಕನ್ನಡಗಳಲ್ಲಿ ಮೂವತ್ತಕ್ಕೂ ಹೆಚ್ಚು ಗ್ರಂಥ ಬರೆದಿದ್ದಾರೆ. ಎಲ್ಲಕ್ಕಿಂತ ಹೆಚ್ಚು : ತಮ್ಮ ಶಿಷ್ಯರಿಗೆ ಮರೆಯಲಾಗದ ಗುರುಗಳು. ನ್ಯಾಯಾನ್ಯಾಯ ವಿವೇಚನೆ ಉಳಿಸಿಕೊಳ್ಳೋಣ ಎಂಬುದು ಅವರ ಮಾತು. ಹಾಗಂದರೇನು? ಪುಟ ೧೭ರಲ್ಲಿ ನೋಡಿ.



## ● ಜಯಶೀಲ

'ಯಾರಿವರು?'

ಇವರು ಜಯಶೀಲ.

'ಏನಿವರು?'

ಸಂಯುಕ್ತ ಕರ್ನಾಟಕದ ಜಂಟಿ ಸಂಪಾದಕರು.. "ಯಾರಿವರು" ಕಾಲಂ ಮೂಲಕ ಎಲ್ಲರ ಪರಿಚಿತರು. ಬೆನ್ನಿಗೆ ಸದನ ಸಮೀಕ್ಷೆಯ ನೆನಪನ್ನೂ ತರುವವರು. ವರದಿಗೆ ಹೊಸ ತಿರುವು ನೀಡಿ ಹೊಸ ಜಾಡನ್ನೇ ಸೃಷ್ಟಿಸಿದವರು. ಅಲ್ಲದೆ, ವರದಿಯಲ್ಲಿ ಚಿತ್ರಗಳ ರೂಪ ಕಣ್ಣಿಗೆ ಕಟ್ಟುವಂತೆ ಮಾಡಿ, ಅಲ್ಲಿಗೇ ನಮ್ಮನ್ನು ಕೊಂಡೊಯ್ಯುವವರು. ಅಲ್ಲದೆ, ಪತ್ರಿಕೋದ್ಯಮದಲ್ಲಿ ಪ್ರವೇಶಿಸಿದವರಿಗೆ ತರಬೇತಿ ನೀಡಿ, ಉತ್ತಮ ಪತ್ರಕರ್ತರನ್ನಾಗಿಸಿ ಹೊಸ ಅಡಿಗಲ್ಲನ್ನಿಟ್ಟವರು ಇವರು. ಪೂರ್ಣ ಹೆಸರು : ಎಸ್. ವಿ. ಜಯಶೀಲರಾವ್. ಇವರ ಮೊದಲ ದೀಪಾವಳಿ ಆಚರಣೆ ೧೮ ನೆಯ ಪುಟದಲ್ಲಿದೆ.



## ● ಗಿರಡ್ಡಿ ಗೋವಿಂದರಾಜ

ಉತ್ತಮ ವಿಮರ್ಶಕ, ಕತೆಗಾರ, ಜೊತೆಗೆ ಇಂಗ್ಲೀಷ್. ಅಧ್ಯಾಪಕ. ಗುಲ್ಬರ್ಗದ ಸ್ನಾತಕೋತ್ತರ ಕೇಂದ್ರದಲ್ಲಿರುವ ಗಿರಡ್ಡಿಯವರ ಬಗೆಗಿನ ಮಾತಿದು. ಮಹಿಳಾ ಕಾದಂಬರಿಗಳಲ್ಲಿನ ಹೊಳಹನ್ನು ಅವರು ಎತ್ತಿ ತೋರಿಸಿರುವ ವೈಖರಿಯನ್ನು ೫೦ನೆಯ ಪುಟದಿಂದ ಓದಿ.



## ● ಹೇಮಾ ಧಾರವಾಡ

ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಮನೋವಿಜ್ಞಾನದ ಅಧ್ಯಾಪಕಿಯಾಗಿರುವ ಹೇಮಾ ಹೊನ್ನಾಪ್ರಮಠ ಅವರು ಪುರುಷ ಪ್ರಭುತ್ವವನ್ನು ಹೇಗೆ ತರಾಟೆಗೆ ತೆಗೆದುಕೊಂಡಿದ್ದಾರೆ ಎಂಬುದನ್ನು [illegible]ನೆಯ ಪುಟದಲ್ಲಿ ಓದಿಯೇ ತಿಳಿಯಬೇಕು. ಕತೆಗಳನ್ನೂ ಬರೆಯುವ ಹೇಮಾ, ಈ ಲೇಖನವನ್ನು ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ವಿವರಿಸಿಕೊಂಡು ಹೋಗುತ್ತಾರೆ.



## ● ಜಿ. ನಾ. ಗರುಡಾಚಾರ್

ಈಗಿನ ಪೋಲೀಸ್ ಕಮೀಷನರ್ ಜಿ. ಎನ್. ಗರುಡಾಚಾರ್ ಅವರದು ಹಲವು ವಿಧಗಳ ಬಹುಮುಖಿ ಸೇವೆ. ಬೆಂಗಳೂರಿನಲ್ಲಿ ಟ್ರಾಫಿಕ್‌ಗಾಗಿಯೇ ನೇಮಕವಾಗಿದ್ದ ಪ್ರಪ್ರಥಮ ಡೆಪ್ಯೂಟಿ ಪೋಲೀಸ್ ಕಮೀಷನರ್. ಮಂಡ್ಯ ಬಳಿಯ ಬಿಂಡಿಗನವಿಲೆ ಊರು. ಮೈಸೂರು ವಿ. ವಿ.ಯಲ್ಲಿ ಎಂ. ಎ. ಮೌಂಟ್ ಅಬು, ಔರಂಗಾಬಾದ್, ಕೊಲ್ಹಾಪುರ, ಹುಮನಾಬಾದ್, ಗುಲ್ಬರ್ಗ ತುಮಕೂರು, ಶಿವಮೊಗ್ಗ ಹೀಗೆ ಹಲವು ಪ್ರದೇಶಗಳಲ್ಲಿ ಸೇವೆ. ರಾಷ್ಟ್ರಾಧ್ಯಕ್ಷರಿಂದ ಪೋಲೀಸ್ ಮೆಡಲ್. "ಸಿನಿಮಾ ಟಿಕೇಟು ಗಳ ಕಾಳಸಂತೆ, ಅಂತ್ಯವಿದೆಯೇ ಇದಕೆ?" ಈ ಲೇಖನ ಇವರದು. ಪುಟ: ೬೯ರಲ್ಲಿ ನೋಡಿ.



## ● ವಿಜಯ ಸಾಸನೂರ

ಪೋಲೀಸ್ ಸೂಪರಿಂಟೆಂಡೆಂಟ್ ಆದರೂ ಸಾಹಿತ್ಯದ ಸೇವೆ. ಇದು "ವಿಜಯ ಸಾಸನೂರ" ಸಾಧಿಸಿದ ವಿಜಯ. ಮೂವತ್ತರ ಹೊಸ್ತಿಲು. ಎಮ್. ಎಸ್‌ಸಿ. ಪದವಿ. ಹಾಸನ, ಮಂಡ್ಯಗಳಲ್ಲಿ ಸೇವೆ. ನಂತರ ಚನ್ನಪಟ್ಟಣದ ಪೋಲೀಸ್ ತರಬೇತಿ ಶಾಲೆಯಲ್ಲಿ ಪ್ರಿನ್ಸಿಪಾಲ್. ಈಗ ಬೆಂಗಳೂರು ಜಿಲ್ಲೆಯ ಪೋಲೀಸ್ ಸೂಪರಿಂಟೆಂಡೆಂಟ್. ಆರು ಕಥಾ ಸಂಕಲನಗಳು ಪ್ರಕಟವಾಗಿವೆ. ಕವನ ಸಂಕಲನ, ಹೊಸ ಬಗೆಯ ಪ್ರವಾಸ ಕಥನ ಬರಲಿದೆ.

## ● ಶ್ರೀ ಪಂಚಾಕ್ಷರಿ ಹಿರೇಮಠ

ಹಿಂದಿ, ಉರ್ದುಗಳ ಉತ್ತಮ ಸಾಹಿತ್ಯವನ್ನು ಕನ್ನಡಕ್ಕೆ ತರುವುದು. ಜೊತೆಗೆ ಚುಟುಕುಗಳು. ಕವನಗಳು. ಈ ಮೂಲಕ ಕನ್ನಡಿಗರಿಗೆ ಪರಿಚಿತರಾಗಿರುವ ಶ್ರೀ ಪಂಚಾಕ್ಷರಿ ಹಿರೇಮಠರು ಈ ಸಂಚಿಗಾಗಿ ಉರ್ದುವಿನ ಉತ್ತಮ ಕತೆಯೊಂದನ್ನು ಅನುವಾದಿಸಿದ್ದಾರೆ ಐವತ್ತಕ್ಕೂ ಮಿಕ್ಕಿದ ಕೃತಿಗಳು ಬಂದಿವೆ ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ಸಂಶೋಧನಾ ಕೇಂದ್ರದಲ್ಲಿರುವ ಶ್ರೀ ಹಿರೇಮಠರ ಉರ್ದುವಿನಿಂದ ಅನುವಾದಿಸಿದ "ಸೆಕೆಂಡ್ ಹ್ಯಾಂಡ್" ಕತೆ. ೬೯ ನೆಯ ಪುಟದಲ್ಲಿದೆ.





## ● ಶ್ರೀಮತಿ ನಜಮಾ ನಿಕಹತ್

ಉರ್ದು ಭಾಷೆಯಲ್ಲಿ ಬರೆಯುತ್ತಿರುವ ಲೇಖಕಿಯರಲ್ಲಿ ಶ್ರೀಮತಿ ನಜಮಾ ನಿಕಹತ್ ಮುಖ್ಯರು. ಉರ್ದುವಿನ ಪತ್ರಿಕೆಗಳಲ್ಲಿ ಇವರ ಕತೆಗಳು ಪ್ರಸಿದ್ಧವಾಗಿವೆ. ಜೀವನವನ್ನು ವಾಸ್ತವವಾಗಿ ನೋಡುವುದು ಇವರ ದೃಷ್ಟಿ. ನಿರೂಪಣೆ, ತಂತ್ರಗಳು ಓದುಗರ ಮನಸ್ಸಿಗೆ ಮೋಡಿ ಹಾಕುತ್ತವೆ. ಇಂಥವುಗಳಲ್ಲಿ ಒಂದು 'ಸೆಕೆಂಡ್ ಹ್ಯಾಂಡ್' ಕತೆ. ಕತೆಯ ಹೆಸರು ಮಾತ್ರ "ಸೆಕೆಂಡ್ ಹ್ಯಾಂಡ್."

## ಈ ಸಂಚಿಕೆಯ ಕವಿಗಳು

### ● ಚಂದ್ರಶೇಖರ ಕಂಬಾರ

ಜಾನಪದ ಗತ್ತುಗಳೊಡನೆ ತನ್ನದೇ ಆದ ಗಮ್ಮತ್ತು ಕೊಡುವ ಕವಿ. ಕಾದಂಬರಿಕಾರ, ನಾಟಕಕಾರ, ಕವಿ, ಸಾಹಿತಿ. "ಕರಿಮಾಯಿ" ಅವರ ಕಾದಂಬರಿ. ಕಾದಂಬರಿ ಪ್ರಕಾರಗಳಲ್ಲಿ ಹೊಸ ಅನುಭವ. ಅವರ "ಕಾಡು ಕುದುರೆ" ಈಗ ಸಿನಿಮಾ ಆಗುತ್ತಿದೆ. ಆ ಸಿನಿಮಾದಲ್ಲಿನ ಒಂದು ಹಾಡು "ಕಾಡು ಕುದುರೆ ಓಡಿ ಬಂದಿತ್ತ..." ಎಂಥ ಮಜಾ ಇದೆ ಎನ್ನುವುದನ್ನು ೪೮ನೆಯ ಪುಟದಲ್ಲಿ ನೋಡಿರಿ.

### ● ಚಂದ್ರಶೇಖರ ಪಾಟೀಲ

ವ್ಯಂಗ್ಯ ಇವರ ವೈಶಿಷ್ಟ್ಯ. ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲೀಷ್ ಅಧ್ಯಾಪಕರು. ಕವನ ಸಂಕಲನ, ನಾಟಕ ಬಂದಿದೆ. "ಸಂಕ್ರಮಣ" ಸಾಹಿತ್ಯಿಕ ದ್ವೈಮಾಸಿಕದ ಸಂಪಾದಕರು. ಧಾರವಾಡದ ಹುಚ್ಚಾಸ್ಪತ್ರೆಯ ಹತ್ತಿರ ಮನೆ. ಇವರ "ಹತ್ತರ ಗಂಟುಗಳು" ೪೭ನೆಯ ಪುಟದಲ್ಲಿದೆ.

### ● ಚಂದ್ರಕಾಂತ ಕುಸನೂರ

ಅಸಂಗತ ನಾಟಕಗಳ ಮೂಲಕ ಬೆಳಕಿಗೆ ಬಂದವರು. ಕವಿ ಕೂಡಾ. ಚರ್ಚ್ ಗೇಟ್, ಯಾತನಾ ಶಿಬಿರ ಕಾದಂಬರಿಗಳು. ಗುಲ್ಬರ್ಗದ ಗವರ್ನಮೆಂಟ್ ಜ್ಯೂನಿಯರ್ ಕಾಲೇಜಿನಲ್ಲಿ ಹಿಂದೀ ಅಧ್ಯಾಪಕರು. "ಅಧಿನಾಯಕ"ನನ್ನು ಅವರು ಪರಿಚಯಿಸಿರುವ ಪರಿಯನ್ನು ೧೯೯ನೆಯ ಪುಟದಲ್ಲಿ ನೋಡಿರಿ.

### ● ಸಿದ್ಧಲಿಂಗ ಪಟ್ಟಣಶೆಟ್ಟಿ

ನಾಟಕ ಬರೆದಿದ್ದಾರೆ, ಅನುವಾದಿಸಿದ್ದಾರೆ. ಕಾವ್ಯ ಬರೆದಿದ್ದಾರೆ, ಕವಿಗಳಾಗಿದ್ದಾರೆ. ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಹಿಂದೀ ರೀಡರ್ ಪಟ್ಟಣಶೆಟ್ಟಿ, "ಕವನ ಬರೆಯುವ ಧಂಧೆ"ಯನ್ನು ೬೩ನೆಯ ಪುಟದಲ್ಲಿ ಮಾಡಿದ್ದಾರೆ.

### ● ಎನ್. ವಿ. ಭಾಗ್ಯಲಕ್ಷ್ಮಿ

ಭಾಗ್ಯಲಕ್ಷ್ಮಿ ಇತ್ತೀಚೆಗೆ ಕೇಳಿ ಬರುತ್ತಿರುವ ಹೆಸರು. "ಬೆರಳ ಸಂದಿಯ ಬದುಕು" ಅವರ ಕವನ ಸಂಕಲನ ಬೆಂಗಳೂರು ಕನ್ನಡ ಅಧ್ಯಯನ ಕೇಂದ್ರದಲ್ಲಿ ಸಂಶೋಧಕಿ. ಅವರ 'ವಯಸ್ಸು' ಎಷ್ಟು ಗೊತ್ತೇ ? ೩೧ನೆಯ ಪುಟ ನೋಡಿ.

### ● ಜಯ ಸುದರ್ಶನ

ಜಿ. ಎಸ್. ಶಿವಪ್ರಕಾಶ ಇವರ ನಾಮಧೇಯ. ಕನ್ನಡ–ಇಂಗ್ಲೀಷ್ ಭಾಷೆಯಲ್ಲಿ ಕವನ ರಚನೆ. ಸಂಕಲನ. "ಇಸ್ಕಾ"ದಲ್ಲೂ ಸೇವೆ. "ಹೀಗೇ ಸರಿ ಎಂದರೆ..."ಎಂದು ಏನೋ ಹೇಳುತ್ತಾರೆ ನೋಡಿ, ೯೫ನೆಯ ಪುಟದಲ್ಲಿ.

### ● ಸರಜೂ ಕಾಟಕರ

ಚಿಗುರುತ್ತಿರುವ ಕವಿ. ಮೊದಲೇ ಎರಡು ಸಂಕಲನ. ಜೊತೆಗೆ ಪತ್ರಕರ್ತ. ಸುದ್ದಿಯ ಜೊತೆಗೆ ಕವನವನ್ನೂ ಬರೆವ ಹಠ. ಒಂದು ರೀತಿಯಲ್ಲಿ ಎರಡೂ ಸಮಾಚಾರ. ಸರಜೂ ಮಾಡಿರುವ ಯುದ್ಧವನ್ನು ೭೧ನೆಯ ಪುಟದಲ್ಲಿ ನೋಡಿ.

# ಸುದ್ದಿ ನೋಡುತ್ತಿದ್ದಂತೆ!

## ● ಯಾವ ಪ್ರಸನ್ನ ಬೇಕು ?



ಪ್ರಸನ್ನ

“ಪ್ರಸನ್ನ”...ಇದು ಬೆಂಗಳೂರಿನಲ್ಲಿ ಬಹಳ ಕನ್‌ಫ್ಯೂಶನ್. ಪ್ರಸನ್ನರ ಬಳಿ ಹೋದರೆ “ನಿಮಗೆ ಯಾವ ಪ್ರಸನ್ನ ಬೇಕು?” ಎಂದು ಪ್ರಶ್ನಿಸುತ್ತಾರೆ! ಏಕೆಂದರೆ ಇಬ್ಬರು ಪ್ರಸನ್ನರಿದ್ದಾರೆ! ಇಬ್ಬರೂ ನಾಟಕಕಾರರು! ಅದೇ ಇಲ್ಲಿ ತಾಪತ್ರಯ!

“ಸಮುದಾಯ”ದ ಪ್ರಸನ್ನ ಬೇರೆ. ಕೆ. ಇ. ಬಿ.ಯಲ್ಲಿ ಇಂಜಿನಿಯರ್ ಆಗಿರುವ ಎ. ಎನ್. ಪ್ರಸನ್ನ ಬೇರೆ.

ಎ. ಎನ್. ಪ್ರಸನ್ನರ “ಒಂದಾನೊಂದು ಕಾಡಿನಲ್ಲಿ” ಮಕ್ಕಳ ನಾಟಕ ಈ ವರ್ಷ ಬಹುಮಾನ ಪಡೆದಿದೆ. “ಉಳಿದವರು” ಕಥಾ ಸಂಕಲನ ರಾಜ್ಯ ಪ್ರಶಸ್ತಿ ಪಡೆದಿದೆ. “ಗಾಡೊ” ನಾಟಕವನ್ನು ಇವರೇ ಅನುವಾದಿಸಿದ್ದಾರೆ. ಇವರ “ಇಂಗಮರ್ ಬರ್ಗ್‌ಮನ್” ಬಗ್ಗೆ ಬರೆದ ಲೇಖನ ಈ ಸಂಚಿಕೆಯ ೧೪೦ನೆಯ ಪುಟದಲ್ಲಿದೆ.

“ಪ್ರಸನ್ನ” ರಂಗಭೂಮಿಯ ಇತ್ತೀಚಿನ ಹೆಸರು. “ಕಮಿಟೆಡ್” ನಾಟಕಗಳನ್ನು ಮೊದಲ ಬಾರಿಗೆ ಸ್ಟೇಜಿಗೇರಿಸಿದರು. ಬ್ರೆಕ್ಟ್‌ನ “ತಾಯಿ” ನಾಟಕವನ್ನು ಅನುವಾದಿಸಿದ ಪ್ರಸನ್ನ ಅದನ್ನು ನಿರ್ದೇಶಿಸಿ ಪ್ರಯೋಗ ಮಾಡಿದರು ಕೂಡ. ರಂಗಭೂಮಿಯ ಹೊಸ ಯುವಕ ನಿರ್ದೇಶಕ ಪ್ರಸನ್ನ ಇತ್ತೀಚೆಗೆ ಮದುವೆಯಾದರು! ಮುಂದಿನ ಅಂಕವನ್ನು ಕಾದು ನೋಡಬೇಕು.

“ಹೋರಾಟದ ಅಂಗವಾಗಿ ರಂಗಭೂಮಿ” ಎಂಬ ಅವರ ಲೇಖನ ಈ ಸಂಚಿಕೆಯ ೩೮ನೆಯ ಪುಟದಲ್ಲಿದೆ.



ಎ. ಎನ್. ಪ್ರಸನ್ನ



## ● ಟಿ. ಕೆ. ರಾಮರಾವ್

ಒಂದೇ ರಾಗ ಹಿಡಿದು ಶಂಖ ಊದುತ್ತಿದ್ದ ಕನ್ನಡದ ಸಾಮಾಜಿಕ ಕಾದಂಬರಿ ಪ್ರಕಾರಕ್ಕೆ, ಓದಿಸಿಕೊಂಡು ಹೋಗುವ ಮೆರಗು ನೀಡಿ, ಅದಕ್ಕೆ ಕುತೂಹಲದ ಟಚ್ ನೀಡಿದವರು ಇವರು. ನಂತರ ಕನ್ನಡದಲ್ಲಿ ಸತ್ತೇ ಹೋಗಿದ್ದ ಪತ್ತೇದಾರಿ ಕಾದಂಬರಿ ಪ್ರಕಾರದ ಮೇಲೂ ಕೈಯಾಡಿಸಿ ಆ ಪ್ರಕಾರ ಮತ್ತೆ ನಿಗುರಿ ನಿಲ್ಲುವಂತೆ ಮಾಡಿದ ಖ್ಯಾತಿಯೂ ಇವರದೇ. ರಾಮರಾವ್ ಅವರ ಬಂಗಾರದ ಮನುಷ್ಯದ ಜನಪ್ರಿಯತೆ, ‘ಕೋವಿ ಕುಂಚ’ದ ಕಲಾತ್ಮಕತೆ ಇನ್ನೂ ಕನ್ನಡಿಗರ ನೆನಪಿನಲ್ಲಿದೆ. ಈ ಸಂಚಿಕೆಯಲ್ಲಿ ಅವರ “ಸೋಶಿಯಲ್ ಸಸ್ಪೆನ್ಸ್” ಮಿನಿ ಕಾದಂಬರಿ “ವಜ್ರದ ಕೊಂಬು” ಇದೆ. ಈ ರಸಗವಳವನ್ನು ನೀವು ಸವಿಯಲೇ ಬೇಕು. ಪುಟ ೧೪೫ರಿಂದ ಈ ಕಾದಂಬರಿ.



## ● ಬರಗೂರು ರಾಮಚಂದ್ರಪ್ಪ

ಬರಿ ಹೆಸರು ಮಾತ್ರ ಕೇಳಿದ್ದು, ವಯಸ್ಸಾಗಿದೆ ಎಂದು ಭಾವಿಸಿದ್ದವರಿಗೆ ದಂಗು ಹೊಡೆಯುವಂತಾಗುವುದು, ಇನ್ನೂ ಯುವಕ ರಾಮಚಂದ್ರಪ್ಪರನ್ನು ಕಂಡಾಗ ಮಾತ್ರ. ಬೆಂಗಳೂರು ವಿ. ವಿ. ಅಧ್ಯಯನ ಕೇಂದ್ರದಲ್ಲಿ ಹುದ್ದೆ. ಸಾಮಾಜಿಕ ಕಳಕಳಿಯುಳ್ಳ ಕಮಿಟೆಡ್ ಸಾಹಿತ್ಯ ನಮಗೀಗ ಬೇಕು ಎಂಬ ವಾದದ ಪ್ರತಿಪಾದಕ ಬರಗೂರರ ಹುತ್ತ ಮತ್ತು ಒಂದು ಊರಿನ ಕತೆ ಚಲನಚಿತ್ರವಾಗಲಿವೆ. ಉತ್ತಮ ವಿಮರ್ಶಕರ ಒಂದು ಕತೆ “ಒಂದೂರಲ್ಲೊಬ್ಬ ಯುವರಾಜ” ೨೦ ನೆಯ ಪುಟದಲ್ಲಿ ಕೂತಿದ್ದಾನೆ.

## ● ಎಂ. ಎಸ್. ಕೆ. ಪ್ರಭು

“ಬಕ” ನಾಟಕದ ಮೂಲಕ ಪ್ರಭುಗಳ ಹೆಸರು ಬೆಳಕಿಗೆ. ಈಗ ಐಯೊನಸ್ಕೋನ “ಎಕ್ಸಿಟ್ ದಿ ಕಿಂಗ್”ದ ಅನುವಾದ “ಮಹಾ ಪ್ರಸ್ಥಾನ”. ಅನೇಕ ಸಣ್ಣ ಕತೆಗಳು, ಬಕದೊಂದಿಗೆ ಇತರ ಎರಡು ನಾಟಕಗಳು. ಈಗ ಅದು ಪ್ರಕಟಣೆಯ ಹಂತದಲ್ಲಿದೆ. ಧಾರವಾಡದ ಆಲ್ ಇಂಡಿಯಾ ರೇಡಿಯೋದಲ್ಲೀಗ ಪ್ರೋಗ್ರಾಂ ಎಕ್ಸಿಕ್ಯೂಟಿವ್ ಆಗಿದ್ದಾರೆ ಪ್ರಭು. ಅವರ ಪಂಚತಂತ್ರ ಆಧಾರಿತ ಕಿರು ನಾಟಕ “ಶಬ್ದಕ್ಕಂಜಿದೊಡೆಂತಯ್ಯ” ಒಂದು ಹೊಸ ಪ್ರಯೋಗ. ೧೫೩ನೆಯ ಪುಟ ನೋಡಿ ಅದು ಅಲ್ಲಿದೆ.





● **ಎಂ. ಪಿ. ಮನೋಹರ ಚಂದ್ರನ್**

ಬೀಚಿಯ ನಂತರ ಹಾಸ್ಯವನ್ನು ಭದ್ರವಾಗಿ ಹಿಡಿದು ನಿಲ್ಲಿಸಿದವರ ಪೈಕಿ ಎಂ. ಪಿ. ಮನೋಹರಚಂದ್ರನ್ ಸಹ ಒಬ್ಬರು. ಇವರ ಹಾಸ್ಯ ಬರಹ ಸಂಕಲನಗಳು ಹೊರ ಬಂದಿವೆ. ಕಾದಂಬರಿಯೂ ಹೊರ ಬರಲಿದೆ. ರಾಯರು ಸ್ವರ್ಗಾರನು ಹಿಡಿದದ್ದು ಹೇಗೆ? ೬೩ನೆಯ ಪುಟ ನೋಡಿರಿ.

● **ರಂ. ಶಾ.**

ಜಮಖಂಡಿಯವರಾದ ರಂ. ಶಾ. ಲೋಕಾಪುರರಿಗೆ ಪುಣೆ ವಾಸ. ಛಿಶಿರ ಗಡಿಯಲ್ಲಿರುವ ರಂ. ಶಾ. ಕೇಂದ್ರ ಸರಕಾರದ ಕಚೇರಿಯೊಂದರಲ್ಲಿ ಅಧಿಕಾರಿಗಳು. ಸಾವಿತ್ರಿ ಮತ್ತು ತಾಯಿಸಾಹೇಬ ಅವರ ಕಾದಂಬರಿಗಳು. ಹಾಸ್ಯ ಕತೆ, ಸಣ್ಣ ಕತೆಗಳನ್ನು ಸಹೃದಯರು ಎಲ್ಲ ಕಡೆ ಕಾಣುತ್ತಿದ್ದಾರೆ. "ಗೌರೀ ನಿವಾಸ"ದ ಹಾಸ್ಯ ಕತೆ ಯನ್ನು ಈ ಸಂಚಿಕೆಯ ೫೭ ನೆಯ ಪುಟದಲ್ಲಿ ಓದಿ ನಕ್ಕು ಬಿಡಿ. →





● **ಅನಂತ ಕಲ್ಲೋಳ**

← ಹಾಸ್ಯದಲ್ಲಿ ಎತ್ತಿದ ಕೈ. ಬೆಂಗಳೂರಿನಲ್ಲಿ ಕೇಂದ್ರ ಅಬ್ಕಾರಿ ನಿರೀಕ್ಷಕ ಹುದ್ದೆ. ಅನಂತ ಕಲ್ಲೋಳರ ಹಾಸ್ಯ ಈಗ ಎಲ್ಲ ಕಡೆ. ನಗೆಬರಹಗಳ ಸಂಕಲನ. ಮಕ್ಕಳಿಗಾಗಿ ಚರಿತ್ರೆಗಳನ್ನು ಬರೆದಿದ್ದಾರೆ. ಗುಂಡನಿಗೆ ಮಾರುತಿ ಪ್ರಸನ್ನನಾದ ಬಗೆಯನ್ನು ಅವರು ೧೦೪ನೆಯ ಪುಟದಲ್ಲಿ ಹೇಳಿದ್ದಾರೆ.

● **ರಾಧಾಪ್ರಿಯ**

ಹಾನಗಲ್‌ನಲ್ಲಿನ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದಲ್ಲಿ ಉದ್ಯೋಗಸ್ಥರಾದ ಶ್ರೀ ಎಂ. ಆರ್. ನರಸಿಂಹನ್‌ಗೆ ಅನುವಾದವೆಂದರೆ ಬಹಳ ಇಷ್ಟ. "ರಾಧಾಪ್ರಿಯ" ಎಂಬ ಕಾವ್ಯನಾಮದಲ್ಲಿ ಅನುವಾದ ಕಾರ್ಯ "ಹಾರಿದಳಾ ಆಶಾ" ಎಂಬ ಹಾಸ್ಯ ಕತೆಯನ್ನು ೯೧ನೆಯ ಪುಟದಲ್ಲಿ ನೋಡಿ.

● **ಸುಜಾತಾ**

ತಮಿಳಿನಲ್ಲಿ ಈ ಹೆಸರಿಗಾಗಿ ಜನ ಹಾತೊರೆಯುತ್ತಾರೆ. ಅವರ ಕಾದಂ



ಬರಿ, ಕತೆಗಳಿಗಾಗಿ ಜನ ಎಲ್ಲಾ ಪತ್ರಿಕೆಗಳನ್ನೂ ಹುಡುಕುತ್ತಾರೆ. ಇವರ ಹೆಸರು ಎಸ್. ರಂಗರಾಜನ್, ಕಾವ್ಯನಾಮ ಸುಜಾತಾ. ಬೆಂಗಳೂರಿನ ಬಿ. ಇ. ಎಲ್. ನಲ್ಲಿ ಮ್ಯಾನೇಜರ್, ತಮಿಳು ಸಾಹಿತಿ. "ಪ್ರಿಯಾ" ಕಾದಂಬರಿಯ ಮೂಲಕ ಓದುಗರಿಗೆ ಪರಿಚಯ. ಇದುವರೆಗೆ ೧೪ ಕಾದಂಬರಿ ಪ್ರಕಟಿತ.

● **ಬಾಲಯೋಗಿ** →

ತಮಿಳಿನಿಂದ ಕನ್ನಡಕ್ಕೆ ನೇರವಾಗಿ ಅನುವಾದಿಸಿಕೊಂಡು ಬಂದಿರುವ "ಬಾಲಯೋಗಿ" ಕಾವ್ಯನಾಮದ ಬಿ. ಆರ್. ಶಂಕರ್, ಈ ಸಂಚಿಕೆಗಾಗಿ ಸುಜಾತಾ ಅವರ "ಒಂದು ಅಪಘಾತದ ಅನಾಟಮಿ"ಯನ್ನು ಅನುವಾದಿಸಿ ಕೊಟ್ಟಿದ್ದಾರೆ. ಶಂಕರ್ ಸದ್ಯ ಧಾರವಾಡದ ಕೃಷಿ ವಿಜ್ಞಾನ ಮಹಾ ವಿದ್ಯಾಲಯದಲ್ಲಿ ಉದ್ಯೋಗಸ್ಥರು. ಪತ್ರಿಕೋದ್ಯಮದಲ್ಲೂ ಅನುಭವ. ಛಿಶಿರ ಉತ್ಸಾಹಿ ಶಂಕರ್‌ಗೆ ತಮಿಳಿನ ಎಲ್ಲ ಸಾಹಿತ್ಯವನ್ನೂ ಅನುವಾದಿಸುವ ಆಸೆ. ಅವರ ಕತೆಗಾಗಿ ೮೦ನೆಯ ಪುಟ ನೋಡಿ.



● **ದೇವಾನಾಂಪ್ರಿಯ**

[illegible] ಎಂದು ನೀವು ಊಹಿಸುವುದಾದರೆ ಅದು ಅಕ್ಷರಶಃ ನಿಜ. ಆಶ್ಚರ್ಯವೆಂದರೆ, ಈ ಕಾವ್ಯನಾಮದ ಡಾ|| ಶೆಟ್ಟರ್ ಇತಿಹಾಸದ ಪ್ರಾಧ್ಯಾಪಕರೂ ಕೂಡಾ ಆಗಿರುವುದು. ಧಾರವಾಡ ವಿ. ವಿ. ಯಲ್ಲಿ ಇತಿಹಾಸ ವಿಭಾಗ.

ಹಾಸ್ಯ ಕತೆಗಳಲ್ಲಿ ನಗು ಉಕ್ಕಿ ಬರಿಸುವ ಶಕ್ತಿಯ ಅನೇಕ ಬರಹಗಳು. ಬಪ್ಪೇಡಿನ್ನರ್ ಅನ್ನು ಅವರು ನಮಗೆ ತಿನ್ನಿಸುತ್ತಾರೆ ಪುಟ : ೨೭ ರಲ್ಲಿ.



ಏನು ಹೇಳುತ್ತಿದ್ದಾರೆ...



## ● ವಿಶುಕುಮಾರ್

ದಕ್ಷಿಣ ಕನ್ನಡದವರು. ಉತ್ತಮ ಕಾದಂಬರಿಕಾರರು. ಕರಾವಳಿ, ಮದರ್, ಭೂಮಿ ಮುಂತಾದ ಕಾದಂಬರಿಗಳು ಜನಪ್ರಿಯ. ಕರಾವಳಿ ಸಿನಿಮಾ ಆಯಿತು. ಮದರ್ ಆಗುತ್ತಿದೆ. ಹೊಸ ಅಲೆಯ ಚಿತ್ರ ನಿರ್ಮಿಸಿ, ಇದುವರೆಗೆ ಬಂದಿರುವ ಹೊಸ ಅಲೆಯ ಚಿತ್ರಗಳ ಭಂಡವಾಳವನ್ನು ಬಯಲಿಗೆಳೆದಿದ್ದಾರೆ. ಹೊಸ ಅಲೆ ಎಂಬ ಹಣೆಪಟ್ಟಿಯೊಡನೆ ಬಂದ ಚಿತ್ರಗಳು ಎಷ್ಟು ನಿಜ? ಎಷ್ಟು ಸುಳ್ಳು? ಅವರ ಲೇಖನ ೧೩೭ನೆಯ ಪುಟದಲ್ಲಿದೆ.

←

## ● ಡಾ|| ಬಿ. ವಿ. ರಾಮನ್

ವಿಶ್ವವಿಖ್ಯಾತ ಜ್ಯೋತಿಷಿಗಳು. ಆಂಗ್ಲದ "ಆಸ್ಟ್ರಲಾಜಿಕಲ್ ಮ್ಯಾಗಜ್ಹೈನ್" ಸಂಪಾದಕರು. ಜ್ಯೋತಿಷಶಾಸ್ತ್ರ ಒಂದು ವಿಜ್ಞಾನ. ಅದು ಎಲ್ಲ ವಿಜ್ಞಾನಗಳ ತಾಯಿ ಎನ್ನುವ ಬಿ. ವಿ. ರಾಮನ್, ಅದಕ್ಕೆ ವೈಜ್ಞಾನಿಕ ನೆಲೆಗಟ್ಟನ್ನು ತರಲು ಶ್ರಮಿಸುತ್ತಿದ್ದಾರೆ. ವಿಶ್ವಸಂಸ್ಕೃತಿಗೆ ಭಾರತದ ಕಾಣಿಕೆಯಾದ ಖಗೋಳ ಶಾಸ್ತ್ರದ ಆಧಾರದ ಮೇಲೆ ಜ್ಯೋತಿಷ್ಯವು, ಮೂಢನಂಬಿಕೆ ಎಂಬುದನ್ನು ಹೋಗಲಾಡಿಸಲು ಯತ್ನಿಸುತ್ತಿದ್ದಾರೆ. ಈ ವಿಷಯಕ್ಕೆ ಸಂಬಂಧಿಸಿದ ಲೇಖನ ೧೨೧ ನೆಯ ಪುಟದಲ್ಲಿದೆ.

## ● ಸುರೇಂದ್ರ ದಾನಿ

ವಿದ್ಯಾರ್ಥಿ ದೆಸೆಯಿಂದಲೂ ರಾಷ್ಟ್ರೀಯ ಪ್ರವೃತ್ತಿಯವರಾದ ಶ್ರೀ ಸುರೇಂದ್ರ ದಾನಿಯವರು ಸೇವಾದಲದ ನಿಷ್ಠಾವಂತ ಸೇವಕ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪ್ರತ್ಯಕ್ಷ ಪಾತ್ರ. ಪತ್ರಿಕಾ ವೃತ್ತಿಯ ಮೂಲಕ ದೇಶ ಸೇವೆಯಲ್ಲಿ ಭಾಗಿಗಳು. ಕಳೆದ ಮೂರು ದಶಕಗಳಿಂದಲೂ ಸಂಯುಕ್ತ ಕರ್ನಾಟಕದಲ್ಲಿ ಸೇವೆ ಸಲ್ಲಿಸುತ್ತಿರುವ ಅವರೀಗ ಆ ಪತ್ರಿಕೆಯ ಸಹಾಯಕ ಸಂಪಾದಕರು. ಪತ್ರಿಕೋದ್ಯಮದ ಬಗ್ಗೆ ಅಧಿಕಾರಯುತವಾಗಿ ಮಾತಾಡಬಲ್ಲವರು. ಡಾ|| ರಾಧಾಕೃಷ್ಣನ್‌ರ "ಕಲ್ಕಿ" ಅನುವಾದ ಇವರ ಮೊದಲ ಕೃತಿ. ನಂತರ ಪತ್ರಿಕೋದ್ಯಮಿಗಳ ಜೀವನ ಚರಿತ್ರೆ, ಕಮ್ಯುನಿಸ್ಟ್-ಚೀನ, ಕರ್ನಾಟಕದ ಹೋರಾಟ. ಕೌಜಲಗಿ ಶ್ರೀನಿವಾಸ ರಾಯರು ಇವರ ಗ್ರಂಥಗಳು. ಪತ್ರಿಕೆಯ ರೂಪ ರೂಪಿಸುವ ಹುಬಳಿ ಗೆಜೆಟ್ ಬಗೆಗಿನ ಇವರ ಲೇಖನ ೪೭ನೇ ಪುಟದಲ್ಲಿ.



## ● ಗಾಯತ್ರಿದೇವಿ ರಾಮನ್

ಡಾ|| ಬಿ. ವಿ. ರಾಮನ್ ಅವರ ಮಗಳು. ನಮ್ಮ ಓದುಗರಿಗಾಗಿ ಈ ವರ್ಷದ ಭವಿಷ್ಯವನ್ನು ಒದಗಿಸಿದ್ದಾರೆ.

ಜ್ಯೋತಿಷಕ್ಕೆ ವೈಜ್ಞಾನಿಕತೆ ನೆಲೆಗಟ್ಟಿದೆ ಎಂಬ ತಂದೆಯ ವಾದವನ್ನು ಸಮರ್ಥಿಸುವವರು. ಎಲ್ಲೆಡೆ ಇದೇ ವಿಷಯವನ್ನು ಪ್ರತಿಪಾದಿಸಿಕೊಂಡು ಬರುತ್ತಿದ್ದಾರೆ ವರ್ಷ ಭವಿಷ್ಯ. ೧೩೩ ನೆಯ ಪುಟದಲ್ಲಿದೆ ನೋಡಿರಿ.



## ● ಡಾ|| ಗೋವಿಂದ ಮಣೂರ

"ಉಪಾಸನೆ" ಚಿತ್ರದ ಹೀರೋ. ಅನೇಕ ಚಿತ್ರಗಳಲ್ಲಿ ಪಾತ್ರ. ಜೊತೆ ಜೊತೆಗೆಯೇ ವೈದ್ಯಕೀಯ ವೃತ್ತಿ. ಇದು ಸಾಲದು ಎಂದು ಸಾಹಿತ್ಯ ಸೇವೆ. ಕುರ್‌ಮಾಮಾ ಅವರ ಕವನ ಸಂಕಲನ. ಡಾ|| ಗೋವಿಂದ ಮಣೂರರಿಗೆ ಇಷ್ಟು ಸಾಲದು ಎಂಬಂತೆ ಚುಟುಕು ಬರೆಯುವ ಹವ್ಯಾಸ ಕೂಡ. "ಉತ್ತರ ಕರ್ನಾಟಕದ ಚಲನಚಿತ್ರೋದ್ಯಮ"ವನ್ನು ಅವರು ವಿವರಿಸಿರುವ ಪರಿಯನ್ನು ೧೩೫ನೆಯ ಪುಟದಲ್ಲಿ ನೋಡಿ.

## ಇತರರು

● **ಜಿ. ಪಿ. ಬಸವರಾಜ್** : ಬೆಳೆಯುತ್ತಿರುವ ಪ್ರತಿಭಾವಂತ ಬರಹಗಾರರು. ಪತ್ರಿಕೋದ್ಯಮಿ, ಕವನ. ಲೇಖನಗಳು. ಇವರ "ದೀಪಾವಳಿ ಈ ಹಬ್ಬ ಎಷ್ಟು ಅರ್ಥಪೂರ್ಣ?" ಸಮೀಕ್ಷೆ ೩೩ ನೆಯ ಪುಟದಲ್ಲಿದೆ.

● **ಕುಸುಮಾ ಶಾನಭಾಗ**: ಇತ್ತೀಚಿನ ಕತೆಗಾರ್ತಿಯರಲ್ಲಿ ಕೇಳಿ ಬರುತ್ತಿರುವ ಹೆಸರು. ದಿ|| ಭಾರತೀಸುತರ ಮಗಳು. ಅವರ "ಬದುಕಿನ ತಿರುವಿನಲ್ಲಿನ ಕತೆಯನ್ನು ೧೨೫ ನೆಯ ಪುಟದಲ್ಲಿ ನೋಡಿ.

● **ಭಾಸ್ಕರ್** : ಪತ್ರಿಕೋದ್ಯಮಿ. ಉತ್ಸಾಹದ ಯುವಕ. ಸಿನಿಮಾದಲ್ಲಿ ಆಸಕ್ತಿ. ಅವರು ಅನಂತ್‌ನಾಗ್‌ರೊಡನೆ ಮಾಡಿದ ಸಂದರ್ಶನ ಹಲವು ವೈಶಿಷ್ಟ್ಯಗಳದು. ಅದು ಪುಟ ೧೪೩ ರಲ್ಲಿ.

● **ಎನ್. ಗಾಯತ್ರಿದೇವಿ**: ಪತ್ರಿಕೋದ್ಯಮದಲ್ಲಿ ಪದವಿ. ಸಂಯುಕ್ತ ಕರ್ನಾಟಕದಲ್ಲಿ ಉಪ ಸಂಪಾದಕಿ. ಕ್ರೀಡೆಯಲ್ಲೂ ಆಸಕ್ತಿ. ಅನೇಕ ಲೇಖನಗಳು ಪ್ರಕಟವಾಗಿವೆ. ಹೊಸ ದೃಷ್ಟಿಯನ್ನುಳ್ಳ "ಆಟವತ್ತ ಆಟಗಾರ್ತಿಯರ ಅನಿಸಿಕೆ" ಎಂಬ ಅವರ ಲೇಖನ ಪುಟ '೭೨ ರಲ್ಲಿದೆ.

● **ಜೆ. ಎನ್. ಶ್ರೀಕಂಠಮೂರ್ತಿ**: ಹೈದ್ರಾಬಾದಿನಲ್ಲಿ ವಾಸ. "ಸಿತಾರ" ಸಿನಿಮಾ ವಾರಪತ್ರಿಕೆಯ ಸಂಪಾದಕರು. ಕನ್ನಡಕ್ಕೆ ತೆಲುಗಿನ ಉತ್ತಮ ಕತೆಗಳನ್ನು ತರುತ್ತಾರೆ. ಕೊಂಪೆಲ್ಲ ವಿಶ್ವಂ ಅವರ ಕತೆ "ಗೌರವ"ವನ್ನು ಅವರು ಅನುವಾದಿಸಿದ್ದಾರೆ. ಪುಟ ೧೧೦ ರಲ್ಲಿ ಆ ಕತೆ.

● **ಎಂ, ವಿಶ್ವನಾಥ್, ವಿ. ಗೋಪಾಲ, ಎಚ್. ಎಸ್. ಮಧುರಾನಾಥ್, ಪ್ರಕಾಶ್ ಶೆಟ್ಟಿ, ಹರಿಶ್ಚಂದ್ರ, ನಾಸು, ಕೆಂ. ಶ್ರೀ ನಂಜಪ್ಪ. ಇವರು ನಮಗೆ ವ್ಯಂಗ್ಯಚಿತ್ರ ಒದಗಿಸಿದರು. ಅಯ್ಯೋ! ಚಿತ್ರ ನೋಡಿದ ಕೂಡಲೇ ಎಷ್ಟು ನಗೆ ಬರುತ್ತೆ ಅಲ್ಲಿಲ್ಲದೆ ಬೇಗ ಪುಟ ತೆರೆದು ನೋಡಿ.**

ತಮ್ಮ ಜೀವನ ಸುಖಿವಾಗಿರಬೇಕೆಂದು ಪ್ರತಿಯೊಬ್ಬರೂ ಅಪೇಕ್ಷಿಸುತ್ತಾರೆ; ಆದಕ್ಕಾಗಿ ಪ್ರಯತ್ನಿಸುತ್ತಾರೆ. ಈ ಗುರಿಯನ್ನು ಮುಟ್ಟುವ ಸಲುವಾಗಿ ತಮ್ಮ ಕೈಲಾದುದನ್ನು ಕೆಲವು ಸಲ ಕೈಲಾಗದುದನ್ನೂ ಮಾಡುತ್ತಿರುತ್ತಾರೆ.

ಮನುಷ್ಯನ ಸುಖ ದುಃಖಗಳು ಕೇವಲ ಅವನನ್ನೇ ಅವಲಂಬಿಸಿರುವುದಿಲ್ಲ; ಅವನ ಸಮಾಜ, ಪರಿಸರಗಳು ತೀವ್ರತರವಾದ ಪರಿಣಾಮವನ್ನುಂಟು ಮಾಡುತ್ತಿರುತ್ತವೆ. ಇವುಗಳಿಂದ ತಪ್ಪಿಸಿಕೊಳ್ಳುವುದು ಯಾರಿಗೂ ಸಾಧ್ಯವಾಗುವುದಿಲ್ಲ. ಮನುಷ್ಯನ ಸುಖ ದುಃಖಗಳು ಸೋಲು–ಗೆಲುವುಗಳು ಅವನ ಶಕ್ತಿ ಸ್ವಭಾವಗಳನ್ನು ಅವಲಂಬಿಸಿರುವುದು ನಿಜವಾಗಿದ್ದರೂ, ಬಾಹ್ಯ ಶಕ್ತಿಗಳ ಬಂಧನದಿಂದ ಅವನು ಸಂಪೂರ್ಣವಾಗಿ ಹೊರಗುಳಿಯಲಾರ. ಒಬ್ಬನ ಬದುಕು ಇನ್ನೊಬ್ಬನನ್ನು ಅವಲಂಬಿಸಿರುತ್ತದೆ. ಒಬ್ಬನ ಸುಖ ದುಃಖ ಮತ್ತೊಬ್ಬರ ಸುಖದುಃಖಗಳಿಗೆ ಕಾರಣವಾಗುತ್ತದೆ. ಒಬ್ಬನ ಜೀವನ ದೃಷ್ಟಿ ಇನ್ನೊಬ್ಬನ ಬದುಕನ್ನು ಬದಲಾಯಿಸುತ್ತದೆ. ಒಬ್ಬನು ತೆಗೆದುಕೊಳ್ಳುವ ನಿರ್ಧಾರ ಹಲವರ ಜೀವನ ಮಾರ್ಗವನ್ನು ನಿರ್ಧರಿಸುತ್ತದೆ.

ವ್ಯಕ್ತಿಗಳ ವಿಷಯದಲ್ಲಿ ಹೇಳುವ ಈ ಮಾತು ವ್ಯಕ್ತಿಗಳ ಗುಂಪಿಗೆ ಅನ್ವಯಿಸುತ್ತದೆ; ಸಮಾಜಕ್ಕೆ ಅನ್ವಯಿಸುತ್ತದೆ. ಸಮಗ್ರ ರಾಷ್ಟ್ರಕ್ಕೇ ಅನ್ವಯಿಸುತ್ತದೆ. ಮನುಷ್ಯನ ಧ್ಯೇಯ ಧೋರಣೆಗಳು ಮೂಲತಃ ವೈಯಕ್ತಿಕವಾಗಿ ತೋರಿದರೂ ಅವನು ಹೊತ್ತಿರುವ ಹೊಣೆಗಾರಿಕೆ, ಮಾಡುತ್ತಿರುವ ಕೆಲಸ ಇವುಗಳಿಂದಾಗಿ ವ್ಯಾಪಕ ಪರಿಣಾಮವನ್ನುಂಟು ಮಾಡುತ್ತವೆ. ಸರ್ಕಾರದ ಧುರೀಣನೊಬ್ಬ ತೆಗೆದುಕೊಳ್ಳುವ ನಿಲವು ಇಡೀ ದೇಶದ ಭವಿಷ್ಯವನ್ನೇ ನಿರ್ಧರಿಸುತ್ತದೆ. ರಾಷ್ಟ್ರನಾಯಕನೊಬ್ಬನ ನಿರ್ಧಾರ ಪ್ರಪಂಚದ ಹಾದಿಯನ್ನೇ ಬದಲಾಯಿಸುತ್ತದೆ. ಇದಕ್ಕೆ ಇತಿಹಾಸದಲ್ಲಿ ಬೇಕಾದಷ್ಟು ಉದಾಹರಣೆಗಳು ದೊರೆಯುತ್ತವೆ. ಒಬ್ಬನ ಸುಖಕ್ಕಾಗಿ ಲಕ್ಷಾಂತರ ಜನ ದುಃಖಿಸಿದ್ದಾರೆ. ಒಬ್ಬನ ಪ್ರತಿಷ್ಠೆಗಾಗಿ ಕೋಟ್ಯಾಂತರ ಜನ ದುಡಿದಿದ್ದಾರೆ. ಕಾಲ ದೇಶಗಳ ಕಟ್ಟಿಲ್ಲದೆ ಇದು ನಡೆದುಕೊಂಡು ಬಂದಿದೆ.

ಈ ಎಲ್ಲ ಸಂದರ್ಭಗಳಲ್ಲಿಯೂ ಎದುರಾಗುವ ಒಂದೇ ಒಂದು ಪ್ರಶ್ನೆ ಎಂದರೆ ಯಾವುದು ಸರಿ ಯಾವುದು ತಪ್ಪು ಎನ್ನುವುದು, ಯಾವುದು ನ್ಯಾಯ ಯಾವುದು ಅನ್ಯಾಯ ಎನ್ನುವುದು. ಸರಿ ತಪ್ಪುಗಳ ನ್ಯಾಯಾನ್ಯಾಯಗಳ ತಕ್ಕಡಿ ತೂಗುತ್ತಲೇ ಇರುತ್ತದೆ. ಅದನ್ನು ಸಮತೋಲನಕ್ಕೆ ತರುವುದು ಸಾಧ್ಯವಿಲ್ಲ. ಏಕೆಂದರೆ ಒಬ್ಬನ ಸರಿ ಇನ್ನೊಬ್ಬನ ತಪ್ಪು: ಒಬ್ಬನಿಗೆ ನ್ಯಾಯ ಎಂದು ತೋರುವುದು ಇನ್ನೊಬ್ಬನಿಗೆ ಅನ್ಯಾಯವಾಗಿ ಕಾಣುತ್ತದೆ. ಯಾವುದೇ ವಿಚಾರ ಅಥವಾ ನಿರ್ಧಾರ ಎಲ್ಲರಿಗೂ ಸರಿಯೆನಿಸದು, ಎಲ್ಲರಿಗೂ ನ್ಯಾಯ ಸಮ್ಮತವಾಗದು.

ಸರಿ ತಪ್ಪು ಎಂದು ಗೊತ್ತು ಮಾಡುವ, ನ್ಯಾಯ ಅನ್ಯಾಯ ಎಂದು ನಿರ್ಧರಿಸುವ ರೀತಿ ಯಾವಾಗಲೂ ವ್ಯಕ್ತಿಯೊಬ್ಬನಿಗೆ ಸೇರಿದ್ದು. ಈ ವಿಷಯದಲ್ಲಿ ಅವನು ಖಂಡಿತವಾಗಿಯೂ ಸಂಪೂರ್ಣವಾಗಿ ವಸ್ತುನಿಷ್ಠವಾಗಿರುವುದು ಸಾಧ್ಯವಿಲ್ಲ. ಒಂದು ವೇಳೆ ಅವನು



...ರಿ ?

...

ನಾವು ಯಾವುದರ

ಬಗ್ಗೆ ಬೇಕಾದರೂ

ಗೊಣಗೋಣ.

ಆದರೆ

ನ್ಯಾಯಾ

ನ್ಯಾಯ

ವಿವೇಚನೆಯೊಂದನ್ನು

[illegible]

[illegible]

[illegible]

ಕೊಳ್ಳೋಣ.

ಡಾ॥ ಹಾ. ಮಾ. ನಾಯಕ

ಹಾಗೆ ಭಾವಿಸಿದರೂ, ನಿಜವಾಗಿಯೂ ಹಾಗೆಯೇ ನಡೆದುಕೊಂಡಿದ್ದರೂ ಮತ್ತೊಬ್ಬರಿಗೆ ಹಾಗನ್ನಿಸದೆ ಇರಬಹುದು. ಮೂರನೆಯವರ ಅಭಿಪ್ರಾಯ ಮತ್ತೊಂದು ತೆರನಾಗಿರಬಹುದು. ನಾವು ಲೋಕವನ್ನು ನೋಡುವ ದೃಷ್ಟಿ, ಪ್ರತಿಕ್ರಿಯೆ ತೋರುವ ಬಗೆ ಎಲ್ಲವೂ ನಮಗೇನಾಗಿದೆ ಎನ್ನುವುದನ್ನೇ ಅವಲಂಬಿಸಿರುತ್ತದೆ. ಕ್ರಿಯೆಗೆ ಒದಗುವ ಪ್ರತಿಕ್ರಿಯೆ ನಾನಾ ಬಗೆಯಾಗಿರುತ್ತವೆ. ಏಕೆಂದರೆ ಒಂದೊಂದು ಸಂದರ್ಭದಲ್ಲೂ ಕ್ರಿಯೆಯ ಪರಿಣಾಮ ಒಂದೊಂದು ಬಗೆಯಾಗಿರುತ್ತದೆ. ಕಿಟಕಿಯನ್ನು ತೆರೆದರೆ ಮೊಮ್ಮಗನಿಗೆ ಗಾಳಿ ಬೆಳಕು ಧಾರಾಳವಾಗಿ ಬರುತ್ತದೆ. ಆದರೆ ಅದೇ ಕೊಠಡಿಯ ಇನ್ನೊಂದು ಮೂಲೆಯಲ್ಲಿರುವ ಅಜ್ಜ ಕಿಟಕಿಯಿಂದ ನುಗ್ಗುವ ಗಾಳಿಯನ್ನು ತಡೆದುಕೊಳ್ಳಲಾರ. ಸಿಹಿ ಒಗ್ಗದವರೂ ಇದ್ದಾರೆ ಈ ಜಗತ್ತಿನಲ್ಲಿ. ಆದುದರಿಂದ ಯಾವುದೇ ಬಗೆಯ ವಿವೇಚನೆಯಾದರೂ ಅದು ವ್ಯಕ್ತಿಗಳಿಗೇ ಸಂಬಂಧಿಸಿದ್ದು; ಅವರ ಧೋರಣೆ, ದೃಷ್ಟಿ, ಅನುಭವಗಳನ್ನು ಆಧರಿಸಿದ್ದು. ನ್ಯಾಯಾನ್ಯಾಯದ ವಿವೇಚನೆಯಾದರೂ ಇದಕ್ಕೆ ಹೊರತಾದುದಲ್ಲ. ಲೋಕವೆಲ್ಲ ಒಪ್ಪುವ ನ್ಯಾಯ ಎಲ್ಲಿದೆ? ಪ್ರತಿಯೊಬ್ಬನಿಗೂ ತಾನು ಮಾಡುತ್ತಿರುವುದು ನ್ಯಾಯವೇ ಎನ್ನಿಸುತ್ತದೆ. ನನಗೆ ಒಳ್ಳೆಯದಾಗುವುದೆಲ್ಲ, ಒಳ್ಳೆಯದಾಗುವಾಗಲೆಲ್ಲ ನ್ಯಾಯ. ನನಗೆ ಒಳ್ಳೆಯದಾಗದಿದ್ದಾಗ ಅದು ಅನ್ಯಾಯವೆಂದು ತೋರುತ್ತದೆ. ನನಗೆ ಅನ್ಯಾಯವಾದರೂ ಚಿಂತೆಯಿಲ್ಲ, ಇದು ನ್ಯಾಯ ಎನ್ನುವವರು ತುಂಬ ವಿರಳ–ಈಗ ಮಾತ್ರವಲ್ಲ, ಎಲ್ಲ ಕಾಲಕ್ಕೂ. ಈ ಸೂಕ್ಷ್ಮವಾದ ನ್ಯಾಯಾನ್ಯಾಯ ವಿವೇಚನೆ ವ್ಯಕ್ತಿ ಜೀವನದಲ್ಲೂ ರಾಷ್ಟ್ರ ಜೀವನದಲ್ಲೂ ಬಹು ಮುಖ್ಯ.

ಕುವೆಂಪು ಅವರ ಪ್ರಖ್ಯಾತವಾದ ಕವಿತೆ "ಕುಮಾರವ್ಯಾಸ" ಎಂಬುದರಲ್ಲಿ ಇದಾವ ನ್ಯಾಯ? ಏನನ್ಯಾಯು? ಎಂಬ ಮಾತು ಬರುತ್ತದೆ. ವೈಶಂಪಾಯನ ಸರೋವರ ತೀರದಲ್ಲಿ ನಡೆದ ಭೀಮ ದುರ್ಯೋಧನರ ಗದಾಯುದ್ಧದ ಕೊನೆಯ ಘಟ್ಟದಲ್ಲಿ,ಶ್ರೀಕೃಷ್ಣನು ಭೀಮನಿಗೆ ದುರ್ಯೋಧನನ ತೊಡೆಗೆ ಹೊಡೆಯಲು ಸನ್ನೆ ಮಾಡುತ್ತಾನೆ. ಅದರಿಂದ ಭೀಮ ಗೆಲ್ಲುತ್ತಾನೆ: ದುರ್ಯೋಧನ ಧರೆಗುರುಳುತ್ತಾನೆ. ಈ ಕೃಷ್ಣನ ಕುಹಕವನ್ನು ಕಂಡು ಕವಿ ತಳಮಳಿಸಿ ದುಃಖಿಸುತ್ತಾನೆ: "ಇದಾವ ನ್ಯಾಯ? ಏನನ್ಯಾಯು?" ಎಂದು ಕೂಗಿಕೊಳ್ಳುತ್ತಾನೆ. ಉತ್ತರ ಕೊಡುವವರು ಯಾರು?

ಇದೊಂದೇ ಸಂದರ್ಭವಲ್ಲ. ತನ್ನ ಕಡೆಯವರಾದ ಪಾಂಡವರನ್ನು ಗೆಲ್ಲಿಸುವ ಒಂದೇ-ಒಂದು ದೃಷ್ಟಿಯಿಂದ ಪರಮಾತ್ಮನೆನಿಸಿದ ಶ್ರೀಕೃಷ್ಣನು ನಡೆದುಕೊಂಡ ಅನೇಕ ರೀತಿಗಳು ನಮಗೆ ಅನ್ಯಾಯವೆಂದು ತೋರುತ್ತವೆ. ಕರ್ಣನ ಜೀವನದ ಉದ್ದಕ್ಕೂ ತಲೆ ಹಾಕಿದ ಅನೇಕ ಪ್ರಸಂಗಗಳನ್ನು ನಾವು "ಅನ್ಯಾಯ" ಎಂಬ ಮಾತಿನಿಂದಲ್ಲದೆ ಬೇರೆ ಮಾತಿನಿಂದ ವರ್ಣಿಸುವುದು ಸಾಧ್ಯವಾಗುವುದಿಲ್ಲ ಭೀಷ್ಮ ದ್ರೋಣರಂಥವರೂ ಎಷ್ಟು ಎಷ್ಟು ಬಗೆಯ ಅನ್ಯಾಯಕ್ಕೊಳಗಾಗಿಲ್ಲ?

ಈ ಸಂದರ್ಭಗಳನ್ನೆಲ್ಲ ನಾವು ಈಗ "ಅನ್ಯಾಯ"ವೆಂದು ಕರೆದರೂ, ಅವನ್ನು ನ್ಯಾಯವೆಂದು ನಂಬಿರು

ವವರೂ, ವಾದಿಸುವವರೂ ಎಷ್ಟು ಜನರಿಲ್ಲ? ಪ್ರತಿಯೊಂದು ಅನ್ಯಾಯವನ್ನೂ ನ್ಯಾಯವೆಂದು ಸಮರ್ಥಿಸಲು ಕಾರಣಗಳಿರುತ್ತವೆ. ಹಾಗೆಯೇ ಪ್ರತಿಯೊಂದು ನ್ಯಾಯವನ್ನೂ ಅನ್ಯಾಯವೆಂದು ದೂಷಿಸಲು ಆಧಾರಗಳಿರುತ್ತವೆ.

ಶ್ರೀರಾಮಚಂದ್ರನು ವಾಲಿಯನ್ನು ಸಂಹರಿಸಿದ ರೀತಿಯನ್ನು "ಸಮರ್ಥನೀಯವೆ?" ಎಂದು ಪ್ರಶ್ನಿಸುವವರಿದ್ದಾರೆ. ವಾಲಿ ಸುಗ್ರೀವರು ಯುದ್ಧದಲ್ಲಿ ತೊಡಗಿದ್ದಾಗ ಮರದ ಮರೆಯಲ್ಲಿ ನಿಂತು ಶ್ರೀರಾಮನು ವಾಲಿಯ ಮೇಲೆ ಬಾಣ ಪ್ರಯೋಗ ಮಾಡುತ್ತಾನೆ. ಮರೆಯಲ್ಲಿ ನಿಂತು ಮೋಸದಿಂದ ಹೊಡೆಯುವ ಈ ವರ್ತನೆ ಇರಲಿ, ವಾಲಿಯನ್ನು ಹೊಡೆಯುವುದಕ್ಕೇ




ರಾಮನಿಗೆ ನ್ಯಾಯವಾದ ಕಾರಣವೇನಾದರೂ ಇತ್ತೆ? ಎಂಬ ಪ್ರಶ್ನೆ ಏಳುತ್ತದೆ.

ಸ್ವತಃ ವಾಲಿಯೇ ಶ್ರೀರಾಮನನ್ನು ಕೇಳುತ್ತಾನೆ: "ಬೇರೊಬ್ಬನೊಡನೆ ಯುದ್ಧ ಮಾಡುತ್ತಿದ್ದ ನನ್ನನ್ನು ಕೊಂದು ನೀನು ಯಾವ ದೊಡ್ಡಸ್ತಿಕೆ ಪಡೆದೆ? ನೀನು ಈ ರೀತಿ ಅಧರ್ಮಾಚರಣೆಯಿಂದ ಮತಿಗೆಟ್ಟವನೆಂದೂ, ಲೋಕವನ್ನು ವಂಚಿಸಲು ಡಾಂಭಿಕಕ್ಕಾಗಿ ಧರ್ಮಚಿಹ್ನೆಯನ್ನು ತಾಳಿರುವೆಯೆಂದೂ ನಾನು ತಿಳಿದಿರಲಿಲ್ಲ. ನಾನು ನಿನ್ನ ದೇಶದಲ್ಲಾಗಲಿ, ಪಟ್ಟಣದಲ್ಲಾಗಲಿ ಯಾವ ವಿಧವಾದ ಕೆಟ್ಟದ್ದನ್ನೂ ಮಾಡಿಲ್ಲ. ನಿನ್ನನ್ನು ಯಾವ ರೀತಿಯಲ್ಲೂ ಅಸಮಾಧಾನಪಡಿಸಿಲ್ಲ. ನನ್ನನ್ನು ಕೊಂದುದು ನಿನಗೆ ಯುಕ್ತವೆಂದು ತೋರುತ್ತದೆಯೆ?"

ಇದಕ್ಕೆ ಶ್ರೀರಾಮನೇನೋ ಉತ್ತರವನ್ನು ಕೊಡುತ್ತಾನೆ. ವಾಲಿಯು ಹೊರಿಸುವ ಅನ್ಯಾಯದ ಆಪಾದನೆಗಳನ್ನು ತಳ್ಳಲು ತನ್ನ ನ್ಯಾಯದ ಕಾರಣಗಳನ್ನು ಪಟ್ಟಿ ಮಾಡುತ್ತಾನೆ. ಆದರೆ ಆ ಸಪ್ಪೆ ಉತ್ತರ ಮೂರನೆಯವರ ಮನಸ್ಸಿನಲ್ಲಿ ನ್ಯಾಯ ಸ್ಥಾಪನೆ ಮಾಡುವಲ್ಲಿ ವಿಫಲಗೊಳ್ಳುತ್ತದೆ. ಅದಕ್ಕಾಗಿಯೇ ಈ ಪ್ರಖ್ಯಾತವಾದ ಪೌರಾಣಿಕ ಯುದ್ಧದ ಬಗ್ಗೆ ಬರೆಯುವಾಗ ಕುವೆಂಪು ಹೀಗೆನ್ನುತ್ತಾರೆ: "ವಾಲಿ ಸುಗ್ರೀವರ ಯುದ್ಧ ಯುದ್ಧಕ್ಕಾಗಿ ಪ್ರಖ್ಯಾತವಾಗಿಲ್ಲ. ರಾಮನ ಪಾತ್ರದ ಮೇಲೆ ಆಗಿರುವ ಪರಿಣಾಮಕ್ಕಾಗಿಯೇ ಅದು ಪ್ರಖ್ಯಾತವಾಗಿದೆ. ಆದರ್ಶ ಪುರುಷನಾದ ಶ್ರೀರಾಮನ ಆ ವರ್ತನೆ, ನೀತಿಯ ಮತ್ತು ಧರ್ಮದ ಅನೇಕ ಸಮಸ್ಯೆಗಳಿಗೆ ಎಡೆಗೊಡುತ್ತದೆ. ಯಾರೆ ಆಗಲಿ, ಎಷ್ಟೇ ಪ್ರಯತ್ನಿಸಲಿ. ಲೋಕ ಸಾಮಾನ್ಯವಾದ ನೀತಿಯ ಮತ್ತು ಧರ್ಮದ ದೃಷ್ಟಿಗೆ ವಾಲ್ಮೀಕಿ ರಾಮಾಯಣದ ಶ್ರೀರಾಮನ ಈ ಸಂದರ್ಭದ ವರ್ತನೆಯನ್ನು ಆದರ್ಶಪ್ರಾಯವೆಂದು ಸಮರ್ಥಿಸಲು ಸಾಧ್ಯವಾಗುವುದಿಲ್ಲ.

ತನ್ನ ಗರ್ಭಿಣಿ ಹೆಂಡತಿಯನ್ನು ತೊರೆದ ಸಂದರ್ಭದಲ್ಲಿಯೂ ಶ್ರೀರಾಮನ ಪಾತ್ರ ಮಸುಳುತ್ತದೆ. ಲೋಕಪೂಜ್ಯನಾದ ಶ್ರೀರಾಮಚಂದ್ರನ ಈ ವರ್ತನೆಗಳೇ ನ್ಯಾಯ ಸಮ್ಮತವಾಗಿ ತೋರುವುದಿಲ್ಲ. ಅದೆಲ್ಲವೂ ನ್ಯಾಯಬದ್ಧ ಎಂದು ವಾದಿಸುವವರಿಗೇನೂ ಕೊರತೆಯಿಲ್ಲ.

ಪುರಾಣ ಪುಣ್ಯ ಕಥೆಗಳಲ್ಲಿ ಮಾತ್ರ ಈ ಬಗೆಯ ದ್ವಂದ್ವವೆಂದು ನಾವು ತಿಳಿಯಬೇಕಿಲ್ಲ. ಇತಿಹಾಸದಲ್ಲಿಯೂ ಎಷ್ಟು ಸಲ ವಿವೇಚನೆ ನಿದ್ದೆ ಮಾಡಿಲ್ಲ? ಅಧಿಕಾರವನ್ನು ಕೈಯಲ್ಲಿ ಹಿಡಿದವರು ನ್ಯಾಯಾನ್ಯಾಯ ವಿವೇಚನೆಯನ್ನು ವಸ್ತು ನಿಷ್ಠವಾಗಿಯೇ ಮಾಡಿದ್ದಿದ್ದರೆ ಚರಿತ್ರೆಯ ದಾರಿ ಬೇರೆಯಾಗಿರುತ್ತಿತ್ತು. ಹಿಟ್ಲರ್ ಮುಸಲೋನಿಗಳು ತಾವು ಹಿಡಿದ ಮಾರ್ಗ ಅನ್ಯಾಯದ್ದೆಂದು ಭಾವಿಸಿರಲಿಲ್ಲ. ಅವರ ಅನುಯಾಯಿಗಳೂ ಹಾಗೆಂದು ತಿಳಿದಿರಲಿಲ್ಲ. ಅಣುಬಾಂಬನ್ನು ಸಿಡಿಸಿದವರ ವಿವೇಚನೆ ಸಮರ್ಪಕವೆಂದು ಹೇಗೆ ಹೇಳುವುದು? ಕ್ಯೂಬಾ ಸಮಸ್ಯೆಯ ಉತ್ಕಟಾವಸ್ಥೆಯಲ್ಲಿ ಅಧ್ಯಕ್ಷ ಕೆನೆಡಿ ನಡೆದುಕೊಂಡ ರೀತಿಯನ್ನು ಅನ್ಯಾಯದ್ದೆಂದು ಯಾರು ಹೇಳುತ್ತಾರೆ? ಹಾಗೆಂದು ಅವರ ಆಕ್ರಮಣವನ್ನು ಎಲ್ಲರೂ ಸಮರ್ಥಿಸಲಿಲ್ಲವೆಂಬುದನ್ನೂ ನಾವು ನೆನಪಿನಲ್ಲಿಟ್ಟುಕೊಳ್ಳಬೇಕು.

ಪುರಾಣ ಇತಿಹಾಸಗಳ ಮಾತಿರಲಿ,ನಮ್ಮ ದೈನಂದಿನ ಜೀವನದಲ್ಲಿಯೂ ಈ ನ್ಯಾಯಾನ್ಯಾಯ ವಿವೇಚನೆ ನಮ್ಮನ್ನು ಕಾಡುತ್ತದೆ. ಪರೀಕ್ಷೆಗೆ ಕಟ್ಟಿದ ಹುಡುಗ ಉತ್ತೀರ್ಣನಾಗದೆ ಇರುವುದು ಮೌಲ್ಯಮಾಪಕನಿಗೆ ನ್ಯಾಯವಾಗಿಯೇ ತೋರುತ್ತದೆ. ಆದರೆ ಆ ಹುಡುಗನಿಗೆ ಅದು ಅನ್ಯಾಯವೆಂಬುದು ದೃಢವಾಗಿ ಹೋಗಿದೆ. ಇನ್ನೊಬ್ಬ ಹುಡುಗನ ಕಥೆ ಹೀಗಿದೆ: ಅವನಿಗೆ ಇನ್ನೆರಡು ಅಂಕಗಳು ಬಂದಿದ್ದರೆ ಅವನು ತೇರ್ಗಡೆಯಾಗಿ ಬಿಡುತ್ತಿದ್ದ. ಮತ್ತೊಬ್ಬ ಹುಡುಗ ಒಂದೇ ಒಂದು ಅಂಕ ಹೆಚ್ಚಾಗಿ ಗಳಿಸಿದ್ದರೆ ಮೊದಲ ದರ್ಜೆಯಲ್ಲಿ ತೇರ್ಗಡೆಯಾಗುತ್ತಿದ್ದ. ಇದು ನ್ಯಾಯವೆ? ಅನ್ಯಾಯವೆ? ಮೌಲ್ಯಮಾಪನ ಮಾಡುವ ಅಧ್ಯಾಪಕ ತನ್ನ ವಿವೇಚನೆಯನ್ನು ಹೇಗೆ ಬಳಸಬೇಕು ಈ ಸಂದರ್ಭದಲ್ಲಿ? ನನ್ನ ಸಹೋದ್ಯೋಗಿ ಮಿತ್ರರೊಬ್ಬರು ಹೇಳುತ್ತಾರೆ: ಹುಡುಗನನ್ನು ಎರಡೇ ಅಂಕಗಳಿಂದ ಅನುತ್ತೀರ್ಣನನ್ನಾಗಿ ಮಾಡಬೇಡಿ. ಅದು ಅನ್ಯಾಯ. ಅವನು ಉತ್ತೀರ್ಣನಾಗಲು ಅರ್ಹನಲ್ಲ ಎನ್ನುವುದು ನಿಮ್ಮ ದೃಢವಾದ ಅಭಿಪ್ರಾಯವಾಗಿದ್ದರೆ ಅವನನ್ನು ಆರೆಂಟು ಅಂಕಗಳಿಂದ ಹಿಡಿದು ನಿಲ್ಲಿಸಿ. ಇದು ಅವರಿಗೆ ನ್ಯಾಯವೆನ್ನಿಸಬಹುದು, ಆದರೆ ಇದರಿಂದ ಆ ಹುಡುಗನಿಗೇ ಅನ್ಯಾಯವಾಗುವ ಸಂದರ್ಭವೂ ಬರಬಹುದೆಂದು ಈ ಮಿತ್ರರಿಗೆ ತಿಳಿದಿಲ್ಲ.

ಬೆಳಗಿನಿಂದ ಸಂಜೆಯವರೆಗೆ ಎಷ್ಟೊಂದು ನ್ಯಾಯಾನ್ಯಾಯಗಳು ನಮ್ಮ ತಲೆ ತಿನ್ನುತ್ತವೆ. "ಏನನ್ಯಾಯ, ಹಾಲಿಗೆ ನೀರು ಬೆರಸುತ್ತಾರೆ" ಎಂಬುದರಿಂದ ನಮ್ಮ ದಿನ ಆರಂಭವಾಗುತ್ತದೆ. "ಏನನ್ಯಾಯ ಹೀಗೆ ದಿನವೂ ದೀಪಗಳು ಆರಿ ಹೋಗುತ್ತವೆ" ಎಂಬುದರಿಂದ ನಮ್ಮ ದಿನ ಮುಗಿಯುತ್ತದೆ. ನ್ಯಾಯಾನ್ಯಾಯ ವಿವೇಚನೆ ಅತ್ಯುನ್ನತ ಸಿದ್ಧಾಂತದ ಚರ್ಚೆಯಿಂದ ತೊಡಗಿ, ದಿನದ ಸಾಮಾನ್ಯದ ಆರೆಕೊರೆಗಳ ವರೆಗೆ ವ್ಯಾಪಿಸಿಕೊಂಡಿದೆ.

ನಮ್ಮದೆಲ್ಲವೂ ನ್ಯಾಯ; ನಮಗೆ ಸರಿ ಕಂಡಿದ್ದೆಲ್ಲವೂ ನ್ಯಾಯ; ಇದಕ್ಕೆ ವಿರುದ್ಧವಾದುದು ಅನ್ಯಾಯ. ನ್ಯಾಯಾನ್ಯಾಯ ವಿವೇಚನೆಗೆ ಇರುವ ಪ್ರಧಾನವಾದ ತೊಡಕು ಎಂದರೆ ಯಾವುದು ನ್ಯಾಯ? ಯಾವುದು ಅನ್ಯಾಯ ಎಂಬುದನ್ನು ನಿರ್ಧರಿಸಲು ನಮಗೆ ಅಳತೆಗೋಲು ಇಲ್ಲದಿರುವುದು. ಇದು ಇಲ್ಲದಿರುವಾಗ ವಿವೇಚನೆ ಎಂಬ ಮಾತಿಗೆ ಅರ್ಥ ಉಳಿಯದು.

ನಮ್ಮ ಜೀವನ ಸುಖಮಯವಾಗುವ ದೃಷ್ಟಿಯಿಂದ ನಮ್ಮ ಆಗತ್ಯಗಳು ಅನೇಕವಿರುತ್ತವೆ. ಕೆಲವನ್ನು ನಾವು ಪಡೆದಿರುತ್ತೇವೆ. ಇನ್ನು ಕೆಲವು ಕೊರೆಯಾಗಿರುತ್ತವೆ. ಇದೊಂದಿದ್ದಿದ್ದರೆ ಎಂದು ನಾವು ಅನೇಕ ಸಂದರ್ಭಗಳಲ್ಲಿ ಹೇಳುತ್ತಿರುತ್ತೇವೆ. ಅದೊಂದಿದ್ದಿದ್ದರೆ ಎಲ್ಲವೂ ಸರಿಯಾಗಿರುತ್ತಿತ್ತು ಎಂಬುದೇ ನಮ್ಮ ಅಭಿಪ್ರಾಯ. ಆದರೆ ಎಲ್ಲರಿಗೂ ನ್ಯಾಯಾನ್ಯಾಯ ವಿವೇಚನೆಯೊಂದಿದ್ದಿದ್ದರೆ, ನಮ್ಮ ನಿಮ್ಮ ಮಾತ್ರವಲ್ಲ, ಸಮಸ್ತ ಲೋಕದ ಹಾದಿಯೇ ಬೇರೆಯಾಗಿರುತ್ತಿತ್ತು. ಜಗತ್ತಿನ ಎಷ್ಟೋ ಕಣ್ಣೀರು, ದುಃಖಗಳು ಕಡಮೆಯಾಗಿರುತ್ತಿದ್ದವು. ಇದೊಂದಿದ್ದಿದ್ದರೆ ಎಂದು ನಾವು ಯಾವುದರ ಬಗ್ಗೆ ಬೇಕಾದರೂ ಗೊಣಗೋಣ. ಆದರೆ ನ್ಯಾಯಾನ್ಯಾಯ ವಿವೇಚನೆಯೊಂದನ್ನು ಉಳಿಸಿಕೊಳ್ಳೋಣ.

●





ಹಿಂದೊಮ್ಮೆ ಒಂದಾಗಿತ್ತು. ಒಂದು ಪ್ರದೇಶವಾಗಿತ್ತು.
ಕಾಲ ಉರುಳಿದಂತೆ ಹರಿದು ಹೋಯಿತು. ಹಂಚಿ ಹೋಯಿತು.
ಆದರೆ ಮತ್ತೆ ಒಂದಾಗುವ ಆಸೆ ಆರಲಿಲ್ಲ.
ನಾವು ಜಾಗೃತರಾದಾಗ, ಜಾಗೃತರಾಗಿ ತಲೆ ಎತ್ತಿ ನಿಂತಾಗ, ತಲೆ ಎತ್ತಿ ನಿಂತು ನಮ್ಮ ವ್ಯವಹಾರಗಳನ್ನು ನಾವೇ ನಡೆಸಿಕೊಳ್ಳುವ ಸ್ವಾತಂತ್ರ್ಯ ಪಡೆದಾಗ, ಭವ್ಯ ಸಮಾಜದ ರಚನೆಯ ಕನಸು
ಮಹಾತ್ಮಾಗಾಂಧೀಜಿ ಅವರ ನಾಯಕತ್ವ. ಸ್ವಾತಂತ್ರ್ಯ ಬಂತು. ಒಂದು



# ಮೊದಲ ದೀಪಾವಳಿ

—. ಜಯಶೀಲ

ಭಾಷೆಯ ಜನ ಒಂದಾಗಿ ಸೇರಬೇಕೆಂಬುದು ಈ ಸಂಗಾತದ ಸಂಗಾತಿಯಾಗಿ ಹರಿದು ಬಂದ ಹಂಬಲ.

ಸಾಹಿತಿಗಳು, ಅನೇಕ ರಾಜಕಾರಣಿಗಳು, ಸಮಾಜ ಕಾರ್ಯಕರ್ತರು ಈ ದಿಶೆಯಲ್ಲಿ ನಡೆಸಿದ ಹೋರಾಟ ಸ್ಮರಣೀಯ.

ಭಾಷಾವಾರು ರಾಜ್ಯಗಳ ಉದಯಕ್ಕೆ ಸ್ವಾತಂತ್ರ್ಯ ಬಂದ ನಂತರ ೯ ವರ್ಷ ಕಾಯಬೇಕಾಯಿತು. ಜನರೇ ತಮ್ಮ ವ್ಯವಹಾರಗಳನ್ನು ನಡೆಸುವ ಪ್ರಜಾಸತ್ತೆಯ ವ್ಯವಸ್ಥೆಯಲ್ಲಿ ಒಂದೇ ಭಾಷೆ ಮಾತನಾಡುವ ಪ್ರದೇಶ ಒಂದೇ ರಾಜ್ಯದ ಆಡಳಿತಕ್ಕೆ ಒಳಪಟ್ಟಿರಬೇಕೆಂಬುದಕ್ಕೆ ಹೆಚ್ಚು ವಾದ ಬೇಕಿರಲಿಲ್ಲ. ಭಾರತ ಬಹು ಭಾಷಾ ರಾಷ್ಟ್ರವಾಗಿರದಿದ್ದಲ್ಲಿ ಭಾಷಾ ರಾಜ್ಯಗಳ ಪ್ರಶ್ನೆಯೇ ಇರುತ್ತಿರಲಿಲ್ಲ.

ಕರ್ನಾಟಕ ರಚನೆಗೆ ವಿರೋಧವಿರಲಿಲ್ಲವೆಂದಲ್ಲ, ರಾಜಕೀಯ ಕ್ಷೇತ್ರದಿಂದ ಬಂದ ವಿರೋಧ. ಇದರ ಹಿನ್ನೆಲೆಯಲ್ಲಿ ಪ್ರಬಲ ಜಾತಿಗಳ ನಡುವಿನ ಪೈಪೋಟಿ. ಈಗ ಇದು ಇತಿಹಾಸದ ಭಾಗ. ಈ ಕಾರಣ ಸದ್ಯದ ಜೀವನಕ್ಕೆ, ಮಾರ್ಪಾಟಾಗಬೇಕೆಂದಿರುವ ನಾಳಿನ ಜೀವನಕ್ಕೆ ಅಷ್ಟಾಗಿ ಸಂಬಂಧವಿಲ್ಲ.

೧೯೫೬ರ ನವೆಂಬರ್ ೧ರಂದು ಇತರ ಭಾಷಾ ರಾಜ್ಯಗಳೊಡನೆ ಕರ್ನಾಟಕ ಉದಯವಾಯಿತು. ಬಿದರ್ ಜಿಲ್ಲೆಯ ಭಾಲ್ಕಿಯಿಂದ ಮೈಸೂರು ಜಿಲ್ಲೆಯ ಬಂಡೀಪುರದ ವರೆಗೆ, ಕಡಲ ತೀರದ ಮಲ್ಪೆಯಿಂದ ಕೋಲಾರ ಜಿಲ್ಲೆಯ ಮುಳಬಾಗಿಲುವರೆಗೆ ಒಂದೇ ರಾಜ್ಯದಲ್ಲಿ, ಒಂದೇ ಆಡಳಿತದಲ್ಲಿ.

ರಾಜಕೀಯ ಕಾರಣಗಳಿಂದ ಉಂಟಾಗಿದ್ದ ಭಾವೋದ್ರೇಕಗಳ ಶಮನಾರ್ಥವಾಗಿ "ಮೈಸೂರು" ಹೆಸರನ್ನು ಉಳಿಸಿಕೊಳ್ಳಲಾಯಿತು. ಹೆಸರು ವಿಶಾಲ ಮೈಸೂರಾದರೂ ಒಂದಾದ ಹಾಗೂ ಒಂದಾಗಿ ವಿಶಾಲಗೊಂಡ ಪ್ರದೇಶ, ಕನ್ನಡ ಮಾತನಾಡುವ ಪ್ರದೇಶ. ಕನ್ನಡಿಗರ ಪ್ರದೇಶ. ಭಾರತದ ಒಂದು ಭಾಗ.

ದೇಶದ ಸ್ವಾತಂತ್ರ್ಯಕ್ಕಾಗಿ, ಕರ್ನಾಟಕ ಏಕೀಕರಣಕ್ಕಾಗಿ ದುಡಿದ ಹಿರಿಯ ನಾಯಕ ಸಿದ್ದವನಹಳ್ಳಿ ನಿಜಲಿಂಗಪ್ಪನವರು ಕರ್ನಾಟಕದ ಮೊದಲ ಮುಖ್ಯಮಂತ್ರಿ. ಅನಂತರ ಈಗ ಉಪರಾಷ್ಟ್ರಪತಿಯ ಸ್ಥಾನವನ್ನಲಂಕರಿಸಿರುವ ಶ್ರೀ ಬಿ. ಡಿ. ಜತ್ತಿ, ಕೆಲ ತಿಂಗಳ ಕಾಲ ಎಸ್. ಆರ್. ಕಂಠಿ, ಮತ್ತೆ ನಿಜಲಿಂಗಪ್ಪನವರು ಮುಖ್ಯಮಂತ್ರಿಯಾದರು. ಇವರಿಂದ ಈ ಸ್ಥಾನದ ಅಧಿಕಾರ ವಹಿಸಿಕೊಂಡವರು ಯುವಕ ಮುಖ್ಯಮಂತ್ರಿ ಶ್ರೀ ವೀರೇಂದ್ರ ಪಾಟೀಲರು. ೧೯೭೨ರಿಂದ ಇಲ್ಲಿಯ ವರೆಗೆ ಶ್ರೀ ದೇವರಾಜ ಅರಸು ಅವರು. ಅರಸು ಅವರು ಅಧಿಕಾರಾವಧಿಯ ಪೂರ್ತಿ ಕಾಲವನ್ನು ಪೂರೈಸುತ್ತಿರುವ ಪ್ರಥಮ ಮುಖ್ಯಮಂತ್ರಿ.

ಹೆಸರಿನಲ್ಲೇನಿದೆ? ಇದು ಬಗೆಹರಿಯದ ಹಳೆಯ ತರ್ಕ. ಹೆಸರಿನಲ್ಲಿ ಏನೂ ಇಲ್ಲದಿದ್ದರೆ ಹೆಸರಾದರೂ ಏಕೆ ಬೇಕು? ಹೆಸರು ಭಾವದ ಸಂಕೇತ. ಗುರುತಿಸಲು ಇದೊಂದು ಸಾಧನವಾಗುವುದು ಇದರ ಅಗತ್ಯದ ಸಾಮಾನ್ಯ ಉದ್ದೇಶ. ಹೆಸರಿನಲ್ಲಿ ಜನಮನದ ಹಾಗೂ ಆಶೋತ್ತರಗಳ ಬಿಚ್ಚುಯುಂಟು. ಹೆಸರಿನಲ್ಲಿ ಚೇತನವೊಂದುಂಟು.

ಪ್ರಜಾಸತ್ತೆಯಲ್ಲಿ ಬಹುಮತದಂತೆ ತೀರ್ಮಾನ. ಆದರೆ ಅನೇಕ ವೇಳೆ ಜಾತಿ. ರಾಜಕೀಯ ಹಿತಾಸಕ್ತಿ ಮುಂತಾದವು ಪ್ರಭಾವ ಬೀರಿ ಬಹುಮತವನ್ನು ನಿಷ್ಕರ್ಷಿಸುತ್ತವೆ. ಇಂಥ ಶಕ್ತಿಗಳು ಅನೇಕ ವೇಳೆ ಬಹುಮತದ ತೀರ್ಮಾನವಾಗುವುದಕ್ಕೂ ಅಡ್ಡಿ ಬರುತ್ತವೆ.

೧೯೭೨ರಲ್ಲಿ ವಿಧಾನಸಭೆಗೆ ಚುನಾವಣೆ ನಡೆದು ನೂತನ ವಿಧಾನಸಭೆ ಅಸ್ತಿತ್ವಕ್ಕೆ ಬಂದ ನಂತರ ಪ್ರಜಾಪ್ರಭುತ್ವ ಕಾರ್ಯಾಚರಣೆಯಲ್ಲಿ ಒಂದು



ವ್ಯತ್ಯಾಸ. ಸ್ವಾಗತಾರ್ಹವಾದ ವ್ಯತ್ಯಾಸ. ವ್ಯಕ್ತಿಯ ಅಥವಾ ಗುಂಪಿನ ಆಸಕ್ತಿಯೇನೇ ಇರಲಿ, ಬಹುಮತದ ಅಭಿಪ್ರಾಯಕ್ಕೆ ತಲೆಬಾಗಿ ನಡೆಯುವ ಮನಸ್ಸು ಹಾಗೂ ಶಿಸ್ತು ಮೂಡಿ ಬಂತು. ಕರ್ನಾಟಕದ ರಾಜಕೀಯ ಜೀವನದಲ್ಲಿ ಇದೊಂದು ಆದ ಮಹತ್ತರ ಬದಲಾವಣೆ. ಅದು ಯಾವ ಬಣಕ್ಕೆ ಸೇರಿರಲಿ, ಯಾವ ಬಣ್ಣದ್ದೇ ಆಗಿರಲಿ ನಾವು ಇದಕ್ಕೆ ಹಿಂದೆ ಅರ್ಥ ಮಾಡಿಕೊಳ್ಳುತ್ತಿದ್ದ ಪಟ್ಟಭದ್ರ ಶಕ್ತಿಗಳ ಆಟಕ್ಕೆ ಅವಕಾಶವಿರಲಿಲ್ಲ. ಪ್ರಜಾಸತ್ತೆಯಲ್ಲಿ ಕೆಳಮಟ್ಟದಿಂದ ರೂಪುಗೊಂಡು ಬಂದಿದ್ದ ಹೊಸ ವಾತಾವರಣ ಹಾಗೂ ಹೊಸ ದೃಷ್ಟಿ ಇದಕ್ಕೆ ಕಾರಣ.



೧೯೭೩ರ ಜುಲೈ ೨೭ ರಂದು ಅಪ್ಪು ಹೊತ್ತಿಗೆ ರಾಜ್ಯದ ವಿಧಾನ ಸಭೆಯಲ್ಲಿ ೩ ದಿನಗಳ ಕಾಲ ಚರ್ಚೆ ನಡೆದಿತ್ತು. ಸದಸ್ಯರು ಸ್ವಾಗತಿಸಿದ್ದರು.

ಮೂರನೆಯ ದಿನ ಸಭೆಯಲ್ಲಿ ಸಂಭ್ರಮ. ಭಾವ ಆದರ್ಶಗಳ ಸಂಗಮ. ಕೃಷ್ಣ–ಕಾವೇರಿಯ ದಡವಾಸಿಗಳಾದ ಕನ್ನಡಿಗರ ಬಾಳು–ಬಯಕೆಗಳ ಸುಗಂಧ ಧೂಪ. ಸಭೆಯಲ್ಲಿ ಕರತಾಡನ. ಸರ್ವಾನುಮತದಿಂದ ಅಂಗೀಕಾರ. ಕನ್ನಡ ಚಳವಳಿಗಾರ ವಾಟಾಳ್ ನಾಗರಾಜ್ ಹಾಗೂ ಎಸ್. ಬಂಗಾರಪ್ಪ "ಶುಭ ಸಂತೋಷ ಸಮಯದಲ್ಲಿ ಸಂತೋಷ ಸೂಚಕವಾಗಿ" ಮಲ್ಲಿಗೆ ಹೂ ಚೆಲ್ಲಿದರು.

ಮುಖ್ಯಮಂತ್ರಿ ಅರಸು ಮೂರು ಬಾರಿ ಅಂದರು. "ಕರ್ನಾಟಕಕ್ಕೆ" ಚಪ್ಪಾಳೆ ಕುಟ್ಟುತ್ತ ಸದಸ್ಯರೆಲ್ಲ ಘೋಷಿಸಿದರು. "ಜಯವಾಗಲಿ"

ರಾಜ್ಯದ ಹೆಸರು "ಕರ್ನಾಟಕ"ವಾಯಿತು.

ಸಮಾಜ ಕುರಿತು, ಅದರ ಪರಿವರ್ತನೆ ಕುರಿತು ಚಿಂತೆ ಅನಾದಿ ಕಾಲದಿಂದಲೂ ಉಂಟು. ಆಧುನಿಕ ಯುಗದಲ್ಲಿ, ಪ್ರಜಾಸತ್ತೆ ಬೆಳೆದು ಬೇರೂರಿ ಬಂದಂತೆಲ್ಲ ಈ ಚಿಂತನೆಗೆ ಅದನ್ನು ಅನುಸರಿಸಿ ನಡೆಯುವ ಪ್ರಯತ್ನಕ್ಕೆ ಹೊಸ ರೂಪವುಂಟು. ಹೊಸ ಚೇತನವುಂಟು. ಪ್ರಳಯ ಕಾಲದಲ್ಲಿ ಪರ್ವತಗಳು ಕುಸಿದು ಬೀಳುವವು. ಎಂಬಂತೆ ಹಳೆಯ ಮೌಲ್ಯಗಳ ಹಾಗೂ ಜಾಡುಗಳ ಕುಸಿತವೇ ಹೊಸತಾಗಿ ಉದ್ಭವವಾಗಿರುವ ಚೈತನ್ಯ. ಕಟ್ಟ ಕಡೆಯವನನ್ನೂ ಮುಂದಕ್ಕೆ ನೂಕಿ ನಿಲ್ಲಿಸುವ ಶಕ್ತಿ. ಈ ಶಕ್ತಿಯ ಆಟಗಳ ಮೇಲೆ ಸಮಾಜದಲ್ಲಿರುವ ಹಿನ್ನೆಲೆಯ ಪ್ರಭಾವವುಂಟು. ಹತೋಟಿಯೂ ಉಂಟು. ಕೆಲವು ವೇಳೆ ಈ ಹೊಸ ಚೈತನ್ಯ ಈ ಹಿನ್ನೆಲೆಯ ಸೆಳೆತಕ್ಕೆ ಮಣಿಯುವುದೂ ಉಂಟು. ಜಗ್ಗದೆ ಕುಗ್ಗದೆ ಮುಂದಕ್ಕೆ ಹೋಗುವುದೂ ಉಂಟು.

ಭಾರತದಲ್ಲಿ ನಿರ್ಮಿಸಬೇಕಾದ ನೂತನ ಸಮಾಜದ ದೂರ ದೃಶ್ಯದ ಚಿತ್ರ ನಮ್ಮ ಸಂವಿಧಾನದಲ್ಲೇ ದರ್ಶನವಾಗುತ್ತದೆ. ಈ ಚಿತ್ರ ನಿರ್ಮಿಸುವ ಕಲೆಗಾರರೇ ರಾಜಕೀಯ ಪಕ್ಷಗಳು. ಅವುಗಳ ಪ್ರಣಾಳಿಕೆಗಳೇ ಅವು ಅಧಿಕಾರದಲ್ಲಿರುವಾಗ ಬರೆಯಲಾಗುವುದೆಂದು ಅವು ಭರವಸೆ ಕೊಡುವ ಚಿತ್ರದ ರೂಪರೇಷೆಗಳು.

ಕೆಲವೊಮ್ಮೆ ರಾಜಕೀಯ ಪಕ್ಷಗಳು ಹಾಗೂ ಅವುಗಳ ನಾಯಕರು ಭರವಸೆ ನೀಡಿದ ಚಿತ್ರ ಬರೆಯುವುದುಂಟು. ಕುಂಚ ಬಳಸದೆ, ಅಥವಾ ಬೇರೆ ಬಣ್ಣ ಹಾಕಿ ಬೇರೊಂದು ಚಿತ್ರ ಸಿದ್ಧ ಮಾಡಲೆತ್ನಿಸುವುದುಂಟು.

ಗಣೇಶನನ್ನು ಮಾಡುವುದಾಗಿ ಜನತೆಗೆ ಭರವಸೆ ನೀಡಿ ಅವರಪ್ಪನನ್ನು ಬರೆದು ತೋರಿಸುವುದೂ ಉಂಟು. ಅಷ್ಟೇ ಅಲ್ಲ, ಅವರಪ್ಪನಿಂದ ಪ್ರಳಯ ಕಾಲದ ತಾಂಡವ ನೃತ್ಯವಾಡಿಸುವುದೂ ಉಂಟು. ಇತ್ತೀಚಿಗೆ ನಮ್ಮ ದೇಶದಲ್ಲಿ ನಡೆದ ಆಪತ್ಕಾಲೀನ ಪರಿಸ್ಥಿತಿ ಘೋಷಣೆ ವ್ಯಕ್ತಿ ಹಾಗೂ ಪತ್ರಿಕಾ ಸ್ವಾತಂತ್ರ್ಯದ ದಮನ ಇದಕ್ಕೊಂದು ನಿದರ್ಶನ. ಆದರೆ ಅವುಗಳ ಪ್ರಸ್ತಾಪ ಸದ್ಯದ ಲೇಖನದ ಉದ್ದೇಶವಲ್ಲ.

ಬಡತನ, ಅನಕ್ಷರತೆಯ ಜೊತೆಗೆ ನಮ್ಮ ಸಮಾಜದಲ್ಲಿ ಪುರಾತನ ಪಿಡುಗು ಒಂದಿದೆ. ಅದು ಜಾತಿ ಪದ್ಧತಿ. ಇದರ ಉಗಮ, ವಿಶ್ಲೇಷಣೆ ವ್ಯರ್ಥ/ ನಿಷ್ಪ್ರಯೋಜಕ.

ಬಡತನ ದೇಹವನ್ನು ಕುಗ್ಗಿಸುವುದೇ ಅಲ್ಲದೆ, ಮನಸ್ಸನ್ನೂ ಬಗ್ಗಿಸಿದೆ. ತಲೆ ಎತ್ತಲು ಅವಕಾಶ ಕೊಡುತ್ತಿಲ್ಲ. ಇವರೇ ಹಿಂದುಳಿದವರು, ಬಲಹೀನರು. ದುರ್ಬಲರು ಎಂದು ನಾವು ಅನೇಕ ಹೆಸರುಗಳಿಂದ ಕರೆಯುವ ಸಮಾಜದ ವರ್ಗ.

ಜಾತಿ ಹಾಗೂ ಹಿಂದುಳಿದಿರುವಿಕೆ ಹಾಸುಹೊಕ್ಕು. ಬಡತನದ ಪರಿಣಾಮವಾಗಿ ಆಳು ಹಾಗೂ ಆಸೆ ಎರಡೂ ಬಗ್ಗಿ ಹೋಗಿರುವುದರಿಂದ ಇವರೇ ಶೋಷಿತ ವರ್ಗ. ಇವರ ಸ್ಮರಣೆ ಹಾಗೂ ಸ್ತುತಿ ಅಪಾರ. ಆದರೆ ಇವರ ಸ್ಥಿತಿ ಹಿಂದಿನಂತೆಯೇ. ಅಂದಿನಂತೆಯೇ. ಎಂದಿನಂತೆಯೇ.



ಪ್ರಜಾಸತ್ತಾತ್ಮಕ, ಜಾತ್ಯತೀತ, ಹಾಗೂ ಸಮಾಜವಾದಿ ಜನತಂತ್ರ ರೂಪಿಸಬೇಕೆಂಬುದು ನಮ್ಮ ಸಂವಿಧಾನದಲ್ಲಿರುವ ಘೋಷಣೆ. ಗುರಿ ಹಾಗೂ ಆದರ್ಶ.

ಹೊಸ ಸಮಾಜ ರಚನೆಗೆ ಮೊದಲ ಹೆಜ್ಜೆ, ನಾವು ಸ್ವತಂತ್ರರಾಗ ಬೇಕಾಗಿತ್ತು. ಆದಾಯಿತು. ಅದಾದ ಮೇಲೆ ಈ ದಿಸೆಯಲ್ಲಿ ಒಂದಿಷ್ಟು ಕೆಲಸ ನಡೆದಿಲ್ಲವೆಂದಲ್ಲ.

ಭಾರತದ ಇತರ ಭಾಗಗಳಂತೆ ನಮ್ಮ ರಾಜ್ಯದಲ್ಲೂ ಒಂದಿಷ್ಟು ಕೆಲಸ ನಡೆದಿದೆ. ಕರ್ನಾಟಕವಾದ ಮೇಲೂ ಈ ಕೆಲಸ ಮುಂದುವರಿದಿದೆ.



೧೯೭೩ರಲ್ಲಿ ನಡೆದ ರಾಜ್ಯದ ವಿಧಾನಸಭೆ ಚುನಾವಣೆಯ ನಂತರ ಕರ್ನಾಟಕದ ರಾಜಕೀಯದಲ್ಲಿ ಒಂದು ಗಮನಾರ್ಹವಾದ ಬದಲಾವಣೆ ನಡೆಯಿತು. ಇದು ಕರ್ನಾಟಕ ಸಮಾಜದ ಹಿನ್ನೆಲೆಯಲ್ಲೇ ಆಗಿರುವ ಪರಿವರ್ತನೆ.

ಅಲ್ಲಿಯವರೆಗೆ ಇದ್ದುದು ಪ್ರಧಾನವಾಗಿ ಜಾತಿ ರಾಜಕೀಯ. ಎರಡು ಪ್ರಬಲ ಕೋಮುಗಳದ್ದೇ ಮುಖ್ಯ ಪಾತ್ರ. ಇದು ಇದ್ದ ವಾಸ್ತವಿಕ ಸ್ಥಿತಿ. ಇದನ್ನು ಗಮನಿಸಲು,ವಿಶ್ಲೇಷಿಸಲು, ಸಂಕೋಚ ಅನಗತ್ಯ. ಯಾರನ್ನೇ ಆ[illegible] ಓಲೈಸುವ ಉದ್ದೇಶವಿಲ್ಲದೆ ಇಷ್ಟ

ಸ್ಥಿತಿಯನ್ನು ಇದ್ದಂತೆ ಅರಿಯ ಬೇಕು. ಆ ಸ್ಥಿತಿಗೆ ಐತಿಹಾಸಿಕ ಬೆಳವಣಿಗೆ ಕಾರಣ. ಆದರೆ ಈ ಪರಿಸ್ಥಿತಿ ಬದಲಾಗಬೇಕು ಎಂಬ ಬಗ್ಗೆ ಯಾರ ವಿರೋಧವೂ ಇಲ್ಲ. ಯಾವ ಭಿನ್ನಾಭಿಪ್ರಾಯವೂ ಇಲ್ಲ.

ಹಿತಗಳನ್ನು ಕಳೆದುಕೊಳ್ಳುವಾಗ ಅವರಿಂದ ವಿರೋಧ, ಕೋಪ-ತಾಪ ಸಹಜ. ಇದು ಪರಿವರ್ತನೆಯ ಧರ್ಮ.

ಇಲ್ಲಿಯ ವರೆಗಿನ ಅರಸು ಮಂತ್ರಿ ಮಂಡಲದ ಅಧಿಕಾರಾವಧಿಯಲ್ಲಿ ಎರಡು ಪ್ರಬಲ ಕೋಮುಗಳ ಪ್ರಾಬಲ್ಯ ಕಡಿಮೆಯಾಗಿದೆ. ಹಿಂದುಳಿದವರು. ಅಥವಾ ದುರ್ಬಲರಿಗೆ ಹೊಸ ಆಸೆ ಮೂಡಿದೆ. ಹೊಸ ಸ್ವಾಭಿಮಾನ ಅಂಕುರವಾಗಿದೆ. ತಲೆ ಎತ್ತುವ ಧೈರ್ಯ ಬಂದಿದೆ. ತಲೆ ಎತ್ತಿ ನಡೆಯುವ ಸ್ಥೈರ್ಯ ಬಂದಿದೆ.

ಈ ವರ್ಗವೇ ಕರ್ನಾಟಕದ ಬಹು ಭಾಗದ ಸಮಾಜ. ಶೋಷಣೆರಹಿತ ಸಮಾಜ ನಿರ್ಮಾಣಕ್ಕೆ, ಒಬ್ಬ ವ್ಯಕ್ತಿ, ಅಥವಾ ಒಂದು ವರ್ಗ ಅಥವಾ ಒಂದು ಜಾತಿಯ ಪ್ರಾಬಲ್ಯ ಆತಂಕಕಾರಿ. ಈ ಪ್ರಾಬಲ್ಯ ಎಲ್ಲರಿಗೂ ಸಮಾನ ಸ್ಥಾನದ, ಸಮಾನಮಾನದ ಸಮಾಜದ ರಚನೆಗಾಗಿ ಕಣ್ಮರೆಯಾಗಬೇಕಾದುದು ಅಗತ್ಯ ಹಾಗೂ ಅನಿವಾರ್ಯ.

ಎರಡು ಪ್ರಬಲ ಕೋಮುಗಳ ಬಗ್ಗೆ ದ್ವೇಷ ಅಥವಾ ಜಾತೀಯ ಭಾವನೆಯಿಂದ ಈ ಮಾತನ್ನು ಹೇಳಬೇಕಾಗಿಲ್ಲ. ಈ ಎರಡು ಪ್ರಬಲ ಕೋಮುಗಳಲ್ಲೂ ಬಡವರೇ ಹೆಚ್ಚು ಎಂಬುದನ್ನು ತಿಳಿದಾಗ ನಡೆದಿರುವ ಪ್ರಮುಖ ಬದಲಾವಣೆಯ ಪೂರ್ವ ಸ್ವರೂಪದ ದರ್ಶನವಾಗುತ್ತದೆ. ಸಂತೋಷವಾಗುತ್ತದೆ. ಈ ದರ್ಶನದಿಂದ ಭಾವಿ ಭವ್ಯ ಸಮಾಜದ ನಿರ್ಮಾಣದ ಹಾದಿ ಸ್ಪಷ್ಟವಾಗುತ್ತದೆ. ಸ್ಥಿರವಾಗುತ್ತದೆ.

"ದೇಶದಲ್ಲಿರುವ ಜಾತಿ ಒಂದೇ ಅದು ಯಾವುದೆಂದರೆ ಬಡವರ ಜಾತಿ ಈ ಮಾತನ್ನು ಹೇಳಿದವರು "ಕರ್ನಾಟಕಕ್ಕೆ..." ಎಂದ ಮುಖ್ಯ ಮಂತ್ರಿ ಅರಸು ಅವರು. ಈ "ಜಾತಿ"ಯವರೆಲ್ಲ ಸ್ಪಷ್ಟ ಅಸ್ಪಷ್ಟವಾಗಿ ಒಂದಾಗುತ್ತಿರುವುದೇ. ಸಂದರ್ಭಗಳಿಗೆ ಏಕ ರೀತಿಯಲ್ಲಿ ಪ್ರತಿಕ್ರಿಯೆ ವ್ಯಕ್ತ ಮಾಡುತ್ತಿರುವುದೇ, ಜರುಗುತ್ತಿರುವ ಮೌನಕ್ರಾಂತಿ.

ಕರ್ನಾಟಕ ಸಮಾಜದಲ್ಲಿ ಕಳೆದೈದು ವರ್ಷಗಳಲ್ಲಿ ಆಗಿರುವ ಈ ಮೌನ ಕ್ರಾಂತಿ ಸಣ್ಣದಲ್ಲ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪಕ್ಷಗಳು ಅಧಿಕಾರಕ್ಕೆ ಬರುತ್ತವೆ, ಹೋಗುತ್ತವೆ. ವ್ಯಕ್ತಿಗಳು ಮುಖ್ಯಮಂತ್ರಿಗಳಾಗುತ್ತಾರೆ, ಹೋಗುತ್ತಾರೆ. ಆದರೆ ಯಾವ ಕಾಲದಲ್ಲಿ ಏನು ಹಾಗೂ ಎಂತಹ ಬದಲಾವಣೆ ಆಯಿತೆಂಬುದು ಮುಖ್ಯ. ಈ ನಿಜಸ್ಥಿತಿಯನ್ನು ಗಮನಿಸಲು ಗುರುತಿಸಲು ಯಾವ ಪಕ್ಷದ ಪ್ರೇಮಿಯೂ ಆಗಬೇಕಾಗಿಲ್ಲ. ಯಾರ ಭಟ್ಟಂಗಿಯೂ ಆಗಬೇಕಾಗಿಲ್ಲ.

ಗಾಂಧೀಜಿಯವರ ರಾಮರಾಜ್ಯವಾಗಲಿ, ವಿನೋಬಾ ಅವರ ಸರ್ವೋದಯವಾಗಲಿ, ಜೆ. ಪಿ. ಅವರ ಸಮಗ್ರ ಕ್ರಾಂತಿಯಾಗಲಿ, ಕಾರ್ಲ್‌ಮಾರ್ಕ್ಸ್‌ನ ಸಮತಾವಾದವಾಗಲಿ, ಲೋಹಿಯಾ ಅವರ ಸಮಾಜವಾದವಾಗಲಿ, ಕೆಂಗಲ್ ಹನುಮಂತಯ್ಯ ಅವರ ಸುರಾಜ್ಯ ವಾಗಲಿ, ಅವನ್ನು ಸ್ಥಾಪಿಸಲು ಹೊರಟಾಗ ಕರ್ನಾಟಕದ ಸಮಾಜದಲ್ಲಾಗುತ್ತಿರುವ ಈ ಕ್ರಾಂತಿಕಾರಿ ಬದಲಾವಣೆಗೆ ಆಗಲೇಬೇಕಾದ ಮೂಲಭೂತ ಪರಿವರ್ತನೆಗಳಲ್ಲಿ ಒಂದು. ಅದೂ ಪ್ರಮುಖವಾದ ಒಂದು.

ಇದು ಆಗುತ್ತಿರುವುದೇ ಕರ್ನಾಟಕದ ಸುಪ್ರಭಾತ. ಕರ್ನಾಟಕದ ಬಹು ಭಾಗ ಸಮಾಜದ ಮೊದಲ ದೀಪಾವಳಿ.

●●

# ಒಂದೂರಲ್ಲೊಬ್ಬ ಯುವರಾಜ

* ಬರಗೂರು ರಾಮಚಂದ್ರಪ್ಪ

ಹೆಡ್ ಮಿಸ್ಟ್ರೆಸ್ ಚಂದಿರಾಬಾಯಿಯವರು ಕನ್ನಡಕವನ್ನು ಸರಿಯಾಗಿ ಏರಿಸಿ ಕೆಕ್ಕರಿಸಿ ನೋಡಿದರು; ಕುರ್ಚಿಯಲ್ಲಿ ಹಿಂದಕ್ಕೆ ಒರಗಿದರು, ಅತ್ತ ಇತ್ತ ಕುರ್ಚಿಯನ್ನು ಚಲಿಸಿದರು; ಕುರ್ಚಿ ನಿಂತಾಗ ಮತ್ತೆ ದಿಟ್ಟಿಸಿದರು. ನುಂಗೇ ಬಿಡ್ತಾರೇನೊ ಎನ್ನುವ ಹಾಗೆ ಕಾಣ್ತಾ ಇತ್ತು ಅವರ ದೃಷ್ಟಿ. ಇದೆಲ್ಲವನ್ನು ಬೆನ್ನು ಬಾಗಿಸಿ ನಿಂತ ಚಿನ್ನಪ್ಪ ಮಾಸ್ತರರು ನೋಡ್ತಾ ಇದ್ದರು; ಚಂದಿರಾಬಾಯಿಯವರ ಗಂಟಿಕ್ಕಿದ ಮುಖ, ಏರಿದ ಕನ್ನಡಕ, ಸುತ್ತಲೂ ಕುರ್ಚಿ, ಕೆಕ್ಕರಿಸೊ ಕಣ್ಣು-ಎಲ್ಲಾ ನೋಡ್ತಾ 'ಯಾಕಾದ್ರೂ ದೂರು ಹೇಳಿದೆನೊ? ಹೇಳೋನ್ ಹೇಳ್ದೆ ರಾಹುಕಾಲವೇನಾದ್ರೂ ಇದ್ಯೇನೋ. ನೋಡಿ ಬರ್ಬೇಕಿತ್ತು?' ಎಂದು ಪೇಚಾಡಿಕೊಳ್ತ ಪೇಟ ಸರಿಮಾಡಿಕೊಳ್ಳೋ ಭಂಗೀಲಿ ನಿಂತ್ಕೊಂಡಾಗ ಚಂದಿರಾಬಾಯಿಯವರು ಬಾಯಿ ಬಿಟ್ರು "ನಿಮ್ಗಿನ್ನೇನೂ ಬೇರೆ ಕೆಲ್ಸ ಇಲ್ವೇನ್ರೀ?" ಎಂದರು. ಏನು ಹೇಳಬೇಕಂತ ಗೊತ್ತಾಗದೆ ಚಿನ್ನಪ್ಪ ಮಾಸ್ತರು ಹಿಹಿಹಿ ಎಂದರು. ಚಂದಿರಾಬಾಯಿ "ಹಲ್ಬಿಡ್ಬೇಡ್ರಿ. ನಮ್ಗೆಲ್ಲ ನೋಡಾಕಾಗಲ್ಲ ಆ ಅಡಿಕೆಲೆ ಮುಕ್ಕಿದ ಹಲ್ಲುಗಳ್ನ" ಎಂದದ್ದೇ ತಡ ತುಟಿ ಬಿಗಿದು ನಿಂತರು. ಆಕೆ ಸುಮ್ಮನೆ ಬಿಡಲಿಲ್ಲ. "ಅಂತೂ ನನ್ನ ಮಗನ ಮೇಲೆ ದೂರು ಕೊಡೋ ಧೈರ್ಯ ಮಾಡಿದ್ರಿ?" ಎಂದರು. ಚಿನ್ನಪ್ಪ ಮಾಸ್ತರರು ತುಟಿ ಬಿಚ್ಚಲೇಬೇಕಾಗಿ ಬಂದು "ಏನ್ ಮಾಡಾಕಾಗುತ್ತೆ ಮ್ಯಾಡಂ ? ಕರ್ತವ್ಯ, ಕರ್ತವ್ಯ ಮುಖ್ಯ. ನನ್ನ ಇಷ್ಟು ವರ್ಷಗಳ ಅನುಭವದಲ್ಲಿ..." ಎಂದೇನೊ ಹೇಳುತ್ತಿರುವಾಗಲೇ "ಒಳ್ಳೇ ವರ್ಷದ ವಿಷಯ ಆಯ್ತಲ್ಲ, ಕತ್ತೆಗೂ ವಯಸ್ಸಾಗುತ್ತೆ ಕಣ್ರೀ?" ಎಂಬ ಗುಡುಗು ಕೇಳಿಸಿತು. "ಹೌದು ಮ್ಯಾಡಂ" ಎಂದರು; ಸುಮ್ಮನಾದರು. ಆದರೂ ಅನುಭವ. ವಯಸ್ಸು ಸುಮ್ಮನಿರಗೊಡದೆ ನಿಧಾನವಾಗಿ ಚೇತರಿಸಿಕೊಳ್ಳುತ್ತ "ಆದ್ರೂ ಕತ್ತೆ ಕುರ್ಚಿ ಮ್ಯಾಲೆ ಉಚ್ಚೆ ಹೊಯ್ಯಲ್ಲ ಮ್ಯಾಡಂ" ಎಂದೇ ಬಿಟ್ಟರು. ತಕ್ಷಣ ಬಂತು ಉತ್ತರ. "ಅದ್ಕೇ ಕಣ್ರಿ ನನ್ಮಗ ಕತ್ತೆ ಅಲ್ಲ." ಚಿನ್ನಪ್ಪ ಮಾಸ್ಟರಿಗೆ ಮಾತಾಡೋದೇ ಕಷ್ಟ ಅನಿಸಿತು. ಆದರೆ ಇಷ್ಟು ಮುಂದುವರಿದು ಬಾಲ ಮುದುರಿಕೊಳ್ಳೋದು ತಮ್ಮ ಮುದುಕತನಕ್ಕೇ ಅವಮಾನ ಅನ್ನಿಸಿತು. "ಏನೇ ಆದ್ರೂ ಎಸ್ಸೆಲ್ಸಿ ಓದೋ ಹುಡ್ಗ, ನಿಮ್ಮಗ ಅನ್ನೋ ಒಂದೇ ಕಾರಣಕ್ಕೆ ಕ್ಲಾಸ್‌ರೂಮ್ನಾಗೆ ಮೇಷ್ಟ್ರ ಕುರ್ಚಿ ಮ್ಯಾಲೆ ಉಚ್ಚೆ ಹೊಯ್ಯೋದು ಅಂದ್ರೆ..." "ಷಟ್ ಅಪ್"-ಚಂದಿರಾಬಾಯಿ ಸಿಡಿದರು. "ನಿಮ್ಮ ಕರ್ತವ್ಯ ಏನು? ನಿಮ್ಮ ಕೆಲ್ಸ ಏನು?" ಕೊಶ್ಚನ್ ಮಾಡಿದರು. "ಪಾಠ ಮಾಡೋದು; ಮೇಷ್ಟ್ರ ಕೆಲ್ಸ" ಭಯ ಧೈರ್ಯ ಎರಡೂ ಇಲ್ಲದ ದನಿಯಲ್ಲಿ ಚಿನ್ನಪ್ಪ ಮಾಸ್ತರು ಹೇಳಿದಾಗ "ಕರ್ತವ್ಯ ಮುಖ್ಯ: ಕರ್ತವ್ಯ ನಿಷ್ಠರಾಗಿ, ಕುರ್ಚಿ ಮೇಲೆ ಕೂತು ಪಾಠ ಮಾಡಾಕೆ ಇದೇನು ಮಾವನ ಮನೆ ಕಟ್ಬೋಟ್ಯಿತ್ತು?" ಎಂದು ಚಂದಿರಾಬಾಯಿಯವರು ಅಪ್ಪಣೆ ಕೊಡಿಸಿದಾಗ ಮಾಸ್ತರು ತೆಪ್ಪಗೆ ಹೊರ ಹೊರಟರು. ದಿಕ್ಕೇ ತೋಚದವರಂತೆ ನೇರ ಹೋಗುತ್ತಿದ್ದಾಗ ಬಾಗಿಲ ಹೊರಗೆ ನಿಂತಿದ್ದ ಯುವಕ ಮೇಷ್ಟರುಗಳು (ಶಂಕರ್, ಮೋಹನ್ ಮತ್ತು ಬಸವರಾಜ್) ಮುಸಿ ಮುಸಿ ನಕ್ಕರು. ಚಿನ್ನಪ್ಪ ಮಾಸ್ತರಿಗೆ ಮತ್ತಷ್ಟು ಅವಮಾನವಾದಂತಾಗಿ ತಲೆತಗ್ಗಿಸಿಕೊಂಡು ಮರೆಯಾದದ್ದೇ ತಡ ಈ ಯುವಕ ತಂಡ ಒಳನುಗ್ಗಿ ಇಂದಿರಾಬಾಯಿಯವರ ಎದುರಿಗೆ ನಿಂತು ಸಲ್ಯೂಟ್ ಮಾಡಿ "ನೀವೇನು ಹೆದರಬ್ಯಾಡಿ ಮ್ಯಾಡಂ." ಎಂದರು. ಮ್ಯಾಡಮ್‌ಗೆ ಆಶ್ಚರ್ಯವಾಯಿತು. "ಏನ್ರೀ ಮಾತಾಡ್ತಿದ್ದೀರಿ?" ಎಂದು ಗತ್ತಿನಿಂದ ಕೇಳಿದಾಗ ಈ ಯುವಕ ಶಿಖಾಮಣಿಗೆ ತಬ್ಬಿಬ್ಬಾಗಿ ಇಂಗ್ಲೀಷಲ್ಲಿ ಮಾತಾಡಬೇಕಿತ್ತೇನೋ ಎನ್ನಿಸಿ "ಯು ಆಫ್ರೈಡ್ ಡೋಂಟ್ ಮೇಡಂ" ಎಂದಾಗ ಮತ್ತದೇ ಪ್ರಶ್ನೆ:

"ಏನ್ರೀ ಮಾತಾಡ್ತಿದ್ದೀರಿ?"

"ಹಿಹಿ... ಅದೇ... ಈ ಮುದುಕು ಮುಂಡೇವು ಇದಾವಲ್ಲ ನಮ್ಮ ಸ್ಟಾಫ್



ನಾಗೆ. ಅವ್ರ ಏನೇನೋ ಹೇಳ್ತಾವೆ ಬಾಯಿಗೆ ಒಂದದ್ದು. ಆರಳು ಮರಳು ನೋಡಿ, ಹಾರಾಡ್ತವೆ... ಅದಕ್ಕ ನೀವೇನು ಹೆದ್ರಬ್ಯಾಡಿ ಮ್ಯಾಡಂ"

"ನಂಗೆ? ಹೆದ್ರಿಕೆ? ಏನ್ರೀ ಮಾತಾಡ್ತಿದ್ದೀರಿ?"

"ಅದೇ ಮ್ಯಾಡಂ ನಿಮ್ಮ ಹುಡುಗ."

"ಹುಡುಗ ಅಲ್ಲ ನನ್ನ ಮಗ."

"ಅದೇ ಮ್ಯಾಡಂ, ಅವ್ನು ಏನೊ ಮಾಡ್ದ ಅಂತ ಇವ್ರು, ಏನೋ ಹೇಳಾಕ ಬಂದು? ಹಂಗಲ್ಲಪ್ಪ ಹಿಂಗೆ ಅಂತ ಅವ್ನಿಗೇ ಹೇಳಿದ್ರೆ..." ಎನ್ನುತ್ತಿರುವಾಗ ಮ್ಯಾಡಂ ಮಗ ಸುಂದರ್ ಗಾಳಿಯಂತೆ ಬಂದು "ಏನ್ರೀ ಮೇಷ್ಟ್ರೆ ಅವ್ನು ಇವ್ನು ಅಂತೀರಿ?" ಎಂದು ಬಿಡೋದೆ? ಇವರಿಗೆ ತಕ್ಷಣ ಏನೂ ಹೊಳೀದೆ ಮುಖ ಮುಖ ನೋಡಿಕೊಳ್ಳುತ್ತಿರುವಾಗ ಚಂದಿರಾಬಾಯಿಯವರು ಮಗನನ್ನು ಹತ್ತಿರಕ್ಕೆ ಕರೆದು ಮೈದಡವಿದರು. ಬಸವರಾಜ್ ಚಾಣಾಕ್ಷ; ಎಷ್ಟೋ ನುಂಗಿ ನೀರು ಕುಡಿದವ; ನೀರು ಕುಡಿಸುವುದರಲ್ಲೂ ನಿಪುಣ. "ನಿಮ್ಮನ್ನ ಹಂಗನ್ನಾದುಂಟಾ ಯುವರಾಜರೆ?"ಎಂದದ್ದೇ ತಡ ಆತನಿಗೇನೊ ಕೋಡು ಬಂದಂತಾಯ್ತು. ಅಷ್ಟೇ ಅಲ್ಲ ಚಂದಿರಾಬಾಯಿಯವರ ವದನಾರವಿಂದ ಅರಳಿತು. ತಮ್ಮ ಮಗ ಯುವರಾಜ ಎಂದಾದರೆ ತಾವು? ಮಹಾರಾಣಿಯೇ ತಾನೆ? ತಕ್ಷಣ ಯುವ ತಂಡದ ಕಡೆ ತಿರುಗಿ ಹೇಳಿದರು "ನೋಡಿ ವಿದ್ಯಾಭ್ಯಾಸದಲ್ಲಿ ಹೊಸ ಹೊಸ ಸುಧಾರಣೆ ಮಾಡ್ಬೇಕು; ಏನಾದ್ರೂ ಹೊಸದಾಗಿ ಇಂಟ್ರಡ್ಯೂಸ್ ಮಾಡ್ಬೇಕು. ಇಲ್ದಿದ್ರೆ ಅದೇ ಓಬೀರಾಯನ ಕಾಲದ ಪದ್ಧತಿ, ಅದೇ ಆಲದಮರಕ್ಕೆ ನೇಣು ಹಾಕಿಕೊಳ್ಳೊ ಆಸೆ. ಹೀಗಾಗಬಾರ್ದು ಅಂತಲೇ ಮೇಷ್ಟು ವಿದ್ಯಾರ್ಥಿಗಳಿಗೆ ಸ್ವಾತಂತ್ರ್ಯ ಕೊಡಬೇಕು. ಪ್ರಜಾಸತ್ತಾತ್ಮಕವಾಗಿ ನಡಕೊಳ್ಳಬೇಕು. ಅದಕ್ಕೇ ನೋಡಿ ನಮ್ಮ ಸುಂದರ ಅದೇನೊ ಮಾಡಿದ ಅಂದಾಗ್ಲೂ ನಾನು ಸುಮ್ಮನೇ ಇದ್ದಿದ್ದು. ನನ್ನ ಮಗ ಹೀಗೆಲ್ಲ ಮಾಡೋಕಾದ್ರೂ ಏನೋ ಕಾರಣ ಇರ್ಲೇಬೇಕಲ್ಲ?..."

ತಕ್ಷಣ "ಅವಸರ ಆಗಿರ್ಬೇಕು" ಎಂದು ಹೇಳಬೇಕೆನ್ನಿಸಿತು ಮೋಹನ್‌ಗೆ. ಆದರೂ ಸುಮ್ಮನಿದ್ದ. ಬಸವರಾಜ್ ಸುಮ್ಮನಿರಲಿಲ್ಲ. "ಮ್ಯಾಡಂ, ನಿಮ್ಮ ತಲೆ ಅಂದ್ರೆ ತಲೆ. ನೀವು ಹೆಡ್‌ಮ್ಯಾಡಂ ಅಂದ್ರೆ ಹೆಡ್‌ಮ್ಯಾಡಮ್ಮೇ" ಎಂದ. ಶಂಕರ್" ಪರ್‌ಫೆಕ್ಟ್‌ಲಿ ಕರೆಕ್ಟ್. ಈ ತಲೆ ಆ ಹಳೇ ತಲೇರೆಲ್ಲ ಹೇಗ್ ಗೊತ್ತಾಗುತ್ತೆ. ಈ ಸಾರಿ ನಮ್ಮ ಸ್ಕೂಲ್ ಮ್ಯಾಗಜೀನ್‌ನಾಗೆ ನಿಮ್ದು. ಅವ್ಯಾಕೆ ನಮ್ಮ ಯುವರಾಜರದ್ದೂ ಫೋಟೋ ಹಾಕಿ ನಿಮ್ಮ ಬೌದ್ಧಿಕ ಚಿಂತನೆಯ ವಿವರಗಳನ್ನು ಪ್ರಕಟಿಸಿ ಬಿಡೋಣ ಮ್ಯಾಡಂ ಹೇಗಿದ್ರೂ ನಾನೇ ಎಡಿಟರ್ರು" ಎಂದಾಗ ಡ್ರಿಲ್ ಮಾಸ್ಟರ್ ಮೋಹನ್ ಹಿಂದೆ ಬೀಳಲಿಲ್ಲ. "ನಿಮ್ಮ ಶಿಸ್ತಿಗೆ ಸಂಬಂಧಿಸಿದಂತೆ ಏನಾದ್ರೂ ಹೇಳಿ ಮ್ಯಾಡಂ, ಒಂದೇ ದಿನ್ದಲ್ಲಿ ಸ್ಕೂಲಿನ ಶಿಸ್ತೇ ಬದಲಾಯಿಸ್ಬಿಟ್ಟು ಹೆಂಗ್ ತಯಾರ್ ಮಾಡ್ತೀನಿ ನೋಡ್ರಿ." ಎಂದು ಉತ್ಸಾಹದಿಂದ ಕೇಳಿಕೊಂಡ. ಚಂದಿರಾಬಾಯಿಯವರಿಗೆ ರೋಮಾಂಚನವಾಯಿತು. "ನಿಮ್ಮಷ್ಟು ಬುದ್ಧಿವಂತರು ನಮ್ಮ ಶಾಲೇಲಿ ಇರೋದು ನನ್ನ ಭಾಗ್ಯ. ನೀವು ಹೇಳಿದ ಕೆಲ್ಸ ಎಲ್ಲ ಮಾಡೋಣ. ನೋಡಿ ನಾವು ವಿದ್ಯಾರ್ಥಿಗಳಿಗೆ ಹೆಚ್ಚು ಅವಕಾಶ ಕೊಡ್ಬೇಕು. ಇಂದಿನ ಮಕ್ಕಳೇ ಮುಂದಿನ ಪ್ರಜೆಗಳು. ಅವರೇ ಮುಂದಿನ ನಾಯಕರು; ಆದ್ರಿಂದಲೇ ನಾನು ಹೇಳೋದು ನಮ್ಮ ಸುಂದರನಂಥವರು ಮುಂದೆ ಬರಬೇಕು; ನನಗೆ ಮಕ್ಕಳನ್ನು ಕಂಡ್ರೆ ಎಷ್ಟು ಆಸೆ ಅಂದ್ರೆ, ಇವನನ್ನು ಏನಾದ್ರೂ ಅಂದ್ರೆ ನನ್ನನ್ನೇ ಅಂದಂಗಾಗುತ್ತೆ. ಈಗ ನೋಡಿ ನಮ್ಮ ಸ್ಕೂಲಿನ ಸ್ವರೂಪ..."

"ನಾವಿದ್ದೀವಿ ಬಿಡಿ ಮ್ಯಾಡಂ ಬದಲಾಯಿಸ್ತೀವಿ" ಎಂದರು ಇವರು. ತನಗೆ ಇವರೆಲ್ಲ ಕೊಡೋ ಪ್ರಾಶಸ್ತ್ಯ ಕಂಡಾಗ ಮೊದಲೇ ತುಂಟನಾಗಿದ್ದ ಸುಂದರ್ ಬೆಲೂನಿನಂತೆ ಉಬ್ಬಿದ; ಕುರ್ಚಿ ಮೇಲೆ ಕೂತ; ತನ್ನ ಸ್ನೇಹಿನೊಬ್ಬನ ಹೆಸರು ಹೇಳಿ ಸ್ಕಾಲರ್‌ಷಿಪ್ ಕೊಡ್ಬೇಕಮ್ಮ ಎಂದ; ಅಮ್ಮ ಇಲ್ಲವೆನ್ನಲಿಲ್ಲ. ಈ ಮೂವರ ಕಡೆ ತಿರುಗಿ "ನೋಡಿ ನನ್ನ ಮಗ ಈಗ್ಲೇ ಲೀಡರ್‌ಷಿಪ್ ಬೆಳಸಿಕೊಳ್ತಿದ್ದಾನೆ; ಅದಕ್ಕೇ ನಾನು ಅವನು ಏನು ಕೇಳಿದ್ರೂ ಇಲ್ಲ ಅನ್ನಲ್ಲ." ಎಂದರು. ಈ ಮೂವರು ಇದೇ ಸಮಯವೆಂದು "ಹಾಗೇ ನಮಗೆ ಮೇನೇಜ್‌ಮೆಂಟಿನಿಂದ ಪರ್ಮನೆಂಟ್ ಆರ್ಡರ್ ಕೊಡ್ಸಿದ್ರೆ..." ಎಂದು ರಾಗ ಎಳೆಯುತ್ತಿರುವಾಗ ಚಂದಿರಾಬಾಯಿಯವರು 'ಹೆಡ್ ಮಿಸ್ಟ್ರೆಸ್' ಆದರೂ ಗಂಭೀರ ಮುಖದಿಂದ ಗುಮ್ಮನೆ ಕೂತರು. ಏನಾದರೂ ಬಾಯಿಂದ ಬಂದಿತೇನೋ ಎಂದು ಈ ಮೂವರು ನೋಡುತ್ತಿದ್ದಾಗ ಅವರು "ಅದೇ ಕಷ್ಟ"ಎಂದರು. ನಮ್ಮ ಮೇನೇಜ್‌ಮೆಂಟ್ ಅಧ್ಯಕ್ಷರನ್ನು ಕನ್ವಿನ್ಸ್ ಮಾಡೋದು ಕಷ್ಟ. ಏನೋ ನೀವು ಇಲ್ಲಿ ಸರಿಯಾಗಿ ಹೊಂದಿಕೊಂಡಿದ್ರೆ ಹೇಗೊ ಆಗುತ್ತೆ. ಈಗ ನೋಡಿ ಕನ್ನಡ ಪಂಡಿತರು ಶಾಮಣ್ಣೋರಿಲ್ವೆ, ನಾನ್ ಬರೋಕಿಂತ ಮುಂಚೆ ಇದ್ದೋರು. ಇನ್ನೂ ಇದಾರೆ; ಇನ್ನೊಂದೆರಡು ವರ್ಷ ಆದ್ರೆ ಸರ್ವೀಸ್ಸೇ ಮುಗ್ಯುತ್ತೆ..." ಎಂದು ಉದ್ದನೆ ಭಾಷಣ ಬಿಗಿಯಲು ಹವಣಿಸುತ್ತಿದ್ದಾಗ ಸುಂದರ್ "ಅಯ್ಯೋ ಆ ನಶ್ಯದ ಡಬ್ಬೀನ? ಅದ್ಯಾಕೈತೋಮ್ಮ ಸ್ಕೂಲ್ನಾಗೆ"ಎಂದ ಚಂದಿರಾಬಾಯಿಯವರು ಸುಮ್ಮನೆ ಮುಗುಳ್ನಕ್ಕು ಈ ಮೂವರ ಕಡೆ ತಿರುಗಿ "ನೋಡೋಣ, ನಿಮ್ಮ ಕೆಲ್ಸ ನಡತೆ ಎಲ್ಲ ನೋಡ್ಕೊಂಡು ರೆಕ್ಮಂಡ್ ಮಾಡೋಣ" ಎಂದರು. ಅಷ್ಟರಲ್ಲಿ ಸುಂದರ್ "ಬಿಡಿ ಮೇಷ್ಟ್ರೆ ಯಾಕ್ ಹೆದ್ರಿಕಂಬ್ತೀರ ಇದಕ್ಕೆಲ್ಲ" ಎಂದು ಬಿಡೋದೆ? ಮುಳುಗುತ್ತಿದ್ದವರಿಗೆ ಈಜು ಬುರುಡೆ ಸಿಕ್ಕಿದಂತಾಗಿ ಬಸವರಾಜ್ ಘೋಷಿಸಿದ. "ಏನೇ ಆಗ್ಲಿ ಈ ಸಾರಿ ವಿದ್ಯಾರ್ಥಿ ಸಂಘಕ್ಕೆ ಸುಂದರ್‌ನ ಸರ್ವಾನುಮತದಿಂದ ಅಧ್ಯಕ್ಷನನ್ನು ಮಾಡ್ಬೇಕು" ಶಂಕರ್ ಹಿಂದೆ ಬೀಳಲಾದೀತೇ "ಈ ಸಾರಿ ಮ್ಯಾಗಜೈನ್‌ನಾಗೆ ಸುಂದರ್‌ದು ದೊಡ್ಡ ಫೋಟೋ ಗ್ಯಾರಂಟಿ" ಇವರಿಬ್ಬರೂ ಹೀಗೆ ಘೋಷಿಸಿದಾಗ ಡ್ರಿಲ್ ಮಾಸ್ಟರ್ ಮೋಹನ್‌ಗೆ ಪೀಕಲಾಟ. ತಾನು ಸುಂದರ್‌ಗೆ ಚನ್ನಾಗಿ ಡ್ರಿಲ್ ಮಾಡಿಸ್ತೇನೆ ಎನ್ನಲಾದೀತೆ? ತಲೆ ಕೆರೆದುಕೊಂಡು ಕಡೆಗೆ ಬಾಯಿ ಬಿಟ್ಟ; "ಮ್ಯಾಡಂ ನಿಮ್ಮ ಹೆಸರಿನಲ್ಲೆ ಸ್ಕೂಲಿನಲ್ಲಿ ಒಂದು ಶಿಸ್ತಿನ ಸಿಪಾಯಿಗಳ ತಂಡ ಕಟ್ತೀನೆ. ಅದಕ್ಕೆ ದಂಡನಾಯಕ ಅಂದ್ರೆ ಸುಂದರ್" ಬಸವರಾಜು ದಂಡನಾಯಕ ಅನ್ನೋದಿಕ್ಕೆ ತಿದ್ದುಪಡಿ ಸೂಚಿಸಿದ. "ದಂಡಾನು ಬ್ಯಾಡ ಗಿಂಡಾನು ಬ್ಯಾಡ. ಯುವರಾಜ ಅಂದ್ರೆ ಸಾಕು."

ಸರಿ, ಚಂದಿರಾಬಾಯಿಯವರಿಗೆ ಅಮಿತಾನಂದವಾದರೂ ತೋರಿಸಿಕೊಳ್ಳಲಿಲ್ಲ, ಸುಂದರ್‌ಗೆ ತೋರಿಸಿಕೊಳ್ಳದೆ ಇರಲಾಗಲಿಲ್ಲ. "ಅದೇನ್ ಮಾಡ್ತಿರೋ ಮಾಡ್ರಿ, ಮೇಷ್ಟ್ರೆ ನಮ್ಮಮ್ಮನ ಕೈಕೆಳಗೆ ಕೆಲ್ಸಮಾಡೋದಕ್ಕೆ ಅಷ್ಟಾದ್ರೂ ಮಾಡ್ದಿದ್ರಾಗ್ತೈತಾ?" ಎಂದ. ಈ ಮೂವರಿಗೆ ಎಲಾ ಇವ್ನ ಎನ್ನಿಸಿತು. ಆದರೆ ಅವನ ಆಶ್ರಯ ಅಗತ್ಯ ಅನ್ನಿಸಿತ್ತು. "ನೀವಿರುವಾಗ ನಮಗೇನು ಭಯ"ಎಂದರು. "ಅದು ಸರಿ" ಎಂದ ಒಂಥರಾ ಠೀವಿಯಿಂದ. ಚಂದಿರಾಬಾಯಿ ಏನೂ ಆಗಿಲ್ಲವೆಂಬಂತೆ ಹೇಳಿದರು: "ಒಟ್ಟನಲ್ಲಿ ನನಗೆ ಈ ಶಾಲೆ ಮುಂದುವರೀಬೇಕು, ಇದ್ರಿಂದ ದೇಶಕ್ಕೆ ಒಳ್ಳೇದಾಗ್ಬೇಕು. ನಮ್ಮ ಶಾಲೆ ಅಂದ್ರೆ ಆದರ್ಶದ ಶಾಲೆ ಅಂತ ಊರಿಗೆ ಊರೇ ಹೊಗಳ್ಬೇಕು. ನಾನು ಮಾಡ್ತಾ ಇರೊ ಕಿಂಚಿತ್ ಸೇವೆಗೆ ನಿಮ್ಮದೂ ಸಹಕಾರ ಇದೆ ಅನ್ನೋದಾದ್ರೆ ತುಂಬಾ ಸಂತೋಷ. ನಾನು ಯಾವಾಗ್ಲೂ ಡೆಮಾಕ್ರಾಟಿಕ್ಕಾಗಿರ್ಬೇಕೂಂತ ಆಸೆ, ಆದ್ರಿಂದ್ಲೇ ನಿಮ್ಮಂಥ ಕಿರಿಯರ ಸಲಹೇನ ನಾನು ತಿರಸ್ಕರಿಸೋಲ್ಲ, ತುಂಬಾ ಸಂತೋಷ, ಬನ್ನಿ"

ಮೂವರೂ ಎದ್ದು ಸುಂದರ್‌ನನ್ನು "ಬನ್ನಿ" ಎಂದರು. ಕೈ ಹಿಡಿದುಕೊಳ್ಳಲು ಧಾವಂತ ಪಟ್ಟರು. ಎರಡೇ ಕೈ ಇದ್ದುದರಿಂದ ಇಬ್ಬರಿಗೆ ಸಿಕ್ಕ ಮೂರನೇ ಮೋಹನ್‌ಗೆ ನಿರಾಸೆಯಾದರೂ ತಕ್ಷಣ ತಮ್ಮ ಡ್ರಿಲ್ಲಿನ ಉಪಯೋಗ ಪಡೆದರು. ಇವರಿಬ್ಬರೂ ಕೈ ಹಿಡಿದುಕೊಂಡು ಕರೆತರುತ್ತಿರುವಾಗ ಮೋಹನ್ ಮುಂದುಗಡೆ ಶಿಸ್ತಿನಿಂದ ಕರೆದೊಯ್ದರು.

ಸವಾರಿ ಸ್ಟಾಫ್‌ರೂಮಿಗೆ ಚಿತ್ತೈಸಿತು. ಆಗಲೇ ಶಾಲೆ ಮುಗಿದಿದ್ದರಿಂದ ಸ್ಟಾಫ್ ರೂಮು ಖಾಲಿಯಾಗಿತ್ತು. ಒಂದು ಒಳ್ಳೇ ಕುರ್ಚಿಯಲ್ಲಿ ಸುಂದರನನ್ನು ಕೂಡಿಸಲಾಯಿತು. ಮೂವರೂ ವಿನೀತರಾಗಿ ನಿಂತದ್ದಾಯಿತು. ಕಡೆಗೆ ಅಹವಾಲ ಸಲ್ಲಿಸಿದ್ದೂ ಆಯಿತು. "ದಯವಿಟ್ಟು ನಮ್ಮ ಕೆಲಸ ಪರ್ಮನೆಂಟ್ ಮಾಡಿಸಿ ಸ್ಪೋರ್ಟ್ಸ್ ಲೆಕ್ಕದಲ್ಲಿ ಆಗಿರೋ ಹೆಚ್ಚು ಕಮ್ಮಿ ಮುಚ್ಚಿ ಹಾಕಿಸಿ; ಮ್ಯಾಗಜೈನ್ ದುಡ್ಡು ಜಾಸ್ತಿ ಲೆಕ್ಕ ಕೊಟ್ಟಿರೋದನ್ನು ಮೇಲೆ ಬರದ ಹಾಗೆ ಮಾಡಿ..." ಇತ್ಯಾದಿ ಇತ್ಯಾದಿ. ಎಂಟು ವರ್ಷಕ್ಕೆ ನನ್ಮಗ ಮೂರು ದಂಟು ಎಂಬಂತೆ ಬೆಳೆದಿದ್ದ ದಾಂಡಿಗ ಸುಂದರ್‌ಗೆ ಇದಕ್ಕಿಂತ ಏನು ಬೇಕು? "ನೋಡೋಣ ಮೇಷ್ಟ್ರೆ" ಎಂದ. "ಹಂಗಂದ್ರೆ ಹೆಂಗೆ? ನೋಡೇಬಿಡ್ಬೇಕು." ಎಂದರು ಇವರು. ಅವನು ಅಷ್ಟಕ್ಕೇ ಸುಮ್ಮನಾದಾನ? "ಹಂಗಂದ್ರೆ, ಹೆಂಗೆ? ನೀವು ನನ್ನ ಹೆಂಗ್ ನೋಡ್ತಿರೋ ನಾನೂ ಹಂಗ್ ನೋಡ್ತೀನಿ" ಎಂದ.

ಮೂವರೂ ಸುತ್ತ ಮುತ್ತ ನೋಡಿ ನೆಲದ ಮೇಲೆ ಕೂತುಬಿಟ್ಟರು. ಸುಂದರ್ ಹಸನ್ಮುಖಿಯಾಗಿ ಕುರ್ಚಿಯಲ್ಲಿ ಅರ್ಥಾತ್ ಮರಿಸಿಂಹಾಸನದಲ್ಲಿ ರಾರಾಜಿಸುತ್ತಿದ್ದ.

* * *

ಮಾರನೇ ದಿನ ಸಾಯಂಕಾಲ ರಾಮಪ್ಪ ಮಾಸ್ತರು ಚಿನ್ನಪ್ಪ ಮಾಸ್ತರ ಜತೆಯಲ್ಲಿ ಹೆಡ್‌ಮಿಸ್ಟ್ರೆಸ್ ಚೇಂಬರಿಗೆ ಬಂದರು; ನಿಂತರು. ಚಂದಿರಾಬಾಯಿ

ಯವರು ಏನು ಎಂಬಂತೆ ನೋಡಿದರು. ಕುಬ್ಜ ಶರೀರದ ರಾಮಪ್ಪ ಮಾಸ್ತರು ತಮ್ಮ ಕೋಟೊಳಗೆ ಎದ್ದು ಕಾಣುತ್ತಿದ್ದ ಹೊಟ್ಟೆಯ ಮೇಲೆ ಕೈಯಾಡಿಸುತ್ತ "ಅದೇ ನಿಮ್ಮ ಹುಡುಗ ಇದಾನಲ್ಲ..." ಎಂದು ಶುರುಮಾಡುತ್ತಿರುವಾಗಲೇ ಹೆಡ್‌ಮಿಸ್ಟ್ರೆಸ ಬಾಯಿಹಾಕಿದರು. "ನೀವೂ ಒಂದು ಕಂಪ್ಲೆಂಟ್ ತಂದಿದ್ದೀರೊ? ದಿನವೂ ಇದೇ ಆಯ್ತು. ಅವ್ನೇನು ಆಡೋ ಹುಡುಗ್ನೇನು? ಅವ್ನಿಗೂ ವಯಸ್ಸಾಗಿದೆ; ಜವಾಬ್ದಾರಿ ಇದೆ. ಏನೋ ಅಷ್ಟಿ ತಪ್ಪಿ ಎಸ್ಸೆಲ್ಸಿನಾಗೆ ಇದಾನೆ. ನೆನ್ನೆ ಅವರು ಕಂಪ್ಲೆಂಟು ಹೇಳಿದ್ದಾಯ್ತು. ಇವತ್ತು ನೀವು." ಎಂದು ಅಸಹನೆಯಿಂದ ಮಾತಾಡಿದಾಗ ರಾಮಪ್ಪ ಮಾಸ್ತರಿಗೆ ಏನು ಹೇಳಬೇಕೋ ಗೊತ್ತಾಗದೆ ಚಿನ್ನಪ್ಪ ಮಾಸ್ತರರ ಮುಖ ನೋಡಿದರು. ಚಿನ್ನಪ್ಪ ಮಾಸ್ತರು ತಕ್ಷಣ ಸಹಾಯಕೆ ಬಂದರು: "ನೋಡಿ ಮ್ಯಾಡಂ, ನಾವು ಬಂದದ್ದು ಕಂಪ್ಲೆಂಟು ಮಾಡೋದಕ್ಕಲ್ಲ; ಇವತ್ತು ನಿಮ್ಮ ಮಗ ನಮ್ಮ ರಾಮಪ್ಪನೋರು ತರಗತೀಗೆ ಹೋದಾಗ ಇವರ ಕುರ್ಚಿ ಮ್ಯಾಲೆ ಕೂತಿದ್ದನಂತೆ; ಇವರು ಕೇಳ್ಕೊಂಡರೂ ಇಳೀಲಿಲ್ಲ. ಹುಡುಗರು ಬ್ಯಾರೆ ನಿಮ್ಮ ಮಗ ಹೇಳಿದ್ದಕ್ಕೆ ಚಪ್ಪಾಳೆ ತಟ್ಟಿದರಂತೆ. ಇದು ನಮ್ಮ ಶಾಲೆಯ ನಿಯಮಾವಳಿಗೆ ಹೊಂದಿಕೊಳ್ಳುತ್ತೊ ಹೇಗೇಂತ ಕ್ಲಾರಿಫೈ ಮಾಡಿಕೊಳ್ಳೇಕೆ ಬಂದಿದ್ದೇವೆ" ಚಿನ್ನಪ್ಪ ಮಾಸ್ತರ ಮಾತಿಗೆ ರಾಮಪ್ಪ ಮಾಸ್ತರು ತಲೆದೂಗಿದರು. "ಅಷ್ಟೇ ನೋಡಿ ನಮ್ಮ ಪಾಯಿಂಟು. ನಮಗೂ ಗೊತ್ತಿಲ್ದಂಗೆ ಯಾವ್ದಾರ ನಿಯಮ ಐತೇನೋ ಅಂತ ಬಂದಿದ್ದೀವಿ. ಅಷ್ಟೆ ನೋಡ್ರಿ." ಎಂದು ಯಾವತ್ತಿನ ತಮ್ಮ ಧಾಟಿಯಲ್ಲಿ ಅಂದಾಗ ಚಂದಿರಾಬಾಯಿಯವರು ಏನೊ ಆಗಿಲ್ಲವೆಂಬಂತೆ "ನಿಯಮ ಇಲ್ದಿದ್ರೆ ಸೇರ್ಸಿದ್ರಾಯ್ತು" ಎಂದರು. ಕೋಡುಗಲ್ಲಿಗೆ ತಲೆ ಹೊಡೆದಂತಾಯ್ತು ಇವರಿಬ್ಬರಿಗೆ; ಸಿಟ್ಟೂ ಬಂತು. ಆಕೆ ಹತ್ತಿರ ಏನು ಮಾತೂಂತ ಹೊರಟರು. ತಕ್ಷಣ ಇಂದಿರಾಬಾಯಿಯವರಿಗೆ ಅದೇನನ್ನಿಸಿತೊ ವಾಪಸ್ಸು ಕರೆದರು; ಕುರ್ಚಿ ಮೇಲೆ ಕೂತುಕೊಳ್ಳಿ ಎಂದರು. ಕೂತ ಮೇಲೆ ಹೇಳಿದರು; "ನೋಡಿ ನಮ್ಮ ಶಾಲೆಯ ಸ್ವರೂಪಾನೇ ಬದಲಾಯಿಸ್ಬೇಕೊಂತ ನನ್ನಿಚ್ಛೆ. ಇದಕ್ಕೆ ನಿಮ್ಮಂಥೋರ ಸಹಕಾರ ಬೇಕು." ಇವರಿಬ್ಬರೂ "ಒಳ್ಳೇದಕ್ಕಾದರೆ ಬದಲಾವಣೆ ಆಗಲಿ. ಅದಕ್ಕೇನಂತೆ?" ಎಂದರು. "ನಾನು ಏನು ಮಾಡಿದರೂ ನಮ್ಮ ಶಾಲೆಯ ಹಿತ ದೃಷ್ಟಿಯಿಂದಲೇ ಮಾಡ್ತೀನಿ ತಾನೆ? ಇದರ ಬಗೆ ನಿಮಗೂ ಅನುಮಾನವೆ?" ಎಂದು ಬಾಯಿಯವರು ಕೇಳಿದಾಗ "ಛೆ! ಛೆ! ಹಾಗೆಲ್ಲಾದ್ರೂ ಉಂಟಾ?" ಎಂದರು. "ಸರಿ, ಒಟ್ಟಿನಲ್ಲಿ ಇನ್ಮೇಲೆ ನಡು ನಡುವೆ ಬಾಯಿ ಹಾಕಿ ಸುಮ್ನೆ ತರ್ಲೆ ತಾಪತ್ರಯ ಮಾಡ್ದೆ ನಮ್ಮ ಜೊತೆ ಸಹಕರಿಸಿ. ಯಾಕೇಂದ್ರೆ ನಾನು ಡೆಮೊಕ್ರಾಟಿಕ್ಕು. ನಿಮಗೆಲ್ಲ ಹೇಳದೆ ಮಾಡೋಕೆ ಇಷ್ಟವಿಲ್ಲ." ಎಂದು ಹೇಳಿದ ಇಂದಿರಾಬಾಯಿ ಮಗನ ವಿಷಯವನ್ನೇ ಎತ್ತದೆ "ನೀವಿನ್ನು ಹೋಗಬಹುದು" ಎಂದಾಗ ಇವರಿಬ್ಬರಿಗೆ ಪೆಚ್ಚಾಯಿತು. ಸರಿ. ಆಕೆ ಇಷ್ಟು ಮಾತಾಡಿದ್ದೇ ಹೆಚ್ಚಾಯಿತು ಎಂದುಕೊಂಡು ಹೊರ ಬಂದರು.

ಸ್ವಲ್ಪ ದಿನಗಳಲ್ಲೆ ಶಾಲೆಯಲ್ಲಿ ಏನೇನೋ ವ್ಯತ್ಯಾಸ ಕಾಣಿಸಿಕೊಂಡಿತು; ಈ ವ್ಯತ್ಯಾಸವನ್ನು ಚಂದಿರಾಬಾಯಿ ಅಂಡ್ ಕಂಪನಿಯವರು 'ಪ್ರಗತಿ' ಎಂದು ಕರೆದರು. ಬರಬರುತ್ತ 'ಕ್ರಾಂತಿ'. ಎನ್ನಲೂ ಹಿಂಜರಿಯಲಿಲ್ಲ; ಶಬ್ದವನ್ನೇನೂ ಹೊಸದಾಗಿ ಕಂಡು ಹಿಡಿಯುವ ಕಷ್ಟವಿರಲಿಲ್ಲವಲ್ಲ? ಒಟ್ಟಿನಲ್ಲಿ ಹೇಳೋದಾದರೆ ಊರಲ್ಲೆಲ್ಲ ಇದೇ ಸುದ್ದಿಯಾಯಿತು.

ಈ ವೇಳೆಗಾಗಲೇ ಸುಂದರ್ ವಿದ್ಯಾರ್ಥಿ ಸಂಘದ ಅಧ್ಯಕ್ಷನಾಗಿಬಿಟ್ಟಿದ್ದ. ಅವನಿಗಿನ್ನೇನು ಕೊರತೆ? ಇಡೀ ಶಾಲೆಯಲ್ಲಿ ಅವನ ಪ್ರಭಾವ ಹೆಚ್ಚಾಗಿತ್ತು. ಆತ ಹೇಳಿದ್ದಕ್ಕೆ ಎರಡಿಲ್ಲ ಎಂಬಂತಾಗಿತ್ತು. ತಮ್ಮ ಶಿಷ್ಯ ಅನ್ನೋದನ್ನ ಮರೆತುಬಿಟ್ಟೇ ಅವನೊಂದಿಗೆ ವ್ಯವಹರಿಸಬೇಕಾಗಿತ್ತು. ಆತ ತನ್ನ ಮೊದಲ ಕಾರ್ಯಕ್ರಮವಾಗಿ ಸ್ಕೂಲಿನ ಸುತ್ತಮುತ್ತ ಸಸಿ ನೆಡಬೇಕು ಎಂದ. ಡ್ರಿಲ್ ಮಾಸ್ಟರು "ಅದಕ್ಕೇನಂತೆ ನಾನು ಹುಡುಗರನ್ನೆಲ್ಲ ಕರೆ ತರ್ತೇನೆ" ಎಂದರು. "ನೀವ್ಯಾಕೆ ನಾನಿಲ್ಲವೆ?" ಎಂದ ಸುಂದರ. ಸರಿ, ಅವರು "ನೀವಿದ್ದೀರಿ" ಎಂದವರೆ ಕೈಕಟ್ಟಿ ನಿಂತರು; ಸುಂದರ್ ಒಂದೊಂದು ಕ್ಲಾಸಿಗೂ ನುಗ್ಗಿದ; ತನ್ನ ಜೊತೆ ತಿರುಗ್ತಾ ಇದ್ದ ತನ್ನಂಥ ಉಂಡಾಡಿಗುಂಡರನ್ನು ನುಗ್ಗಿಸಿದ; ಬೇರೆ ಮೇಷ್ಟ್ರು ಪಾಠ ಮಾಡ್ತಾ ಇದ್ದರೂ ಬಿಡದೆ "ಬರ್‍ರೊ ಸಸಿ ನೆಡ್ರಿ"ಎಂದ. ರಾಮಪ್ಪ ಮಾಸ್ತರಿಗೆ ಒಂದು ಸಾರಿ ಸಿಟ್ಟು ನೆತ್ತಿಗೇರಿ ಸಿಡಿಮಿಡಿ ಎಂದರು. ತಕ್ಷಣ ಚಂದಿರಾಬಾಯಿಯವರಿಂದ ಬುಲಾವ್ ಬಂತು. "ಸಹಕಾರ ಕೊಡ್ತಿರೊ ಇಲ್ವೊ ಅಷ್ಟು ಹೇಳಿ" ಅಂತ ಜಬರ್ದಸ್ತ ಪ್ರಶ್ನೆ ಬಂತು. ಇಲ್ಲ ಅನ್ನೋದು ಹೇಗೆ? ಹಾಳಾಗಿ ಹೋಗ್ಲಿ ಎಂದು ಸುಮ್ಮನಾದಾಗೆ ಚಿನ್ನಪ್ಪ ಮಾಸ್ತರು ಬಂದರು; ಅವರದೂ ಅದೇ ಕಂಪ್ಲೆಂಟು. ಅವರಿಗೂ ಅದೇ ಪ್ರಶ್ನೆ. ಉತ್ತರ ಮಾತ್ರ ಮೌನ. ಈ ಸುದ್ದಿ ಹೇಗೊ ಶಾಲಾ ಮಂಡಲಿ ಅಧ್ಯಕ್ಷರಿಗೂ ತಲುಪಿತು. ಅವರು ಹೆಡ್‌ಮಿಸ್ಟ್ರೆಸ್ ಅವರನ್ನು ಕಂಡು "ಇದೆಲ್ಲ ಅಷ್ಟೇನು ಸರಿಯಲ್ಲ ಮ್ಯಾಡಂ" ಎಂದೂ ಹೇಳಿದರು. ಜೊತೆಗೆ "ನನ್ನ ಟರ್ಮ್ ಮುಗೀತ ಬಂತು. ನಮಗೂ ನಿಮಗೂ ಯಾಕಮ್ಮಾ ಜಗಳ. ಅಂತೂ ಇದೆಲ್ಲ ಒಳ್ಳೆದಕ್ಕಲ್ಲ ಬಿಡಿ" ಎಂದೂ ಮಾತು ಸೇರಿಸಿ ಹೋದರು. ತಕ್ಷಣ ಶುರುವಾಯಿತು ಮಂತ್ರಾಲೋಚನೆ. ಇದಕ್ಕೆಲ್ಲ ಏನು ಮಾಡಬೇಕು? ಮೋಹನ್, ಶಂಕರ್, ಬಸವರಾಜ್, ಸುಂದರ್ ಮತ್ತು ಹೆಡ್‌ಮಿಸ್ಟ್ರೆಸ್ ಸೇರಿಕೊಂಡು ಆಳವಾಗಿ ಆಲೋಚಿಸಿದರು. ಹೀಗೇ ಬಿಟ್ಟರೆ ಸರಿಯಲ್ಲ ಅನ್ನಿಸಿ ಕಡೆಗೆ ತೀರ್ಮಾನಕ್ಕೆ ಬಂದರು. ಇನ್ನು ಮೇಲೆ ಯಾರಾದ್ರೂ ಸೀನಿಯರ್ ಅಧ್ಯಾಪಕರೇ ಅಧ್ಯಕ್ಷರೂ ಆಗಿರ್ಬೇಕು ಅಂತ ಒತ್ತಾಯ ತರೋದು ಆ ಪದವೀಲಿ ಕೂಡ್ಸೋದು. ಈ ಸಾರೆ ಒಪ್ಪಿಸಿ ಶಾಮಣ್ಣೋರ್ನ ಅವ್ರೇನು ಹೇಳಿದಕ್ಕೆಲ್ಲ 'ಹೂಂ' ಅಂತಾರೆ.........

* * *

ಒಂದು ದಿನ ಸುಂದರ್ ನಾಯಕತ್ವದಲ್ಲಿ ವಿದ್ಯಾರ್ಥಿ ಮುಷ್ಕರ ಪ್ರಾರಂಭವಾಯಿತು; ಬೀದಿ ಬೀದೀಲಿ ಮೆರವಣಿಗೆ ಸಾಗಿತು. 'ಮೇನೇಜ್‌ಮೆಂಟ್ ಅಧ್ಯಕ್ಷರು ಶಾಲೆಯ ಪ್ರಗತಿಗೆ ಅಡ್ಡಿ ಬರ್‍ತಿದಾರೆ; ಇನ್ನು ಮೇಲೆ ಸರದಿ ಮೇಲೆ ಸೀನಿಯರ್ ಸ್ಟಾಫ್ ಮೆಂಬರ್‌ಗಳೇ ಅಧ್ಯಕ್ಷರಾಗೊ ಹಾಗೆ ನಿಯಮಾವಳಿ ತಿದ್ದುಪಡಿ ಮಾಡ್ಬೇಕು. ಆಗ ಶಿಕ್ಷಣಕ್ಕೆ ನಿಜವಾದ ಅರ್ಥ ಬರುತ್ತೆ. ಇದೊಂದು ದೇಶದ ಇತಿಹಾಸದಲ್ಲೇ ಹೊಸ ಮಾರ್ಗವಾಗುತ್ತೆ'–ಇತ್ಯಾದಿ ಭಾಷಣ ಬಿಗಿದ ಸುಂದರ್. ಅವನು ಹೇಳಿದಂತೆ ಕೇಳಲೇಬೇಕಾಗಿ ಬಂದು ಘೋಷಣೆ ಕೂಗುತ್ತಿದ್ದ ವಿದ್ಯಾರ್ಥಿಗಳು ಶಾಲೆಯ ಮುಂದೆ ಧರಣಿ ಕೂತರು. ನಮ್ಮ ಬೇಡಿಕೆ ಈಡೇರಿಸೋಕೆ ಹೆಡ್‌ಮಿಸ್ಟ್ರೆಸ್ ಪ್ರಯತ್ನಿಸಬೇಕು ಎಂದರು; ಹೆಡ್‌ಮಿಸ್ಟ್ರೆಸ್ ತರಾತುರಿಯಿಂದ ಓಡಾಡಿದರು. ಮಂಡಲಿ ಸದಸ್ಯರನ್ನು ಭೇಟಿ ಮಾಡಿದರು; ಕೈ ಕುಲುಕಿದರು. ಅದೇನು ಮೋಡಿ ಹಾಕಿದರೊ ತಿದ್ದುಪಡಿಗೆ ಒಪ್ಪಿಸಿಯೇ ಬಿಟ್ಟರು: ಊರೆಲ್ಲ ಭಲೇ ಹೆಂಗಸೇ ಎಂದು ಮೂಗಿನ ಮೇಲೆ ಬೆರಳಿಟ್ಟುಕೊಂಡಿತು. ಶಿಕ್ಷಣ ಪದ್ಧತಿಯಲ್ಲೇ ಹೊಸ ಪ್ರಯೋಗ ಎಂದಿತು. ಕೆಲ ಯುವಕರಂತೂ "ಹಿಂಗೇ ಆಗ್ಲಿ, ಈ ಮೇನೇಜ್‌ಮೆಂಟಿನೋರು ತಿನ್ನೋದಾದ್ರೂ ನಿಲ್ಲುತ್ತೆ"ಎಂದು ಖುಷಿಪಟ್ಟರು.

ಈಗ ಶಾಲೆಯಿಂದ ಒಬ್ಬ ಅಧ್ಯಾಪಕನನ್ನು ಆಯ್ಕೆಮಾಡಿ ಅಧ್ಯಕ್ಷ ಪದವಿಗೆ ಸೂಚಿಸಬೇಕಿತ್ತು. ಯಾರನ್ನು ಕಳಿಸಬೇಕೆಂಬ ನಿರ್ಧಾರ ಆಗಿತ್ತಾದರೂ ಪ್ರಜಾಸತ್ತಾತ್ಮಕ ವಿಧಾನವನ್ನು ಬಿಡಲಾದೀತೆ? ಸ್ಟಾಫ್ ಮೀಟಿಂಗಿಗೆ ಮೆಮೊ ಹೋಯಿತು; ಎಲ್ಲಾ ಮೇಷ್ಟರೂ ಕಲೆತಿದ್ದಾರೆ. ಇನ್ನೂ ಒಂದು ಕುರ್ಚಿ ಖಾಲಿಯಾಗಿದೆ. ಯಾರಿಗೆಂದು ಅರ್ಥವಾಗದೆ ಚಿನ್ನಪ್ಪ ಮಾಸ್ತರು ಅತ್ತಲೇ ನೋಡುತ್ತಿರುವಾಗ ಸುಂದರ್ ರಾಜ ಠೀವಿಯಿಂದ ಬಂದು ಅದರ ಮೇಲೆ ಕೂತುಕೊಂಡ. ಮಾಸ್ತರ ಹೊಟ್ಟೆಗೆ ಬೆಂಕಿ ಹಾಕಿದಂತಾಯಿತು. ರಾಮಪ್ಪನೋರಿಗೂ ಅಷ್ಟೆ. ಕಡೆಗೆ ಚಿನ್ನಪ್ಪ ಮಾಸ್ತರು ಕೇಳಿಯೇ ಬಿಟ್ಟರು: "ಇದೇನು ಮ್ಯಾಡಮ್ನೋರೆ?"

"ಏನು?"

"ಇದು?"–ಕುರ್ಚಿಯ ಕಡೆ ತೋರಿಸಿದರು.

"ಇದು ಅಲ್ಲಾರಿ, ಇವರು ಅನ್ನಿ ನಾನೇನು ನಪುಂಸಕ ಲಿಂಗ ಅಲ್ಲ"–ಎಂದೇ ಬಿಟ್ಟ ಆ ಸುಂದರಾಂಗ. ತಕ್ಷಣ ಕನ್ನಡ ಪಂಡಿತ ಶಾಮಣ್ಣೋರು "ಛೆ! ಛೆ! ಎಲ್ಲಾದ್ರೂ ಉಂಟಾ? ಸುಂದರ ಅನ್ನೋದು ನಪುಂಸಕ ಆಗೋಕೆ ಸಾಧ್ಯವೇ ಇಲ್ಲ. ಕೇಶೀರಾಜನಿಂದ ಹಿಡಿದು ಗೈಡ್ ಬರ್ಯೋ ಭೂಪರವರೆಗೆ, ಅಷ್ಟೇಕೆ ಈ ಶಾಮಣ್ಣನವರೆಗೆ ಹಾಗೆ ಯಾರೂ ಹೇಳಿಲ್ಲ,



ಇವುಗಳನ್ನೆಲ್ಲಾ ಅಂಗಡಿಗೆ ಹಾಕ್ತೀನಿ ಅಂತ ತಿಳಿಯಬೇಡ. ದೀಪಾವಳಿ ಸಂಚಿಕೆಗೆ ಒಂದು ಕಥೆ ಬರೆಯಬೇಕಾಗಿತ್ತು. ಅದಕ್ಕೆ ನೋಡ್ತಾ ಇದ್ದೀನಿ...



ತಪ್ಪು ತಪ್ಪು" ಎನ್ನುತ್ತ ನಶ್ಯ ಏರಿಸಿದರು. ಚನ್ನಪ್ಪ ಮತ್ತು ರಾಮಪ್ಪನೋರಿಗೆ ರೇಗಿತು. ರಾಮಪ್ಪನೋರಿಗೆ ಸಿಟ್ಟು ಜಾಸ್ತಿ. ಆದ್ರೂ ಒಳಗೇ ಅದುಮಿಟ್ಟುಕೊಂಡು ಯಾವತ್ತೂ ಒಂದ್ಸಾರಿ ಸಿಡಿಸೋ ಸ್ವಭಾವ. ಚನ್ನಪ್ಪ ಮಾಸ್ತರರು ಹಾಗಲ್ಲ; ಮೆಲ್ಲಗೆ ಬಾಯಿ ಬಿಡುತ್ತಾರೆ. ಈಗಲೂ ಹಾಗೇ ಮಾಡಿದರು.

"ಸ್ಟಾಫ್ ಮೀಟಿಂಗಿಗೆ ಸುಂದರ ಬರೋದು ಸರಿಯಲ್ಲ."

"ಅದ್ಯಾಕ್ ಸರಿಯಲ್ಲ? ಆತ ವಿದ್ಯಾರ್ಥಿ ಸಂಘದ ಅಧ್ಯಕ್ಷ"- ಬಸವರಾಜ್ ತಕ್ಷಣ ಉತ್ತರಿಸಿದ.

"ಅದ್ಕೂ ಇದ್ಕೂ ಏನ್ರೀ ಸಂಬಂಧ?"—ಚನ್ನಪ್ಪ ಮಾಸ್ತರು ಬಿಡಲಿಲ್ಲ

"ಇದ್ಯಾಕೋ ಅತಿಯಾಯ್ತು"- ರಾಮಪ್ಪ ಮಾಸ್ತರೂ ದನಿಗೂಡಿಸಿದರು.

ಇಂದಿರಾಬಾಯಿಯವರಿಗೆ ಸಿಟ್ಟು ನೆತ್ತಿಗೇರಿದರೂ ಸಂಯಮ ತಂದುಕೊಂಡರು. ಉಗುರಿನಲ್ಲಿ ಹೋಗೋದಕ್ಕೆ ಕೊಡಲಿ ತಗೊಳ್ಳೋದು ಯಾಕೇಂತ ಯೋಚಿಸಿ "ಸುಂದರಾ ಹೋಗಪ್ಪ, ನೀನು ಆಮೇಲೆ ಬಾ" ಎಂದರು. ಶಾಮಣ್ಣನವರಂತೂ "ಆಹಾ! ಎಂಥಾ ಧಾರಾಳ! ಎಂಥಾ ವಿಶಾಲ ಮನಸ್ಸು, ಏನು ಬುದ್ಧಿ ಏನು ಕತೆ!" ಎಂದೆಲ್ಲ ಕೊಂಡಾಡುತ್ತಿರುವಾಗ ಬಸವರಾಜು ಠರಾವು ಮಂಡಿಸಿದ "ಶಾಮಣ್ಣನವರನ್ನು ಅಧ್ಯಕ್ಷ ಪದವಿಗೆ ಸೂಚಿಸಬೇಕು" ಶಂಕರ್ ಅನುಮೋದಿಸಿದ; ಯಾರೂ ವಿರೋಧಿಸಲಿಲ್ಲ. ಮೀಟಿಂಗ್ ಮುಗಿಯಿತು.

ಮುಗಿದ ತಕ್ಷಣವೇ ಶಾಮಣ್ಣನವರು ಇಂದಿರಾಬಾಯಿಯವರ ಹಿಂದೆ ಆಫೀಸ್ ರೂಮಿಗೆ ಬಂದರು. 'ಮಂಡ್ಣಾ ತಾಯಿ ಇಂಗಾಲ್ದಲ್ಲಿ ಎಂಥ ಜವಾಬ್ದಾರಿ ಹೊರಿಸಿಬಿಟ್ರಿ ತಾಯಿ, ನೀನು ಹೇಳ ಹೇಳ್ತಿಯೊ ನಾನು ಹಾಗೇ ತಾಯಿ. ಯೋಚನೇನೇ ಬ್ಯಾಡ" ಎಂದು ಒಂದೇ ಸಮ ಕೀರ್ತಿಸುತ್ತ ಕೃತಜ್ಞತೆಯ ಮಳೆಗರೆಯುತ್ತ ಇರುವಾಗ ಇಂದಿರಾಬಾಯಿ ಕುರ್ಚಿ ಮೇಲೆ ಕೂತು. ಎದುರು ನಿಂತಿದ್ದ ನಿಯೋಜಿತ ಅಧ್ಯಕ್ಷ ಶಾಮಣ್ಣನವರಿಗೆ ಅಪ್ಪಣೆ ಕೊಡಿಸಿದರು "ಇನ್ನೂ ಫಾರ್ಮಲ್ಲಾಗಿ ಎಲ್ಲಾ ಆಗ್ಬೇಕು ಶಾಮಣ್ಣೋರೆ; ಇವತ್ತು ತೋರಿಸ್ತಿರೋ ಕೃತಜ್ಞತೆ ಆಮೇಲೂ ಇರ್ಬೇಕು. ನಾನು ಈ ಶಾಲೇಲಿ ಶಿಸ್ತು ಮೂಡಿಸ್ಬೇಕಾಗಿದೆ, ಆ್ಯಂಟಿ ಸ್ಕೂಲ್ ಆಕ್ಟಿವಿಟೀಸ್'ಗಳನ್ನು ತಡೀಬೇಕಾಗಿದೆ. ಆದ್ದರಿಂದ ನಿಮ್ಮ ಸಹಕಾರ ಅಗತ್ಯವಾಗಿ ಬೇಕಾಗಿದೆ..." ಎಂದನ್ನು ಹೇಳುತ್ತಿರುವಾಗ ಶಾಮಣ್ಣನವರು 'ಮಾತು ಯಾಕೆ ಮಹಾತಾಯಿ. ನೀವು ಮುಂದಿಡಿ ಎಲ್ಲಾ. ಶಾಮಣ್ಣ ಅಂತ ಸೈನ್ ಹೊಡುದ್ರಾಯ್ತು ತಾನೆ? ಅಂದ ಹಾಗೆ ಅಧ್ಯಕ್ಷನಾದ್ರೆ ನಂಗೂ ಆದಾಯ ಉಂಟು ತಾನೆ?" ಎಂದು ಕೈ ಹೊಸೆಯುತ್ತ ಸಂಕೋಚ ಪ್ರಕಟಿಸುತ್ತಿರುವಾಗಲೇ ಬಂದ ಸುಂದರ್ "ನಶ್ಯದ ಡಬ್ಬಿ ಗ್ಯಾರಂಟಿ" ಎಂದ.

• • •

ಶಾಮಣ್ಣನವರು ಅಧ್ಯಕ್ಷರಾದ ಒಂದು ವಾರದಲ್ಲೇ ಇಂದಿರಾಬಾಯಿಯವರಿಂದ ಮೇಷ್ಟ್ರುಗಳಿಗೆಲ್ಲ ಕರೆ ಬಂತು. ಎಲ್ಲರೂ ಬಂದಾಗ ಇಂದಿರಾ ಅವರು ಅಧ್ಯಕ್ಷರು ಕಳಿಸಿದ ಸುತ್ತೋಲೆ ಓದಿದರು, ಅದರ ಪ್ರಕಾರ ಇಲ್ಲಿಯವರೆಗೆ ಹಂಗಾಮಿಯಾಗಿ ಕೆಲಸಮಾಡುತ್ತಿದ್ದವರನ್ನು ಖಾಯಂ ಉದ್ಯೋಗಿಗಳೆಂದು ಪರಿಗಣಿಸಲಾಗಿತ್ತು. ಜೊತೆಗೆ ಎಲ್ಲ ಅಧ್ಯಾಪಕರೂ ಶಾಲೆಯಲ್ಲಿ ಶಿಸ್ತು ಕಾಪಾಡುವ ಸಲುವಾಗಿ ತಂತಮ್ಮ ರಾಜೀನಾಮೆ ಪತ್ರಗಳನ್ನು ಹೆಡ್ ಮಿಸ್ಟ್ರೆಸ್‌ಗೆ ಕೊಡಬೇಕೆಂದು ಆಜ್ಞಾಪಿಸಲಾಗಿತ್ತು. ಸುತ್ತೋಲೆ ಓದಿದ ಕೂಡಲೇ ಟೈಪು ಮಾಡಿದ ರಾಜೀನಾಮೆ ಪತ್ರಗಳನ್ನು ಹಂಚಲಾಯಿತು. ಚನ್ನಪ್ಪ ಮಾಸ್ತರು ಮತ್ತು ರಾಮಪ್ಪ ಮಾಸ್ತರು ಮೌನವಾಗಿ ಕೂತರು; ಒಂದು ಕ್ಷಣ ಕಹಿಯೆನಿಸಿತು. ಹಾಳಾಗಿ ಹೋಗ್ಲಿ ಎಂದು ಸಹಿ ಮಾಡಿ ಟೇಬಲ್ ಮೇಲೆ ಎಸೆದು ಎದ್ದು ಹೋದರು. ಈ ಮೂವರು ಕೈ ಹೊಸೆಯುತ್ತ "ನಾವು ಕೊಡ್ಬೇಕೆ ಮೇಡಂ?" ಎಂದು ಹಲ್ಕಿರಿದರು. 'ಹೌದೌದು. ರೂಲ್ಸು ಅಂದ್ರೆ ರೂಲ್ಸು. ಶಿಸ್ತು ಅಂದ್ರೆ ಶಿಸ್ತು. ನಿಮಗಿನ್ನೇನು ಪರ್ಮನೆಂಟ್ ಆಯ್ತಲ್ಲ; ಬರ್ಕೊಟ್ರೆ ರಿಸಿಗ್ನೇಷನ್ನು. ಬರ್ಕೊಟ್ಟಾಕ್ಷಣ ಕೆಲಸ ಕಳೀತೀವಾ? ಒಂದು ಭಯ ಇದ್ರೆ ಒಳ್ಳೇದು ಅಂತ ಅಷ್ಟೇ" ಎಂದರು.

ಇದಾದ ಮೂರೇ ದಿನಕ್ಕೆ ಚನ್ನಪ್ಪ ಮಾಸ್ತರಿಗೆ ಬುಲಾವ್ ಬಂತು. ಅವರು ಬಂದು ನಿಂತಾಗ "ತಗೊಳ್ಳಿ" ಎಂದು ಒಂದು ಕವರನ್ನು ಕೊಟ್ಟರು ಇಂದಿರಾಬಾಯಿ. ಚನ್ನಪ್ಪ ಮಾಸ್ತರು ಆತುರಾತುರವಾಗಿ ಲಕೋಟೆ ಒಡೆದು ನೋಡಿದರು; ಮುಖ ಕಪ್ಪಿಟ್ಟಿತು. ನೆ[illegible] ಅನಿಸಿತು. ಮುಂದೇನು ಗತಿ ಎನ್ನಿಸಿತು. ಮನೆಯಲ್ಲಿ ತುಂಬಿದ ಮಕ್ಕಳು; ಹೆಂಡತಿ, ಸಂಬಳವನ್ನೇ

ನಂಬಿದ ಸಂಸಾರ. ತಲೆ ಗಿರ್ ... ಮಾತೇ ಆಡಬಾರದೆನ್ನಿಸಿದರೂ "ಇದೇನು ಮ್ಯಾಡಂ" ಎಂಬ ಮಾತು ಹೊರಬಂತು.

ಚಂದಿರಾಬಾಯಿ ಅಪಾರ ಅನುಕಂಪೆಯ ದನಿಯಲ್ಲಿ ಹೇಳಿದರು: ಐ ಯಾಮ್ ವೆರಿ ಸಾರಿ ಚಿನ್ನಪ್ಪ ನಮ್ಮ ಅಧ್ಯಕ್ಷರು ತುಂಬಾ ಸ್ಟ್ರಿಕ್ಟ್. ನೀವು ಆ್ಯಂಟಿ ಸ್ಕೂಲ್ ಆ್ಯಕ್ಟಿವಿಡೀಸ್ ಮಾಡ್ತಿದ್ದೀರಿ ಅಂತ ರಾಜೀನಾಮೆ ಅಕ್ಸೆಪ್ಟ್ ಮಾಡ್ಕೊಂಡ್ ಬಿಟ್ಟಿದ್ರು. ಐಯಾಮ್ ಹೆಲ್ಪ್‌ಲೆಸ್."

ಚಿನ್ನಪ್ಪ ಮಾಸ್ತರು ಮತ್ತೆ ಮಾತಾಡಲಿಲ್ಲ; ಮೌನವಾಗಿ ಹೊರಬಂದರು. ಸೀದಾ ರಾಮಪ್ಪ ಮಾಸ್ತರ ಬಳಿ ಬಂದರು. ವಿಷಯ ತಿಳಿಸಿದರು; ರಾಮಪ್ಪನೋರಿಗೆ ಮೈಯೆಲ್ಲ ಉರಿತು; ಈಗ ಬರೀ ಉರಿದು ಪ್ರಯೋಜನವಿಲ್ಲಾಂತ ಅನ್ನಿಸಿ ಇಬ್ಬರೂ ಡಿ.ಡಿ.ಪಿ.ಐ. ಹತ್ತಿರ ಹೋದರು; ಅವರು ಕೈ ಅಲ್ಲಾಡಿಸಿದಾಗ ಡಿ.ಪಿ.ಐ. ಹತ್ತಿರ ಹೋದರು. "ಬ್ಯಾಡ್ ರಿಪೋರ್ಟ್ಸ್ ಇದ್ರೆ ನಾವೇನೂ ಮಾಡಾಕಾಗೊಲ್ಲ" ಅನ್ನೋ ಉತ್ತರ ಕೇಳಿ ವಾಪಸ್ಸಾದರು. ಮುಂದೇನು ಅನ್ನೋದೆ ದೊಡ್ಡ ಪ್ರಶ್ನೆ.

ಬಸವರಾಜ್, ಶಂಕರ್ ಮೋಹನ್ ಇವರಿಗೂ ಇದೇ ಪ್ರಶ್ನೆ. ತಮ್ಮ ನಾಯಕ ಶಿಖಾಮಣಿಗೆ ಮುಂದೇನು ಮಾಡಬೇಕು ಅನ್ನೋ ಪ್ರಶ್ನೆಯನ್ನು ಅವರು ಎದುರಿಸುತ್ತಿದ್ದರು. ಕಡೆಗೆ ತೀರ್ಮಾನಕ್ಕೆ ಬಂದರು; ತಮ್ಮ ಮೆಚ್ಚಿನ ಯುವರಾಜರಿಗೆ ಶಾಲೆಯ ವಾರ್ಷಿಕೋತ್ಸವ ಸಂದರ್ಭದಲ್ಲಿ ಸನ್ಮಾನ ಮಾಡೋದು. ಮ್ಯಾಗಜೈನ್‌ನಲ್ಲಿ ದೊಡ್ಡ ಫೋಟೋ, ಪರಿಚಯ, ಪ್ರಶಂಸೆ–ಎಲ್ಲಾ ಹಾಕೋದು. ಹಾಗಾದ್ರೆ, ಯಾರ್‍ಯಾರ ಕೈಲಿ ಮಾತಾಡ್ಸೋದು? ವಿದ್ಯಾಮಂತ್ರಿಗಳನ್ನೇ ಕರೆಯೋದು ವಾರ್ಷಿಕೋತ್ಸವಕ್ಕೆ. ಅಂದ್ಮೇಲೆ ಡಿ.ಪಿ.ಐ. ಮತ್ತು ಡಿ.ಡಿ.ಪಿ.ಐ. ಬಂದೇ ಬರ್ತಾರೆ. ಇನ್ನು ಮೇಷ್ಟ್ರುಗಳ ಪರವಾಗಿ ರಾಮಪ್ಪಮಾಸ್ತರರೇ ಸನ್ಮಾನ ಪತ್ರ ಓದಲಿ ಎಂದು ತಂತ್ರ ಹೂಡಿ ಅವರ ಹತ್ತಿರ ಬಂದರು. "ಏನಂತೀರಿ" ಎಂದರು. ರಾಮಪ್ಪನೋರ ಮನಸ್ಸೇ ಸರಿಯಿರಲಿಲ್ಲ, ಚಿನ್ನಪ್ಪ ಮಾಸ್ತರರು ಮನೆ ಸೇರಿದಂದಿನಿಂದ. ಇವರಿಗೆ ಕುಂತರೆ ನಿಂತರೆ ಅದೇ ಚಿಂತೆ. ತ್ರಿಮೂರ್ತಿಗಳು ಬಂದು ಕೇಳಿದಾಗ "ಆಗೋಲ್ಲ" ಎಂದರು. ಅವರು "ಆಗೋಲ್ಲ ಅಂದ್ರೆ ಬಿಡೋಲ್ಲ" ಎಂದೇ ನಿಂತರು. ಕಡೆಗೆ "ಚಿನ್ನಪ್ಪನೋರ ಗತಿ ನೆನಪೈತಲ್ಲ ರಾಮಪ್ನೋರೆ?" ಎಂದೂ ಕೇಳಿದರು.

ರಾಮಪ್ಪ ಮಾಸ್ತರು ಕ್ಷಣಕಾಲ ಅವರ ಮುಖವನ್ನೆ ದಿಟ್ಟಿಸಿದರು. ಮತ್ತೆ ಅವರು "ಆಗೊಲ್ಲ ಅನ್ನೋದಾದ್ರೆ ಕೊನೇ ಮಾತು ಹೇಳ್ಬಿಡಿ. ಇದು ಸ್ಕೂಲಿನ ಗೌರವಕ್ಕೆ ಸಂಬಂಧಿಸಿದ ವಿಷಯ. ಒಬ್ಬ ವಿದ್ಯಾರ್ಥಿಗೆ ಸನ್ಮಾನ ಅಂದ್ರೆ ಸಾಮಾನ್ಯವೆ? ಇಷ್ಟರ ಮೇಲೆ ನಿಮ್ಮಿಷ್ಟ. ಯಾವುದೂ ಹೇಳ್ಬಿಡಿ. ಹೆಡ್‌ಮಿಸ್ಟ್ರೆಸ್ಸಿಗೆ ತಿಳಿಸ್ಬೇಕು" ಎಂದು ಒತ್ತಾಯಿಸಿದರು. ಒಂದೆರಡು ನಿಮಿಷ ನೆಲವನ್ನೇ ನೋಡ್ತಾ ಇದ್ದ ರಾಮಪ್ಪನ್ನೋರು "ಸರಿ. ನೀವು ಹೇಳಿದಂಗೇ ಆಗ್ಲಿ" ಎಂದರು.

* * *

ಶಾಲಾ ವಾರ್ಷಿಕೋತ್ಸವದ ದಿನ ಸಂಭ್ರಮವೋ ಸಂಭ್ರಮ. ತಮ್ಮ ಹೆಡ್‌ಮಿಸ್ಟ್ರೆಸ್ ಮಗನಿಗೆ ಸನ್ಮಾನವು ಇದೆಯೆಂದಾಗ ವಿದ್ಯಾರ್ಥಿಗಳು ಸುಮ್ಮನಿರಲಾದೀತೆ? ಸುಮ್ಮನಿದ್ದರೂ ಮೂವರು ಮೇಷ್ಟರು ಸುಮ್ಮನಿದ್ದಾರೆಯೇ? ಒಟ್ಟಿನಲ್ಲಿ ಅವರಿವರು ಸೇರಿ ಊರೆಲ್ಲ ಸಿಂಗರಿಸಿದರು; ಈ ಸಿಂಗಾರಗೊಂಡ ಊರಿನ ಬೀದಿಗಳಲ್ಲಿ ಸುಂದರನ ಮೆರವಣಿಗೆ ಸಾಗಿತು. ಯಾರು ಯಾರೊ ಬಂದು ಹಾರ ಹಾಕಿದರು. ಈತ ಹಸನ್ಮುಖನಾಗಿ ಹಾಕಿಸಿಕೊಂಡು ಮತ್ತೆ ಹಾರವನ್ನು ಮಕ್ಕಳೆಡೆಗೆ ಎಸೆದ; ಕೆಲವು ಸಾರಿ ಹಾಕಿದವರ ಕೊರಳಿಗೆ ತಾನೇ ಹಾಕಿದ. ತಾನೊಬ್ಬ ನಾಯಕನೆಂದು ಬೀಗಿ ಊರಗಲ ಮುಖ ಮಾಡಿಕೊಂಡು ಮೆರವಣಿಗೆಯಲ್ಲಿ ಬಂದ.

ಶಾಲೆಯ ಹತ್ತಿರ ಹಾಕಿದ್ದ ಎತ್ತರವಾದ ವೇದಿಕೆಯ ಮೇಲೆ ವಾರ್ಷಿಕೋತ್ಸವ. ಅದರ ಅಂಗವಾದ ಸನ್ಮಾನ ಪ್ರಾರಂಭವಾಯಿತು. ರಾಮಪ್ಪ ಮಾಸ್ತರು ಮೆಲ್ಲನೆ ವೇದಿಕೆ ಹತ್ತಿದರು; ಕಟ್ಟು ಗ್ಲಾಸು ಹಾಕಿದ್ದ ಸನ್ಮಾನ ಪತ್ರವನ್ನು ಕೈಯಲ್ಲಿ ಹಿಡಿದಿದ್ದರು. ಮೈಕಿನ ಮುಂದೆ ನಿಂತು ನಿಧಾನವಾಗಿ ಮಾತು ಪ್ರಾರಂಭಿಸಿದರು.

"ಮಹನೀಯರೆ ಮತ್ತು ಮಹಿಳೆಯರೆ, ಈ ದಿನ ನಮ್ಮ ಶಾಲೆಯ ಇತಿಹಾಸದಲ್ಲಿ ಒಂದು ಶುಭದಿನ. ನನ್ನ ಸಹೋದ್ಯೋಗಿಗಳಿಂದ ಯುವರಾಜ ಎಂಬ ಪ್ರಶಸ್ತಿ ಪಡೆದ ನನ್ನ ವಿದ್ಯಾರ್ಥಿ ಸುಂದರನ ಸನ್ಮಾನ ದಿನ. ಇಂಥ ದಿನದಂದು ನಾನಿಲ್ಲಿ ನಿಂತಿರೋದಂತೂ ನಿಜಕ್ಕೂ ನನಗೆ ಸಂತೋಷದ ಸಂಗತಿ. ಈ ಶಾಲೆಯಲ್ಲಿ ಅನೇಕ ಬದಲಾವಣೆಗಳಿಗೆ, ಕ್ರಾಂತಿಕಾರ ಬದಲಾವಣೆಯೆಂದು ಅನೇಕರಿಂದ ಹೊಗಳಿಸಿಕೊಂಡಂಥ ಕ್ರಮಗಳಿಗೆ ಈ ವಿದ್ಯಾರ್ಥಿ ಕಾರಣ; ಈತನ ಸತ್ಕಾರ್ಯಗಳಿಗೆ ಪೂರಕಶಕ್ತಿಯಾಗಿ ನಮ್ಮ ಚಂದಿರಾಬಾಯಿಯವರು ಅಗಾಧ ಧೈರ್ಯ ಮತ್ತು ಶ್ರಮಗಳನ್ನು ಪ್ರಕಟಿಸಿದ್ದಾರೆ. ಈ ಸುಂದರನ ಕೃಪಾಕಟಾಕ್ಷದಿಂದ ನಮಗೆ ಪಾಠ ಮಾಡುವ ಕಷ್ಟ ತಪ್ಪಿದೆ; ಯಾಕೆಂದರೆ ವಿದ್ಯಾರ್ಥಿಗಳೆಲ್ಲ ಈತನ ಹಿಂದೆಯೇ ತಿರುಗುತ್ತ ಸಮಾಜ ಸೇವಾ ಕಾರ್ಯದಲ್ಲಿ ತೊಡಗಿರುತ್ತಾರೆ. ಈತನ ವಿಶಾಲ ಮನೋಧರ್ಮ ಮತ್ತು ಚಂದಿರಾಬಾಯಿಯವರ ಅಧಿಕಾರ ಶಕ್ತಿಯ ಫಲವಾಗಿ ನನ್ನ ಸಹೋದ್ಯೋಗಿ ಮಿತ್ರ ಚಿನ್ನಪ್ಪ ಮಾಸ್ತರರು ಕೆಲಸ ಕಳೆದುಕೊಂಡದ್ದು ಸಾಮಾನ್ಯ ಸಾಧನೆಯಲ್ಲ. ಶಾಲೆಯಲ್ಲಿ ಶಿಸ್ತು ಮೂಡಿಸುವ ಸಲುವಾಗಿ ಚಿನ್ನಪ್ಪ ಮಾಸ್ತರರ ಮಕ್ಕಳು ಒಂದು ಹೊತ್ತು ಊಟ ಮಾಡುತ್ತ ವ್ರತ ಮಾಡುತ್ತಿದ್ದಾರೆ. ಈ ಶಾಲೆಯಲ್ಲಿ ಮತ್ತಷ್ಟು ಶಿಸ್ತು ಮೂಡಿ ಶಾಲೋದ್ಧಾರ ಕಾರ್ಯ ಸುಗಮವಾಗಲೆಂದು ಹಾರೈಸುತ್ತ ಬಹಳ ವರ್ಷಗಳಿಂದ ಇದ್ದ ನಾನು ನನ್ನ ರಾಜೀನಾಮೆಯನ್ನು ಈ ಸನ್ಮಾನ ಸಂದರ್ಭದಲ್ಲಿ ಘೋಷಿಸುತ್ತೇನೆ..."

ಇಷ್ಟು ಹೇಳುವ ವೇಳೆಗೆ ಅವರಿಗೆ ಆವೇಶ ಆವರಿಸುತ್ತ ಬಂದಿತ್ತು. ತಕ್ಷಣ ಏರಿದ ದನಿಯಲ್ಲಿ ಹೇಳಿದರು: "ಬದುಕೋದಿಕ್ಕೆ ನೂರು ಮಾರ್ಗ ಇವೆ. ಆದರೆ ನಾನು ನ್ಯಾಯವಾಗಿ ಬದುಕ್ತೇನೆ. ನಾನೇ ಒಂದು ಶಾಲೆ ಶುರುಮಾಡ್ತೇನೆ. ಇಲ್ಲ ಅಂದ್ರೆ, ಯಾವ್ದಾದ್ರೂ ಸುಸ್ಥಿತವಾದ ಶಾಲೇಗೇ ಸೇರ್ತೇನೆ. ಇಂಥ ಕಚಡ ಶಾಲೆ ಮಾತ್ರ ಬೇಡ. ಇದೋ ನೋಡಿ, ನನ್ನ ಕೈಯಲ್ಲಿ ಇರೋದು ಸನ್ಮಾನ ಪತ್ರವಲ್ಲ; ಚಿನ್ನಪ್ಪ ಮಾಸ್ತರಂಥ ಸಜ್ಜನರ ಮರಣಪತ್ರ"

ಇಷ್ಟು ಹೇಳಿದವರೇ ವೇದಿಕೆಯ ಮೇಲೆ ಎಸೆದು ಬಿರುಗಾಳಿಯಂತೆ ಹೊರಟು ಹೋದರು. ಇಡೀ ಸಭೆ ಒಂದು ಕ್ಷಣ ದಿಗ್ಭ್ರಾಂತವಾಯಿತು; ಉಸಿರು ಕಟ್ಟಿತು. ಸ್ವಲ್ಪ ಹೊತ್ತಿನಲ್ಲೆ ಗುಜುಗುಜು ಪ್ರಾರಂಭವಾಯಿತು. ಬರಬರುತ್ತ ಗೊಂದಲ ಶುರುವಾಯಿತು. ಅಲ್ಲಲ್ಲೆ ಚರ್ಚೆ, ವಾದ–ವಿವಾದ ಕಾಣಿಸಿಕೊಂಡಿತು. ಈ ಗದ್ದಲದ ನಡುವೆ ಇದ್ದಕ್ಕಿದ್ದಂತೆ "ಬಾಯಿಗಳಿಗೆ ಧಿಕ್ಕಾರ" "ಯುವರಾಜನಿಗೆ ಧಿಕ್ಕಾರ" ಎಂಬ ಕೂಗು ಕೇಳಿತು. ಮತ್ತೆ ಮತ್ತೆ ಕೇಳಿಸಿತು; ಹತ್ತು, ಇಪ್ಪತ್ತು, ಐವತ್ತು, ನೂರು, ಇನ್ನೂರು ಸಾವಿರ ಕಂಠಗಳು ಸೇರುತ್ತಲೇ ಬಂದವು. ಧಿಕ್ಕಾರದ ಕೂಗು ವೇದಿಕೆಯತ್ತ ಬರಹತ್ತಿತು; ಸ್ವಲ್ಪ ಕಾಲದಲ್ಲೆ ವೇದಿಕೆಯನ್ನೂ ಹತ್ತಿತು.

ಆಗ ಕುರ್ಚಿಗಳು ಖಾಲಿಯಾದವು.

● ●



# ಬಫೆ ಡಿನ್ನರ್

* ದೇವಪ್ರಿಯ

ಕೋಳಿ
ತಿನ್ನೋರು
ಕೋಳಿ
ತಿನ್ನಿ
ಕಾಳು
ತಿನ್ನೋರು
ಕಾಳು
ತಿನ್ನಿ

ನಂದೂಕೆ ವೈಸ್‌ಛಾನ್ಸಿಲರ್ ಆದ್ರೆ ಇಂಗ್ ಮಾಡಾಕಿಲ್ಲ, ನಾನು", ಎಂದು ಜಬ್ಬರ್‌ಮಿಯಾ ನನ್ನ ಬೆನ್ನು ತಟ್ಟಿದಾಗ–'ಈ ಜನ್ಮದಲ್ಲಿ ನಿನಗೆಲ್ಲಿ ಆ ಛಾನ್ಸ್' ಎಂಬಂತೆ–ನಮ್ಮ ಸುತ್ತಮುತ್ತಲಿದ್ದ ಪ್ರೊಫೆಸರ್‌ಗಳೆಲ್ಲ ನೋಡಿದ್ದರು.

"ಏನಾಯ್ತೀಗ?", ಎಂದು ಜಬ್ಬರ್‌ನನ್ನು ಕೇಳಿದೆ.

"ಈ ಟೇಬಲ್ ಊಟಾ ಅಂದ್ರೆ, ನಮ್ಮ ಸೀಟಿಗೆ ನಾವ್ ಅಂಟ್ಕಂಡೇ ಕುಂತ್‌ಕೋ ಬೇಕು. ಛಾನ್ಸಿಲರ್ ಪರಿಚಯಾ ಮಾಡ್ಕೋಳ್‌ದಾದ್ರೂ ಹ್ಯಾಂಗ್?' ಅಂದಿದ್ದ.

ದೊಡ್ಡವರಾರಾದರೂ ವಿಶ್ವವಿದ್ಯಾಲಯಕ್ಕೆ ಬಂದಾಗ ಅವರ ಗೌರವಾರ್ಥ–ಗುಡಾಣದಾರ್ಥ ಭೋಜನ ಕೊಡುವುದು ಬಿಡುವುದು ಅಧಿಕಾರಿಗಳ ಸ್ವತ್ತು. 'ಯು ಆರ್ ಇನ್ವೈಟೆಡ್ ಫಾರ್ ದಿ ಡಿನ್ನರ್'–ಎಂಬ ಆಮಂತ್ರಣ ಬಂದಾಗ, ಊಟ ಮಾಡುವುದನ್ನೇ ಗುರಿಯಾಗಿಟ್ಟುಕೊಂಡು ಹೋಗುವುದು, ಸೂಚಿತ ಸ್ಥಳದಲ್ಲಿ ಕುಳಿತು ಹಾಕಿದ್ದನ್ನು ತಿಂದು, ಬರುವಾಗ ಊಟದ ಬಗ್ಗೆ, ಅಡುಗೆಯ ಬಗ್ಗೆ-ನಮಗೆ ತಿಳಿದ ನಾಲ್ಕು ಮಾತನ್ನಾಡುತ್ತಾ ಮನೆ ಸೇರುವುದು ನಮಗೆಲ್ಲ ರೂಢಿಯಾಗಿದ್ದಾಗ, ಜಬ್ಬರ್ ಮತ್ತೊಂದು ಮಾರ್ಗ ಸೂಚಿಸಿದ್ದನ್ನು ಕಂಡು ವಿಚಿತ್ರವೆನಿಸಿತ್ತು.

"ಅಂದರೆ– ನೀನೇನ್ಮಾಡ್ತಿದ್ದೆ?" ಎಂದೆ, ಕುತೂಹಲದಿಂದ.

"ಬಫ್ಫೇ-ಬಫ್ಫೇ ಪದ್ಧತಿಯನ್ನಾ ಜಾರಿಗೆ ತರುತ್ತಿದ್ದೆ–ಅದ್ರಿಂದ, ಊಟದ ತಟ್ಟೆ ಕೈಯಲ್ಲಿಡ್ಕಂಡ್ ಛಾನ್ಸ್‌ಲರ್ ನಮ್ಮತ್ರಾ ಬರೋಕೂ, ನಾವು ಅವ್ರತ್ರ ಹೋಗೋಕೂ ಛಾನ್ಸ್ ಸಿಗ್ತಿತ್ತು. ಊಟದ್ ಜೊತೇಗೆ ಮಾತೂ ಆಗ್ತಿತ್ತು. ಈಗೇನಿದೆ ಬರೀ ಕವ್ವಾ ಕತ್ರಸೋದು ಒಂದೇ ಉದ್ದ್ಯೋಗ", ಅಂದಿದ್ದ.

ತುರ್ತು ಪರಿಸ್ಥಿತಿಯ ಉಸುರು ಕಟ್ಟುವ ಹವೆಯಲ್ಲಿ ಎಂಥೆಂಥವರಿಗೆ ಎಂಥೆಂಥಾ ಯೋಚನೆಗಳು ಹೊಳೆಯುತ್ತಿದ್ದವು, ಅನ್ನುವುದಕ್ಕೆ ಜಬ್ಬರ್ ಸಾಕ್ಷಿ. 'ಮುದ್ದು ತಲೆ' ಎಂಬ ಪ್ರಸಿದ್ಧಿಯಾಗಿದ್ದ ಅವನ ಮೆದುಳಿನಲ್ಲೂ ಈ ಬಗೆಯ ಹೊಸವಿಚಾರಗಳು ಮೊಳೆ ಒಡೆಯಬಹುದೆಂದು ನಮ್ಮ ಕನಸಿನಲ್ಲೂ ಅಂದುಕೊಂಡಿರಲಿಲ್ಲ.

'ಒತ್ತಡಕ್ಕೆ ಬಿದ್ದವನು ಎತ್ತರಕೆ ಏರ್ತಾನೆ' ಅಂಬೋದನ್ನು ಜಬ್ಬರ್ ಸಿದ್ಧಪಡಿಸಿದ ಉಪಾಯಿಲ್ಲ ಇಂದಿಲ್ಲದಿದ್ದರೆ ನಾಳೆ ಅವನೂ ವೈಸ್‌ಛಾನ್ಸಲರ್ ಆಗುವ ಛಾನ್ಸ್ ಇದೆ, ಎಂದು ಮನಸ್ಸಿನಲ್ಲೇ ಗುಣಿಸುತ್ತಿದ್ದಾಗ–

"ಅದಕ್ಕೇ ನಿನ್ನ ವೈಸ್‌ಛಾನ್ಸಲರ್ ಮಾಡ್ಲಿಲ್ಲ" ಅನ್ನುತ್ತಾ ನಮ್ಮನ್ನು ಸೇರಿದ ಪ್ರೊ॥ ಉಣ್ಣೂರಾವ್ "ಇವತ್ತು ಊಟಾನಾದ್ರೂ ಪಸಂದಾಗಿ ತಿನ್ನೋ ಅವಕಾಶ ಇದೆ. ನೀವ್ ಹೇಳಿದಾ 'ಆಡಿನ ಊಟಾ ಮಾಡೋದಾದರೆ, ಹೊಟ್ಟೆ ತುಂಬಿಸಿಕೊಳ್ಳೋದಕ್ಕೂ ಕಲ್ ಬೀಳ್ತಿತ್ತು." ಅಂದ. 'ಎಲ್ಲಾರೂ ಮಾಡೋದು ಹೊಟ್ಟೆಗಾಗಿ...' ಎಂಬ ಮಾತಿನಲ್ಲಿ ಬಲವಾಗಿ ನಂಬಿ, ಹೊಟ್ಟೆಯನ್ನೇ ಬೆಳೆಸಿಕೊಂಡವ ರಾವ್.

"ನೋಡೀವಂತೆ ಇರ್ರೀ– ಕತ್ತೇಗೂ ಕಾಲ ಬರ್ತೈತೆ" ಎಂದ ಜಬ್ಬರ್, ತಾನು ಎಂದಾದರೊಮ್ಮೆ ವೈಸ್‌ಛಾನ್ಸಲರ್ ಆಗಿಯೇ ಆಗುವೆನೆಂದು ಭರವಸೆ ಹೊಂದಿ. ಕೊಡುವಾಗ ದೇವ್ರು ಮುಗ್ಗುರ್ಸಿ ಬೀಳೋಹಾಂಗ ಒದ್ದು ಕೊಡ್ತಾನೆ ಅನ್ನೋ ಉರ್ದು ಗಾದೆ ಹೇಳಿ, ತಾನು ಆಸ್ಥಾನ ಗಿಟ್ಟಿಸೋ ಕಾಲ ಬಹಳ ದೂರ ಇಲ್ಲ, ಎಂದು ಗಟ್ಟಿಧ್ವನಿಯಲ್ಲಿಯೇ ಹೇಳಿದ.

"ಬರ್ಲಪ್ಪಾ, ಬರ್ಲಿ–ಆ ಕಾಲಾನೂ ಬರ್ಲಿ. ಈ ಕಣ್ಣಿಂದ ಅದನ್ನೂ ಕಂಡ್ ಬಿಡೋಣ" ಅಂದರು. ಪ್ರೊ॥ ಕುರ್ಚಿವಂತ.

ಎಂದೋ ಆಸ್ಥಾನಕ್ಕೆ ತಮ್ಮನ್ನು ಕೂಡ್ರಿಸಬೇಕಾಗಿತ್ತೆಂದು ಅವರ ಮತ–ಹಾಳು ದೈವ, ಅವರಿಗೆ ಅನುಕೂಲವಾಗಿರಲಿಲ್ಲ ಅಷ್ಟೇ...

"ಈ ಕಾಲ್ದಾಗೆ ಎಂಥೆಂಥವರೋ ಯಂಥೆಂಥಾ ಸ್ಥಾನಾ ಪಡೀತಾರಂತೆ– ನಿನಗೇಕೆ ವೈಸ್‌ಛಾನ್ಸಲರ್‌ಗಿರಿ ಸಿಗಬಾರ್ದು. ಆದ್ರೆ ನೀನೇನಾದ್ರೂ ಒಂದು ವೇಳೆ ಆ ಸ್ಥಾನಕ್ಕೆ ಬಂದ್ರೆ, ಈ ಥರ ಊಟ ಹಾಕ್ಬ್ಯಾಡ. ಈ ಕುರ್ಚಿ–ಮೇಜು, ಕೈವಸ್ತ್ರ, ಚಾಕು ಕೊಡ್ಲಿ–ಎಲ್ಲಾ ಬಿಟ್ಟು, ನೀಟಾಗಿ ನೆಲದ ಮೇಲೆ ಚಾಪೆ ಹಾಕಿ ತಟ್ಟೇನೊ, ಎಲೇನೋ ಹಾಕ್ಸು. ಏನಿಲ್ಲದಿದ್ದರೂ ನಿರಂಬ್ಳ ಆಗಿ ಕುಂತು ಊಟಾನಾದ್ರೂ ಮಾಡೋಣ" ಅಂದರು. ಕುರ್ಚಿವಂತರು ಊಟಮಾಡುವಾಗ–ಸುತ್ತ ಸುತ್ತಮುತ್ತಲವರನ್ನೇಕೆ–ತಮ್ಮನ್ನೂ ತಾನೇ ಮರೆತು ಊಟಮಾಡುವ ಸ್ವಭಾವದವರು.

"ಬೀಫ್ ತಿನ್ನೋರ್‍ಗೆ ಬಫ್ಫೇ ಸರಿಯೋ ಬಿಡ್ರೀ, ಬದ್ನೆಕಾಯಿಗೊಜ್ಜು ತಿನ್ನೋರಿಗೇಕೆ?" ಎನ್ನುತ್ತಾ ಮುಂದೆ ಬಂದ ಪ್ರೊ॥ ಕಾವೇರಿ ಸೆಟ್ಟಿ ಈ ದೇಶದಲ್ಲಿದ್ದವರಲ್ಲಿ ನೂರಕ್ಕೆ ಕನಿಷ್ಟ ಎಂಭತ್ತು ಜನರು ಯಾವ ಕಾಲದಲ್ಲೂ ದನ–ಕುರಿ–ಕೋಳಿ ತಿನ್ನುವವರು ಎಂದು ಸಂಶೋಧಿಸಿ ಸಿದ್ಧಮಾಡಿಕೊಂಡಿದ್ದ ಪ್ರೊ॥ ಸೆಟ್ಟಿ, ಈ ಸೊಪ್ಪು ಸೆದೆಯ ಹೆಗ್ಗಳಿಕೆ ಬ್ರಾಹ್ಮಣರ–ಲಿಂಗಾಯತರ–ಜೈನರ ಗತ್ತು, ಎಂದೇ ವಾದಿಸಿ, ಪಿ.ಎಚ್.ಡಿ. ಗಿಟ್ಟಿಸಿಕೊಂಡಿದ್ದ. ಅದೇ ಕಾರಣದಿಂದ ಹುಟ್ಟಾ ಸಸ್ಯಹಾರಿಯಾದರೂ, ಮನೆಯಲ್ಲಿ ಮಾತ್ರ ಬಿಟ್ಟು ಉಳಿದೆಡೆಯಲ್ಲೆಲ್ಲಾ ಮಾಂಸಹಾರವನ್ನೇ ತಿಂದು, ತನ್ನ ಸಿದ್ಧಾಂತ ಪ್ರತಿಪಾದಿಸುತ್ತಿದ್ದ.

"ಕೋಳಿ ತಿನ್ನೋರು ಕೋಳಿ ತಿನ್ನಿ–ಕಾಳು ತಿನ್ನೋರು ಕಾಳು ತಿನ್ನಿ. ಎರಡೂ ಸರ್ವ್ ಮಾಡಿದ್ರೆ ಏನು ಇವ್ರಪ್ಪನ ಮನೀಗಂಟು ಹೋಗ್ತೀತ್ತೇ?" ಎಂದ ರಾಜ(ಕೀಯ)ರಾವ್.

"ಕೋಳಿ–ಕಾಳು ಎರ್ಡೂ ಮಾಡ್ಸಿ ಒಂದೇ ಪಂಕ್ತೀಲಿ ಹಾಕ್ಸಿದ್ರೆ ಮಟ್‌ಚಟ್ ಆಗಲ್ವೇನ್ರೀ ಪಾಪ ಕಟ್ಟಾ ಸಸ್ಯಹಾರಿಗಳಿಗೇ ಅಸಹ್ಯ ಅನಿಸೋಲ್ವೆ?" ಎಂದು ಹಿಂದೆ ನಿಂತವರೊಬ್ಬರು ಅಂದಾಗ–

"ಹೌದು. ಹೌದು. ಮಟ್‌ಚಟ್ ಆಗ್ತೇವೆಂತಾ ಪುಗುಸಟ್ಟೆ ಸಿಕ್ಕಾಗ ಎಲ್ಲಾ ಬ್ರಾಹ್ಮಣ್ರು, ಲಿಂಗಾಯತ್ರೂ ಕೋಳೀನೇ ತಿನ್ತಾರೆ", ಅಂದ ಹಾವೇರಿಸೆಟ್ಟಿ.

ಬಫ್ಫೇ ಡಿನ್ನರ್‌ನಿಂದ, ಬಫ್ಫೇ ಮೆನೂಗೆ ತಿರುಗಿದ ಆ ವಾದ ಊಟ ಬರೋವಿಗೂ ಸಾಗಿ, ಊಟ ಬಂದೊಡನೇ ಯಥಾಪ್ರಕಾರ ಬಾಯಿ–ಕೈ ಸಪ್ಪಳದ 'ದೃತ್' ಗತಿಯಲ್ಲಿ ಮುಕ್ತಾಯವಾಗಿತ್ತು.

**ಮಾಡರ್ನ್ ಸೊಸೈಟಿಗೂ ಮನುವಿಗೂ ಇರೋ ಸಂಬಂಧದ ಬಗ್ಗೆ ಅದ್ಭುತ ಪ್ರಬಂಧ ಬರೆದು ಪ್ರೊ॥ ರಾಜ (ಕೀಯ)ರಾವ್ ಪಿ. ಎಚ್. ಡಿ. ಪಡೆದಿದ್ದಾರೆ. 'ನಾನು ಆ ಪುಸ್ತಕ ಓದಬೇಕು'–ಛಾನ್ಸಲರ್**



ಅಂದು ಕನಸಿನಲ್ಲೂ ಕಾಣಲಾರೆವೆಂದುಕೊಂಡ ದೃಶ್ಯ ಇಂದು ಕಣ್ಣೆದುರಿಗೇ ನಿಂತಿದೆ– ಜಬ್ಬರ್ ವೈಸ್‌ಛಾನ್ಸಲರ್ ಆಗಿ ನಮ್ಮ ಮುಂದೆ ನಿಂತಿದ್ದಾನೆ.

'ಕೊಡುವಾಗ ಮುಂಗ್ಗರಿಸಿ ಬೀಳೋ ಹಾಗೆ ಒದ್ದು ದೇವ್ರು ಕೊಡ್ತಾನೆ'–ಎಂದು ಅವನು ಅಂದ ಮಾತು ನೂರಕ್ಕೆ ನೂರು ಭಾಗ ಸತ್ಯವಾಗಿದೆ–ವೈಸ್ ಛಾನ್ಸಲರ್ ಅಂತಸ್ತಿನ ಜೊತೆಯಲ್ಲಿ ಅವನಿಗೆ ತುರ್ತು ಪರಿಸ್ಥಿತಿಯ ಅಧಿಕಾರವೂ ದೊರೆತಿತ್ತು. ಟೆಂಪೊರರಿಯಾಗಿ ಕೆಲಸದ ಬಗ್ಗೆ ಆಸಕ್ತರಾಗಿ ಫೈಲನ್ನು ಹಿಡಿಕೊಂಡು ಕುಳಿತ ಕಾರಕೂನರು, ಅಡ್–ಹಾಕ್ ನೆಲಗಟ್ಟಿನ ಮೇಲೆ ಒದರಾಟವನ್ನೆಲ್ಲಾ ಬಿಟ್ಟು ಓದುವ ಪರಿಪಾಠ ಮಾಡಿಕೊಂಡಿದ್ದ ವಿದ್ಯಾರ್ಥಿಗಳು, ತುರ್ತುಪರಿಸ್ಥಿತಿ ಮುಗಿಯುವವರೆಗೂ ಬಾಯಿಗೆ ಕಡಿವಾಣ ಹಾಕಿಕೊಳ್ಳಬೇಕೆಂಬ ಗೃಹಿಣಿಯರ ಮಾತಿಗೆ ಗೌರವಕೊಟ್ಟು ಮೂಕರಾಗಿದ್ದ ಪ್ರೊಫೆಸರ್‌ಗಳು–ಈ ಎಲ್ಲರೂ ಸೇರಿ, ಜಬ್ಬರ್‌ನ ವೈಸ್ ಛಾನ್ಸಲರ್‌ಗಿರಿಯನ್ನು ಅಕ್ಷರಶಃ 'ಶಾಂತಿಯುಗ'ವನ್ನಾಗಿ ಪರಿವರ್ತಿಸಿದ್ದರು.

ತುರ್ತುಸ್ಥಿತಿಯಲ್ಲಿ ಬೆಳೆದ ಭಯದ ವಾತಾವರಣದಂತೆ, ಜಬ್ಬರ್ ದಿನದಿಂದ ದಿನಾ ಬೆಳೆದಿದ್ದ. ಅವನ ಬಡಕಲು ಕೆನ್ನೆ ಕೆನೆಕಟ್ಟಿದವು. ಜೋಲಾಡುವ ಆಲದಮರದ ಬೇರಿನಂತಿದ್ದ ಅವನ ಖದ್ದರ್ ಟೈ ಹೋಗಿ, ಹಂದರಕ್ಕೆ ಹಬ್ಬಿದ ಮಲ್ಲಿಗೆ ಹೂಬಳ್ಳಿಯಂತಿರುವ 'ಜೋಡಿಯಾಕ್' ಬಂದಿತ್ತು. ಅವನ ನಡೆ–ನುಡಿ ಎಷ್ಟೊಂದು ತೂಕವಾಗಿದ್ದವೆಂದರೆ, ತೂಕ–ಆಡಿಸದೇ ಅವನು ಒಂದು ನಿರ್ಣಯವನ್ನೂ ಕೈಗೊಳ್ಳುವುದಿಲ್ಲ, ಎಂದು ಎಲ್ಲರೂ ಮಾತಾಡ ತೊಡಗಿದ್ದರು. ಅವನು ಆಫೀಸಿನಲ್ಲೂ ಸಮಾರಂಭಗಳಲ್ಲಿ ಕಣ್ಣು ಮುಚ್ಚಿ ತನ್ನ ತೂಕದ ವಿಚಾರಗಳನ್ನು ಹೊಂದಿಸಿಕೊಳ್ಳುವುದನ್ನು ಕಂಡ ಕೆಲವರು ತಪ್ಪು ತಿಳಿದು, ಅವನು ಯಾವಾಗಲೂ ತೂಕಡಿಸುತ್ತಾನೆ. ಎಂದು ಅಂದುಕೊಂಡುದರಲ್ಲಿ ಅರ್ಥವೇ ಇರಲಿಲ್ಲ. ಅವನ ನಡಿಗೆ–ನಡಿಗೆ ಏನು ಬಂತು, ಅವನೆಂದೂ ಕಾರುಬಿಟ್ಟು ಕೆಳಗಿಳಿದಿರಲೇ ಇಲ್ಲ– ಇತ್ತೀಚೆಗೆ ಕೊಂಡ ವಿಶ್ವವಿದ್ಯಾಲಯದ ಮರ್ಸೆಡಿಸ್ ಕಾರಿಗಿಂತಲೂ ಗಂಭೀರವಾಗಿತ್ತು!

ಅಧಿಕಾರದ ಅತ್ಯುನ್ನತ ಶಿಖರ ಮುಟ್ಟಿದರೂ ಜಬ್ಬರ್ ತಾನು ಕೊಟ್ಟ ಮಾತನ್ನು ಮಾತ್ರ ಮರೆತಿರಲಿಲ್ಲ–ಯಾವ ಅತಿಥಿ ಬಂದರೂ ಬಫೆ ಡಿನ್ನರ್ ಕೊಡುವುದನ್ನು ಮಾತ್ರ ನಿರ್ಲಕ್ಷಿಸಲಿಲ್ಲ. ಪ್ರೊಫೆಸರ್‌ಗಳೇನು ಮೂಕ ಪ್ರಾಣಿಗಳಲ್ಲ, ಅವರು ಬರೀ ಹೊಟ್ಟೆತುಂಬಿಸಿಕೊಳ್ಳಲು ಮಾತ್ರ ಇಂತಹ ಸಮಾರಂಭಗಳಿಗೆ ಬರುವುದಿಲ್ಲ–ಅವರು ನಿರಾತಂಕವಾಗಿ ಅತಿಥಿಯೊಡನೆ ಬೆರೆತು, ವಿಚಾರ ವಿನಿಮಯ ಮಾಡಿಕೊಳ್ಳಲಿ, ಎಂಬ ಉದ್ದೇಶದಿಂದಲೇ ಬಫೆ ಊಟದ ವ್ಯವಸ್ಥೆ ಮಾಡುತ್ತಿರುವುದಾಗಿ, ಅವನು ಎಲ್ಲ ಸಮಾರಂಭಗಳಲ್ಲಿ ಮರೆಯದೇ ಸಾರುತ್ತಿದ್ದ. ಉಳಿದೆಲ್ಲ ವಿಷಯಗಳಲ್ಲಿ ಬೇರೊಂದು ಬಗೆಯಲ್ಲಿದ್ದು ಊಟದ ವ್ಯವಸ್ಥೆಯಲ್ಲಿ ಮಾತ್ರ ತಂದ ಈ ಸುಧಾರಣೆಯಲ್ಲಿ ಏನೋ ಅಪಾಯ ಅಡಗಿದೆ. ಎಂಬ ಅನುಮಾನ ಪ್ರೊಫೆಸರ್‌ಗಳಲ್ಲೆಲ್ಲಾ ದಿನದಿಂದ ದಿನಕ್ಕೆ ಬೆಳೆಯುತ್ತಾ ಬಂತು.

ಹೊಸದಾಗಿ ಅಧಿಕಾರವಹಿಸಿಕೊಂಡಿದ್ದ, ಛಾನ್ಸಲರ್ ನಮ್ಮ ವಿಶ್ವವಿದ್ಯಾಲಯಕ್ಕೆ ಭೇಟಿಕೊಡುವರೆಂದು ತಿಳಿದಾಕ್ಷಣ, ಜಬ್ಬರ್ ನಮಗೆಲ್ಲ ಡಿನ್ನರ್ ಆಮಂತ್ರಣ ಕಳಿಸಿದ. ರಾತ್ರಿ ಏಳಕ್ಕೆ ನಾವೆಲ್ಲ ಹಾಜರಾದೆವು. ಒಬ್ಬರ ಮತ್ತೊಬ್ಬರು ನೋಡಬಾರದೆಂದು ಹಟತೊಟ್ಟಿರುವವರಂತೆ ಕೆಲವರು ಕಾರಿಡಾರ್‌ನ ಕಂಬಕ್ಕೆ ನಿಂತು, ಚಿಕ್ಕೆಗಳನ್ನೆಣಿಸತೊಡಗಿದರು. ಕಾರ್ಪೋರೇಷನ್ ರಸ್ತೆಯಲ್ಲಿ ಗುಳಿಬಿದ್ದಂತೆ ಕೆಲವರು ಅಲ್ಲಲ್ಲಿ ಸಣ್ಣ ದೊಡ್ಡ ಗುಂಪಾಗಿ ನಿಂತರು. ತುರ್ತು ಪರಿಸ್ಥಿತಿ, ಯುನಿವರ್ಸಿಟಿಯ ಆಡಳಿತ, ಜಬ್ಬರ್ ಮೇಲಿದ್ದ ಆರೋಪಗಳು, ಹೊಸ ಛಾನ್ಸಲರ್ ಅವರ ರಾಜಕೀಯ ಒಲವು, ನಗರದಲ್ಲಿ ನಡೆಯುತ್ತಿದ್ದ ಸಿನಿಮಾಗಳು, ದೂರನಿಂತವರ ಉಡುಪು–ಮೀಸೆ ತಲೆ ಬಾಚಿದ್ದ ವಿಧಾನ–ಎಲ್ಲದರ ಸಮೀಕ್ಷೆ ನಡೆದಿತ್ತು.

"ಜಬ್ಬರ್ ವೈಸ್‌ಛಾನ್ಸಲರು ಆದ ಮೇಲೆ ಯಾವ ಸುಧಾರಣೆಗಳನ್ನು ತರದಿದ್ರೂ ಊಟದ ವ್ಯವಸ್ಥೆ ಉತ್ತಮಗೊಳಿಸಿದಾನೆ ನೋಡಿ" ಎನ್ನುತ್ತಾ ಬಂದ ಪ್ರೊ|| ಗುಳ್ಳೇಗೌಡ.

ಊಟದ ಹಾಲಿಗೆ ಹೋಗಿ ಅಲ್ಲಿಟ್ಟಿದ್ದ ಪಚಡಿಯಿಂದ ಹಿಡಿದು ಕೋಳಿಯ ಕಿಚಡಿಯವರೆಗೂ ಒಂದು ಪಟ್ಟಿಮಾಡಿತಂದಿದ್ದ. ಹಿಂದಿನ ವೈಸ್ ಛಾನ್ಸಲರು ಪಬ್ಲಿಕ್ ಹಣದಿಂದ ಸೊಗಸಾದ ಊಟವನ್ನೂ ಹಾಕಿಸದ ಕಾರಣ, ಇಂದಿನ ವೈಸ್ ಛಾನ್ಸಲರ್ ಎಷ್ಟೋ ಪಾಲು ಉತ್ತಮವೆಂದು ತಿಳಿದವರ ಗುಂಪು ನಮ್ಮಲ್ಲಿತ್ತು. ಇದರ ನಾಯಕ ಪ್ರೊ|| ರಾಜ(ಕೀಯ) ರಾವ್.



ದೀಪಾವಳಿಯ ಹಾರ್ದಿಕ ಶುಭಾಶಯುಗಳು!!



24 ವರ್ಷಗಳ ಸುದೀರ್ಘ ಸೇವೆ

## ಕರ್ನಾಟಕದ ಏಕೈಕ ಬೃಹತ್ ಸ್ಟುಡಿಯೋ

# ಪ್ರೀಮಿಯರ್ ಸ್ಟುಡಿಯೋಸ್

ಜಯಲಕ್ಷ್ಮೀಪುರಂ

ಮೈಸೂರು-೧೨

## ನಿರ್ಮಾಪಕರಿಗೊಂದು ಸುಸಂಧಿ!

## ಪ್ರೀಮಿಯರ್ ಬಹುಮಾನ ಯೋಜನೆ!

| | ನಿರ್ಮಾಪಕರಿಗೆ | ಚಿತ್ರಕ್ಕೆ | ನಿರ್ದೇಶಕರಿಗೆ |
|---|---|---|---|
| ಪ್ರಥಮ ಬಹುಮಾನ | ರೂ. 25,000 | 10,000 | 10,000 |
| ದ್ವಿತೀಯ ಬಹುಮಾನ | " 15,000 | 5,000 | 5,000 |
| ತೃತೀಯ ಬಹುಮಾನ | " 10,000 | 2,500 | 2,500 |

ಇಂದಿನ ಅಧಿಕಾರಿಗಳನ್ನು ಗಮನವಿಟ್ಟು ನೋಡಿದರೆ, ಹಿಂದಿನ ವೈಸ್‌ಛಾನ್ಸಲರ್‌ಗಳು ಎಷ್ಟೇ ಪಟ್ಟು ದೊಡ್ಡವರಾಗಿ ಕಾಣುವುದು. ಎನ್ನುವ ಮತ್ತೊಂದು ಗುಂಪು ಇತ್ತು. ಇದರ ನಾಯಕ ಪ್ರೊ॥ ಹಾವೇರಿಸೆಟ್ಟಿ ಕುಲದಲ್ಲೂ, ಕುಶಲತೆಯಲ್ಲೂ ತಾನು ಎಷ್ಟೋ ಪಟ್ಟು ಶ್ರೇಷ್ಠನಾದರೆ ತನ್ನನ್ನು ವೈಸ್ ಛಾನ್ಸಲರ್ ಮಾಡದೇ ಜಬ್ಬರ್‌ನನ್ನು ಆ ಸ್ಥಳಕ್ಕೆ ನೇಮಕ ಮಾಡಿದ್ದನ್ನು ಕಂಡು ಮೂರ್ತಿ ಕೆಂಡವಾಗಿದ್ದ ಪ್ರೊ॥ ಕುರ್ಚಿಮಠ. ಗಾಯದ ಮೇಲೆ ಬರೆ ಎಳೆದಂತೆ–ಈ ಬಫ್ಫೇ ಡಿನ್ನರ್ ಬೇರೆ.

"ಬಫ್ಫೇ ಅಂತೆ ಬಫ್ಫೇ– ತಿರುಕರು ತಿಂದ ಹಾಗೆ ಆರಿದ ಅನ್ನವ ತಿರುಗಾಡ್ತಾ ತಿನ್ನೋದಕ್ಕೆ ತಾನೇ ಇದು. ನಮ್ಮ ಸಂಪ್ರದಾಯಕ್ಕೆ ಒಗ್ಗೀತೇ ಇದು?" ಅಂದ ಪ್ರೊ॥ ಕುರ್ಚಿಮಠ.

ಇಟ್ಟ ಅಡುಗೆ ಆರುವುದೆಂಬ ತವಕ. ಟೇಬಲ್ ಸುತ್ತಲೂ ನುಗ್ಗಿ ಗಬಗಬ ಬಳಸಿಕೊಳ್ಳುವ ಅಡಚಣೆ. ಕತ್ತರಿ, ಚಾಕೂ, ಕೈ ವಸ್ತ್ರ, ತಾಟು; ಎರಡೇ ಕೈಯಿಂದ ನಿಂತುಕೊಂಡೇ ನಿಭಾಯಿಸಬೇಕಲ್ಲ ಎಂಬ ಸಂಕಟ. ಏನು ತಟ್ಟೆಯಲ್ಲಿ ಹಾಕಿಕೊಂಡಿರುವ ಎಂದು ನೋಡುವ ನೆಪದಿಂದ ಬರುತ್ತಿದ್ದವರಿಂದ ತಪ್ಪಿಸಿಕೊಳ್ಳಲಾಗದ ತೊಂದರೆ– ಇವೆಲ್ಲ ಪ್ರೊ॥ ಕುರ್ಚಿಮಠರನ್ನಾಗಲೇ ಕಾಡತೊಡಗಿದ್ದವು

ಅಷ್ಟರಲ್ಲೇ ಕುಲಪತಿಗಳ ಕಾರು ಬಂತು. ಆಗಸ್ಟ್ ಗಿಸರಂದು ಧ್ವಜ ಏರಿಸಿದ ಮೇಲೆ ಪೆಪ್ಪರ್ ಮಿಂಟ್‌ಗಾಗಿ ಸಾಲು ನಿಲ್ಲುವ ಪ್ರೈಮರಿಶಾಲೆಯ ಹುಡುಗರಂತೆ ನಾವೂ ಸಾಲು ನಿಂತು ಅವರನ್ನು ಬರಮಾಡಿಕೊಂಡೆವು. ಅವರ ಬೆನ್ನು ಹಿಡಿದು ಹಾಲ್ ಸೇರಿ, ಮತ್ತೆ, ನಮ್ಮ ನಮ್ಮ ಗುಂಪುಮಾಡಿಕೊಂಡು, ಗುಜುಗುಜು ಧ್ವನಿಯಲ್ಲಿ ಮೊದಲಿನ ಮಾತು ಮುಂದುವರಿಸಿದೆವು.

ಹಾಲಿನ ಮಧ್ಯೆ ಎರಡು ದೊಡ್ಡ ಟೇಬಲ್‌ಗಳ ಮೇಲೆ ತಿನ್ನುವುದು, ಉಣ್ಣುವುದನ್ನೆಲ್ಲಾ ಇಡಲಾಗಿತ್ತು. ಕೆಲವರು ಅಲ್ಲಿದ್ದ ತಟ್ಟೆ–ತಪ್ಪೇಲಿಗಳ ಮೇಲೆ ದೃಷ್ಟಿ ನೆಟ್ಟು, ಮೌನವಾಗಿ ತಪಸ್ಸು ಮಾಡತೊಡಗಿದರು.

"ಡಿನ್ನರ್ ಈಜ್ ರೆಡಿ" ಎಂದು ಕೀವಿಯಿಂದ ವೈಸ್‌ಛಾನ್ಸಲರ್ ಪಿ.ಎ. ಅಂದಾಗ ಗುಜುಗುಜು ನಿಂತು ಒಮ್ಮೆಲೇ ಮೌನವಾವರಿಸಿತು. ಆದರೆ ಯಾರೂ ಹೆಜ್ಜೆ ಮುಂದಿಡದೇ ಜಬ್ಬರನನ್ನೂ ಛಾನ್ಸಲರ್‌ನನ್ನೂ ನೋಡುತ್ತಾ ನಿಂತರು.

ಉಭಯ ಕುಶಲೋಪರಿಯಲ್ಲಿ ತೊಡಗಿದ್ದ ಛಾನ್ಸಲರ್, ಎಲ್ಲರೂ ಮೌನವಾಗಿದ್ದನ್ನು ಕಂಡು ಹಿಂತಿರುಗಿ ನಮ್ಮೆಡೆ ನೋಡಿದರು–ಬಹುಶಃ 'ಆಟ್ಯಾಕ್' ಎಂದು ಕಮ್ಯಾಂಡರ್ ಒದರಬೇಕೆಂದು ನಿಂತವರಂತೆ ನಾವು ಕಂಡಿರಲು ಸಾಕು.

ಸ್ವಾತಂತ್ರ್ಯ, ಸೌಜನ್ಯ, ಸಂಶೋಧನಾ–ಸಲಕರಣೆ –ಇವನ್ನಾವನ್ನು ಕಿತ್ತುಕೊಂಡರೂ ತಾಳ್ಮೆಗೆಡದ ಪ್ರೊಫೆಸರ್‌ಗಳು, ಸಿದ್ಧವಾಗಿ ನಿಂತ ಊಟ ಮಾಡಲು ಅನುವುಮಾಡಿಕೊಡದಿದ್ದರೆ ಆಂದೋಲನವನ್ನೇ ನಡೆಸಬಹುದೆಂದು ಅರಿತಿದ್ದ ಜಬ್ಬರ್– "ಬನ್ನಿ. ಬನ್ನಿ. ಹೆಲ್ಪ್ ಇವರ್ ಸೆಲ್ಫ್" ಅಂದ.

ಛಾನ್ಸಲರ್ ಮುನ್ನೆಚ್ಚೆ ಇಡುವ ಸೂಚನೆ ಬಂದೊಡನೆ ನಾವೆಲ್ಲ ಒಂದೇ ಸಾಲಿನಲ್ಲಿ ಮುನ್ನುಗ್ಗಿ ಟೇಬಲ್ ಸೇರಿದೆವು. ಕೈಯಲ್ಲಿ ತಟ್ಟೆ ಹಿಡಿದು, ಎಲ್ಲಾ ಮೂಲೆಯಿಂದ, ಮೇಲೆ ಮೇಲೆ ಬಿದ್ದವು– ಮ್ಯಾಟ್ನಿ ಸಿನಿಮಾಕೆ ಮೊದಲೇ ಸಾಲಿನ ಟಿಕೆಟ್‌ಕೊಳ್ಳುವವರಂತೆ.

ಕೆಲವರು ತಟ್ಟೆಯ ಮೇಲಿಟ್ಟ ಕೈವಸ್ತ್ರ ಚಾಕು–ಕತ್ತರಿ ತೆಗೆದು ಮೂಲೆಗೆ ಎಸೆದರು. ಒಮ್ಮೆಲೇ ಮೇಲೇರಿ ಬಂದವರನ್ನು ಕಂಡು ಭಯಪಟ್ಟಂತೆ– ಅಡುಗೆ ಆಳುಗಳೂ, ನೀಡುವವರೂ, ಹಿನ್ನೆಜ್ಜೆ ಇಟ್ಟರು.

ಛಾನ್ಸಲರ್ ಹಿಂದೆಯೇ ಬಿದ್ದರು. ಅವರ ಪಕ್ಕದಲ್ಲಿದ್ದವರನ್ನು ಕಂಡು ಹುಸಿ ನಗುತ್ತಾ, "ಪ್ಲೀಜ್, ಗೋ ಅಹೆಡ್" ಅಂದರು.

ತಟ್ಟೆಯನ್ನು ತುಂಬಿಕೊಂಡು ಒಬ್ಬಬ್ಬರೇ ಹಿಂದಕ್ಕೆ ಸರಿಯತೊಡಗಿದರು. ಅವರಲ್ಲೆಲ್ಲ ಮೊದಲು ಹೊರಬಂದವರು ಪ್ರೋ. ಹಾವೇರಿ ಸೆಟ್ಟರು. ಸಕ್ಕರೆ ರೋಗದಿಂದ ಬಳಲುತ್ತಿದ್ದ ಅವರ ತಟ್ಟೆಯನ್ನು ಒಂದೇ ಒಂದು ಬಗೆಯ ಆಹಾರ ಅಲಂಕರಿಸಿತ್ತು– ಕೋಳಿ ಮಸಾಲೆ.

"ಈ ಡಿನ್ನರಿಗೆ ಆರೇ ಕೋಳಿಗಳನ್ನು ಕಟ್ ಮಾಡಿದ್ದಾರೆ", ಅಂದ ಪ್ರೊ॥ ಸೆಟ್ಟಿ. ಆ ಲೆಖ್ಖ ಅವರಿಗೆ ಹೇಗೆ ಸಿಕ್ಕಿತೆಂದು ಕೇಳುವ ಪ್ರಶ್ನೆಯೇ ಇರಲಿಲ್ಲ; ಅವರ ತಟ್ಟೆಯನ್ನು ಅಲಂಕರಿಸಿದ್ದ ಬರೀ ಹನ್ನೆರಡು ಕಾಲುಗಳು ಈ ಸತ್ಯವನ್ನು ಸಾರುತ್ತಿದ್ದವು.

ನಮ್ಮ ದೃಷ್ಟಿ ಅವನ ತಟ್ಟೆಯೆಡೆಗೆ ನೆಟ್ಟದ್ದನ್ನು ನೋಡಿ–"ದಿನಾ ಮನೆಯಲ್ಲಿ ರೊಟ್ಟಿ ಪಲ್ಯ ತಿನ್ನೋದು ಇದ್ದೇ ಇದೆ– ಇವತ್ತು ಬದಲಿಯಾಗಲಿ ಎಂದು…" ಅಂದ.

ಕೋಳಿಯನ್ನು ಕಂಡೇ ಕೆಂಡವಾದ ಪ್ರೊ॥ ಸ್ವಾಮಿ, ದೂರದಿಂದಲೇ ಮುಖ ಮುರಿದರು.

"ಸ್ವಾಮಿಗಳೇ ನಿಮಗಿಲ್ಲಿ ಸರಿ ಬರುವುದಿಲ್ಲ ಬನ್ನಿ. ನಾವೆಲ್ಲ ನಿಮಗೆ ಬೇಕಾದ್ದನ್ನು ಒಂದು ತಾಟನಲ್ಲಿ ಹಾಕಿ ತರುವೆ–ನೀವು ಆ ಗೋಡೆಯ ಬಳಿ ಇರುವ ಕುರ್ಚಿಯ ಮೇಲೆ ಕುಳಿತುಕೊಳ್ಳಿ", ಅಂದ ರಾಜ (ಕೀಯು)ರಾವ್.

ಸ್ವಾಮಿ ಸೀದಾ ಗೋಡೆಗೆ ಹೋಗಿ, ಮೂಲೆಯಲ್ಲಿದ್ದ ಒಂದು ಕುರ್ಚಿಯ ಮೇಲೆ ಕುಳಿತರು. ಮತ್ತೊಂದು ಕುರ್ಚಿಯನ್ನು ಎಳೆದು ಮುಂದಿಟ್ಟುಕೊಂಡು, ಅದನ್ನೇ ಟೇಬಲ್ ಮಾಡಿಕೊಂಡು ರಾಜ(ಕೀಯು)ರಾವ್‌ಗಾಗಿ ಕಾದರು.

ತುಂಬಿ ತುಳುಕುತ್ತಿದ್ದ ಎರಡು ತಟ್ಟೆ ಹಿಡಿದುಕೊಂಡು ಗದ್ದಲದಿಂದ ಹೊರಬಂದ ರಾವ್, ಸ್ವಾಮಿಗಳ ಬಳಿಸಾಗಿ, ಒಂದು ತಟ್ಟೆಯನ್ನು ಅವರ ಕೈಗಿತ್ತರು.

ಸ್ವಾಮಿಗಳನ್ನು ಅನುಸರಿಸಿ, ಪ್ರೊ॥ ಕುರ್ಚಿಮಠ, ಉಳ್ಳಾಗಡ್ಡಿ, ತಗ್ಗಿನ ಮನೆ, ಮುಂತಾದವರೂ ಮಬ್ಬುಕತ್ತಲಿರುವ ಒಂದು ಮೂಲೆ ಹಿಡಿದು ಕುಳಿತರು.

ಹಾಲಿನಲ್ಲೆಲ್ಲಾ ಸುತ್ತಾಡಿ ಯಾರ ಯಾರ ತಟ್ಟೆಯಲ್ಲಿ ಏನೇನಿದೆ, ಛಾನ್ಸಲರ್–ಜಬ್ಬರಿಗೂ ಏನು ಮಾತು ನಡೆದಿದೆ, ಡಿನ್ನರ್ ಕಾಂಟ್ರಾಕ್ಟ್ ಯಾರಿಗೆ ಕೊಡಲಾಗಿದೆ, ಮೊದಲಾದ ವಿಷಯಗಳಿಗೆ ಬಗ್ಗೆ ಸುದ್ದಿ ಸಂಗ್ರಹಿಸಿಕೊಂಡು ಮತ್ತೆ ನಮ್ಮೆಡೆಗೆ ಬಂದ ಪ್ರೊ॥ ಹಾವೇರಿ ಸೆಟ್ಟಿ.

ಹನ್ನೆರಡು ಕೋಳಿಕಾಲುಗಳಲ್ಲಿ ಆರನ್ನಾಗಲೇ ಅವನು ಮುಗಿಸಿದ್ದ.

"ಒಂದು ಇಂಟರೆಸ್ಟಿಂಗ್ ವಿಷಯ—ಮೂಲೆ ಹಿಡಿದುಕೊಂಡು, ಮಬ್ಬು ಬೆಳಕಿನಲ್ಲಿ ಕುಳಿತಿದ್ದಾರಲ್ಲ ಆ ಹೆವಿವೇಟ್‌ಗಳೆಲ್ಲ..." ಎಂದು ಮುಂದುವರಿಯು ವದರಲ್ಲಿಯೇ ನಾನಂದೆ.

"ಪಾಪ, ಅವರಿಗೆ ನಿಂತು ತಿರುಗಾಡುತ್ತಾ ಊಟ ಮಾಡುವ ಅಭ್ಯಾಸ ಇಲ್ಲ..."

"ಹೋ! ಮಹಾ! ನಾವೆಲ್ಲ ಬಫೇ ತಿನ್ನಾನೇ ಬೆಳೆದ್ವೇನು? ಅದರಲ್ಲಿ ಅವರ ಸೀಕ್ರೆಟ್ ಮತ್ತೊಂದಿದೆ" ಅಂದ.

ಗಾಸಿಪ್ ಪ್ರವೀಣನಾದ ಪ್ರೊ॥ ಹಾವೇರಿಸೆಟ್ಟಿ ಹೇಳುವುದನ್ನೆಲ್ಲ ನಂಬಲು ಸಾಧ್ಯವಿರದಿದ್ದರೂ. ಅವನು ನಿಷ್ಠುರವಾಗಿ ಮಾತನಾಡುವುದರಲ್ಲಿ ಹತ್ತು ಪರ್ಸೆಂಟ್ ಸತ್ಯಾಂಶ ಇರುವುದನ್ನು ಎಲ್ಲರೂ ಬಲ್ಲರು.

ನಮ್ಮ ಆಸಕ್ತಿಯನ್ನು ಕೆರಳಿಸಿ, ಮತ್ತೊಂದು ಗುಂಪಿನೆಡೆಗೆ ಸಾಗುತ್ತಿದ್ದ ಪ್ರೊ॥ ಸೆಟ್ಟಿಯ ಕೋಟು ಹಿಡಿದು ನಾನು ನಿಲ್ಲಿಸಿದೆ.

"ನಮಗಿಷ್ಟು ಹೇಳಿ—ಆ ಸೀಕ್ರೆಟ್"ಅಂದೆ.

"ಹೇಳುವುದೇನಿದೆ. ಅವರ ತಾಟಿನಲ್ಲಿರೋ ಗುಡ್ಡೆ ಅನ್ನದ್ದೆಂದು ನಾನು ತಿಳಿದಿದ್ದೆ. ಸಮೀಪ ಹೋದಾಗ ಗೊತ್ತಾಯ್ತು ಅದು ಕುರಿ ಮಾಂಸದ ಗೋರಿ."

"ಅಂದರೆ, ಪ್ರೊ॥ ಸ್ವಾಮಿ, ಕುರ್ಚಿಮಠ, ಉಳ್ಳಾಗಡ್ಡಿ ..."

"ಎಲ್ಲಾ ಸ್ವಾಮೀ, ಮಠ, ಗಡ್ಡಿನೂ. ಯಾರಾದ್ರೂ ನೋಡ್‌ಬಹುದೂ ಅಂತಾ ಮೂಲೆ ಹಿಡಿದು ಮುಂದೆ ಕುರ್ಚಿ ಇಟ್ಕೊಂಡು ಕುಂತಾರ" ಅಂದ.

ಮೇಯಲು ಬಿಟ್ಟ ದನಗಳನ್ನು ಮೂಲೆಯಲ್ಲಿ ನಿಂತೇ ನೋಡುತ್ತಿದ್ದಂತೆ ಜಬ್ಬರ್ ನಮ್ಮನ್ನು ಕಡೆ ಗಣ್ಣಿನಿಂದ ನೋಡುತ್ತಿದ್ದ. ಛಾನ್ಸಲರ್ ಹೇಳುವ ಮಾತಿಗೆ ತಲೆಹಾಕುತ್ತಾ, ಆಗಾಗ್ಗೆ ಹಲ್ಲುಗಿಂಜುತ್ತಾ ಟೇಬಲ್ ಖಾಲಿಯಾಗುತ್ತಿರುವುದನ್ನೂ, ಗದ್ದಲ ಹೆಚ್ಚು ಆಗುತ್ತಿರುವುದನ್ನೂ, ಅವನು ಕಡೆಗಾಣಿಸಿರಲಿಲ್ಲ.

ಛಾನ್ಸಲರ್‌ಸಾಹೇಬರು ತಟ್ಟೆಯನ್ನು ಕೈಗೆತ್ತಿಕೊಂಡಿರಲಿಲ್ಲ—ರಾತ್ರಿ ಅವರು ಬರಿ ಹಾಲು—ಹಣ್ಣಿನಲ್ಲಿ ತೃಪ್ತಿಗೊಳ್ಳುವರಂತೆ. ಅವರಿಂದ ತಪ್ಪಿಸಿಕೊಂಡು ಆದಷ್ಟು ದೂರ ಸಾಗಲು ಪ್ರಯತ ಪಡುವಂತೆ ಜಬ್ಬರ್ ಚಡಪಡಿಸುತ್ತಿದ್ದ.

ಪ್ರೊ॥ ಹಾವೇರಿಸೆಟ್ಟಿ ಅಷ್ಟರಲ್ಲೇ ಮತ್ತೊಂದು ಸುದ್ದಿ ಹೊತ್ತು ತಂದ: ತುರ್ತು ಪರಿಸ್ಥಿತಿಯಿಂದ ಛಾನ್ಸಲರ್ ಮಾತು ಜಬ್ಬರ್‌ಮಿಯಾರ ಮೇಲಿದ್ದ ಅಪವಾದದ ಬಗ್ಗೆ ತಿರುಗಿತ್ತಂತೆ. ತುರ್ತುಕಾಲದಲ್ಲಿ ತನ್ನ ಸಹೋದ್ಯೋಗಿಗಳನ್ನೆಲ್ಲ ನಿರ್ಲಕ್ಷಿಸಿ, ನಿರಂಕುಶನಾಗಿ ಆಡಳಿತೆಯನ್ನು ಸಾಗಿಸಿದ ಬಗ್ಗೆ ಒಂದೆರಡು ಮಾರ್ಮಿಕ ಪ್ರಶ್ನೆಗಳನ್ನವರು ಕೇಳಿದ್ದರಂತೆ.

ಈ ಸುದ್ದಿಯನ್ನು ಉಸುರುತ್ತಿದ್ದಾಗಲೇ, ಜಬ್ಬರಾ ನಮ್ಮೆಡೆಗೆ ಬಂದು "ಸುಮ್ಮನೇ ಒಂದೇ ಕಡೆ ಏಕೆ. ನಿಂತಿರುವಿರಿ—ಹೋಗಿ ಛಾನ್ಸಲರ್ ಜೊತೆ ಮಾತಾಡಿ" ಅನ್ನುತ್ತಾ ಮುಂದೆ ಸಾಗಿದ.

"ನಾನು ಹೇಳಿದ್ದು ನಿಜ ಹೌದೋ—ಅಲ್ವೋ? ಸಾಹೇಬ್ರಿಗೆ ಸಹಾಯ ಬೇಕಾಗಿದೆ, ಹೋಗಿ ನೀವು ಛಾನ್ಸಲರ್ ಜೊತೆ ಮಾತಾಡಿ" ಅಂದ ಪ್ರೊ॥ ಸೆಟ್ಟಿ.

"ನಮ್ದೇನಿದೆ ಅವ್ರೊಡ್ನೇ ಮಾತಾಡೋದು? ಮಾತಾಡಿ ಬರೋದಾದ್ರೂ ಏನು?" ಅಂದ ಗುಳ್ಳೇಗೌಡ. ಜಬ್ಬರು ಒಂದು ಗುಂಪಿನಿಂದ ಇನ್ನೊಂದು ಗುಂಪಿಗೆ ಹೋಗಿ ಎಷ್ಟು ಸೂಚನೆ ಕೊಟ್ಟರೂ ಯಾರೂ ತಮ್ಮ ತಮ್ಮ ಸ್ಥಾನದಿಂದ ಕದಲಲಿಲ್ಲ.

ಎಲ್ಲರೂ ತನ್ನ ಬಗ್ಗೆಯೇ ಟೀಕೆ ಮಾಡುತ್ತಾರೆ- ಎಂದು ಅನುಮಾನ ಬಂದಿರಬೇಕು. ಜಬ್ಬರ್‌ಗೆ.

ಅವನೇ ಛಾನ್ಸಲರ್ ಜೊತೆ ಸಾಗಿ—"ಸಾರ್, ದಿ ಸ್ಟಾಫ್ ಈಜ್ ಇಂಟರೆಸ್ಟೆಡ್ ಇನ್ ಮೀಟಿಂಗ್ ಯೂ" ಅಂದ.

"ವಿತ್ ಪ್ಲೆಜರ್..." ಎನುತ್ತಾ, ಛಾನ್ಸಲರ್ ಮುಂದೆ ಬಂದರು.

ನೇರವಾಗಿ ನಮ್ಮ ಪಕ್ಕದಲ್ಲಿದ್ದ ಗುಂಪಿಗೆ ಬಂದು— "ಇವರು ರಾಜಾರಾವ್. ಮನುವಿನ ಬಗ್ಗೆ ಅದ್ಭುತ ಪ್ರಬಂಧ ಬರೆದು ಪಿ.ಎಚ್.ಡಿ ಪಡೆದಿದ್ದಾರೆ"ಎಂದು ರಾಜ(ಕೀಯ)ರಾವ್‌ರ ಪರಿಚಯಮಾಡಿಕೊಟ್ಟನು.

ಕೆಂಡದ ಮೇಲೆ ಹಾಕಿದ ನಾನ್‌ರೋಟಿ ಉಬ್ಬಿದಂತೆ ರಾಜ(ಕೀಯ)ರಾವ್ ಹೆಮ್ಮೆಯಿಂದ ಉಬ್ಬಿನಿಂತ.

"ಹಾಗಾದ್ರೆ ಅವರ ಪುಸ್ತಕಾ ನಾನು ಓದಬೇಕು. ಮಾಡರ್ನ್ ಸೊಸೈಟಿಗೂ ಮನುವಿಗೂ ಇರೋ ಸಂಬಂಧದ ಬಗ್ಗೆ ನನಗೆ ಬಹಳಾ ಆಸಕ್ತಿ ಇದೆ. ಬಹುಶಃ ನಿಮ್ಮ ಪುಸ್ತಕದಿಂದ ನಾನು ಕಲಿಯಬೇಕಾದದ್ದು ಸಾಕಷ್ಟು ಇರಬೇಕು" ಎಂದು ಒಂದೇ ಉಸುರಿನಲ್ಲಿ ಅಂದರು. ಸಿಕ್ಕಾಪಟ್ಟೆ 'ಮನು'ವನ್ನು ಹೊಗಳಿ. ಗುರು—ಪುರೋಹಿತರನ್ನೆಲ್ಲ ಒಲಿಸಿಕೊಂಡಿದ್ದ ರಾಜ(ಕೀಯ)ರಾವ್‌ನ ಪ್ರಬಂಧ ಇನ್ನೂ ಕೈ ಬರಹದಲ್ಲೇ ಇತ್ತು— ಅದರಲ್ಲಿ ಛಾನ್ಸಲರ್ ಕೇಳಿದ ರೆಲೆವೆನ್ಸ್ ಬಗ್ಗೆ ಒಂದು ಅಕ್ಷರವೂ ಇರದಿದ್ದನ್ನು ತಿಳಿದಿದ್ದ ಪ್ರೊ॥ ರಾವ್ ಚೀಪಿ ಎಸೆದ ನುಗ್ಗೀಕಾಯಿಯಂತೆ ಕಂಡ.

"ಅದಿರ್‍ಲಿ ತುರ್ತು ಪರಿಸ್ಥಿತಿಯಲ್ಲಿ ರಾಜ್ಯಶಾಸ್ತ್ರದ ಪ್ರಾಧ್ಯಾಪಕರಾದ ನೀವೇನು ಮಾಡಿದ್ರೀ ಅನ್ನೋದನ್ನು ತಿಳಿದುಕೊಳ್ಳೋಕ್ಕೆ ನನಗೆ ತುಂಬಾ ಆತುರ" ಅಂದು ನೇರವಾಗಿ, ಛಾನ್ಸಲರ್ ಕೇಳಿಬಿಟ್ಟರು.

ತಟ್ಟೆ ತುಂಬಾ ತಿಳಿಸಾರು ಅನ್ನ ಕಿವಿಚಿ, ಅದನ್ನು ಬೊಗಸೆಯಲ್ಲಿ ಹಿಡಿದು ಇನ್ನೇನು ಬಾಯಿಗೆ ಒಯ್ಯುವ ಸ್ಥಿತಿಯಲ್ಲಿದ್ದ ರಾಜ(ಕೀಯ)ರಾವ್, ಒಮ್ಮೆಲೇ ಗಾಳಿಯಲ್ಲಿ ಕೈ ಮಾಡಿ "ನಮ್ಮ ವೈಸ್ ಛಾನ್ಸಲರ್ ಏನೇನು ಹೇಳಿದ್ರೋ ಅದನ್ನೆಲ್ಲ ಮಾಡಿದ್ವೀ ಸಾರ್" ಅಂದರು. ಪ್ರೊ॥ ರಾಜ(ಕೀಯ)ರಾವ್ ಕೊಡವಿದ ತಿಳಿಸಾರು, ಛಾನ್ಸಲರ್ ಹಾಕಿಕೊಂಡಿದ್ದ ಕೆಂದುಬಣ್ಣದ ನೆಹರೂ ಕೋಟಿನ ತುಂಬಾ ಬಿದ್ದಿತು. ಅವರು ಜಬ್ಬರ್ ಮುಖವನ್ನೂ—ಜಬ್ಬರ್ ಅವರ ಮುಖವನ್ನೂ ನೋಡುತ್ತಾ ಕ್ಷಣಕಾಲ ಮೌನವಾಗಿ ನಿಂತರು.

ಅವರ ಮೌನ ಮುರಿಯುವ ಪ್ರಯತ್ನದಿಂದ— "ನೀವು ಸ್ವಲ್ಪ ತಿಳೀಸಾರನ್ನಾದರೂ ಕುಡೀಬೇಕು ಸಾರ್. ದಕ್ಷಿಣದ ತಿಳೀಸಾರು ಬಹಳಾ ರುಚಿ. ಇವತ್ತಿನ ಸಾರು ತುಂಬಾ ಸೊಗಸಾಗಿದೆ—ಎಲ್ಲಾ ಕ್ರೆಡಿಟ್ಟೂ ನಮ್ಮ ವೈಸ್ ಛಾನ್ಸಲರ್‌ಗೇ ಹೋಗ್ಬೇಕು" ಅಂದ. ರಾಜ(ಕೀಯ)ರಾವ್, ಜಬ್ಬರ್‌ನ ಇಮೇಜ್ ಬೆಳೆಸಲು.

* * *

ಮರುದಿನ ಛಾನ್ಸಲರ್ ಭೇಟಿಯ ಬಗ್ಗೆ ಸ್ಥಳೀಯ ಪತ್ರಿಕೆಯಲ್ಲಿ ವರದಿಯಾಗಿತ್ತು. ಬಂಗಾಲ್‌ದಿಂದ ದಕ್ಷಿಣಕ್ಕೆ ಮೊದಲಬಾರಿಗೆ ಬಂದ ಅವರು ವಿಶ್ವವಿದ್ಯಾಲಯದ ಆವಾರದ, ಪರಿಸರ ಕಂಡು ಬೆರಗಾಗಿದ್ದರಂತೆ. ಸಂಜೆ ವಿದ್ವಾಂಸ್ಮಣಗಳೊಡನೆ ಅವರು ಕಳೆದ ಕ್ಷಣಗಳನ್ನು ಅವರು ಜೀವನ ಪರ್ಯಂತ ನೆನಪಿಡುವರಂತೆ. "ಇದೊಂದು ಅದ್ಭುತ ಕೇಂದ್ರ. ಅಸಮಾನ್ಯ ಪಂಡಿತರ ಸಮೂಹ. ನಾನಿನ್ನೂ ಇಲ್ಲಿ 'ನೋಡ' ಬೇಕಾದ್ದು ಬಹಳಷ್ಟು ಇದೆ", ಎಂದು ವರದಿಗಾರರಿಗೆ ಹೇಳುತ್ತಾ ಛಾನ್ಸಲರ್ ಕಾರು ಹತ್ತಿದರಂತೆ.

ಪೂರ್ವಜರು ಎಲ್ಲಿಂದ ಎಲ್ಲಿಗೆ
ನೆಗೆದ ನೆನಪಿನ ನವ ಮ್ಯ ಹತ್ತಿದೆ
ಏಂದುಳ ಗವಿಯಲ್ಲಿ ಮನೆಮಾಡಿ
ಕೂತ ಕತ್ತಲೆಗಿನ್ನೂ ಭಯಂದರ್ಥ ನಿಂತಿದೆ
ಒರಟು ಕಲ್ಲಿನ ಈಟಿ ಬಡಿದು
ಹೃದಯಂಗಳ ಬೇಟೆ ನಡೆದು
ಹಸೀ ಹಸೀ ಮಂಕ್ಕಿ
ಈಗಲೂ
ಬೆಂಕಿ–ಬೆಳಕು ಇದೇ ತಾನೇ ಮೊಳೆತ ಬೆರಗು.
ಎದೆಯಲ್ಲಿ ಸುಟ್ಟಗಾಯ
ಕೈ ಕೊಬ್ಬಿನದೇ ಲೇಪ
ಗುಡಿಸಿಲಿನ ಆಚೆ ನೆಲವೊಡೆದ್ದ ಪೈರು
ಬದುಕಲ್ಲಿ ಹಸಿರು ಚಿಗುರು,




ಮುತ್ತಜ್ಜನ ಹಲುದಂಗಿಗೆ [illegible]ಯಂತೆ
ನನ್ನ ಒಸಡು
ತಾತ ಕಲಿತದ್ದೆಲ್ಲ ನನ್ನ ನರಗಳಿಗೆ ಪಾಠ
ಅಜ್ಜಿ ಎಡವಿದ್ದಕ್ಕೆ
ಮೊಮ್ಮಗಳು ಕುಂಟು.
ಅಪ್ಪ ಆಡಿದ ಆಟ ಮರೆಯಾಗಿ
ಬೆನ್ನ ಹೊರೆಯಾಗಿ
ಅಮ್ಮ ನರಳಿದ್ದಕ್ಕೆ ನನ್ನ ಹುಟ್ಟು.
ಹೀಗೆ ಅದೆಂದೋ ಇಟ್ಟ ಮನಸಮೊಟ್ಟೆಗೆ
ಕಾಲ ಕಾವುಕೊಟ್ಟೂ
ಕೊಟ್ಟೂ
ನಿನ್ನ ವಯಸ್ಸೆಷ್ಟು? ಎಂದು
ಕೇಳಿದರೀಗ ಯಾರಿಗೆ
ತಾನೇ ಗೊತ್ತು!

ಎನ್ ವಿ ಭಾಗ್ಯಲಕ್ಷ್ಮಿ




# ಸ್ವಸ್ತಿಕ್
# ಪರ್ಫ್ಯೂಮ್ಡ್
# ಕ್ಯಾಸ್ಟರ್ ಹೇರ್ ಆಯಿಲ್

ತಲೆಗೂದಲನ್ನು ಸೊಂಪಾಗಿ, ಆರೋಗ್ಯವಂತವಾಗಿ
ಮತ್ತು ಕಾಂತಿಯುತವಾಗಿಡುತ್ತದೆ.



ಸ್ವಸ್ತಿಕ್ ಪರ್ಫ್ಯೂಮ್ಡ್ ಕ್ಯಾಸ್ಟರ್ ಹೇರ್ ಆಯಿಲ್ ನಿಮ್ಮ ತಲೆಗೂದಲನ್ನು ದಿನವಿಡೀ ಒಪ್ಪ ಓರಣವಾಗಿ ಇಡುವ ಕೂದಲೆಣ್ಣೆಯಾಗಿದ್ದು ನಿಮ್ಮ ಕುಟುಂಬದವರೆಲ್ಲ ಇದನ್ನು ಮೆಚ್ಚುತ್ತಾರೆ. ಇಂದೇ ಒಂದು ಬಾಟಲಿ ಖರೀದಿ ಮಾಡಿರಿ.

ಸ್ವಸ್ತಿಕ್ ಹೌಸ್‌ಹೋಲ್ಡ್
ಅಂಡ್ ಇಂಡಸ್ಟ್ರಿಯಲ್
ಪ್ರಾಡಕ್ಟ್ಸ್ ಲಿಮಿಟೆಡ್

# ದೀಪಾವಳಿ:

## ಈ ಹಬ್ಬ ಎಷ್ಟು ಅರ್ಥಪೂರ್ಣ?

ಜಿ. ಪಿ. ಬಸವರಾಜು

ಪಟಾಕಿಯ ಸದ್ದಿನೊಂದಿಗೆ ದೀಪಗಳ ಬೆಳಕಿನೊಂದಿಗೆ ಬರುವ ಹಬ್ಬ–ದೀಪಾವಳಿ.

ಎಲ್ಲ ದುಷ್ಟ ಶಕ್ತಿಗಳ ಪ್ರತಿರೂಪವಾದ ನರಕಾಸುರನನ್ನು ಶ್ರೀ ಕೃಷ್ಣ ಪರಮಾತ್ಮ ಸಂಹರಿಸಿದ. ಅದಕ್ಕೆ ಈ ಹಬ್ಬ–ಇದು ಪುರಾಣ ಒದಗಿಸಿ ಕೊಟ್ಟಿರುವ ಮಾಹಿತಿ.

ಉಪನಿಷತ್ತಿನ–"ತಮದಿಂದ ಜ್ಯೋತಿಯೆಡೆಗೆ, ಅಜ್ಞಾನದಿಂದ ಜ್ಞಾನದೆಡೆಗೆ, ಮೃತ್ಯುವಿನಿಂದ ಅಮೃತತ್ವದೆಡೆಗೆ" ಈ ವಾಕ್ಯಗಳನ್ನು ಹೇಳಿ ದೀಪಾವಳಿಯ 'ಬೆಳಕಿ'ಗೆ ಈ ಸಾಂಕೇತಿಕ ಮಹತ್ವವನ್ನೂ ಕೊಡುತ್ತಾರೆ.

### ಹಿರಿಯಾಸೆ

ಮನೆ ಮನೆಗಳಲ್ಲಿ ಬೆಳಗುವ ಲಕ್ಷಲಕ್ಷ ದೀಪಗಳ ಬೆಳಕಿನಲ್ಲಿ ನಮ್ಮ–ನಮ್ಮ ಹೃದಯಗಳ ಬಾಗಿಲ ತೆರೆದು ಅಲ್ಲಿ ಅಡಗಿರುವ ನರಕಾಸುರನನ್ನು ಪತ್ತೆ ಹಚ್ಚಿ, ಹೊರಗೆಳೆದು ಕೊಚ್ಚಿಕೊಚ್ಚಿ ಎಸೆಯಬೇಕು: ನಿರ್ಮಲ ಮನಸ್ಕರಾಗಿರಬೇಕು ಎನ್ನುವುದು ಈ ಹಬ್ಬಗಳನ್ನು ಹುಟ್ಟುಹಾಕಿದ ನಮ್ಮ ಹಿರಿಯರ ಹಿರಿಯಾಸೆ.

ಇಂದಿಗೂ ಕೆಲವು ಕಡೆ ಈ ಹಬ್ಬದಲ್ಲಿ ಸಾಂಪ್ರದಾಯಿಕವಾಗಿರುವ ಕೆಲವು ಆಚರಣೆಗಳು ಕಲ್ಮಷ ತೊಳೆದುಕೊಳ್ಳುವ ಪ್ರಯತ್ನವನ್ನು ಹೇಳುತ್ತವೆ.

### ಬೂರ್ಗಳೆ

ಉತ್ತರ ಕನ್ನಡ ಜಿಲ್ಲೆಯ ಕೆಲಭಾಗಗಳಲ್ಲಿ ವಿಶೇಷವಾಗಿ ಹಳ್ಳಿಗಳಲ್ಲಿ ಈ ಹಬ್ಬದ ಒಂದು ದಿನ 'ಬೂರ್ಗಳೆ' ಆಚರಿಸುತ್ತಾರೆ. ಅಂದು ಯಾರು ಏನನ್ನು ಕದ್ದರೂ ಅಪರಾಧವಾಗಿ ಪರಿಗಣಿಸುವುದಿಲ್ಲ. ಕ್ಷಮಿಸಿ ಬಿಡುತ್ತಾರೆ.

ಒಳ್ಳೆಯದು ಮತ್ತು ಕೆಟ್ಟದರ ನಡುವಣ ಅಂತರವನ್ನೇ ತೊಡೆದು ಹಾಕುವ ಪ್ರಯತ್ನ ಇದಾಗಿರಬಹುದು; ಅಥವಾ ಕಳ್ಳನನ್ನೂ ಮನ್ನಿಸಿ ಅವನನ್ನು ಒಳ್ಳೆಯ ಮಾರ್ಗದತ್ತ ಕೊಂಡೊಯ್ಯುವ ಪ್ರಯತ್ನವೂ ಆಗಿರಬಹುದು. ಅಂತೂ ಇದೂ ಇಂದು 'ಸಾಂಪ್ರದಾಯಿಕ' ಆಚರಣೆಯಾಗಿ ಉಳಿದಿದೆ.

### ಕಾಲಗತಿಯಲ್ಲಿ

ಹಿಂದೂ, ಬೌದ್ಧ, ಫಾರಸೀ, ಜೈನ ಎನ್ನುವ ಭೇದವಿಲ್ಲದೆ ಎಲ್ಲರೂ ಆಚರಿಸುವ ಹಬ್ಬ ಇದು. ಹಬ್ಬವನ್ನು ಆಚರಿಸುವ ಮೂಲ ಉದ್ದೇಶ ಯಾವುದೇ ಇರಲಿ, ಹಬ್ಬಕ್ಕೆ ಹಿರಿಯರು ಕೊಟ್ಟಿರುವ ಅರ್ಥ ಏನೇ ಇರಲಿ, ಕಾಲಗತಿಯಲ್ಲಿ ವಿಜ್ಞಾನ ಹಾಗೂ ನಾಗರಿಕರಣಗಳ ಪ್ರಭಾವದಿಂದಾಗಿ ಇವು ಅರ್ಥ ಕಳೆದುಕೊಂಡಿವೆ.

ರಾಜಗೋಪಾಲ ಕಚೇರಿಯೊಂದರಲ್ಲಿ ಜವಾನ... ೩೮ ವರ್ಷಗಳಿಂದ ದೀಪಾವಳಿ ಆಚರಿಸುತ್ತಿರುವ ಅನುಭವ ಆತನಿಗಿದೆ. ಆತನನ್ನು ಕೇಳಿದೆ: ನರಕ ಚತುರ್ದಶಿ ಯಾಕೆ ಮಾಡ್ತಾರೆ?

"ಅದೆ, ಅದ್ಯಾರೋ ಸತ್ತರಂತೆ. ಅದ್ಕೆ" ರಾಜಗೋಪಾಲ ಹೇಳುವ ಉತ್ತರದಿಂದ ಈ ಹಬ್ಬ ಒಂದು ತಿಥಿ.

### ಪುರೋಹಿತ್ರಿಗೊತ್ತು

ಮತ್ತೂ ಮುಂದುವರಿಸಿ ಕೇಳಿದೆ:

ಈ ಹಬ್ಬದ ಬಗ್ಗೆ ಇನ್ನೂ ಏನು ಗೊತ್ತು? ಎಂದು.

"ಎಲ್ಲ ಪುರೋಹಿತ್ರಿಗೆ ಗೊತ್ತು. ಅವರು ಒಂದು ಪುಸ್ತಕ ಓದ್ತಾರೆ."

ಅಂತೂ ರಾಜಗೋಪಾಲ ಹಬ್ಬ ಆಚರಿಸುತ್ತಾನೆ. ಪುರೋಹಿತರನ್ನೂ ಕರೆಸಿ ತನ್ನ ಮನೆ ದೇವತೆಗೆ ಪೂಜೆ ಮಾಡಿಸುತ್ತಾನೆ.

ಐದು ಜನರಿರುವ ಈತನ ಕುಟುಂಬದ ಎಲ್ಲ ಸದಸ್ಯರಿಗೂ ಹಬ್ಬದಂದು ಹೊಸ ಬಟ್ಟೆ: ಸಿಹಿ ಯೂಟ. ಮಕ್ಕಳಿಗೆ ಪಟಾಕಿ. ಮೂರು ದಿನವೂ ಹಬ್ಬ ನಡೆಯಬೇಕು. ಈತ ತಿಂಗಳಿಗೆ ೩೦೦ರೂ. ಸಂಪಾದಿಸಿದರೂ ಇದೆಲ್ಲ ಆಗಲೇ ಬೇಕು. ಅರ್ಥ



ತಿಳಿಯದಿದ್ದರೂ ಈತ ಹಲವು ವರ್ಷಗಳಿಂದ ಈ ಹಬ್ಬವನ್ನು ಆಚರಿಸುತ್ತಲೇ ಬಂದಿದ್ದಾನೆ.

ಸಂಸ್ಥೆಯೊಂದರಲ್ಲಿ ಕಸಗುಡಿಸುವ ರಾಮಬ್ಯಾ ತೀಗಳಿಗೆ ತಿಳಿದಿರೂ. ಗಳಿಸುತ್ತಾನೆ. ದೀಪಾವಳಿಯ ಬಗ್ಗೆ ಕೇಳಿದರೆ ನವರಾತ್ರಿಯ ಅನುಭವ ಹೇಳ ಲಾರಂಭಿಸುತ್ತಾನೆ. ನವರಾತ್ರಿಯ ಬಗ್ಗೆ ಪ್ರಶ್ನಿಸಿದರೆ ದೀಪಾವಳಿಯ ಕಂತೆ ಬಿಚ್ಚುತ್ತಾನೆ.

"ಇದು ದೀಪಾವಳಿಯಲ್ಲಲ್ಲವೇನಯ್ಯ ಮಾಡೋದು?" ಎಂದರೆ ತಲೆಕೆರೆದುಕೊಳ್ಳುತ್ತಾನೆ. 'ಪಟಾಕಿ ಹಾರಿಸೋದೇ ದೀಪಾವಳಿ ಅಲ್ವಾ ?' ಎಂದಾಗ, ಲೋಕವನ್ನೇ ಅರ್ಥಮಾಡಿಕೊಂಡವನಂತೆ "ಔದ್ಬುದ್ದಿ" ಅಂತಾನೆ. ಅಂತೂ ಈತನೂ ಈ ಹಬ್ಬ ಆಚರಿಸುತ್ತಾನೆ. ಸಾಲ ಮಾಡುವುದಿಲ್ಲ. ತೀರಿಸುವ ಭಯ. ಹಾಸಿಗೆ ಇದ್ದಷ್ಟೇ ಕಾಲು ಚಾಚುವ ಜಾಯಮಾನ.

ಲೀಲಮ್ಮ ಮಧ್ಯಮ ವರ್ಗದ ಗೃಹಿಣಿ. ಸಾವಿರ ರೂಪಾಯಿ ಮಾಸಿಕ ಸಂಪಾದಿಸುತ್ತಿದ್ದಾರೆ. ಮೂವರು ಮಕ್ಕಳಿದ್ದಾರೆ. ಸುಶಿಕ್ಷಿತ ಕುಟುಂಬ ಸಂಪ್ರದಾಯ ಬದ್ಧ ಜನ.

## ಇಂಟೆರೆಸ್ಟ್ ಕಾಣೋಲ್ಲ

"ಇಪ್ಪತ್ತು ವರ್ಷದ ಹಿಂದೆ ಈ ಹಬ್ಬ ಆಚರಿಸುತ್ತಿದ್ದ ರೀತಿಗೂ ಇಂದಿನ ರೀತಿಗೂ ತುಂಬ ವ್ಯತ್ಯಾಸವಿದೆ. ಇಂದಿನ ಮಕ್ಕಳಿಗೆ ಆಚರಣೆಯಲ್ಲಿ ಇಂಟರೆಸ್ಟ್ ಕಾಣೋಲ್ಲ. ಮಡಿ–ಮೈಲಿಗೆಯೂ ತಿಳಿಯೋಲ್ಲ" ಎಂದು ನುಡಿಯುವ ಅವರು"ಬಲೀಂದ್ರನ ಪೂಜೆ ಮಾಡಿದರೆ ಆಯುಷ್ಯ ವೃದ್ಧಿಯಾಗುತ್ತೆ. ದೇಶ ಸುಭಿಕ್ಷವಾಗುತ್ತೆ. ಹಬ್ಬದ ದಿನ ಮನೆಯ ಮೂಲೆ ಮೂಲೆಯಲ್ಲೂ (ಬಚ್ಚಲ ಮನೆಯಲ್ಲೂ) ದೀಪ ಬೆಳಗಬೇಕು. ಯಾಕಂದ್ರೆ ಅವತ್ತು ಯಾವ ತಿಪ್ಪೇನಲ್ಲೂ ಲಕ್ಷ್ಮೀ ಇರ್‍ತಾಳಂತೆ." ಎಂದು ನಂಬಿಕೆ ವ್ಯಕ್ತಪಡಿಸುತ್ತಾರೆ.

"ಹಬ್ಬ ಹೊರೆ ಅನಿಸೋಲ್ಲ. ಊರೆಲ್ಲ ಹಬ್ಬ ಮಾಡುವಾಗ ನಾವು ಹಾಗೆ ಬಿಡೋದೇ. ವರ್ಷಕ್ಕೊಮ್ಮೆ ಬರುವ ಹಬ್ಬ. ಖರ್ಚು ಮಾಡೋಣ ಮಕ್ಕಳೂ ನಗ್‌ನಗ್ತಾ ಇರ್‍ತಿ" ಎನ್ನುವ ಅವರು, ಸುಮಾರು ಎರಡು ಸಾವಿರ ರೂ. ಈ ಹಬ್ಬಕ್ಕೆಂದು ಖರ್ಚು ಮಾಡುತ್ತಾರೆ

ಬ್ರಿಜೆಟ್ ಕ್ರಿಶ್ಚಿಯನ್ ತರುಣಿ ಅವರ ಮನೆಯಲ್ಲಿ ದೀಪಾವಳಿ ಆಚರಿಸೋಲ್ಲ ಆದ್ರೆ...



## ಹಲವು ದೃಷ್ಟಿ

ಕಿವಿಬಿರಿಯುವ ಪಟಾಕಿಯ ಸದ್ದು ಕೇಳಿ ಸುಮ್ಮನೆ ಕೂಡಲಾದೀತೇ? ಮಕ್ಕಳೆಲ್ಲ ಪಟಾಕಿ ಹಾರಿಸುತ್ತಾರೆ. ಹಿಕ್ಕದಲ್ಲಿ ಹಬ್ಬ ಆಚರಿಸುವ ಗೆಳತಿಯರು ಸ್ವೀಟ್ಸ್ ತರುತ್ತಾರೆ ಇದೇ ಅವರ ಹಬ್ಬ.

ಹೀಗೆ ಹಲವರಿಗೆ ಹಲವು ದೃಷ್ಟಿ. ಒಂದಲ್ಲ ಒಂದು ರೀತಿ ಎಲ್ಲರದೂ ಹಬ್ಬದಲ್ಲಿ ಪಾಲು. 'ಹಿರಿಯರು ನಡೆಸಿಕೊಂಡು ಬಂದದ್ದು ನಾವು ಮುಂದುವರಿಸಿಕೊಂಡು ಹೋಗಬೇಕಲ್ಲ' ಎಂದು 'ಕರ್ತವ್ಯ'(?) ದೃಷ್ಟಿ ಕೆಲವರಿಗೆ. 'ಪಟಾಕಿ ಹಬ್ಬ ತಾನೆ, ಮಾಡೋಣ ಬಿಡಿ. ಮಕ್ಕಳೂ ಖುಷಿ ಪಡ್ತಾರೆ' ಎನ್ನುವ ಉದಾರ ದೃಷ್ಟಿ ಹಲವರಿಗೆ.

"ಎಲ್ಲರೂ ಮಾಡ್ತಾರೆ. ನಾವೂ ಮಾಡ್ತೀವಿ" ಮುದ್ರಣಾಲಯದಲ್ಲಿ ಕಂಪಾಸಿಟರ್ ಆಗಿರುವ ವಸಂತ ಹಬ್ಬು ನೀಡುವ ಉತ್ತರ ಈ ಹಬ್ಬ ಆಚರಿಸುವ ಅನೇಕ ಜನ ಅವಿದ್ಯಾವಂತರ ಪ್ರತಿಧ್ವನಿ.

'ಹಬ್ಬವೇ ಯಾಕೆ ಬೇಕು. ಸ್ವೀಟ್ಸ್ ಮಾಡಬೇಕು ಅನಿಸಿದರೆ ಮಾಡಿಕೊಂಡು ತಿಂದರಾಯ್ತು'ಎನ್ನುವ ಆಧುನಿಕ ವಿಚಾರಧಾರೆಯ ರಾಮಣ್ಣನಿಗೆ "ಹಬ್ಬ ಹರಿದಿನಗಳಲ್ಲಿ ಧಾರ್ಮಿಕ ಕ್ರಿಯೆಗಳಲ್ಲಿ ನಂಬಿಕೆ ಇಲ್ಲ" ಈ ತರುಣ ವಿವಾಹಿತನಾಗಿ ಐದು ವರ್ಷದ ಮೇಲಾಗಿದ್ದರೂ ಈ ವರೆಗೂ ಯಾವ ಹಬ್ಬವನ್ನೂ ಆಚರಿಸಿಲ್ಲ.

ಭಾಸ್ಕರ ಹಳ್ಳಿಯಲ್ಲಿ ಹುಟ್ಟಿದವ. ನಗರದಲ್ಲಿದ್ದಾನೆ. "ಹಬ್ಬ ಊರಿನಲ್ಲಿರುವ ಅಪ್ಪ–ಅಮ್ಮ ಅವರಿಗೆ. ನನಗೆ ಆಸಕ್ತಿ ಇಲ್ಲ. ಆಗೊಮ್ಮೆ-ಈಗೊಮ್ಮೆ ಊರಿಗೆ ಹೋದರೆ ಅವರು ಹಬ್ಬ ಮಾಡುವುದನ್ನು ನೋಡ್ತೀನಿ ಯಾವುದನ್ನೂ ಆಚರಿಸುವುದಿಲ್ಲ. ಯಾವ ವಿಧಿ ನಿಯಮಗಳಿಗೂ ನಾನು ಬದ್ಧನಲ್ಲ" ಎನ್ನುತ್ತಾನೆ.

## ಬಿಡ್ಲಿಕ್ಕೆ ಬಂದೀಕೆ

'ನಿಯಮಗಳನ್ನು ಮುರಿದಾಗ ನಿಮ್ಮ ತಂದೆ ತಾಯಿಗಳಿಗೆ ಕೋಪ ಬರೋಲ್ವೆ ?'

'ನಾನು ಹಬ್ಬಗಳಿಗೆ (ಊರಿಗೆ) ಹೋಗುವುದೇ ಅಪರೂಪ. ಹೀಗಾಗಿ ನಾನು ನಿಯಮ ಮುರಿದರೂ ತಂದೆ ತಾಯಿಗಳಿಗೆ ಸಂತೋಷ' ಎಂದು ನಗುತ್ತಾನೆ ಭಾಸ್ಕರ.

ಸೀತಾರಾಮುಡೂ ಇದೇ ಉತ್ತರ. ಇದೇ ಹಿನ್ನೆಲೆ ಈತನೂ ತರುಣ.

ಹೊಸದಾಗಿ ಮದುವೆಯಾಗಿದ್ದವರಿಗೆ ಈ ಹಬ್ಬ ಮತ್ತಷ್ಟು ರಂಗು ತರುತ್ತದೆ. ಮಾವನ ಮನೆಯಲ್ಲಿ ಅಳಿಯನಿಗೆ ವಿಶೇಷ ಔತಣ, ಉಡುಗೊರೆ. ಹಲವು ಸಾಂಪ್ರದಾಯಿಕ ಕುಟುಂಬಗಳಲ್ಲಿ ಇದೊಂದು ಹೊರಲಾರದ ಭಾರ. ಆದರೂ ಎಷ್ಟೇ ಭಾರ ಆದ್ರೂ ಬಿಡ್ಲಿಕ್ಕೆ ಬಂದೀತೇ ಹಿರೇರು ಮಾಡಿದ್ದು?

ಹಲವು ಕುಟುಂಬ ಇದನ್ನು ಆಚರಿಸುತ್ತದೆ. ತರುಣ–ತರುಣಿಯರೂ ಇದರಲ್ಲಿ ಪಾಲ್ಗೊಳ್ಳುತ್ತಾರೆ. ಹಲವರಿಗೆ ನಂಬಿಕೆ ಇಲ್ಲ. "ಆದ್ರೆ ದೊಡ್ಡೋವ್ರ ಮನನೋಯಿಸೋದು ಯಾಕೆ ?"

ಹಬ್ಬಕ್ಕೆ ಕೆಲವೇ ತಿಂಗಳ ಮುನ್ನ ಮದುವೆಯಾದ ಶಿವಕುಮಾರಚಡಗ "ನನ್ನ ಪಾಲಿಗೆ ಆದೇನೂ ಇಲ್ಲ. ನಾನು ತಟಸ್ಥ" ಎನ್ನುತ್ತಾನೆ. ಇಂಥ ತರುಣರ ಸಂಖ್ಯೆಯೂ ಇದೆ.

ಒಟ್ಟಿನಲ್ಲಿ ಬಹುಪಾಲು ಆಧುನಿಕ ತರುಣ–ತರುಣಿಯರಿಗೆ ಎಲ್ಲ ಹಬ್ಬಗಳಂತೆ ಈ ಹಬ್ಬದಲ್ಲೂ ನಂಬಿಕೆಯಿಲ್ಲ. ಕಟ್ಟು– ನಿಟ್ಟು, ವಿಧಿ–ನಿಯಮಗಳಿಗೆ ಅವರು ಬದ್ಧರಲ್ಲ. ಹಬ್ಬ ಆಚರಿಸುವ ಅನೇಕರಿಗೆ ಅರ್ಥ ತಿಳಿದಿಲ್ಲ. ಆಚರಣೆ ಬಿಡಲು ಅವರು ಸರ್ವಥಾ ಸಿದ್ಧರಿಲ್ಲ. ಒಂದು ತೆರನ ಭೀತಿ ಅವರಿಗೆ. ಅಥವಾ ಬಿಡುವ ಯೋಚನೆಯನ್ನೂ ಅವರು ಮಾಡಿಲ್ಲ.

ಹಬ್ಬ ವರ್ಷ ವರ್ಷವೂ ಬರುತ್ತದೆ. ಹೋಗುತ್ತದೆ. ಆಸಕ್ತ ಜನ ತಪ್ಪದೆ ಆಚರಿಸುತ್ತಾರೆ. ವರ್ಷ ಬರುವ ಹಬ್ಬವಾದರೂ ಕೆಲವು ವಿಶೇಷಗಳು ಉಳಿದುಕೊಂಡು ಬರುತ್ತವೆ.

## ಆರಾಧನೆಯ ವೈವಿಧ್ಯ

ದೀಪಾವಳಿಯ ಮತ್ತೊಂದು ವಿಶೇಷ ಎಂದರೆ ಆರಾಧಿಸುವ ದೇವರು. ಒಬ್ಬೊಬ್ಬರ ಪೂಜೆ ಒಬ್ಬೊಬ್ಬ ದೇವರಿಗೆ. ಇಲ್ಲಿ ಇಂಥದೇ ದೇವರನ್ನು ಪೂಜಿಸುವ ಕಡ್ಡಾಯ ಇಲ್ಲ. ಕೆಲವರು ತುಳಸಿಗೆ, ಮತ್ತೆ ಕೆಲವರು ಗೌರಿಗೆ, ವೆಂಕಟರಮಣನಿಗೂ ಪೂಜೆ. ಒಂದೊಂದು ಸಮಾಜ, ಧರ್ಮ, ಕೋಮುಗಳಿಗೂ ಇದು ಭಿನ್ನ. ಕೆಲವೊಮ್ಮೆ ಮನೆ ಮನೆಗೂ ಭಿನ್ನ. ಗೋವು ಮತ್ತು ಲಕ್ಷ್ಮಿ ಅನೇಕರಿಗೆ ಆರಾಧ್ಯ ದೈವ.

ಅಗ್ರವಾಲ ಸಮಾಜದಲ್ಲಿ ಪೂಜೆ ಗೋವುಗಳಿಗೆ. ನಗರ ಪ್ರದೇಶಗಳಲ್ಲಿ ಗೋವುಗಳು ಸಿಗದಾಗ ಗೋವಿನ ಸಗಣಿಯನ್ನಾದರೂ ಹುಡುಕಿ ತಂದು ಪೂಜಿಸಬೇಕೆನ್ನುವುದು ನಿಯಮ. ಹಳ್ಳಿಗಳಲ್ಲಿ ಗೋಪೂಜೆ ಸಾಮಾನ್ಯ. ಕೆಲವು ಹಳ್ಳಿಗಳಲ್ಲಿ ಬೇರೆ ರೂಪ.

ಉತ್ತರ ಕನ್ನಡ ಜಿಲ್ಲೆಯ ಹಳ್ಳಿಯೊಂದರಲ್ಲಿ ದೀಪಾವಳಿಯ ಪೂಜೆ ಸಲ್ಲುವುದು ಹುಲಿದೇವನಿಗೆ ಕಾರಣ ಈ ದೇವ ಗೋವುಗಳ ರಕ್ಷಕ (?) ಎಂಬುದು ಅವರ ನಂಬಿಕೆ. ಅಂದು ಒಂದು ಬಾಳೆಕ್ಕೆ (ಒಂದು ಹಸವಿಗೆ) ಒಂದು ಕಾಯಿ ಲೆಕ್ಕದಲ್ಲಿ ಪೂಜೆ. ಅಲ್ಲಿಯೇ ಏರ್ಪಡಿಸಿದ್ದ ಯಜ್ಞ ಕುಂಡಕ್ಕೆ ಹಸುವಿನ ತುಪ್ಪ.




## ದೀಪ

ದೀಪಾವಳಿ ಆಚರಿಸುವ ಎಲ್ಲರೂ ದೀಪ ಹಚ್ಚುತ್ತಾರೆ. ದೀಪಗಳ ಸಂಖ್ಯೆ ಅಂತಸ್ತಿಗೆ ಅನುಗುಣವಾಗಿ. ಮಣ್ಣಿನ ದೀವಿಗೆ ಶ್ರೇಷ್ಠ ಎಂಬ ಕಲ್ಪನೆ ಹೀಗಾಗಿ ನಗರಗಳಲ್ಲೂ ಮಣ್ಣಿನ ದೀವಿಗೆ ಕಂಡು ಬರುತ್ತವೆ. ದೀಪ ದುರ್ಲಭವಾದಾಗ ಕ್ಯಾಂಡಲ್. ಎಲ್ಲದಕ್ಕೂ ಒಂದು. ಸೂತ್ರ: ಅನುಕೂಲ ಸಿಂಧು.



---

### ಕನಿಷ್ಠದಲ್ಲಿ ಅಭೀಷ್ಟ.

ಒಂದೂ ಸಮಾಜದ ಮಧ್ಯಮ ವರ್ಗದ ತಿಂಗಳಿಗೆ ಸುಮಾರು ೮೦೦ ರೂ. ಗಳಿಸುವ ವ್ಯಕ್ತಿಯ ಐದು ಜನರ ಕುಟುಂಬದ ಕನಿಷ್ಠ ವೆಚ್ಚ ಹೀಗಿರುತ್ತದೆ:

೧. ಉಡುಪು: ಎ) ಕುಟುಂಬದ ಸದಸ್ಯರಿಗೆ–೩೫೦ರೂ. ಬಿ) ಆಹ್ವಾನಿತ ಬಂಧುಗಳಿಗೆ– ೨೫೮ರೂ.

| | | |
|---|---|---|
| ೨ | ಪಟಾಕಿ– | ೪೦ರೂ. |
| ೩ | ಸಿಹಿತಿಂಡಿ–ಊಟ ಇತ್ಯಾದಿ– | ೧೫೦ರೂ. |
| | ಒಟ್ಟು ಖರ್ಚು | ೭೮೦ರೂ. |

---



ಇರುವುದು ಎರಡೇ ಕೈಗಳು ನಿಜ. ಆದರೆ ಅವರಿಂದ ಸಾಧಿಸಲಾಗದ್ದೇನು? ಕೈಗಳು ಮಾನವನ ಬಹು ಮುಖ್ಯ ಭಾಗ. ಕಣ್ಣುಗಳಂತೆಯೇ ಹಾಗೆಯೇ ಕಾಲುಗಳೂ ಕೂಡ. 'ಕೈ' ಮೂಲಕ ಮಾನವ ಏನನ್ನು ಬೇಕಾದರೂ ಸಾಧಿಸಬಹುದು. ಅಸ್ತ್ರಗಳನ್ನು ಹಿಡಿದು ಕೈಗಳ ಮೂಲಕ ಹೋರಾಡಬಹುದು. ಆದರೆ ಈಗ ಕೈಗಳೇ ಆಯುಧವಾದ ಪ್ರಸಂಗ ಬಂದಿದೆ. ಕರಾಟೆಯ ಮೂಲಕ ಈಗ ಕೈ ಕರಾಮತ್ತನ್ನು ತೋರಿಸಬಹುದು. ಕೈಯಲ್ಲಾವ ಆಯುಧಗಳೂ ಇಲ್ಲದೆ, ಎದುರಾಳಿಗಳನ್ನು ಸದೆಬಡಿವ ವಿದ್ಯೆ "ಕರಾಟೆ". "ಕುಂಗ್ ಫೂ" ಎಂಬುದು ಇದರ ಮತ್ತೊಂದು ಹೆಸರು.

ಜಪಾನಿಯರಲ್ಲಿ ಕರಾಟೆ ಎಂದಾದರೆ ಅಮೆರಿಕನ್ನರಿಗದು "ಕುಂಗ್ ಫೂ". ಜಪಾನ್ ಭಾಷೆಯಲ್ಲಿ ಕರಾಟೆ ಪದದ ಅರ್ಥ, "ಬರಿಗೈ".

ಕರಾಟೆಯ ಇತಿಹಾಸ ಬಹಳ ದೊಡ್ಡದು. ಆದರೆ ಅದಕ್ಕೆ ಪ್ರಸಿದ್ಧಿಯು ಹಿಡಿತ ದೊರೆಕಿದ್ದು ಇತ್ತೀಚೆಗೆ ಮಾತ್ರ. ಜಪಾನಿನಲ್ಲಂತೂ ಈ ಕಲೆ ಬೃಹದಾಕಾರವಾಗಿ ಬೆಳೆದು ನಿಂತಿದೆ. ಅಲ್ಲೇ ಅದರ ಮೂಲ ಎಂದೂ ಹೇಳುತ್ತಾರೆ.

ಭಾರತೀಯರೇ ಕರಾಟೆಯನ್ನು ಮೊದಲು ಬೆಳಕಿಗೆ ತಂದವರು ಎಂಬ ಮಾತೂ ಇದೆ. ಒಂದಾನೊಂದು ಕಾಲದಲ್ಲಿ ಭಾರತದಲ್ಲಿ ಒಬ್ಬ ಬೇಟೆಗಾರ ಬೇಟೆಗಾಗಿ ಕಾಡಿಗೆ ಹೋದ. ಪ್ರಾಣಿಗಳು ತಮ್ಮನ್ನು ರಕ್ಷಿಸಿಕೊಳ್ಳಲಿಕ್ಕಾಗಿ ಬರಿ ಕೈಯಲ್ಲೇ ಹೋರಾಟ ನಡೆಸುವುದನ್ನು ಕಂಡಾಗ ಏನೋ ಒಂದು ಐಡಿಯಾ ಮನದಲ್ಲಿ ಮೂಡಿತು. ಇದೇ ಆಧಾರದ ಮೇಲೆ ಕೈಯಲ್ಲೇ ಆತ್ಮ ರಕ್ಷಣೆ ಮಾಡಿಕೊಳ್ಳುವ ವಿದ್ಯೆಯನ್ನು ರೂಢಿಸಿಕೊಂಡ. ಮೆಲ್ಲನೆ ಈ ವಿದ್ಯೆ, ಚೈನಾವನ್ನು ಹೊಕ್ಕಿತು. ಅಲ್ಲಿಂದ ಜಪಾನಿಗೆ ನುಗ್ಗಿತು. ಜಪಾನಿಯನ್ನರು ಈ ವಿದ್ಯೆಯನ್ನು ಭದ್ರವಾಗಿ ಹಿಡಿದರು. ಭಾರತೀಯರು ಕೈ ಬಿಟ್ಟರು.

ಕರಾಟೆ ಕಲಿಯುವವರ ದೇಹಬಲ ಉತ್ತಮವಾಗಿರಬೇಕಾದುದಗತ್ಯ. ಅವರ ದೇಹದಾರ್ಢ್ಯವೂ ಚೆನ್ನಾಗಿರಬೇಕು. ಶಕ್ತಿ, ಬಲ ಇದರ ಅತ್ಯಗತ್ಯತೆ. ಇವಿಷ್ಟಿದ್ದು ಕರಾಟೆ ಕರಗತವಾದರೆ ಭಯ ಎಂಬುದು ಮರೆತಂತೆಯೇ ಸರಿ.

ಕರಾಟೆ ಕಲಿತವರು ಬಲಭೀಮರಾಗುತ್ತಾರೆ ನಿಜ. ಆದರೆ ಆಪತ್ತುಗಳಿಂದ ರಕ್ಷಣೆಗೋಸ್ಕರವೇ ಅದನ್ನು ಕಲಿಯಬೇಕು. ಮತ್ತೊಬ್ಬರಿಗೆ ತೊಂದರೆ ಮಾಡುವುದಕ್ಕೆ ಅದನ್ನು ಕಲಿಯುವಂತಿಲ್ಲ. ಕರಾಟೆ ಶಾಲೆಗಳಲ್ಲಿ ಕಲಿಯುವುದ





# ಕೈ ಕರಾಮತ್ತಿನ ಕರಾಟೆ

• ಗಂಗಾಧರ

ಕ್ಕಿಂತ ಮುಂಚೆ ಹಾಗೆ ಪ್ರಮಾಣ ಮಾಡಬೇಕು.

ದರೋಡೆಕೋರರೂ, ಕಳ್ಳರೂ ಕರಾಟೆ ಕಲಿತು ಬಿಡಬಹುದಲ್ಲಾ ಎಂಬ ಸಮಸ್ಯೆ ಏಳಬಹುದು. ಆದರೆ ಅದು ಅಷ್ಟು ಸುಲಭವಲ್ಲ. ಏಕೆಂದರೆ ಕರಾಟೆ ಕಲಿಯಬೇಕಾದರೆ, ಪೋಲೀಸರಿಂದ ಸರ್ಟಿಫಿಕೇಟ್ ಪಡೆದಿರಬೇಕಾಗುತ್ತದೆ. ಪೋಲೀಸ್ ಇಲಾಖೆಯಿಂದ ಸರ್ಟಿಫಿಕೇಟ್ ತಂದ ಮೇಲೆಯೇ ಕರಾಟೆ ಶಾಲೆಯಲ್ಲಿ ಪ್ರವೇಶ. ಕರಾಟೆಯನ್ನು ಯಾರು ಬೇಕಾದರೂ ಕಲಿಯಬಹುದು. ಬ್ಲಡ್‌ಪ್ರೆಶರ್, ಹೃದಯ ತೊಂದರೆ ಇರುವವರು ಕರಾಟೆ ಕಲಿಯಲು ಸಾಧ್ಯವಿಲ್ಲ. ವಯಸ್ಸಾದವರಿಗೂ ಕರಾಟೆ ಶಾಲೆಯಲ್ಲಿ ಪ್ರವೇಶ. ಮುಪ್ಪು ಬಂತು ಎಂದು ಹಿಂಜರಿಯಬೇಕಿಲ್ಲ. ಜಪಾನಿನಲ್ಲಿ ಈಗ ೭೦–೮೦ ವಯಸ್ಸಿನವರೂ ಕರಾಟೆ ಕಲಿಯುತ್ತಿದ್ದಾರೆ.

ಕರಾಟೆಯ ಮೊದಲನೆಯ ಪಾಠ: ಎದುರಾಳಿಯ ಏಟುಗಳನ್ನು ತಡೆದುಕೊಳ್ಳುವುದನ್ನು ಕಲಿಯುವುದು. ಏಳೆಂಟು ಜನ ಅಡ್ಡಗಟ್ಟಿದರೆ, ಕರಾಟೆಯ ಮೂಲಕ ಹೇಗೆ ತಪ್ಪಿಸಿಕೊಳ್ಳಬಹುದು ಎಂಬುದನ್ನು ಕಲಿಸಲಾಗುತ್ತದೆ. ಚುರುಕು ಕರಾಟೆಯಲ್ಲಿ ಬಹು ಮುಖ್ಯವಾದ್ದರಿಂದ ಅದನ್ನು ಮೊದಲು ರೂಢಿಸಿಕೊಳ್ಳಬೇಕಾಗುತ್ತದೆ. ಮಿಂಚಿನ ವೇಗದಲ್ಲಿ ಕೈ ಕಾಲುಗಳು ಚಲಿಸಬೇಕಾಗುತ್ತದೆ. ಕರಾಟೆ ಕಲಿಯುವಾಗ, ಬಿಳೀ ಬಟ್ಟೆ ಧರಿಸಿ ಕಾಲಿಗೂ, ಬಿಳೀ ಬಟ್ಟೆಯನ್ನೂ ಸುತ್ತಿಕೊಂಡಿರಬೇಕಾಗುತ್ತದೆ. ಜಪಾನಿನಲ್ಲಿ ಹೀಗೆ ಕರಾಟೆ ಕಲಿಯುವ ಶಾಲೆಗಳಿಗೆ "ಡೈಜ" ಎನ್ನುತ್ತಾರೆ.

ಕರಾಟೆಯಲ್ಲಿ ಕೆಲವು ವಿಶಿಷ್ಟ ಭಂಗಿಗಳಿವೆ. ಕೆಲವರಿಗೆ ಮಾತ್ರ ಕರಗತವಾಗುವ ವಿದ್ಯೆಗಳಿವೆ. ಅಪಾರವಾದ ಪರಿಶ್ರಮದ ಮೂಲಕ ಅದನ್ನವರು ಕಲಿಯುತ್ತಾರೆ. ಎದುರಾಳಿಗಳಿಂದ ಆಪತ್ತು ಇದೆ ಎಂಬ ಅರಿವಾದ ಕೂಡಲೇ ಅವರು ಒಂದು ವಿಧದ ಭಂಗಿಯಲ್ಲಿ



ನಿಂತು ಪಟ್ಟು ಹಾಕುತ್ತಾರೆ ಅವರ ನಿಂತ ನಿಲುವು. ಕಂಡೇ ಎದುರಾಳಿಗಳಿಗೆ ತೊಳ್ಳೆ ನಡುಕ ಆರಂಭವಾಗುತ್ತದೆ. ಅವರು ಕೂಡಲೇ ಕಾಲಿಗೆ ಬುದ್ಧಿ ಹೇಳುತ್ತಾರೆ.

ಕರಾಟೆಯಲ್ಲಿ ಚಾಂಪಿಯನ್ ಆದವರನ್ನು "ಕರಾಟೆ ಮಾಸ್ಟರ್" ಎಂದು ಕರೆಯುತ್ತಾರೆ. ಕರಾಟೆಯಲ್ಲಿ "ಬ್ಲಾಕ್ ಬೆಲ್ಟ್" ಪಡೆಯುವುದೆಂದರೆ ಅದೊಂದು ದೊಡ್ಡ ಸಾಹಸವೇ ಸರಿ. ಕನಿಷ್ಠಪಕ್ಷ ಮೂರು ವರ್ಷಗಳಾದರೂ ಇದನ್ನು ಕಲಿತು ಎಲ್ಲಾ ಪಟ್ಟುಗಳಲ್ಲೂ ನಿಪುಣರಾದವರಿಗೆ ಮಾತ್ರ "ಬ್ಲಾಕ್ ಬೆಲ್ಟ್" ಡಿಗ್ರಿ ಲಭ್ಯ. ಮೊದಲು ಕರಾಟೆ ಕಲಿಯಲಾರಂಭಿಸಿದಾಗ ಆರಂಭದಲ್ಲಿ ಬಿಳೀ ಬೆಲ್ಟ್ ಲಭ್ಯವಾಗುತ್ತದೆ. ಈ ಬಿಳೀ ಬೆಲ್ಟ್ ಡಿಗ್ರಿಗಳಿಗೆ ಸಮ. ಬಿಳೀ ಬೆಲ್ಟ್‌ಗಳಲ್ಲೇ ಮೂರು ಬಗೆ. ಹತ್ತು ತಿಂಗಳ ನಂತರ ಚೆನ್ನಾಗಿ ಕಲಿತು ಪಾಸು ಮಾಡಿದವರಿಗೆ ಈ ಬೆಲ್ಟುಗಳು ಲಭ್ಯವಾಗುತ್ತದೆ. ಬಿಳೀ ಬೆಲ್ಟ್ ಆದ ನಂತರ ಮೂರು ಬಗೆಯ ತಿಳಿ ಕೆಂಪು ಬೆಲ್ಟ್ ಧರಿಸಬೇಕಾಗುತ್ತದೆ. ಇವೆಲ್ಲಾ ಆದ ನಂತರ ಕರಾಟೆ ಪ್ರವೀಣರಾಗಿ ಕಪ್ಪು ಬೆಲ್ಟ್‌ಗೆ ಪ್ರಮೋಷನ್ ಸಿಗುತ್ತದೆ.

ಮಹಿಳೆಯರಿಗೂ ಕರಾಟೆ ಕಲಿಯುವ ಅವಕಾಶವಿದೆ. ಮಹಿಳೆಯರು ನಿರ್ಭಯವಾಗಿ ಎಲ್ಲೆಂದರಲ್ಲಿ ಓಡಾಡಬಹುದು.

ಕರಾಟೆಯ ಕರಾಮತ್ತೊಂದು ತಿಳಿದಿದ್ದರೆ ಸಾಕು.

ಕರಾಟೆ ಕಲಿಯುವವರ ಸಂಖ್ಯೆ ಈಗೀಗ ಬಹಳವಾಗುತ್ತಿದೆ. "ಎಂಟರ್ ದಿ ಡ್ರ್ಯಾಗನ್" ಬಂದ ಮೇಲಂತೂ ಕರಾಟೆ ಎಂದರೆ ಯುವಕರು ಪ್ರಾಣ ಬಿಡುತ್ತಿದ್ದಾರೆ. ಅಮೇರಿಕಾದಲ್ಲಿ ಬ್ರೂಸ್‌ಲೀ ಟೆಲಿವಿಷನ್ ಮೂಲಕ ಕರಾಟೆ ಪಾಠ ಹೇಳುತ್ತಿದ್ದ. ಅಮೇರಿಕಾಕ್ಕೆ ಕರಾಟೆ ಪ್ರವೇಶಿಸಲು ಬ್ರೂಸ್‌ಲೀಯೇ ಕಾರಣ. ಜಪಾನಿನಲ್ಲಂತೂ ಶಾಲೆಗಳಲ್ಲಿ ಕರಾಟೆಯನ್ನು ಕಡ್ಡಾಯವಾಗಿ ಕಲಿಸಲಾಗುತ್ತಿದೆ. ಯುರೋಪಿನ ಎಲ್ಲೆಡೆಯೂ ಕರಾಟೆ ಈಗ ವ್ಯಾಪಕವಾ



ಗಿದೆ. ಭಾರತದಲ್ಲಿ ಈಗ ಮದ್ರಾಸ್, ಕಲ್ಕತ್ತ, ದೆಹಲಿ, ಬೊಂಬಾಯಿಗಳಲ್ಲಿ ಕರಾಟೆ ಕಲಿಸುವ ಶಾಲೆಗಳಿವೆ.

ಮೊದ ಮೊದಲು ಕೇವಲ ರಕ್ಷಣೆಗಾಗಿ ಮಾತ್ರ ಆರಂಭವಾದ ಕರಾಟೆ ಈಗ ಒಂದು ಆಟವಾಗಿಯೇ ಪರಿಗಣಿತವಾಗಿದೆ. ಒಲಂಪಿಕ್ ಪಂದ್ಯಗಳಲ್ಲೂ ಕರಾಟೆ ಸ್ಪರ್ಧೆಗಳು ಏರ್ಪಟ್ಟಿವೆ.

ಪಟ್ಟುಗಳನ್ನು ಮುಷ್ಟಿಯಲ್ಲಿಟ್ಟುಕೊಂಡು ಎದುರಾಳಿಗಳಿಗೆ ಗಾಯವಾಗದೆ, ರಕ್ತ ಸುರಿಯದೆ ಮಣ್ಣು ಮುಕ್ಕಿಸುವ ಈ ವಿದ್ಯೆ ಈಗ ಜನಪ್ರಿಯ.

## ಬ್ರೂಸ್‌ಲೀ

'ಬ್ರೂಸ್‌ಲೀ ಕರಾಟೆಯ ಕಲಿ. ಇಂದು ಜಗತ್ತಿನಾದ್ಯಂತ ಕರಾಟೆ ಪ್ರಸಿದ್ಧವಾಗಲು ಕಾರಣನಾದವನೆಂದರೆ ಇವನೇ. ಬ್ರೂಸ್‌ಲೀಯ ಚಾತುರ್ಯತೆಯ ಪರಿಣಾಮವೆಂದರೆ; ಕರಾಟೆ ಅಮೆರಿಕಾ ಪ್ರವೇಶಿಸಿದ್ದು. ಅಮೆರಿಕಾದಲ್ಲಿ ಬ್ರೂಸ್‌ಲೀಯ ಆರಾಧಕರು ದಡಬಡನೆ ಹುಟ್ಟಿಕೊಂಡರು. ಕೊನೆಗೆ ಬ್ರೂಸ್‌ಲೀ ಟೆಲಿವಿಷನ್ ಮೂಲಕ ಅಮೆರಿಕಾದ ಭಕ್ತಾದಿಗಳಿಗೆ ಕರಾಟೆ ಪಟ್ಟುಗಳ ಪಾಠ ಹೇಳಿಕೊಡಗಿದ. ಚೈನಾದ ಈ ಯುವಕನ ಹಠಾತ್ ಕೊಲೆ ಇನ್ನೂ ವಿಗೂಢ. ಆಗ ಆತನಿಗಿನ್ನೂ ೩೨ ವರ್ಷ ಮಾತ್ರ.

ಹಾಂಗ್‌ಕಾಂಗ್‌ನಲ್ಲಿ ಬ್ರೂಸ್‌ಲೀ ಇದ್ದಾಗ ಅಲ್ಲಿ ಆಗ ಕರಾಟೆ ಒಂದು ಫ್ಯಾಷನ್. ಹುಡುಗಿಯರನ್ನು ಆಕರ್ಷಿಸುವುದಕ್ಕೆ, ಅದನ್ನು ಕಲಿಯುತ್ತಿದ್ದರು. ಬ್ರೂಸ್‌ಲೀಗೆ ಹಾಂಗ್‌ಕಾಂಗ್ ಬಹು ಮೆಚ್ಚಿನ ಸ್ಥಳ. ೧೯೭೩ ರಲ್ಲಿ ಬ್ರೂಸ್‌ಲೀ ತನ್ನ ಕೊನೆಯುಸಿರೆಳೆದದ್ದೂ ಅಲ್ಲೇ.

ಮೆದುಳಿನ ರಕ್ತಸ್ರಾವ, ನರಗಳ ಬಿಗಿಯಿಂದಾದ ಪರಿಣಾಮ ಎಂಬುದು ಅವನ ಸಾವಿಗೆ ಒಂದು ಕಾರಣ. ಆದರೆ ಎಲ್ಲಿ ಏನು ನಡೆಯಿತೋ ಏನೋ ಎಂಬುದು ಅಭಿಮಾನಿಗಳ ಗುಲ್ಲು.



### ಗುದ್ದು

ನನಗೊಂದು ಆಸೆ: ಕಂಡ ಕಂಡವರ ಮುಸುಡಿಗೆ ಗುದ್ದಬೇಕು. ಗುದ್ದಿಸಿ ಕೊಂಡವರು ದೊಪ್ಪನೆ ಕೆಳಗುರುಳಬೇಕು.

ರಾಮಾನುಜನ್

### ಬಹುಮಾನ

" ನನಗೊಂದು ಆಸೆ " ವಿಭಾಗದಲ್ಲಿ ನನಗೆ ಬಹುಮಾನ ಬರಬೇಕೆಂಬುದೇ ನನ್ನದೊಂದು ಆಸೆ.

ಕೆ. ಮಂಜುಳ

### ಸಂಪಾದಕನಾಗುವಾಸೆ

ನನ
ಗಿರುವುದೊಂದೇ
ಆಸೆ,
ಬಹುಶಃ ಅದ
ರಲ್ಲಿ
ನಿಮಗೆ ವಿ
ಚಿತ್ರ,
ಹೊಸತನ
ಕಾಣ
ದಿದ್ದರೂ
ನಿಜ
ಕ್ಕೂ ಅದು
ಭಿನ್ನ
ಇತರರ
ಆಸೆ
ಗಿಂತ!
ವಾರ
ಪತ್ರಿಕೆಯೊಂದರ
ಸಂಪಾ
ದಕನಾಗಿ,
ಅರ್ಥ
ವಾಗಲಿ
ಅಥವಾ
ಆಗದಿರಲಿ
ಬರೀ
ಮಹಿಳೆಯರ
ಲೇಖ
ನಗಳನ್ನು
ಪ್ರಕ
ಟಪಡಿಸಿ
ಅವ
ರುಗಳ
ಮೆಚ್ಚು
ಗೆಯನ್ನು
ಸಂಪಾದಿಸುವಾಸೆ!

ಸು. ಸುರೇಂದ್ರ

# ನನಗೊಂದು ಆಸೆ

### ಜಗದ್ಗುರು ಆಗಬೇಕು

ನಾನು ಜಗದ್ಗುರು ಆಗಬೇಕು ಅಂತ ಯಾಕೆ ಆಶೆಪಡುತ್ತೇನೆ ಗೊತ್ತೆ- ಆ ಪಲ್ಲಕ್ಕಿ ಆ ಛತ್ರಚಾಮರ ಕುಳಿತನಿಗಾದೆ. ಆ ಕಡೆ ಈ ಕಡೆ ಚಾಮರ ಬೀಸುವ ಹೆಂಗಳೆಯರು. ಸುತ್ತಲೂ ಆರತಿ ಎತ್ತುವ ಸುಮಂಗಲೆಯರು. ಜೈ-ಜೈಕಾರ ಹಾಕುವ ಹೊಗಳು ಭಟ್ಟಂಗಿಗಳ ನಡುವೆ ಊದುಬತ್ತಿಗಳ ಸುವಾಸನೆ ಸೇವಿಸುತ್ತ ಪಲ್ಲಕ್ಕಿಯಲ್ಲಿ ಪಯಣಿಸುವುದೆಂದರೆ ಅಬ್ಬಾ ಎಂಥ ಸಂತೋಷ. ಸ್ವತಃ ಜಗದ್ಗುರು ಆಗಿಯೇ ಅನುಭೋಗಿಸಬೇಕು. ಅದಕ್ಕಾಗಿಯೇ ನಾನು ಆಶೆಪಟ್ಟದ್ದು. ಆಶೆ ಪಡುತ್ತಿರುವುದು. ನಾನೂ ಜಗದ್ಗುರು ಆಗಬೇಕು.

ರಾತ್ರಿ ಊಟವಿಲ್ಲ. ಬರೀ ಹಣ್ಣು ಹಂಪಲುಗಳ ಸೇವನೆ ಡಜûನ್ ಕಿತ್ತಳೆ. ಬಾಳೆ. ಸೇಬುಗಳನ್ನು ತಿಂದು ಖರ್ಜೂರ. ಗೋಡಂಬಿ. ಕಲ್ಲುಸಕ್ಕರೆಯ ರುಚಿ ನೋಡುವುದರಲ್ಲಿ ಎಂಥ ಸುಖ ಅಡಗಿದೆ. ಮೇಲೆ. ಕೇಸರಿ ಸುವಾಸಿತ ಹಾಲು ಕುಡಿದು ಸುಪತ್ತಿಗೆಯಲ್ಲಿ ಬಿದ್ದುಕೊಂಡ ಕೂಡಲೆ ಸೇವೆಗಾಗಿ ಹೆಂಗಳೆಯರು ಹಾಜರ್! ಅಬ್ಬಾ ಸ್ವಾಮಿಗಳಿಗೆ ಸುಖ ಪಡೆಯಲೂ ಅದೃಷ್ಟ ಬೇಕು. ರಾತ್ರಿ ಪೂರ್ತಿಯಾಗಿ ಸಾಮಗಾನ ಜೋಡಿಸಲು ಹೆಂಗಳೆಯರು. ತಿರುಗಾಡಲು ಭೋಜನಕೆ ವ್ಯವಸ್ಥೆ, ಸಭೆ ಸಮಾರಂಭದಲ್ಲಿ ಮರ್ಯಾದೆ ಅಬ್ಬಾ. ಇದನ್ನೆಲ್ಲ ನೋಡಿಯೇ ನಾನು ಆಶೆ ಪಟ್ಟದ್ದು. ನಾನೂ ಜಗದ್ಗುರು ಆಗಬೇಕು

ಕೆ. ಜಿ. ಪೊದ್ದಾಪೂರ

### ವಿಧವೆ

ನನ್ನ ಹೆಂಡತಿ ವಿಧವೆಯಾದ ಮೇಲೆ ಹೇಗಿರುತ್ತಾಳೆ ಎಂಬುದನ್ನು ನೋಡುವಾಸೆ.

ಗೋಪಿನಾಥ್



### ನನಗೂ ಇದ್ದಿದ್ರೆ

ಚಿಕ್ಕವಳಿದ್ದಾಗ ಅಣ್ಣಂದಿರು ಅಮ್ಮನ ಮೇಲೆ ಜೋರು ಮಾಡುವುದನ್ನು ನೋಡಿದರೆ ನನ್ನ ಆಸೆ ಮನಸ್ಸಿನಾಳದಿಂದ ಪುಟಿದೇಳುತ್ತಿತ್ತು. ಹೈಸ್ಕೂಲಿನಲ್ಲಿ ಸಹ ವಿದ್ಯಾಭ್ಯಾಸ ಗಂಡು ಹುಡುಗರು ತುಂಬ ಹುಡುಗಿಯರಿಬ್ಬರು ಒಟ್ಟಿಗೆ ತರಗತಿಗಳಲ್ಲಿರುತ್ತಿದ್ದು. ಹುಡುಗರ ದೌರ್ಜನ್ಯ ನೋಡಿದಾಗಲೆಲ್ಲ ನನ್ನ ಆಸೆ ನೆರವೇರಿದರೆ ಎಂದು ಕನಸು ಕಾಣುತ್ತಿದ್ದೆ. ಕಾಲೇಜಿಗೆ ಬಂದ ಮೇಲೆ ರೋಡ್‌ರೋಮಿಯೋಗಳ ಕಾಟ ಅತಿಯಾದಾಗಲೆಲ್ಲ ಅಯ್ಯೋ ದೇವರೆ ನನ್ನ ಇದೊಂದು ಆಸೆ ನೆರವೇರಬಾರದೆ ಎಂದು ಹಲುಬಿದ್ದೆ. ಕಾಲೇಜು ಕಟ್ಟೆಹತ್ತಿ ಇಳಿದಾಯಿತು. ವರಾನ್ವೇಷಣೆ ಆರಂಭವಾಯಿತು. ಈ ಘಟ್ಟದಲ್ಲಿ ಗಿಡವಾಗಿದ್ದ ನನ್ನ ಆಸೆ ಬೆಳೆದು ಹೆಮ್ಮರವಾಯಿತು. ನಡೆಯಲಾರದ ಆಸೆಯಾದರಿಂದ ಕೈ ಕೈ ಹಿಸುಕಿಕೊಳ್ಳುವಂತಾಯಿತು.

ಗೃಹಸ್ಥಾಶ್ರಮಕ್ಕೆ ಕಾಲಿಟ್ಟದ್ದಾಯಿತು. ಪತಿರಾಯರ ಜೋರು ಜಂಭ, ಗಲಾಟೆ ನೋಡಿದಾಗಲೆಲ್ಲ ನನ್ನ ಆಸೆ ನೆರವೇರಿದ್ದರೆ ಎಂದು ಕನಸು ಕಾಣುತ್ತಿದ್ದೆ. ಕೈ ಬಿಡುತ್ತಿದ್ದೆ. ಚಿಕ್ಕಂದಿನಿಂದ ಜೋರಿನ ಹುಡುಗಿ ಎನಿಸಿಕೊಂಡಿದ್ದರೂ ಅದಕ್ಕೆ ಕಳಶವಿಟ್ಟಂತೆ ನನ್ನ ಆಸೆ ನೆರವೇರಿದ್ದಿದ್ದರೆ ಎಷ್ಟು ಸೊಗಸಿರುತ್ತಿತ್ತು ಎನಿಸುತ್ತಿತ್ತು. ಅಷ್ಟೇ ಸತ್ಯ. ಗೊತ್ತಾಯಿತೇ ನನ್ನ ಆಸೆ ಏನು ಎನ್ನುವುದು? ಇಲ್ಲ ಅನಿಸುತ್ತದೆ. ಹೇಳಿಬಿಡಲೇ? ಇದೇನು ಅಂತಹ ದುಬಾರಿ ಆಸೆಯಲ್ಲ. ಹೇಳಿಬಿಡ್ತೀನಿ. ನನ್ನ ಹಿರಿ ಆಸೆ ಎಂದರೆ "ನನಗೂ ಮೀಸೆ ಇದ್ದಿದ್ರೆ". ಹಿಡಿದು ಮಂಟಪದಕ್ಕಿಲ್ಲ ಮೀಸೆ ಮೇಲೆ ಕೈಯಾಡಿಸೋ ಈ ಗಂಡಸರಿಗೆ ಸರಿಯಾಗಿ ಬುದ್ಧಿ ಕಲಿಸುತ್ತಿದ್ದೆ, ನಾನು ನನಗೂ ಮೀಸೆ ಇದ್ದಿದ್ರೆ.

ಆರ್. ಸುಮಿತಾ

## ನೋಣವಾಗುವಾಸೆ

ಯಾವುದೇ ಸಮಾರಂಭ, ಸಂದರ್ಭ, ಪಾರ್ಟಿಗಳು ಎಲ್ಲರಿಗಿಂತ ಮೊದಲು ನಾನೇ ಹಾಜರು, ಏನಾ ಹೇಳುತ್ತೀರಿ. ಯಾವ ಮಂತ್ರಿಯೇ ಬರಲಿ, ಯಾವ ಪ್ರಖ್ಯಾತ ತಾರೆಯೇ ಬರಲಿ ಎಷ್ಟೇ ಸಂಗ್ಘಟವಿರಲಿ ಅವರ ತಲೆಯ ಮೇಲೆ ಕುಳಿತೇ ಹೋಗುವೆನು. ಎಲ್ಲಿಯಾದರೂ ಹೋಟೇಲು ಉದ್ಘಾಟನೆಯಿದ್ದರಂತೂ ಸರಿಯೇ, ನಾನೇ ಮೊದಲು ಉದ್ಘಾಟಿಸುವೆನು. ಹೋಟೆಲಿನ ತಿಂಡಿಗಳನ್ನು ಕಂಡರಂತೂ ಸರಿಯೇ ಬಾಯಲ್ಲಿ ನೀರೂರಿದರೂ ಕಿಸೆಯಲ್ಲಿ ಪೈಸೆ ಇಲ್ಲದವರಿಗೆ ನನ್ನ ಜಾತಿ ಒಳ್ಳೆಯದು. ಯಾಕೆಂದರೆ ತಿಂದಷ್ಟು ಮುಗಿಯಲಾರದವುಗಳನ್ನು ತಿನ್ನಬಹುದಲ್ಲವೇ? ಎಂಥಹ ಪ್ರಮುಖ 'ಫೈವ್ ಸ್ಟಾರ್' ಹೋಟೆಲುಗಳಿಗೂ ಯಾರ ಮುಲಾಜೂ ಇಲ್ಲದೆ ನುಗ್ಗಬಹುದು.

ಈಗಿನ ಶತಮಾನದಲ್ಲಿ ಮಂತ್ರಿಗಳಿಗಿಂತ ಸಿನೆಮಾ ತಾರೆಯರೇ ಪ್ರಾಮುಖ್ಯತೆಯನ್ನು ಹೊಂದಿದಾರಷ್ಟೇ? ಯುವಕರು ಹೇಗೆ ನಟಿಯರಿಗೆ ಆಸೆ ಪಡುತ್ತಾರೋ ಹಾಗೆಯೇ ಯುವತಿಯರು ನಟರಿಗೆ ಆಸೆಪಡುವುದು ಸ್ವಾಭಾವಿಕ. ಅಂತವರೆಲ್ಲಾ ನೋಣವಾದರೆಂದರೆ, ಅವರನ್ನು ಹತ್ತಿರದಿಂದ ನೋಡಲೂ ಮುಟ್ಟಲೂ ಆಗದವರಿಗೆ ಆ ತಾರೆಯರ ಬೆಡ್‌ರೂಂ ದೃಶ್ಯ, ಬಾತ್‌ರೂಂ ದೃಶ್ಯ, ಯಾರ ಮುಲಾಜೂ ಇಲ್ಲದ ಬಾಯಲ್ಲಿ ನೀರೂರುವಷ್ಟು ಸಲ ನೋಡಲು ಇದು ಒಳ್ಳೇ ಛಾನ್ಸು.

ಬ್ಲೂ ಫಿಲ್ಮುಗಳ ಹಾವಳಿಯಿರುವ ಈ ಯುಗದಲ್ಲಿ ಕಾಫಿ ಕುಡಿಯಲೂ ಹಣವಿಲ್ಲದವರಿಗೆ ನೋಣವಾದರೆಂದರೆ ಯಾರ ಹಂಗೂ ಇಲ್ಲದ ಪೋಲೀಸರ ಲಾಠೀ ಚಾರ್ಜನ್ನೂ ತಿನ್ನದೆ ಹೇಮಾ ಮಾಲಿನಿಯ ಕಥಕ್ಕಳಿಯನ್ನೂ ಪ್ರಮುಖ ತಾರೆಯ ಕ್ಯಾಬರೆಯನ್ನೂ ದೃಷ್ಟಿಸಬಹುದು. ಕಾಸಿನ ಖರ್ಚೂ ಇಲ್ಲದೆ ವಿದೇಶದಲ್ಲಿಯೂ ಹೋಗಬಹುದು.

**ಕೆ. ಶಿವಾನಂದ ವಿ. ಶೆಟ್ಟಿ**



**ನಡುರೋಡಿನಲ್ಲಿ ಸ್ನಾನ....**

ಮಜೆಸ್ಟಿಕ್ ಸರ್ಕಲ್ ಗೊತ್ತೇ? ಅದು ನನಗೆ ಬಹಳ ಇಷ್ಟ. ಏನು ಜನ. ಏನು ಬಸ್ಸು, ಏನು ಓಡಾಟ! ಅಬ್ಬಬ್ಬಾ, ಇದೆಲ್ಲಾ ನೋಡಲು ಮಜ. ಈಗ ಏನು ಮಾಡಬೇಕೆಂದರೆ. ಈ ಜನಜಂಗುಳಿಯ ರಸ್ತೆಯ ಮಧ್ಯೆ ನಿಂತು ಸ್ನಾನ ಮಾಡಬೇಕೂಂತ ನನಗೆ ಆಸೆ.

ವಿನಾಯಕಮೂರ್ತಿ

## ರೆಕ್ಕೆಗಳಿರಬೇಕು

ಬಯಸಿದಾಗ ಬಯಸಿದೆಡೆಗೆ  
ಪುರ್‍ರೆಂದು ಹಾರಿ, ಸರ್‍ರೆಂದು ಹಿಂದಿರುಗಲು  
ಜನರಿಗೆಲ್ಲ ರೆಕ್ಕೆಗಳಿರಬೇಕೆಂಬುದೊಂದು  
ನನ್ನ ಹಿರಿಯಾಸೆ.  
ಈ ಆಸೆ ಈಡೇರಿದಂದು,  
ಸದ್ಯ, ಬಸ್ಸುಗಳಿಗೆ ಕ್ಯೂ ನಿಲ್ಲುವುದು,  
ರೈಲು ವಿಮಾನಾಪಘಾತಗಳಲಿ ಸಾಯುವುದು  
ನಮಗೆಲ್ಲ ತಪ್ಪುವುದು.

**ಜಿ. ಸಂಧ್ಯಾದೇವಿ**

## ಹೆಣ್ಣಿನ ಮೋಹಕ್ಕೆ ಒಳಗಾಗಲಾರೆ

ಹೆಣ್ಣಿನ ಮೋಹದಲ್ಲಿ ಬೀಳಬಾರದು. ಹೆಣ್ಣಿನ ಮೋಹದ ಬಲೆಗೆ ಬಿದ್ದು "ಬಲೆಗೆ ಬಿದ್ದ ಮೀನಿನಂತೆ ಒದ್ದಾಡಬಾರದು" ಎಂಬುದೆ ನನ್ನ ಹಿರಿದಾದ ಆಸೆ. ಆದರೆ ಈ ಆಸೆ ಈಡೇರುವದೋ? ಬಿಡುವದೋ ? ನೋಡಬೇಕಾಗಿದೆ.

**ಚಂದ್ರಶೇಖರ ಬಿ. ಹಿರೇಮಠ**

## ನೋಡಿ

ಮೇನಕೆಯ ರೂಪಕ್ಕೆ ವಿಶ್ವಾಮಿತ್ರ ಸೋತ. ಸೀತೆಯ ಮೋಹಕತೆಗೆ ರಾವಣ ಬಲಿಯಾದ, ದ್ರೌಪದಿಗೆ ಸೋತ ಕೀಚಕ ಭೀಮನಿಂದ ಒದೆತಿಂದ ಕಲಿಯುಗದ ಕನ್ನಿಕೆ ಕನ್ಯೆಯಾದ ಹೇಮಾಮಾಲಿನಿಗೆ ಧರ್ಮೇಂದ್ರ ಸೋತನಾದ, ಆದರೆ ನನ್ನ ಸೌಂದರ್ಯಕ್ಕೆ ಯಾರೂ ಬೀಳುವುದೂ ಬೇಡ. ಏಳುವುದೂ ಬೇಡ ಎಂಬುದೆ ನನ್ನ ಆಸೆ.

**ಡಿ. ಭಾಟಿಕಾ**

## ಅಂದು ಗಾಂಧಿ, ಇಂದು ಜೆ. ಪಿ. ಮುಂದೆ ನಾನು

ನನ್ನ ಆಶೆಯ ಗುರಿಯಾವುದೆಂದರೆ ಜೆ.ಪಿ. ನಂತರ ನನ್ನ ಹೆಸರು ಚಿರಸ್ಥಾಯಿಯಾಗಿ ಉಳಿಯುವಂತೆ ಮಾಡುವದು.

ಗಾಂಧಿ ಅವರ ಹೆಸರು ಇತಿಹಾಸದ ಪುಟಗಳಲ್ಲಿ ಅಜರಾಮರವಾಗಿ ಉಳಿದಿದೆ. ಅವರ ನಂತರದಲ್ಲಿ ಜೆ.ಪಿ. ಅವರು ತಮ್ಮ ನಿಸ್ವಾರ್ಥತೆ, ದೇಶಾಭಿಮಾನ, ಆಡಳಿತದ ಶುದ್ಧೀಕರಣಗಳಿಂದಾಗಿ ಭಾರತದಲ್ಲಿ ಹೆಚ್ಚು ಜನಪ್ರಿಯ ವ್ಯಕ್ತಿಯಾಗಿದ್ದಾರೆ.

ಅವರ ನಂತರ ಅವರ ಆದರ್ಶ ಮೈಗೂಡಿಸಿಕೊಂಡು ಅವರಂತೆ ದೇಶಕ್ಕೆ ನಿಸ್ವಾರ್ಥ ಬುದ್ಧಿಯಿಂದ ಬಡವರ 'ಹಿಂದುಳಿದವರ' ಮಾನವತೆಯ ಉದ್ಧಾರಕ್ಕಾಗಿ ದುಡಿದು ನನ್ನ ನಿಧನದ ನಂತರ ನನ್ನ ಹೆಸರು ಇತಿಹಾಸದ ಪುಟಗಳಲ್ಲಿ ನಿರಂತರವಾಗಿ ಉಳಿಯುವಂತೆ ನನ್ನ ಜೀವನವನ್ನು ಮಾರ್ಪಡಿಸುವದು ನನ್ನ ಜೀವನದ ಆಸೆಯಾಗಿದೆ.

**ಬಾಬೂರಾವ್ ಕುಲಕರ್ಣಿ**

## ಗುಂಡು ಹಾರಿಸಬೇಕು

ನನ್ನ ಹತ್ತಿರವೊಂದು ಬಂದೂಕು ಇರಬೇಕು. ನಮ್ಮ ಶಾಲೆಯ ಹುಡುಗರುಗಳೆಲ್ಲಾ ಟೂರ್‌ಗೆ ಹೊರಟಿರಬೇಕು.

ನಾನು ಅಡಗಿ ಕುಳಿತು ಟೂರಿಸ್ಟ್ ಬಸ್ಸಿನ ಟೈರಿಗೆ "ಢಂ" ಅಂತ ಒಮ್ಮೆಲೇ ಬಂದೂಕಿನಿಂದ ಗುಂಡು ಹಾರಿಸಿ, ಬಸ್ಸು ಸೇರಿ ಹತ್ತಿ ಕಣಿವೆಗೆ ಉರುಳುವುದನ್ನು ನೋಡುವಾಗ ಹೇಗನಿಸುತ್ತದೆ?

**ರವಿಕುಮಾರ ಕೆ ಕುಲಕರ್ಣಿ**

## ಜೊತೆಗಾರನ ಆಸೆ

ನನಗಿರುವ ಒಂದೇ ಒಂದು ಆಸೆಯೆಂದರೆ. ಶಿಹಿನೀರಿನ ನೀಲಿ ಸಮುದ್ರತೀರದಲ್ಲಿ ಹುಲ್ಲಿನ ಮೇಲೆ ಒಂದು ದೊಡ್ಡ ಮರದ ಕೆಳಗೆ ಪ್ರಶಾಂತ ಸಮಯದಲ್ಲಿ ಕುಳಿತಿದ್ದಾಗ, ದೂರದಿಂದ ಕೊಳಲಿನ ನಾದ ಕೆಲವೊಮ್ಮೆ ವೀಣೆಯ ಇಂಪಾದ ನಾದದೊಂದಿಗೆ ಸೇರಿ ಹತ್ತಿರ ಬರುವಂತೆ ಕೇಳುತ್ತಿರಬೇಕು. ಶಿಹಿನೀರಿನ ತೀರದಲ್ಲಿರುವ ನಾನು ನನ್ನನ್ನೇ ಮರೆತಿರುವ ಆಸೆ ಹೊಂದಿದೆ. ಇದೀಗ ಜೊತೆಗೊಬ್ಬ ಜೊತೆಗಾರ(ರು) ಬೇಕೆಂಬ ಆಸೆಯೂ ಸೇರಿದೆ.

**ಕೆ ಅಂಜುಮ**

## ಭಗವಂತಾ ಇವರಿಗೆ ಒಳ್ಳೆ ಬುದ್ಧಿ ಕೊಡು

ರಾತ್ರಿ ವೇಳೆಯಲ್ಲಿ ಆಕಾಶದಲ್ಲಿ ಮಿನುಗುವ ಅಸಂಖ್ಯಾತ ನಕ್ಷತ್ರ ಪುಂಜರಾಶಿಗಳು ಅಲ್ಲದೇ ಚಂದ್ರನು ಕಣ್ಣಿಗೆ ಗೋಚರವಾಗುವದಾದರೆ, ಅದು ಸೂರ್ಯನ ಉದಯದ ನಂತರ ದಿಂದ ಅಸ್ತದವರೆಗೆ ಅಲ್ಲಿಯೇ ಇದ್ದರೂ ಆಕಾಶದಲ್ಲಿಯ ತಾರಾ ಪುಂಜಗಳು ಕಣ್ಣಿಗೆ ಗೋಚರವಾಗ ಲಾರವು. ಅದರಂತೆ ನೀರು ತುಂಬಿದ ಪಾತ್ರೆಯಲ್ಲಿ ಕೊಂಚ ಉಪ್ಪು ಸೇರಿಸಿ ಕೆಲವು ಕ್ಷಣಗಳ ನಂತರ ನೋಡಲು ಆ ಉಪ್ಪು ಕಣ್ಣಿಗೆ ಕಾಣುವುದು ಅಸಾಧ್ಯವೆಂದೂ, ಸಕ್ಕರೆಯನ್ನು ನೋಡಿದ ತಕ್ಷಣ ಸಕ್ಕರೆಯ ರುಚಿ ಇಷ್ಟೆಂದು ಹೇಳಲು ಬರದೇ ಆ ಸಕ್ಕರೆಯನ್ನು ಮೆಲ್ಲುವಾಗ ಅದರ ಸ್ವಾದ ಅರಿವಾಗುವಂತೆ ಪರಮಾತ್ಮ ನನ್ನು ಕಾಣಲು ಜ್ಞಾನ, ಭಕ್ತಿ ವೈರಾಗ್ಯ ಗಳಿಂದ ಪೂಜಿಸಿದಾಗ ಅವರವರ ಯೋಗ್ಯತಾನುಸಾರ ದೃಷ್ಟಿಗೆ ಗೋಚ ರನಾಗುವನು. ದೇವನಿರುವದು ಸತ್ಯ ವೆಂದು ಇಂಥ ಅಹಮಿಕೆಯಿಂದಾವೃತ್ತ ರಾದ ಮಂತಿಗಳಿಗೆ ಸರಿಯಾಗಿ ಅರು ಹಲು ಶಕ್ತಿಯನ್ನೂ, ತತ್ವಜ್ಞಾನ ವನ್ನೂ ಹೆಚ್ಚು ಕರುಣಿಸಲೆಂದು ಕೃಪಾಳುವಾದ, ಜ್ಞಾನಾನಂದಾದಿ ಗುಣ ಗಳಿಂದ ಪರಿಪೂರ್ಣನಾದ ಭಗವಂತ ನಲ್ಲಿ ಅರಿಕೆ ಮಾಡಬೇಕೆಂಬುದೇ ನನ್ನ ಹಿರಿಯಾಸೆ.

**ಬಿ. ಕೆ. ಚಂಗೇರಿ**

## ತಾಯಾಗುವ ಆಸೆ

ನಾನಿನ್ನೂ ಮದುವೆಯಾಗಿಲ್ಲ. ಆದರೆ ಮದುವೆಯಾಗಬೇಕೆಂಬುದು ನನ್ನ ಆಶೆ ಯಲ್ಲ. ತಾಯಿಯಾಗಬೇಕೆಂಬುದು. ಅದ ಕ್ಕಾಗೇ ನಾನು ನನ್ನ ಮನೆಯಲ್ಲಿ ಮಕ್ಕಳ ಆಟಕ್ಕೆ ಬೇಕಾಗುವ ಎಲ್ಲ ಆಟಿಕೆಗಳನ್ನೂ ಸಂಗ್ರಹಿಸಿದೆ. ನನಗೆ ಮುದ್ದು ಮಕ್ಕ ಳನ್ನು ಕಂಡರೆ ತುಂಬಾ ಇಷ್ಟ. ಜಾಣ ಮಕ್ಕಳಿಗೆ ತನ್ನ ಮಮತೆಯ ಧಾರೆ ಎರೆ ಯುವದು ಕೇವಲ ತಾಯಿಂದ ಮಾತ್ರ ಸಾಧ್ಯ. ಅಂಥ ತಾಯಿಯಾಗುವ ಬಯಕೆ ನನ್ನದು. ಈ ಜನ್ಮದಲ್ಲಿ ಅದು ಸಾಧ್ಯ ವಿಲ್ಲ ಎಂದು ಅರಿವಾಗಿದೆ ನನಗೆ. ಅಂದರೆ ನನಗೆ ಮಕ್ಕಳಾಗೊಲ್ಲ ಎಂದೇ ನಲ್ಲ. ಆಗಬಹುದು ಆದರೆ ಅವುಗಳಿಗೆ ನಾನು ಮಾತ್ರ ಕೇವಲ "ತಂದೆ" ಯಾಗ ಬಲ್ಲೆ. ಯಾಕೆಂದರೆ ನಾನು ಗಂಡಸು.

**ಸ್ ವಾರಿ**

## ಅಜ್ಜನಾಗಬೇಕು

ನಾನು ಏನಾಗಬಯಸುವೆ ಗೊತ್ತೇ? ನನಗೀಗ ಹದ್ನಾಲ್ಕು ವರ್ಷ ವಯಸ್ಸು. ಹದ್ನೆಂಟು ವರ್ಷದೊಳಗೇ ಮದುವೆ ಮಾಡ್ಕಂಡು ಒಂದು ಮಗುವಿನ ತಂದೆ ಯಾಗಿ, ಆ ಮಗುವೂ ತಾನು ಹದ್ನೆಂಟ್ ವರ್ಷದೊಳ್ಗ ಒಂದು ಮಗನ ತಂದೆ ಯಾದಾಗ, ಮೂವತ್ತೈದು ಮೂವ ತ್ತಾರು ವರ್ಷದ ನಾನು ಹೆಮ್ಮೆ ಯಿಂದ ನನ್ನ ಮೊಮ್ಮಗನನ್ನು ಊರ ತುಂಬ ತೋರಿಸಿಕೊಂಡು ಬರುವ ಆಸೆ. ಇಷ್ಟು ಚಿಕ್ಕ ವಯಸ್ಸಿನಲ್ಲೇ ಅಜ್ಜ ಆಗೋದು ಎಷ್ಟು ಮಜಾ ಅಲ್ಲವೆ?

**ಶಶಿಧರ ಶಿಂಹಟ್ಟಿ**

## ಸಿಹಿ ಮುತ್ತಿನಾಸೆ

ಭಾರತ ತಪ್ಪು ಆಟ ಆರಂಭಿಸಿದಾಗ ವಿಕೆಟ್ಟುಗಳು ಪಟಪಟನೇ ಉರುಳಿ ದಾಗ, ನಾನೊಬ್ಬ ಆಟಗಾರನಾಗಿ ಬಂದು ಸೆಂಚುರಿ ಮೇಲೊಂದು ಸೆಂಚುರಿ ಬಾರಿಸಿದಾಗ, ಆಟ ನೋಡಿದ ಸುಂದ ರಾಂಗಿಯೊಬ್ಬಳಿಂದ ಬ್ರಜೇಶ್ ಮುತ್ತು ಪಡೆದಂತೆ, ನಾನೂ ಎಲ್ಲರೆದುರಿನ ಲ್ಲಿಯೇ "ಸಿಹಿಮುತ್ತು" ಪಡೆಯ ಬೇಕೆಂಬಾಸೆ.

**ನಾಗಪತಿ**

## ದಾನ

ನನಗೇನೋ ಡಾಕ್ಟರ ಆಗಿ ಅದೆಷ್ಟೋ ರೋಗಿಗಳಿಗೆ ಸೇವೆ ಸಲ್ಲಿಸಬೇಕೆಂಬ ಆಸೆಯಿತ್ತು. ಆದರೆ, ಆ ಆಸೆ ಈಡೇ ರದೇ ಹೋದರೂ ಈಗ ನನಗಿರುವ ತೀವ್ರವಾದ ಆಕಾಂಕ್ಷೆಯೆಂದರೆ. ಇಹ ಲೋಕವನ್ನು ತ್ಯಜಿಸುವ ಮೊದಲು ನಮ್ಮಲ್ಲಿ ಇತರರಿಗೆ ಪ್ರಯೋಜನವಾಗು ವಂಥಹ ಅಂಗಾಂಗಗಳಿರುತ್ತವೆ. ಅವ ನ್ನೆಲ್ಲಾ ಅವಶ್ಯಕತೆಯಿದ್ದವರಿಗೆ ಕೊಡಬೇ ಕೆಂಬುದು.

**ಚುಮ್ಮ**

## ಸಂಪಾದಕಿ

ನನ್ನಾಸೆ ಅತೀ ಬೃಹತ್‌ವಾದದ್ದು. ಅದು ಒಂದು ಕನ್ನಡ ವಾರಪತ್ರಿಕೆಯ ಸಂಪಾದಕಿಯಾಗುವದು. ಹಾಂ, ಹಾಂ. ಇಷ್ಟಕ್ಕೆ ಮುಗಿಯಲಿಲ್ಲ ನನ್ನ ಆಸೆ. ಆ ಪತ್ರಿಕೆಗೆ ಬಂದ ಪ್ರತಿಯೊಂದು ಲೇಖನಾ ಳನ್ನೂ ಅಸ್ವೀಕೃತವೆಂದು ಮರಳಿಸದೇ ಪ್ರಕಟಿಸುವದು. ಬರೆದ ಲೇಖಕ/ಕಿ ಯರ ಮನಸ್ಸಿಗೆ ಸಂತೋಷವನ್ನುಂಟು ಮಾಡುವದು.

**ಸುಮತಿ ಉಡುಪಿ**

## ದೇವರ ಮೇಲೆ ಕೈ

ಸ್ಥಳ ಮಹಾತ್ಮೆಗೆ ಹೆಸರಾದ ಒಂದು ದೇವಸ್ಥಾನವನ್ನು ಭಯಭಕ್ತಿಯಿಂದ ದಿಟ್ಟಿಸುತ್ತಾರೆ. ಕೈ ಮುಗಿದು ಪಿಟಿ ಪಿಟಿ ತುಟಿ ಅಲುಗಾಡಿಸುತ್ತಿದ್ದಾರೆ. ಒಟ್ಟಿ ನಲ್ಲಿ ದೈವ ದರ್ಶನಕಾಗಿ ಕಾಯುವ ಭಕ್ತರ ಕಾತರದ ಕ್ಷಣವದು.

ಗರ್ಭಗುಡಿಯ ಬಾಗಿಲು ತೆರೆಯು ತ್ತದೆ. ಸಾಲುಗಟ್ಟಿ ನಿಂತಿರುವ ಭಕ್ತ ಜನ ರೆಲ್ಲಾ ನಾಮುಂದು ತಾಮುಂದೆಂದು ತಲೆಯೆತ್ತುತ್ತಾರೆ.

ಸಾಲುಗಟ್ಟಿ ಸೇರಿದ ಜನಸಂದಣಿ ಯನ್ನು ಅತ್ತಿತ್ತ ಸರಿಸುತ್ತಾ ಗರ್ಭಗು ಡಿಯತ್ತ ಓಡಬೇಕು. ಪುರೋಹಿತನಿಂದ ಆರತಿ ತಟ್ಟೆ ಕಿತ್ತೆಸೆಯಬೇಕು. ಕಲ್ಲಿನ ಮೂರ್ತಿಯ ನೆತ್ತಿಯ ಮೇಲೆ ಕುಕ್ಕ ಬೇಕು.

**ಕಾಸರಗೋಡು ಗಣೇಶ**

## ನಲ್ಲಿಯಿಂದ ಕಾಫಿ !

ನನಗೆ ಹೇಗಾದ್ರೂ ೮–೧೦ ಲಕ್ಷ ರೂಪಾಯಿಗಳು ಸಿಕ್ಕಿದ್ರೆ ... ಏನು ಮಾಡ್ತೀನಿ ಗೊತ್ತಾ? ಮೊದಲು ಒಂದು ಒಳ್ಳೆಯ ಹೊಸಾ ಅಂಬಾಸಿಡರ್ ಕಾರ್ ಕೊಂಡ್ಕೋಬೇಕು. ನನ್ನದೇ ಸ್ವಂತ ಕಾರಿನ್ನು ನಾನೇ ಜುಂ ಅಂತಾ ಡ್ರೈವ್ ಮಾಡಿಕೊಂಡು ಹೋಗೋ ಆಸೆ. ಇನ್ನೊಂದು ಆಸೆ ಏನು ಗೊತ್ತಾ? ನಾನು ಹೆಸರಾಂತ ಪ್ರೆಸ್‌ನಲ್ಲಿ ಟೆಲಿಫೋನ್ ಆಪ ರೇಟರ್‌ಕಂ ರಿಸೆಪ್ಷನಿಸ್ಟ್ ಆಗಿದ್ದೀನಿ. ಅದೇ ಕಾಂಪೌಂಡ್‌ನಲ್ಲೇ ಅಕ್ಕ ಪಕ್ಕ ಬೇರೆ ಆಫೀಸುಗಳೂ ಇವೆ. ಹೀಗಾಗಿ ವಾಹನಗಳ ಗಲಾಟೆ ಜಾಸ್ತಿ. ಅವುಗಳ ಕಾಟಂತೂ ತುಂಬಾ ಇದೆ. ಮತ್ತೆ ಆಫೀಸಿಗೆ ಬಂದು ಹೋಗುವವರ ಮಾತುಕತೆ ಚರ್ಚೆ ಎಲ್ಲಾ ಅಲ್ಲೆ ನಡೆ ಯುತ್ತೆ. ಇನ್ನು ನಮ್ಮ ಅಟೆಂಡರ್ಸ್ ಇದಾರಲ್ಲಾ ಅವರ ಮಿಟಿಂಗೂ ಜಗಳ...ಎಲ್ಲಾ ನನ್ನ ಕ್ಯಾಬಿನ್ ಬಾಗಿಲ ಹತ್ತಿರವೇ ನಡೆಯಬೇಕು. ಹೀಗಾಗಿ ನನಗೆ ಕೆಲವೊಮ್ಮೆ ಫೋನಿನಲ್ಲಿ ಬರೋ ಮಾತುಗಳೇ ಕೇಳಿಸದೆ ಕಷ್ಟ ಪಡು ತ್ತೇನೆ. ಅದಕ್ಕೆ ನನಗೆ ಲಕ್ಷ ರೂಪಾಯಿ ಬಂದರೆ ಆ ಟೆಲಿಫೋನ್‌ಗಾಗೇ ಸಪರೇಟ್ ಆದ ಏರ್ ಕಂಡೀ ಷನ್ ಮಾಡಿಸಿ ಹೊರಗಿನವರು ನನಗೂ ನಾನು ಹೊರಗಿನವರಿಗೂ ಕಾಣುವಂತ ಬರೀ ಗಾಜಿನಲ್ಲೇ ಕ್ಯಾಬಿನ್ ಕಟ್ಟಿ ಸುತ್ತೇನೆ. ಇನ್ನೊಂದಾಸೆ ಏನು ಗೊತ್ತಾ? ನಮ್ಮ ಟೆಲಿಫೋನ್ ಬಾಕ್ಸ್ ಹಳೇ ಕಾಲದ ಮುದಿ ಹೆಂಗಸಿನಂತೆ ಆಗಾಗ ವಿಚಿತ್ರವಾಗಿ ವಟಗುಟ್ಟುತ್ತೆ. ಅದ ರಿಂದ ಕೇಳಿ ಬರುವ ಮಾತುಗಳೇ ಏನೆಂದು ಅರ್ಥವಾಗುವದಿಲ್ಲ. ಅದೂ ಅಲ್ದೆ ಮೂರು ದಿನಕ್ಕೊಮ್ಮೆ ಒಳ್ಳೇ ಕಾಲ್ಸ್ ಕೊಡೂ ಟೈಂನಲ್ಲಿ ಔಟ್ ಆಫ್ ಆರ್ಡರ್ ಆಗಿ ಕೈ ಕೊಟ್ಟಿಡುತ್ತೆ. ಅದಕ್ಕೆ ಅದನ್ನು ಹಾಗೆ ಎಲ್ಲಾದರೂ ದೂರ ಎತ್ತಿಟ್ಟು ಬೇರೆ ಹೊಸದು, ದೊಡ್ಡದು, ಅಂದ್ರೆ ತುಂಬಾ ಲೈನ್ಸ್ ಇರೋ ಅಂತಾದ್ದು, ಏಕೆಂದ್ರೆ ನಂಬರ್ ಕೇಳೋರ್ಗೆಲ್ಲಾ ಚಟ್‌ಪಟ್ ಅಂತ ಕಾಲ್ಸ್ ಕೊಡ್ತಾ ಇರಬೇಕು ಅಂತಾದ್ದನ್ನು ಕೊಂಡ್ಕೋಬೇಕೂಂತ ಆಸೆ. ನಮ್ಮ ಆಫೀಸಿನ ಮುಂದೆ ಮತ್ತೆ ಹಿಂದೆ ಅಂದವಾದ ಹೂವಿನ ತೋಟ ಮಾಡಿಸಬೇಕೂಂತ ಆಸೆ. ಮತ್ತೆ ಫೋನಿನಲ್ಲಿ ಮಾತಾಡಿ ಮಾತಾಡಿ ಗಂಟಲು ಒಣಗಿಸಿಕೊಳ್ಳೋ ನನಗೆ ಆಗಾಗ್ಗೆ ಕಾಫಿ. ಕೊನೆಗೆ ನೀರೂ ಸಪ್ಲೈ ಮಾಡೋರೇ ಇಲ್ಲ. ಕ್ಯಾಂಟೀನ್ ಹುಡುಗನಿಗೆ ೧೧ ಗಂಟೆಗೆ ಕಾಫಿಗೆ ಹೇಳಿದರೆ ಅವನು ೧೨–೩೦ಗೆ ತರ ತ್ತಾನೆ. ಆದ್ದರಿಂದ ಥ್ರೂ ಕ್ಯಾಂಟೀನ್ ನಿಂದಲೆ ಪೈಪಿನ ಮೂಲಕ ಫ್ರೆಷ್ ಕಾಫಿ ಸಪ್ಲೈ ನನ್ನ ಕ್ಯಾಬಿನ್‌ಗೆ ಆಗುವಂತೆ ನಲ್ಲಿಗಳನ್ನು ಇಡಿಸುತ್ತೇನೆ. ಎರಡು ನಲ್ಲಿಗಳಿದ್ದು ಒಂದನ್ನು ತಿರುಗಿ ಸಿದರೆ ಸ್ವಚ್ಛವಾದ ನೀರೂ ಇನ್ನೊಂ ದನ್ನು ತಿರುಗಿಸಿದರೆ ಫ್ರೆಷ್ ಕಾಫಿ ಬರಬೇಕು. ಈ ಸಿಸ್ಟಮ್ ಎಲ್ಲಾ ಕೋಣೆ ಗಳಲ್ಲೂ ಇಡಿಸುತ್ತೇನೆ. ಆಗ ನೀವು ನನ್ನ ನೋಡಲು ಆಫೀಸಿಗೆ ಬಂದರೆ ಬಿಸಿ ಬಿಸಿ ಫ್ರೆಷ್ ಕಾಫಿಯ ಆತಿಥ್ಯ ನಿಮಗೆ ನೀಡಬೇಕೆಂಬ ಆಸೆ.

ನನ್ನ ಈ ಆಸೆಗಳೆಲ್ಲಾ ನೆರವೇರಿದ ದಿನ ನಿಮ್ಮನ್ನೆಲ್ಲಾ ನನ್ನ ಆಫೀಸಿಗೆ ಕರೆದು ಆತಿಥ ಮಾಡಬೇಕೂಂತ ನನಗೆ ತುಂಬಾ ಆಸೆ. ಬರ್‍ತೀರಾ?

**ವತ್ಸಲ ಎಲ್.**



# ಕಾಡು ಕುದುರೆ

ಚಂದ್ರಶೇಖರ ಕಂಬಾರ

ಕಾಡು ಕುದುರೆ ಓಡಿ ಬಂದಿತ್ತಾ॥

ಊರಿನಾಚೆ ದೂರ ದಾರಿ ಸುರುವಾಗೋ ಜಾಗದಲ್ಲಿ
ಮೂಡಬೆಟ್ಟ ಸೂರ್ಯಹುಟ್ಟಿ ಹಸರಿನ ದುಂಟ್ಟ ಒಡವಲ್ಲಿ
ಮುಂದಿವೇ ಇಲ್ಲದ ನೇಗಿಲಿನಿಂದ
ಜಾರಿಬಿದ್ದ ಉಲ್ಕೀಹಾಂಗ
ಕಾಡಿನಿಂದ ಚಂಗನ ನೆಗೆದಿತ್ತಾ॥

ಮೈಯಂಬೆಂಕಿ ಮಿರಗುತ್ತಿತ್ತು, ಬ್ಯಾಸಗಿ ಬಿಸಿಲ ಉಸಿರಾಡಿತ್ತ
ಹೊತ್ತಿ ಉರಿಯೋ ಕೇಶರಾಶಿ ಕತ್ತಿನಾಗ ಕುಣೀತಿತ್ತ
ಧೂಮಕೇತು ಹಿಂಬಾಲಿತ್ತ
ಹೌಹಾರಿತ್ತ, ಹರದಾಡಿತ್ತ
ಹೈಹೈ ಅಂತ ಹಾರಿ ಬಂಧಿತ್ತಾ॥

ಕಣ್ಣನಾಗ ಸಣ್ಣ ಖಡ್ಗ ಆಸುಪಾಸು ಝಳಪಿಸಿತ್ತ
ಬೆನ ಹುರಿ ಬಿಗಿದಿತ್ತಣ್ಣ ಸೊಂಟದ ಒಂಗಾರ ತಿರುಗುತ್ತಿತ್ತು
ಬಿಗಿದ ಕಾಡ ಬಿಲ್ಲಿನಿಂದ
ಬಿಟ್ಟ ಬಾಣದಾಂಗ ಚಿಮ್ಮಿ
ಹದ್ದಮೀರಿ ಹಾರಿ ಬಂದಿತ್ತಾ॥

ನೆಲ ಒದ್ದು ದುದ್ದ ತೋಡಿ ಗುದ್ದಿನ ಬದ್ದಿ ಬದಿಯಾಗಿ
ಜರತಿ ನೀರು ಭರ್ತಿಯಾಗಿ ಹರಿಯೊಹಾಂಗ ಹಜ್ಜಹಾಕಿ
ಹತ್ತೀದವರ ಎತ್ತೀಕೊಂಡು
ಏಳಕೊಳ್ಳ ತಿಳ್ಳಿ ಆಡಿ
ಕಳ್ಳಮಳ್ಳ ಆಡಿಸಿಕೆಡಿವಿತ್ತಾ॥

# ಸ್ಥಳೀಯ ಪತ್ರಿಕೆಗಳಿಗೊಂದು ಆದರ್ಶ

# ಹುಬಳಿ ಗಜೆಟ್

## ಸುರೇಂದ್ರ ದಾನಿ

ಸ್ಥಳೀಯ ಪತ್ರಿಕೆ ಅಥವಾ ಸ್ಥಳೀಯ ಪತ್ರಿಕೆ ಎಂದರೆ ಎಲ್ಲರೂ ಮೂಗು ಮುರಿಯುವವರೇ. ಯಾರಾದರೂ ತಮ್ಮ ಪ್ರತಿಷ್ಠೆಗಾಗಿಯೋ ಸ್ವಾರ್ಥ ಸಾಧನೆಗಾಗಿಯೋ ಆ ಪತ್ರಿಕೆ ನಡೆಸುತ್ತಿರುವರೆಂಬುದೇ ಸಾಮಾನ್ಯ ಭಾವನೆ. ಆದರೆ "ಹುಬಳಿ ಗಜೆಟ್" ಅಂಥದ್ದಾಗಿರಲಿಲ್ಲ. ಅದು ಸ್ಥಳೀಯ ಪತ್ರಿಕೆಯಾದರೂ ಯಾವ ಪ್ರತಿಷ್ಠೆಗೂ ಕಟ್ಟು ಬಿದ್ದಿರಲಿಲ್ಲ. ಯಾವ ಸ್ವಾರ್ಥವೂ ಅದರ ಉದ್ದೇಶವಾಗಿರಲಿಲ್ಲ. ದಿವಂಗತ ಡಾ. ಎನ್. ಎಸ್. ಹರ್ಡೀಕರರು ತಮ್ಮ ಚಾರಿತ್ರ್ಯ, ಶೀಲ ಮತ್ತು ರಾಜಕೀಯದಲ್ಲಿ ಎಷ್ಟು ನಿಸ್ಪೃಹರೋ ಪತ್ರಿಕೆಯಲ್ಲೂ ಅದೇ ನಿಸ್ಪೃಹತೆಯನ್ನು ತೋರಿಸಿದರು. ಹಾಗೆಂದೇ ಅದು ಅಂದು ಇಂದು ಎಂದಿಗೂ ಸ್ಥಳೀಯ ಪತ್ರಿಕೆಗಳಿಗೆ ಒಂದು ಆದರ್ಶವಾಗಿ ನಿಂತಿದೆ.

ಇಂದು ಹುಬ್ಬಳ್ಳಿ ಗಜೆಟ್ ಪತ್ರಿಕೆ ಬಹಳ ಜನರಿಗೆ ನೆನಪಿರಲಿಕ್ಕಿಲ್ಲ. ಕೆಲವರಿಗೆ ತಲೆ ಕೆರೆದುಕೊಂಡರೆ ನೆನಪಾಗಬಹುದು. ಆದರೆ ಹುಬ್ಬಳ್ಳಿ ನಗರದ ಮತ್ತು ನಗರಸಭೆಯ ಇತಿಹಾಸವನ್ನು ಯಾರಾದರೂ ಕೆದಕಿದರೆ ಅಲ್ಲಿ ಈ ಪತ್ರಿಕೆಯ ಹೆಸರು ಮತ್ತು ಕಾರ್ಯ ಸ್ಫುಟವಾಗಿ ಕಂಡು ಬರುತ್ತದೆ.

ಹುಬ್ಬಳ್ಳಿಯಲ್ಲಿ ಇಂದು ಕೆಲ ದೊಡ್ಡ ಬೀದಿಗಳಿವೆ. ಮಹಾತ್ಮಾಗಾಂಧಿ ಉದ್ಯಾನ, ಇಂದಿರಾಗಾಜಿನ ಮನೆ, ನೃಪತುಂಗ ಬೆಟ್ಟ, ಮೊದಲಾದ ಆಕರ್ಷಣೆಯ ಕೇಂದ್ರಗಳೂ ಇವೆ. ಆದರೂ ಹುಬ್ಬಳ್ಳಿಯೆಂದರೆ ಹೊಲಸಿಗೆ ಇನ್ನೊಂದು ಹೆಸರೆಂಬ ಆರೋಪವನ್ನು ಬಹು ಜನರು ಒಪ್ಪುತ್ತಾರೆ. ಇಂದು ನಾವು ಕಾಣುವ ಕೆಲವೇ ಹೊಸತನದ ಮತ್ತು ಸ್ವಚ್ಛತೆಯ ನಾಂದಿ ಹಾಡಿದವರ ೩೮ ವರ್ಷಗಳ ಹಿಂದೆ ಈ ನಗರಸಭೆಯ ಆಡಳಿತಗಾರರಾಗಿ ಬಂದ ರಾವ ಸಾಹೇಬ ಪಿ. ಎಲ್. ಬೆಣ್ಣೆಯವರು ಜಾರಿಗೆ ತಂದ ಸುಧಾರಣೆಗಳನ್ನು ಕಣ್ಣಾರೆ ಕಂಡವರು ಇಂದಿಗೂ ಅವರನ್ನು ಹಾಡಿ ಹರಸುತ್ತಾರೆ. ಅವರು ಅಧಿಕಾರ ವಹಿಸಿಕೊಳ್ಳಲು ಪ್ರೇರಕವಾದ ಕಾರಣವೇ ಹುಬಳಿ ಗಜೆಟ್ಟಿನ ಜನ್ಮಕ್ಕೂ ಪ್ರೇರಣೆ ನೀಡಿತು. ಅಂದಿನ ಕಾಲದಲ್ಲಿ ನಗರಸಭೆಗಳನ್ನು ಸರಕಾರದ ವಶಕ್ಕೆ ತೆಗೆದುಕೊಳ್ಳುವದು ಈಗಿನಂತೆ ಸುಲಭದ ಕೆಲಸವಾಗಿರಲಿಲ್ಲ. ಲೋಕನಿಯುಕ್ತ ಪ್ರತಿನಿಧಿಗಳಿಗೆ ನೀಡಿದ ಅಧಿಕಾರ ಅದೊಂದೇ ಆಗಿದ್ದುದರಿಂದ ಆಗಿನ ಬ್ರಿಟಿಶ್ ಸರಕಾರದವರು ಅದನ್ನು ಕಿತ್ತುಕೊಳ್ಳಲು ಬಹಳಷ್ಟು ಕೈ ಕಾಯುತ್ತಿದ್ದರು. ಆದ್ದರಿಂದ ಅಂದು ಈ ಉದ್ದೇಶ ಸಾಧನೆಗೆ ಜನತೆ ಒಳ್ಳೇ ಸುಸಂಘಟಿತ ಮತ್ತು ಶ್ರಮಪೂರ್ಣ ಪ್ರಯತ್ನ ನಡೆಸಬೇಕಾಯಿತು. ಸ್ಥಳೀಯ ದಿನ ಪತ್ರಿಕೆಗಳಾದ ತರುಣ ಕರ್ನಾಟಕ,ಲೋಕಮತ,ಸಂಯುಕ್ತ ಕರ್ನಾಟಕ ಪತ್ರಿಕೆಗಳು ನಗರಸಭೆಯ ಅಸಮರ್ಪಕ ಆಡಳಿತದ ವಿರುದ್ಧ ಬರೆಯುತ್ತಲೇ ಇದ್ದವು. ಲೋಕಮತ ಪತ್ರಿಕೆಯು ಬಸವನ ಬಾಸಾಳು ಎಂಬ ಶೀರ್ಷಿಕೆಯಲ್ಲಿ ಆಗಾಗ ಪ್ರಹಾರ ನಡೆಸುತ್ತಲೇ ಇತ್ತು. "ತರುಣ ಕರ್ನಾಟಕವೂ" ತನ್ನ ಧಡಲ್ ಬಾಜಿ ಹಾರಿಸುತ್ತಲೇ ಇತ್ತು. ಆದರೆ ಡಾ. ಹರ್ಡೀಕರರು ಈ ಪ್ರಶ್ನೆಯನ್ನು ತಮ್ಮ ಕೈಗೆತ್ತಿಕೊಂಡು ಇದಕ್ಕೆ ಒಂದು ಜನತಾ ಚಳವಳಿ ಸ್ವರೂಪ ಕೊಡುವ ವರೆಗೆ ಯಾವ ಪರಿಣಾಮವೂ ಉಂಟಾಗಲಿಲ್ಲ. ೧೯೩೪ರಲ್ಲಿ ಡಾ. ಹರ್ಡೀಕರರು ತಮ್ಮ ಜೇಲುವಾಸವನ್ನು ಮುಗಿಸಿಕೊಂಡು ಬಂದಕೂಡಲೇ ಹುಬ್ಬಳ್ಳಿ ನಗರಸಭೆ ಸುಧಾರಣೆಯ ಸಮಸ್ಯೆ ಎತ್ತಿಕೊಂಡರು. ಮರು ವರ್ಷವೇ ನಗರಸಭೆಗೆ ತ್ರೈವಾರ್ಷಿಕ ಚುನಾವಣೆಗಳು ನಡೆದವು. ೧೯೩೭ರಲ್ಲಿ ಪ್ರಾಂತಿಕ ಶಾಸನ ಸಭೆಗಳ ಚುನಾವಣೆಯಲ್ಲಿ ಕಾಂಗ್ರೆಸ್ಸು ಸ್ಪರ್ಧಿಸಿದ್ದರಿಂದ ಡಾ. ಹರ್ಡೀಕರರು ಅದರಲ್ಲಿ ಮಗ್ನವಾಗಬೇಕಾಯಿತು. ಆ ಚುನಾವಣೆಗಳು ಮುಗಿದ ಕೂಡಲೇ ಮತ್ತೆ ನಗರಸಭೆಯ ಪ್ರಶ್ನೆಗೆ ಕೈ ತೊಳೆದುಕೊಂಡು ಬೆನ್ನು ಹತ್ತಿದರು. ಅನೇಕ ಲೇಖನಗಳನ್ನು ಬರೆದಿದ್ದಾಯಿತು. ದೂರುಗಳನ್ನು ಸಲ್ಲಿಸಿದ್ದಾಯಿತು. ಬೀದಿ ಬೀದಿಗಳಲ್ಲಿ ಸಭೆ ಮಾಡಿ ಜನರಲ್ಲಿ ಜಾಗೃತಿ ಮೂಡಿಸಲಾಯಿತು. ಕೊನೆಗೂ ಒಂದು ನೂರು ಪುಟಗಳಷ್ಟು ದೀರ್ಘವಾದ ಮನವಿಯೊಂದನ್ನು ಸಿದ್ಧ ಮಾಡಿ ಅದಕ್ಕೆ ೫೦ ಸಾವಿರಕ್ಕಿಂತ ಹೆಚ್ಚು ಸಹಿಗಳನ್ನು ಸಂಗ್ರಹಿಸಿ ಸರಕಾರಕ್ಕೆ ಸಲ್ಲಿಸಲಾಯಿತು. ಇಷ್ಟೆಲ್ಲ ಪ್ರಯತ್ನ ನಡೆಸಿದ ನಂತರ ೧೯೩೬ರಲ್ಲಿ ನಡೆಯಬೇಕಾಗಿದ್ದ ತ್ರೈವಾರ್ಷಿಕ ಚುನಾವಣೆಗಳನ್ನು ಕೆಲ ಕಾಲ ಮುಂದೆ ಹಾಕಲು ಸರಕಾರ ಒಪ್ಪಿತು. ಮತ್ತು ೧೯೩೮ರ ಜನವರಿ ತಿಂಗಳಲ್ಲಿ ಹುಬ್ಬಳ್ಳಿ ನಗರ ಸಭೆಯನ್ನು ರದ್ದುಗೊಳಿಸಿ ಅದರ ಆಡಳಿತವನ್ನು ತನ್ನ ವಶಕ್ಕೆ ತೆಗೆದುಕೊಂಡಿತು.

ನಗರಸಭೆ ರದ್ದಾದ ನಂತರ ಹೊಸ ಅಧ್ಯಾಯ ಪ್ರಾರಂಭವಾಯಿತು. ನಗರವನ್ನು ಸುಧಾರಿಸುವದೆಂತೆಂಬ ಬಗ್ಗೆ ವಿಧಾಯಕ ದಿಸೆಯಲ್ಲಿ ಕೆಲಸ ಪ್ರಾರಂಭಿಸಬೇಕಾಯಿತು. ನಗರಸಭೆ ಅಧಿಕಾರಿಗಳಿಗೆ ಜನರ ಅನಿಸಿಕೆ ಬೇಡಿಕೆಗಳನ್ನು ತಿಳಿಸುವದಲ್ಲದೆ ಅವರು ಮಾಡುತ್ತಿರುವ ಕೆಲಸದ ಬಗ್ಗೆ ಜನರಿಗೆ ತಿಳುವಳಿಕೆ ಕೊಡಬೇಕಾಯಿತು. ಜನರಲ್ಲಿ ಸಹ ತಮ್ಮ ಕರ್ತವ್ಯ ಹೊಣೆಗಾರಿಕೆಗಳ ಬಗ್ಗೆ ಒಂದು ಜಾಗೃತಿ ಮೂಡಿಸಬೇಕಾಯಿತು. ಈ ಕೆಲಸಕ್ಕೆ ತಮ್ಮದೇ ಆದ ಒಂದು ಪತ್ರಿಕೆ ಬೇಕೆಂದು ಡಾ. ಹರ್ಡೀಕರರಿಗೆ ಅನಿಸಿತು. ಸಾಮಾನ್ಯವಾಗಿ ನಾವು ಒಂದು ಚಳವಳಿಯ ಪ್ರಚಾರಕ್ಕೆ ಪತ್ರಿಕೆ ಅವಶ್ಯವೆಂದು ಭಾವಿಸುತ್ತೇವೆ. ಅಂಥ ಪತ್ರಿಕೆ ಜನಪ್ರಿಯವಾಗುವದೂ ಸುಲಭ. ಆದರೆ ಡಾ. ಹರ್ಡೀಕರರ ದಾರಿಯೇ ಬೇರೆ. ಅವರು ಚಳವಳಿ ನಡೆಸುವವರೆಗೆ ಪ್ರಚಾರಕ್ಕಾಗಿ ಬೇರೆ ಪತ್ರಿಕೆಗಳನ್ನೇ ಅವಲಂಬಿಸಿದರು ಆ ಭಾಗ ಮುಗಿದು ವಿಧಾಯಕ ಕಾರ್ಯ ಮಾಡುವ ಭಾಗ ಪ್ರಾರಂಭವಾದಾಗ ಬೇರೆಯವರನ್ನು ಆಗ್ರಹಪಡಿಸದೇ ತಮ್ಮದೇ ಆದ ಪತ್ರಿಕೆಯನ್ನು ಪ್ರಾರಂಭಿಸಲು ನಿರ್ಧರಿಸಿದರು.

೧೯೩೮ರ ಜನವರಿ ೫ ರಂದು ಹುಬ್ಬಳ್ಳಿ ನಗರಸಭೆ ರದ್ದಾಯಿತು. ಅದೇ ತಿಂಗಳ ೨೭ರಂದು ಡಾಕ್ಟರರ "ಹುಬ್ಬಳ್ಳಿ ಗಾಝೆಟ್" ಪ್ರಕಟವಾಯಿತು. ಪತ್ರಿಕೆಯನ್ನು ಹೊರ ತರುವ ನಿರ್ಣಯ ಮತ್ತು ಪ್ರಕಟಣೆ ಇಷ್ಟೊಂದು ಶೀಘ್ರವಾದರೂ ಅದರ ವಿಚಾರ ಮತ್ತು ಕಲ್ಪನೆ ಡಾಕ್ಟರರಿಗೆ ಬಹು ದಿನಗಳಿಂದಲೂ ಇತ್ತು. ಹಿಂದುಸ್ತಾನಿ ಸೇವಾದಲದ ನಾಯಕರಾದ ವ್ಹಾಲಂಟಿಯರ್ ಪತ್ರಿಕೆಯನ್ನು ನಡೆಸಿದ ಅನುಭವ ಅವರಿಗಿತ್ತು. ಕಲಕತ ಮುನಸಿಪಲ್ ಗೆಜೆಟ್ ಎಂಬ ಪತ್ರಿಕೆಯೊಂದು ನಾಗರಿಕರ ಹಕ್ಕು ಬಾಧ್ಯತೆಗಳ ಜಾಗೃತಿಯನ್ನುಂಟು ಮಾಡಲು ಹೆಣಗುತ್ತಿರುವುದು ಅವರ ಕಣ್ಮುಂದೆ ಇತ್ತು. ಅದೇ ಅವರಿಗೆ ತಮ್ಮ ಪತ್ರಿಕೆಗೆ ಹುಬ್ಬಳ್ಳಿ ಗಜೆಟ್ ಎಂದು ನಾಮಕರಣ ಮಾಡಲು ಪ್ರೇರಣೆ ನೀಡಿತಂತೆ.

ನಿರ್ದಾಕ್ಷಿಣ್ಯ ಪಕ್ಷ ಪತ್ರಿಕೆ ಎಂಬ ಶಿರೋನಾಮೆಯಿಂದ ಡೆಮಿ ಅರ್ಧ

ಆಕಾರದ ಎಂಟು ಪುಟಗಳ ಹುಬ್ಬಳ್ಳಿ ಗ್ಯಾಝೆಟ್‌ನ ಪ್ರಥಮ ಸಂಚಿಕೆ ಡಾ. ಎನ್. ಎಸ್. ಹರ್ಡೀಕರರ ಸಂಪಾದಕತ್ವದಲ್ಲಿ ೨೬—೧—೧೯೩೯ ರಂದು ಪ್ರಕಟವಾಯಿತು. ಡಾ. ಕನ್ನಡ ಅನುವಾದವನ್ನು ಪ್ರಕಟಿಸಲಾಗಿದೆ. ಅದರಲ್ಲಿ ಅವರು ಪತ್ರಿಕೆಯ ಧ್ಯೇಯ ಧೋರಣೆಗಳನ್ನು ವಿವರಿಸುತ್ತ- The gazette will live during the period of supercessiou

ಹುಬ್ಬಳ್ಳಿ ಮುನಸಿಪಾಲ್ಟಿ ರದ್ದಾದುದೇಕೆ ಎಂಬ ಲೇಖನವೊಂದನ್ನು ಶ್ರೀ ರಾ. ವೆ. ಕರಗುದರಿಯವರು ಬರೆದಿದ್ದಾರೆ. ಹುಬ್ಬಳ್ಳಿ ನಗರದ ಮತ್ತು ನಗರಸಭೆಯ ಸಮಸ್ಯೆಗಳನ್ನು ವುದು ಮತ್ತು ಮುಖಪುಟದಲ್ಲಿ ಪತ್ರಿಕೆಯ ಹೆಸರಿನ ತಲೆಯ ಮೇಲೆ ಅಗ್ರಲೇಖನ ಶೀರ್ಷಿಕೆ ಬರೆದು ಲೇಖನಗಳು ಅಲ್ಲೇ ಪ್ರಾರಂಭವಾಗಿರುವುದನ್ನು ನೋಡಿದರೆ ಪತ್ರಿಕೆಯ ವಿನ್ಯಾಸ

ಹುಬ್ಬಳ್ಳಿ ಗಝೆಟ

THE

HUBLI GAZETTE

೧ ಮತ್ತು ೧೫ನೆಯ ತಾರೀಖುಗಳಲ್ಲಿ ಪ್ರಕಟವಾಗುವ ನಿರ್ಭಿಡ ಪಕ್ಷಪತ್ರಿಕೆ.

ಸಂಪಾದಕರು: ಡಾ॥ ನಾ. ಸು. ಹರ್ದೀಕರ

೧೬ ಪುಟಗಳು | ಬೆಲೆ ೨ ಪೈ

ಸಂಪುಟ ೧ ] ಶುಕ್ರವಾರ ತಾ॥ ೧೫-೧೨-೧೯೩೯ Friday 15-12-1939 [ ಸಂಚಿಕೆ ೨೨

## ಧಾರವಾಡ ಮುನಸಿಪಾಲಿಟಿ ವಾಟರ ವರ್ಕ್ಸ

ಹರ್ಡೀಕರರು ಈ ಸಂಚಿಕೆಯಲ್ಲಿಯ ಅಗ್ರಲೇಖನವನ್ನು ತಮ್ಮ ಹೆಸರಿನಿಂದ ಪ್ರಕಟಿಸಿದ್ದಾರೆ. ಅದು ಇಂಗ್ಲೀಷಿನಲ್ಲಿ "Our Aim" ಎಂಬ ಶೀರ್ಷಿಕೆಯಿಂದ ಪ್ರಕಟವಾಗಿದೆ. ನಂತರ ಅದರ

only. As soon as the peeple of Hubli take over charge of their Municipality again, it will cease to exit ಎಂದಿದ್ದಾರೆ.

ಬಿಟ್ಟರೆ ಬೇರೆ ವಿಷಯಗಳೇ ಇಲ್ಲ. ಕೊನೆಯ ಪುಟ ಪೂರ್ತವಾಗಿ ಮತ್ತು ೨ನೆಯ ಪುಟದಲ್ಲಿ ಅರ್ಧದಷ್ಟು ಜಾಹೀರಾತು ಇದೆ. ಪಕ್ಷ ಪತ್ರಿಕೆಯಾದರೂ ಮೇಲ್ನೋಟಕ್ಕೆ ಇಲ್ಲದಿರು ದಲ್ಲಿ ಮಹಾತ್ಮಾಗಾಂಧಿಯವರ ಹರಿಜನ ಪತ್ರಿಕೆಯನ್ನು ಅನುಸರಿಸಿದಂತಿದೆ. ಪತ್ರಿಕೆಯಲ್ಲಿ ಪ್ರಕಟವಾದ ಜಾಹೀರಾತುಗಳಲ್ಲಿ "ಪ್ರಜಾಮತ" ಉಜ್ವಲ ರಾಷ್ಟ್ರೀಯ ವಾರಪತ್ರಿಕೆ "ಸಂಯುಕ್ತ

"ಕರ್ನಾಟಕ"ದ ಜೊತೆ, ಆಕಾರದ ದೈನಿಕ ಪತ್ರಿಕೆ ಎಂಬವೂ ಇವೆ. ಈ ಪತ್ರಿಕೆಯ ಬೆಲೆ ಆರು ಪೈ. ಅಂದರೆ ಇಂದಿನ ಮೂರು ಪೈಸೆ. ಎಸ್. ವೆಂಕಟಾಚಲಪತಿ ಎಂಬವರು ಪ್ರಜಾಶಕ್ತಿ ಪ್ರೆಸ್ಸಿನಲ್ಲಿ ಮುದ್ರಿಸಿದರೆಂದೂ ಜಿ. ಕೆ. ನಾವಡಕರ್ ಯವರು ಅಂಚಟಗೇರಿಗಲ್ಲಿಯ ಫ್ರೆಂಡ್ಸ್ ಕಾಟೇಜಿನಲ್ಲಿ ಪ್ರಕಟಿಸಿದರೆಂದೂ ಇದೆ.

ಎರಡನೆಯ ಸಂಚಿಕೆಯ ಅಗ್ರಲೇಖನವನ್ನು ಆರ್. ಆರ್. ದಿವಾಕರರು ಬರೆದಿದ್ದಾರೆ. ಅದು ಸಹ ಇಂಗ್ಲೀಷ್ ಮತ್ತು ಕನ್ನಡ ಎರಡೂ ಭಾಷೆಗಳಲ್ಲಿ ಇದೆ. ಸಾಮಾನ್ಯವಾಗಿ ಸಂಪಾದಕೀಯ ಲೇಖನವನ್ನು ಡಾ. ಹರ್ಡೀಕರರೇ ಬರೆಯುತ್ತಿದ್ದರು. ಹಾಗೆ ತಾವು ಬರೆಯುವಾಗಲೆಲ್ಲ ಅದನ್ನು ತಮ್ಮ ಹೆಸರು ಹಾಕಿ ಪ್ರಕಟಿಸುವ ಪರಂಪರೆಯನ್ನು ಅವರು ಇಟ್ಟುಕೊಂಡಿದ್ದರು. ಬೇರೆಯವರು ಅದನ್ನು ಬರೆಯುವ ಸಂದರ್ಭ ಬಂದಾಗ ಆಯಾ ಲೇಖಕರ ಹೆಸರನ್ನೇ ಅದಕ್ಕೆ ಹಾಕಲಾಗಿದೆ. ಹೀಗೆ ೧೫-೪-೧೯೩೯ರ ಸಂಚಿಕೆಯಲ್ಲಿಯ ಸಂಪಾದಕೀಯವನ್ನು ಆರ್. ಟಿ. ಚಾರಿಯವರೂ ೧೫-೧೦-೩೯ರ ಸಂಚಿಕೆಯಲ್ಲಿಯ ಸಂಪಾದಕೀಯವನ್ನು ಎಸ್. ಬಿ. ಮನಗೋಳಿಯವರೂ ಬರೆದಿದ್ದಾರೆ. ಎಲ್ಲವೂ ಸ್ಥಳೀಯ ಸಮಸ್ಯೆಗಳ ಬಗ್ಗೆಯೇ ಇದ್ದು ದ್ವಿಭಾಷೆಗಳಲ್ಲಿವೆ.

ಮೊದಲ ಸಂಚಿಕೆ ಜನವರಿ ೩ರಂದು ಪ್ರಕಟವಾಗಿದ್ದು ಎರಡನೆಯ ಸಂಚಿಕೆಯಲ್ಲಿ ಅದರ ಪ್ರಕಟಣೆಯ ದಿನಗಳನ್ನು ಪ್ರತಿ ತಿಂಗಳು ೧ ಮತ್ತು ೧೫ ರಂದು ನಿರ್ಧರಿಸಿ ಪ್ರಕಟಿಸಲಾಗಿದೆ. ಅದರನ್ವಯ ಎರಡನೇ ಸಂಚಿಕೆ ಫೆಬ್ರುವರಿ ೧೫ರಂದು ಪ್ರಕಟವಾಗಿದೆ. ಮೂರನೆಯ ಸಂಚಿಕೆಯಲ್ಲಿ ಪತ್ರಿಕೆಯ ಹೆಸರಿನ ಘೋಷಣೆಯಲ್ಲಿ ಸ್ವಲ್ಪ ತಿದ್ದುಪಡಿ ಆಗಿದೆ. "ಹುಬ್ಬಳ್ಳಿ ಗ್ಯಾಝೆಟ್" ನಿಂದ ಅದು "ಹುಬ್ಬಳ್ಳಿ ಗೆಜೆಟ್" ಎಂದೂ ಮುಂದೆ "ಹುಬ್ಬಳ್ಳಿ ಗಜೆಟ್" ಎಂದೂ ಆ ಮೇಲೆ "ಹುಬಳಿ ಗಜೆಟ್" ಎಂದೂ ರೂಪಾಂತರ ಹೊಂದಿದೆ.

ಹುಬ್ಬಳ್ಳಿಯಲ್ಲಿ ವಿದ್ಯುತ್ ಕಂಪನಿಯೊಂದು ಕಾರ್ಯಾರಂಭ ಮಾಡಿ ಮನೆಗಳ ವಿದ್ಯುದ್ದೀಪಗಳನ್ನು ಕಂಡದ್ದು ಸುಮಾರು ೧೯೩೫ರಷ್ಟು ಹಿಂದೆ ಆದರೆ ಸುಮಾರು ೧೯೪೦ರ ವರೆಗೂ ಅವು ಬೀದಿಗಳಿಗಿರಲಿಲ್ಲ. ೧೯೩೯ರ ಮಾರ್ಚ್ ೧ರ "ಹುಬ್ಬಳ್ಳಿ ಗೆಜೆಟ್" ಪತ್ರಿಕೆಯಲ್ಲಿ ರಾ. ವೆ. ಕರಗುದರಿಯವರು "ದೀಪಗಳಿಗೆ ಚಂದ್ರನ ಸಂಬಂಧವು ತಪ್ಪಬೇಕು." ಎಂದು ಬರೆದ ಲೇಖನದಲ್ಲಿ ಈ ಅಂಶವು ವ್ಯಕ್ತವಾಗುತ್ತದೆ.

"ಹುಬ್ಬಳ್ಳಿಯಲ್ಲಿ ಗ್ಯಾಸ್ ದೀಪಗಳು ಬೀದಿಯಲ್ಲಿ ಹಚ್ಚಲ್ಪಡುತ್ತವೆ. ಮತ್ತು ಪಂಚಾಂಗ ನೋಡಿ ದೀಪಗಳು ಹತ್ತುತ್ತವೆ. ಚಂದ್ರನು ಹುಟ್ಟಿದರೆ ತೀರಿತು. ದೀಪಗಳು ಸದ್ದಿಲ್ಲದೆ ಕಣ್ಣು ಮುಚ್ಚುತ್ತವೆ. ಚಂದ್ರನು ಮುಳುಗಿದ ಕೂಡಲೇ ದೀಪಗಳು ಪ್ರಾರಂಭವಾಗುತ್ತವೆ. ಎಣ್ಣೆಯನ್ನು ಹಾಕುವವವರೂ ಕೂಡ ಲೆಕ್ಕದಿಂದಲೇ ಆ ಕಾರ್ಯವನ್ನು ಮಾಡುತ್ತಾರೆ."

ಸಂಪಾದಕೀಯ ಲೇಖನದಲ್ಲಿ ಎತ್ತಿಕೊಂಡ ಮುಖ್ಯ ವಿಷಯವಲ್ಲದೆ ಬೇರೆ ಕೆಲ ಉಪ ವಿಷಯಗಳ ಬಗ್ಗೆ ಸಂಪಾದಕೀಯ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಲೇಖನಗಳನ್ನೂ ಬಿಡಿ ನುಡಿಗಳು ಎಂಬ ಶೀರ್ಷಿಕೆಯಲ್ಲಿ ಮೊದಲ ಸಂಚಿಕೆಯಲ್ಲೇ ಪ್ರಾರಂಭಿಸಲಾಗಿದೆ. ಆದರೆ ಎರಡನೇ ಸಂಚಿಕೆಯಿಂದ ಅದು ಲೋಪವಾಗಿ ಏಪ್ರಿಲ್ ೧೫ರ ಸಂಚಿಕೆಯಲ್ಲಿ ಟೀಕೆ ಟಿಪ್ಪಣಿಗಳು ಎಂಬ ಶೀರ್ಷಿಕೆಯಲ್ಲಿ ಕಾಣಿಸಿಕೊಂಡಿದೆ. ಮೇ ೧ರ ಸಂಚಿಕೆಯಿಂದ "ಸಂಪಾದಕೀಯ ಟೀಕೆಗಳು" ಎಂಬ ಶೀರ್ಷಿಕೆ ಅದಕ್ಕೆ ಬಂದು ಅವುಗಳ ಕೆಳಗೆ ಲೇಖಕರ ಸಂಕ್ಷಿಪ್ತ ಹೆಸರು ಹಾಕುವ ಪರಂಪರೆ ಪ್ರಾರಂಭವಾಗಿದೆ. ಸಂಪಾದಕೀಯ ಲೆಕ್ಕಣಿಯಿಂದ ಬರುವ ಲೇಖನಗಳಿಗೆಲ್ಲ ಲೇಖಕರ ಹೆಸರು ಹಾಕುವ ಪದ್ಧತಿ ಮಹಾತ್ಮಾಗಾಂಧೀಜೀಯವರ ಹರಿಜನ ಪತ್ರಿಕೆಯಂತೆ.

ಹುಬ್ಬಳ್ಳಿ ನಗರಸಭೆಗೆ ಸಂಬಂಧಪಟ್ಟದ್ದು ಮಾತ್ರವಲ್ಲದೆ ದೇಶದಲ್ಲಿಯ ಹಾಗೂ ವಿದೇಶದಲ್ಲಿಯ ವಿವಿಧ ನಗರಸಭೆಯ ವ್ಯವಹಾರಗಳ ಬಗ್ಗೆ ಸಂಬಂಧಿಸಿದ ಸುದ್ದಿಗಳನ್ನು ಕಾಲಕಾಲಕ್ಕೆ ಪ್ರಕಟಿಸುತ್ತ ಬಂದಿರುವುದು ಮೂರನೆಯ ಸಂಚಿಕೆಯಿಂದಲೇ ಪ್ರಾರಂಭವಾಗಿರುವದು ಗೊತ್ತಾಗುತ್ತದೆ. ಧಾರವಾಡ ನಗರಸಭೆಯ ಅವ್ಯವಸ್ಥೆಯನ್ನು ಮೊದಲ್ಗೊಂಡು ಸಂಗಮನೇರ ನಗರಸಭೆ ರದ್ದಾಯಿತು. ಲಾಹೋರ ನಗರಸಭೆ ಕಾರ್ಪೊರೇಶನ್ ಆಯಿತು, ಕಾನಪೂರದಲ್ಲಿ ಸಾಯಕಲ್ ಕರವು ರದ್ದಾಗಬೇಕು, ಇಂದೂರಿನಲ್ಲಿ ಮನೆಪಟ್ಟಿ ಹರತಾಳ. ನಡಿಯಾದ ಮುನಸಿಪಲ್ ಚುನಾವಣೆ, ವಿವಿಧ ದೇಶಗಳಲ್ಲಿಯ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಆಡಳಿತ ಮೊದಲಾದ ಸುದ್ದಿಗಳೂ ಲೇಖನಗಳೂ ಪ್ರಕಟವಾಗಿವೆ

ಅದೇ ರೀತಿ ನಾಗರಿಕರಲ್ಲಿ ತಮ್ಮ ಕರ್ತವ್ಯದ ಅರಿವು ಮೂಡುವಂತೆ ಶಿಕ್ಷಣ ಕೊಡುವ ಅವಶ್ಯಕತೆಯನ್ನೂ ಈ ಪತ್ರಿಕೆ ಪ್ರಾರಂಭದಿಂದಲೆ ಪ್ರತಿಪಾದಿಸಿದೆ. ಈ ಉದ್ದೇಶದಿಂದ ಡಾ ಹರ್ಡೀಕರರು ೧೫-೭-೩೯ರ ಸಂಚಿಕೆಯಲ್ಲಿ "ನಾಗರಿಕತ್ವದ ಶಿಕ್ಷಣ" ಎಂಬ ಅಗ್ರ ಲೇಖನ ಬರೆದಿದ್ದಾರೆ ಅವರು ಅದರಲ್ಲಿ

"ಒಳ್ಳೆಯ ಸುಸಂಘಟಿತವಾದ ನಾಗರಿಕ ಜೀವನದ ಮೂಲ ತತ್ವಗಳನ್ನು ನಾಗರಿಕರಲ್ಲಿ ಪ್ರಚಾರ ಮಾಡುವುದಕ್ಕೆ ಮನಃಪೂರ್ವಕವಾದ ಯತ್ನವು ನಡೆಯಬೇಕೆಂದು ನನಗೆನಿಸುತ್ತದೆ ಅದ್ದರಿಂದ "ನಾಗರಿಕತ್ವದ ಶಿಕ್ಷಣ ಕೇಂದ್ರ" ಎಂಬುದೊಂದು ಶಾಲೆಯನ್ನು ಹುಬ್ಬಳ್ಳಿಯಲ್ಲಿ ಪ್ರಾರಂಭಿಸಬೇಕೆಂದು ನಿಶ್ಚಯಿಸಿದ್ದೇನೆ. ಲೋಕಮಾನ್ಯ ತಿಲಕರ ಪುಣ್ಯ ತಿಥಿಯಾದ ೧-೮-೩೯ನೆಯ ದಿವಸ ಅದು ಪ್ರಾರಂಭವಾಗಲಿದೆ" ಎಂದು ಬರೆದಿದ್ದಾರೆ.

ಇದರಂತೆ ಈ ಕೇಂದ್ರವನ್ನು ಆಗಿನ ಧಾರವಾಡ ಕಲೆಕ್ಟರ ಶ್ರೀ ಡಿ. ಎಸ್. ಮೋದಕರು ಉದ್ಘಾಟಿಸಿದ ವರದಿಯು ನಂತರ ಪ್ರಕಟವಾಗಿದೆ. ಈ ಸಂಸ್ಥೆಯು ನಿಯಮಿತವಾಗಿ ತಜ್ಞರಿಂದ ಮತ್ತು ಅಭ್ಯಾಸಿಗಳಿಂದ ಭಾಷಣಗಳನ್ನೇರ್ಪಡಿಸುತ್ತಿದ್ದುದು ಹುಬ್ಬಳ್ಳಿ ಗೆಜೆಟ್ಟಿನ ವಿವಿಧ ಸಂಚಿಕೆಗಳಿಂದ ತಿಳಿದು ಬರುತ್ತದೆ. ಇದಲ್ಲೊಂದು ಅಭ್ಯಾಸ ಮಂಡಳದಂತೆ ನಡೆದದ್ದು ಸಹ ಗೊತ್ತಾಗುತ್ತದೆ.

ಗೆಜೆಟ್ಟಿನಲ್ಲಿ ನಗರ ಸುಧಾರಣೆಯ ಬಗ್ಗೆ ಬಂದ ಅನೇಕ ಸೂಚನೆ ಮತ್ತು ದೂರುಗಳ ಬಗ್ಗೆ ನಗರಾಡಳಿತಾಧಿಕಾರಿಗಳನು ಕಂಡು ಉತ್ತರ ಪಡೆದು ಅದನ್ನು ಪ್ರಕಟಿಸುವ ಪದ್ಧತಿಯೊಂದನ್ನು ೧೫-೭-೩೯ರಿಂದ ಪ್ರಾರಂಭಿಸಲಾಗಿದೆ. ಇದು ಜನತೆ ಮತ್ತು ಸರಕಾರಗಳ ನಡುವೆ ಸಂಪರ್ಕ ಕಲ್ಪಿಸುವ ಒಂದು [illegible] ಯೋಜನೆ.

೧೫-೮-೩೯ರ ಸಂಚಿಕೆಯಿಂದ ಪತ್ರಿಕೆಯ ಮುದ್ರಣಾಲಯ ಬದಲಾಗಿದೆ. ಅಂದಿನಿಂದ ಹುಬ್ಬಳ್ಳಿ ಗೆಜೆಟ್ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ಅಚ್ಚಾಗಲಾರಂಭಿಸಿದೆ. ಈ ವ್ಯವಸ್ಥೆ ೧೯೪೨ರ ವರೆಗೆ ಮಾತ್ರ ನಡೆದಂತಿದೆ. ೩೧-೧-೪೨ರಿಂದ ಸಿಟಿ ಪ್ರೆಸ್ಸಿನಲ್ಲಿ ಮುದ್ರಣ ಆರಂಭವಾಗಿದೆ. ಈ ಮಧ್ಯೆ ಕೆಲ ಸಂಚಿಕೆಗಳು [illegible] ಪ್ರೆಸ್ಸಿನಲ್ಲಿ ಮುದ್ರಣವಾದ ಉಲ್ಲೇಖವೂ ಇವೆ. ಸಿಟಿ ಪ್ರೆಸ್ಸಿನಲ್ಲಿ ಮುದ್ರಣವಾಗುವದರೊಡನೆ ಪಕ್ಷ ಪತ್ರಿಕೆಯನ್ನು ಸಾಪ್ತಾಹಿಕವಾಗಿ ಮಾರ್ಪಡಿಸಲಾಗಿದೆ. ಪತ್ರಿಕೆಯ ಆಕಾರ ೭-೬-೪೨ರಿಂದ ಡೆಮಿಗೆ ಬೆಳೆದು ಪುಟಗಳ [illegible]ಟಕ್ಕೆ ಏರಿ ಬೆಲೆ ೦ ಆಣೆ ಆದ್ದ[illegible]

ಈಗಿನ ೬ ಪೈಸೆಗೆ ಸಮಾನ. ೨೧-೩-೪೩ರ ಸಂಚಿಕೆಯಿಂದ ಪತ್ರಿಕೆಯ ಬೆಲೆಯನ್ನು ಒಂದಾಣೆ ಅಂದರೆ ೧೦ ಪೈಸೆಗೆ ಏರಿಸಲಾಗಿದೆ.

ಈ ಪತ್ರಿಕೆಯ ಕಾರ್ಯದಲ್ಲಿ ಡಾ. ಹರ್ಡೀಕರರಿಗೆ ಎಡಗೈ ಬಲಗೈಯಾಗಿ ನೆರವಿಗೆ ನಿಂತವರೆಂದರೆ ಡಾ. ಶಂ. ಬಾ ಮನಗೂಳಿ ಮತ್ತು ರಾ. ವೆ. ಕರಗುದರಿ. ಶ್ರೀ ಮನಗೂಳಿಯವರು ಲೇಖನಗಳನ್ನು ಬರೆಯುತ್ತಿದ್ದರೂ ವ್ಯವಸ್ಥಾಪಕ ವಿಭಾಗದಲ್ಲೂ ಪರಿಶ್ರಮ ಉಳ್ಳವರಾಗಿದ್ದರು. ಆದ್ದರಿಂದ ಮೊದಲಿನಿಂದಲೂ ಅವರ ಮೇಲೆ ಆ ವಿಭಾಗದ ಹೊಣೆ ವಿಶೇಷವಾಗಿರುತ್ತಿತ್ತು. ಮೊದಲ ಸಂಚಿಕೆ ಒಂದು ಸಾವಿರ ಪ್ರತಿಗಳನ್ನು ಅಚ್ಚು ಹಾಕಿಸಿದರೂ ಅವೆಲ್ಲ ಖರ್ಚಾಗಲಿಲ್ಲವೆಂದೂ ಸ್ವಲ್ಪೇ ದಿನಗಳಲ್ಲಿ ಚಂದಾದಾರರ ಸಂಖ್ಯೆಯನ್ನು ಹೆಚ್ಚಿಸಿ ಎಲ್ಲ ಪ್ರತಿಗಳು ಮಾರಾಟ ಆಗುವಂತೆ ಮಾಡಿದ್ದಾಗಿ ಅವರು ವಿವರಿಸಿದರು. ಮೊದಲ ಮೂರು ಸಂಚಿಕೆಗಳ ಮುದ್ರಣದ ಒಟ್ಟು ಬಿಲ್ಲು ೧೯ ರೂಪಾಯಿ ಮಾತ್ರ ಆಗಿತ್ತೆಂದು ಅಂದಿನ ವೆಚ್ಚದ ವಿವರಗಳನ್ನು ನೀಡುತ್ತ ಅವರು ಹೇಳಿದರು. ನಗರದಲ್ಲಿಯ ಹೊಲಸು, ಅವ್ಯವಸ್ಥೆಯನ್ನು ಹಾಗೂ ನಾಗರಿಕರಲ್ಲಿಯ ಅನಿಷ್ಟ ಚಟಗಳನ್ನು ಹಾಸ್ಯಮಯ ಶೈಲಿಯಲ್ಲಿ ಚುಚ್ಚಿ ತೋರಿಸುವ ನಗರ ಸುಂದರ ಎಂಬ ಲೇಖನವನ್ನು ಡಾ. ಮನಗೂಳಿಯವರು ೧೫-೪-೩೯ರ ಸಂಚಿಕೆಯಲ್ಲಿ ಪ್ರಾರಂಭಿಸಿದ್ದಾರೆ. ಈ ಲೇಖನ ಕ್ರಮೇಣ ಬಹಳ ಜನ ಮೆಚ್ಚುಗೆ ಗಳಿಸಿದಂತೆ ಇದೆ. ಇದೇ ಮಾದರಿಯಲ್ಲಿ ಬೇರೆಯವರು ಲೇಖನ ಬರೆದದ್ದನ್ನೂ ಇದರಲ್ಲಿ ಕಾಣಬಹುದು.

ಪತ್ರಿಕೆ ಪ್ರಾರಂಭವಾಗಿ ಸರಿಯಾಗಿ ಒಂದು ವರ್ಷದ ನಂತರ ಅಂದರೆ ೨೬-೧-೧೯೪೦ರ ಸಂಚಿಕೆಯಿಂದ ಶ್ರೀ ರಾ. ವೆ. ಕರಗುದರಿಯವರ ಹೆಸರನ್ನು ಸಹ ಸಂಪಾದಕರು ಎಂದು ಮುದ್ರಿಸಲು ಡಾ. ಹರ್ಡೀಕರರು ನಿರ್ಧರಿಸಿದ್ದಾರೆ. ಎರಡು ವರ್ಷಗಳ ನಂತರ ಇದರಲ್ಲಿ ಪುಟ್ಟ ಸ್ವಲ್ಪ ಬದಲಾವಣೆಯಾಗಿದೆ. ೧೬-೮-೪೨ರ ಸಂಚಿಕೆಯಲ್ಲಿ ಮೂಲ ಸಂಪಾದಕರು ಡಾ. ನಾ. ಸು. ಹರ್ಡೀಕರ, ಮೂಲ ಸಹ ಸಂಪಾದಕರು ರಾ. ವೆ. ಕರಗುದರಿ ಮತ್ತು ಸಂಪಾದಕರು ಎಸ್. ಎಸ್. ಕಾರಂತ ಎಂದಿದೆ. ಮತ್ತು ಮೊದಲಿನ ಎರಡೂ ಹೆಸರುಗಳ ಮುಂದೆ ಸೆರೆಮನೆಯಲ್ಲಿ ಎಂದು ಬರೆಯಲಾಗಿದೆ. ಇದು ೧೯೪೨ರ ಚಲೇಜಾವ್ ಚಳವಳಿಯ ಪರಿಣಾಮ ಎಂಬುದು ಸ್ಪಷ್ಟ. ಡಾ. ಹರ್ಡೀಕರ ಮತ್ತು ಕರಗುದರಿ ಇಬ್ಬರೂ ೧೯೪೨ ಆಗಸ್ಟ ಆರಂಭದ ಬಂಧಿಸಲ್ಪಟ್ಟರು. ಮುಂದೆ ೧೯೪೩ರ ಜನವರಿಯಲ್ಲಿ ಕಾರಂತರೂ ಬಂಧಿಸಲ್ಪಟ್ಟಾಗ ಸಂಪಾದಕರ ಸ್ಥಾನದಲ್ಲಿ ಎಚ್. ನಾರಾಯಣ ಶರ್ಮ ಎಂಬವರ ಹೆಸರು ಅಚ್ಚಾಗಿದೆ. ಆದರೆ ೧೪-೭-೪೩ರ ಸಂಚಿಕೆಯಲ್ಲಿ ಮಾತ್ರ ಅವರ ಹೆಸರಿಗೆ ಬದಲಾಗಿ ೨ನೇ ಸಂಪಾದಕರು ಎಸ್. ಎಸ್. ಕಾರಂತ ಎಂದಿದೆ ಮೂರು ತಿಂಗಳು ಅಂದರೆ ೨೧-೩-೪೩ರ ಸಂಚಿಕೆಯಲ್ಲಿ ಶಂ ಬಾ. ಮನಗೂಳಿಯವರ ಹೆಸರು ಪ್ರಸ್ತುತ ಸಂಪಾದಕರು ಎಂದು ಸೇರಿಸಲ್ಪಟ್ಟಿದೆ.

೧೯೪೨ರ ಚಳವಳಿಯನ್ನು ಹತ್ತಿಕ್ಕಲು ಸರಕಾರ ಕೈಕೊಂಡ ಕ್ರಮಗಳಲ್ಲಿ ಪತ್ರಿಕೆಗಳ ಮೇಲಿನ ನಿರ್ಬಂಧವೂ ಒಂದಾಗಿತ್ತು. "ಹುಬ್ಬಳ್ಳಿ ಗಜೆಟ್" ಅದನ್ನು ಪ್ರತಿಭಟಿಸಿತು. ೨೦-೯-೪೨ರ ಸಂಚಿಕೆಯಲ್ಲಿ ಇದನ್ನು ಕುರಿತು ಹೀಗೆ ಬರೆದಿದೆ–

## ಅಗ್ರಲೇಖ

ಸರಕಾರದವರು ವೃತ್ತಪತ್ರಿಕೆಗಳ ಮೇಲೆ ಹೊರಿಸಿದ ನಿರ್ಬಂಧಕ್ಕನುಗುಣವಾಗಿ ನಮ್ಮ ಸಂಪಾದಕೀಯ ಲೇಖನಿಯನ್ನು ಒತ್ತಾಯಪಡಿಸಿ ಒಯ್ಯುವುದಕ್ಕೆ ನಮ್ಮ ಸದ್ವಿವೇಕ ಬುದ್ಧಿಯು ನಮ್ಮನ್ನು ತಡೆದು ಹಿಡಿಯುತ್ತದೆ. ಆ ನಿರ್ಬಂಧಕ್ಕೊಳಪಟ್ಟು ಸಂಪಾದಕೀಯವನ್ನು ಬರೆಯುವದಕ್ಕಿಂತ ಬರೆಯದಿರುವದೇ ಲೇಸೆಂದು ನಮ್ಮ ಅಂತರಂಗವು ನಮಗೆ ಪ್ರೇರೇಪಿಸುತ್ತಲಿದೆ.

ಈ ಲೇಖನಿಯ ಮೇಲೆ ಸರಕಾರದ ನಿಯಂತ್ರಣವಿರುವ ವರೆಗೆ ಅಗ್ರಲೇಖನವನ್ನು ಬರೆಯಬಾರದೆಂದು ನಿರ್ಧರಿಸಿದ್ದೇವೆ.

೩೦-೮-೪೨ ಸಂಪಾದಕ.

## ಕರ್ಮಯೋಗ

ನಿಯತಂ ಕುರು ಕರ್ಮತ್ವಂ
ಕರ್ಮಜ್ಯಾಯೋಹ್ಯಕರ್ಮಣಃ
ಶರೀರ ಯಾತ್ರಾಪಿಚತೇ
ನಪ್ರಸಿದ್ಧ್ಯೇದಕರ್ಮಣಃ ॥೮॥

ನೀನು ಮಾಡತಕ್ಕದ್ದೆಂದು ಗೊತ್ತಾಗಿರುವ ಕೆಲಸವನ್ನು ಮಾಡು. ಕೆಲಸಕ್ಕೆ ಕೈ ಹಾಕದಿರುವದಕ್ಕಿಂತ ಮಾಡುವದು ಮೇಲು. ನೀನು ಯಾವ ಕರ್ಮವನ್ನೂ ಮಾಡದೆ ಇದ್ದರೆ ಬದುಕಿರುವದೇ ಆಗಲಾರದು.

೨೬-೧-೪೪ ರ ಸಂಚಿಕೆಯಿಂದ ರಾ. ವೆ. ಕರಗುದರಿಯವರು ಸಂಪಾದಕೀಯ ಹೊಣೆಯನ್ನು ನಿರ್ವಹಿಸಿಕೊಂಡಿದ್ದಾರೆ. ಅಂದಿನ ಸಂಚಿಕೆಯಲ್ಲಿ ತಮ್ಮ ಹೊಣೆಗಾರಿಕೆಯನ್ನು ಕುರಿತು ಅವರು ಹೀಗೆ ಬರೆದಿದ್ದಾರೆ.

## ನನ್ನ ಹೊಣೆ

ಈ ಸಂಚಿಕೆಯಿಂದ "ಹುಬಳಿ" ಗಜೆಟ್"ದ ಸಂಪಾದಕೀಯ ಹೊಣೆಯನ್ನು ನಾನು ಹೊತ್ತುಕೊಂಡಿದ್ದೇನೆ.........

ಹುಬಳಿ ಗಜೆಟ್ ಡಾ. ಹರ್ಡೀಕರರ ಮಾನಸ ಪುತ್ರ......

ಹುಬಳಿ ಗಜೆಟ್ ಒಂದು ಆದರ್ಶ ಸಾಪ್ತಾಹಿಕವಾಗಬೇಕೆಂಬ ನಮ್ಮ ಮನೀಷೆಯಿದೆ. ತಕ್ಕ ವೇಳೆ ಬಂದಾಗ್ಗೆ ಕಾರ್ಯಕ್ಷೇತ್ರಕ್ಕನುಸರಿಸಿ ಈ ಪತ್ರಿಕೆಯು ಬೇರೆ ಹೆಸರನ್ನು ಕೂಡ ತಳೆಯಬಹುದು.......

ಇಷ್ಟೊತ್ತಿಗಾಗಲೆ ಹುಬ್ಬಳ್ಳಿ ನಗರ ಸಭೆಯಲ್ಲಿ ಸರಕಾರೀ ಆಡಳಿತ ಅವಧಿ ಮುಗಿಯುತ್ತಾ ಬಂದಿತ್ತು. ನಗರದಲ್ಲಿ ಚುನಾವಣೆಗಳು ನಡೆದು ಚುನಾಯಿತ ಸಮಿತಿಗೆ ಅಧಿಕಾರ ಒಪ್ಪಿಸಲ್ಪಟ್ಟಿತು. ಡಾ. ಹರ್ಡೀಕರರು ಮೊದಲ ಸಂಚಿಕೆಯಲ್ಲಿ ಸಾರಿದಂತೆ ಆಗ ಹುಬಳಿ ಗಜೆಟ್ ಮುಚ್ಚಬೇಕಾಗಿತ್ತು. ಆದರೆ ತಮ್ಮ ಪತ್ರಿಕೆಗೆ ಈ ಅವಧಿಯಲ್ಲಿ ದೊರೆತ ಸ್ವಾಗತ ಮತ್ತು ಇರುವ ಅನುಭವದ ಮೇಲಿಂದ ಆ ನಿರ್ಣಯವನ್ನು ಪುನರ್ವಿಮರ್ಶಿಸಿ ಪತ್ರಿಕೆಯನ್ನು ಮುಂದುವರಿಸಿಕೊಂಡು ಹೋಗಬೇಕೆಂದು ನಿರ್ಧರಿಸಲಾಯಿತೆಂದು ಕರಗುದರಿಯವರು ಹೇಳಿದರು. ಪತ್ರಿಕೆಗೆ ಹೊಸ ರೂಪು ಕೊಡುವ ಪ್ರಯತ್ನ ಇಷ್ಟೊತ್ತಿಗಾಗಲೇ ಪ್ರಾರಂಭವಾಗಿತ್ತು. ಹುಬ್ಬಳ್ಳಿ ನಗರ ಮತ್ತು ಸ್ಥಾನಿಕ ಸಂಸ್ಥೆಗಳ ಸುದ್ದಿಗಳಿಗೆ ಮಾತ್ರ ಪತ್ರಿಕೆಯನ್ನು ಮೀಸಲಾಗಿಡಬೇಕೆಂಬ ಸೀಮಾ ರೇಖೆಯನ್ನು ಈಗಾಗಲೇ ದಾಟಲಾಗಿತ್ತು. ಯುದ್ಧ ವಾರ್ತೆಗಳು ಮತ್ತು ಲೇಖನಗಳು ವಾಚಕರಿಗೆ ಹೆಚ್ಚು ರುಚಿಸುವವೆಂಬ ನಿರ್ಧಾರಕ್ಕೆ ಬರಲಾಗಿತ್ತು. ೩೧-೧-೪೩ ಸಂಚಿಕೆಯ ಮುಖಪುಟದಲ್ಲಿ "ಬ್ರಿಟಿಶರ ಸಾಮ್ರಾಜ್ಯ ಮೋಹ" ಎಂಬ ಶೀರ್ಷಿಕೆಯಲ್ಲಿ ಶಂ. ಬಾ ಜೋಶಿಯವರ ಲೇಖನ ಪ್ರಕಟವಾಗಿದೆ ಈ ಕನ್ನಡ ಲೇಖನದ ಇಂಗ್ಲೀಷ ಸಾರಾಂಶವನ್ನು ಪ್ರಕಟಿಸಲಾಗಿದೆ. ರಾಜಕೀಯ

ಲೇಖನಗಳಿಗೆ ಬಹುಶಃ ಇದೇ ಆರಂಭ ವೆಂದು ತೋರುತ್ತದೆ. ಕ್ರಮೇಣ ಪತ್ರಿಕೆಯು ಹೊಂದಿದ ಈ ರೂಪಾಂತರಕ್ಕೆ "ಹುಬಳಿ ಗಜೆಟ್" ಎಂಬ ಹೆಸರೂ ಅಪ್ರಸ್ತುತವೆಂಬ ನಿರ್ಧಾರಕ್ಕೆ ಬಂದಂತಿದೆ. ೫-೧-೧೯೪೭ರ ಸಂಚಿಕೆಯಿಂದ ಇದರ ಹೆಸರು ಜಯಹಿಂದ ಎಂದು ಬದಲಾಗಿದೆ. ಆ ಸಂಚಿಕೆಯಲ್ಲಿ ಡಾ. ಹರ್ಡೀಕರರು ಬರೆದ ವಿವರಣೆಯಲ್ಲಿ ಈ ರೀತಿ ಹೇಳಿದ್ದಾರೆ.

"ಇದೀಗ ಹೊಸ ವರ್ಷಾರಂಭದೊಂದಿಗೆ ಹುಬಳಿ ಗಜೆಟ್ ವಾರಪತ್ರಿಕೆಯು "ಜಯಹಿಂದ" ಎಂಬ ಹೊಸ ಹೆಸರಿನಿಂದ ಪ್ರಸಿದ್ಧವಾಗುತ್ತಲಿದೆ. ಹೆಸರಿನ ಬದಲಾವಣೆಯೊಂದಿಗೆ ಜಯಹಿಂದದ ವ್ಯಾಪ್ತಿಯೂ ಬೆಳೆದಿರುವುದು. ಇನ್ನು ಮುಂದೆ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಕ್ಷೇತ್ರವನ್ನು ಅದು ಪ್ರವೇಶಿಸಿ ಮುಂಬರುವ ಹೊಸ ಮನ್ವಂತರದಲ್ಲಿ ಜನತೆಯು ಎದುರಿಸಬೇಕಾದ ಎಲ್ಲ ಪ್ರಶ್ನೆಗಳನ್ನು ಹೊಕ್ಕು ಹೊರಡುವುದು. ಎಂದಿನಂತೆಯೇ ಮುಚ್ಚುಮರೆಯಿಲ್ಲದೆ ತನಗೆ ತೋರಿದ್ದನ್ನು ಅದು ಜನತೆ ಹಾಗೂ ಸರಕಾರದ ಮುಂದಿಟ್ಟು ಜನತಾ ಜನಾರ್ದನನ ಸೇವೆಗಾಗಿ ಟೊಂಕ ಕಟ್ಟಿ ನಿಲ್ಲುವದು."

ಸ್ಥಳೀಯ ಪತ್ರಿಕೆಯಾದರೂ ಅದು ಸ್ಥಳೀಯ ರಾಜಕಾರಣದಲ್ಲಿ ಅಂದರೆ ಪಕ್ಷ ಪಂಗಡಗಳ ಹೋರಾಟದಲ್ಲಿ ಭಾಗವಹಿಸದಂತೆ ಬಹಳ ಜಾಗರೂಕತೆ ವಹಿಸಲಾಗುತ್ತಿತ್ತೆಂದು ಶ್ರೀ ಕರಗುದರಿಯವರು ಹೇಳಿದರು. ವೈಯಕ್ತಿಕ ಟೀಕೆ ಟಿಪ್ಪಣಿಗಳು ಮಟ್ಟಕ್ಕೆ "ನಾವು ಎಂದೂ ಇಳಿಯಲಿಲ್ಲ. ಇಷ್ಟೇ ಅಲ್ಲ ಭೀಭತ್ಸ ಹಾಗೂ ಮೋಸದ್ದೆನಿಸಬಹುದಾದ ಜಾಹೀರಾತುಗಳನ್ನು ಸಹ ನಾವು ಎಂದೂ ಸ್ವೀಕರಿಸುತ್ತಿದ್ದಿಲ್ಲ" ಎಂದೂ ಅವರು ವಿವರಿಸಿದರು. ಮುಖ್ಯ ಲೇಖನವನ್ನು ಇಂಗ್ಲೀಷ ಮತ್ತು ಕನ್ನಡ ಎರಡೂ ಭಾಷೆಗಳಲ್ಲಿ ಪ್ರಕಟಿಸುತ್ತಿದ್ದುದರಿಂದ ವಾಚಕರು ಸ್ವಾಭಾವಿಕವಾಗಿಯೇ ಭಾಷಾಂತರವನ್ನು ಹೋಲಿಸಿ ನೋಡುತ್ತಿದ್ದರು. ಅನೇಕ ಸಲ ಈ ಬಗ್ಗೆ ಮೆಚ್ಚುಗೆ ಪತ್ರಗಳು ಬರುತ್ತಿದ್ದವಲ್ಲದೆ ಅನೇಕ ವಿದ್ಯಾರ್ಥಿಗಳು ಅವುಗಳನ್ನು ಮಾದರಿಯಾಗಿ ಉಪಯೋಗಿಸಿಕೊಳ್ಳುತ್ತಿದ್ದರಂತೆ.

ಡಾ. ಹರ್ಡೀಕರರು ತಮಗೆ ದೇಶದಾದ್ಯಂತ ಸಂಪರ್ಕವಿದ್ದ ಜನನಾಯಕರ ಸಹುಪಯೋಗವನ್ನು ಈ ಪತ್ರಿಕೆಗೆ ಸಾಕಷ್ಟು ಮಟ್ಟಿಗೆ ನೀಡುತ್ತಿದ್ದರು. ಪ್ರತಿ ವರ್ಷ ಹೊರಡಿಸುತ್ತಿದ್ದ ಜನ್ಮದಿನಾಂಕ ಸಂಚಿಕೆಗಳು ಇದಕ್ಕೆ ಸಾಕ್ಷಿ ದೇಶ ವಿದೇಶಗಳ ಸಮಸ್ಯೆಗಳ ಬಗ್ಗೆ ಅಧಿಕಾರವಾಣಿಯಿಂದ ಬರೆಯಬಲ್ಲ ಅನೇಕ ಮಹನೀಯರ ಲೇಖನಗಳು ಇದರಲ್ಲಿ ಅಚ್ಚಾಗುತ್ತಿದ್ದುದು ಕಂಡು ಬರುತ್ತದೆ. ಮೊದಲ ವರ್ಷದ ಸಂಚಿಕೆಯಲ್ಲೇ ಮುಂಬಯಿಯ ಡಿ. ವಿ. ನಾಡಕರ್ಣಿ, ಮದ್ರಾಸದ ಎಸ್. ಸತ್ಯಮೂರ್ತಿ, ಬೆಂಗಳೂರಿನ ಕೆ. ಚೆಂಗಲರಾವ ರೆಡ್ಡಿ, ಮಚಲೀಪಟ್ಟಣದ ಡಾ. ಪಟ್ಟಾಭೀ ಸೀತಾರಾಮಯ್ಯ ಕರಾಚಿಯ ಆರ್. ಕೆ. ಸಿದ್ವಾ ಮಂಗಳೂರಿನ ಕೆ. ಆರ್. ಕಾರಂತ, ಪುಣೆಯ; ಎಸ್. ಆರ್. ಭಾಗವತ, ಬಳ್ಳಾರಿಯ ಬಿ. ಭೀಮರಾವ ಮೊದಲಾದವರ ಲೇಖನಗಳು ಪ್ರಕಟವಾಗಿವೆ. ಈ ಪರಂಪರೆಯನ್ನು ಕೊನೆವರೆಗೂ ಕಾಯ್ದುಕೊಂಡು ಬಂದದ್ದು ಕಂಡು ಬರುತ್ತದೆ.

ಪ್ರಸಿದ್ಧ ಲೇಖಕರ ಲೇಖನಗಳನ್ನು ಪ್ರಕಟಿಸುವದು ಮಾತ್ರವಲ್ಲ ಅಪ್ರಬುದ್ಧ ಲೇಖಕರ ಲೇಖನಗಳಿಗೂ ನಾವು ಅವಕಾಶ ಕೊಡುತ್ತಿದ್ದೆವು. ಆದರೆ ಅವುಗಳನ್ನು ತಿದ್ದಿ ಸುಧಾರಿಸಿ ಲೇಖಕರಿಗೆ ಅದರ ಬಗ್ಗೆ ತಿಳವಳಿಕೆ ನೀಡಿ ಪ್ರಕಟಿಸುತ್ತಿದ್ದೆವು. ಇದರಿಂದಾಗಿ ಅನೇಕ ಹೊಸ ಲೇಖಕರು ಉದಯವಾಗಲು ನಮ್ಮ ಪತ್ರಿಕೆ ಕಾರಣವಾಯಿತು ಎಂದು ಕರಗುದರಿಯವರು ಹೆಮ್ಮೆಯಿಂದ ಹೇಳುತ್ತಾರೆ.

ಡಾ. ಹರ್ಡೀಕರರು ಸಂಪಾದಕೀಯ ಕ್ಷೇತ್ರದಲ್ಲಿ ಸ್ವತಃ ಯಾವ ರೀತಿ ಆಸ್ಥೆ ವಹಿಸುತ್ತಿದ್ದರೆಂಬುದಕ್ಕೆ ೨೬-೧-೪೫ರ ಸಂಚಿಕೆಯಲ್ಲಿ ಕರಗುದರಿಯವರು ಬರೆದ "ನಿವೇದನೆ"ಯೇ ಸಾಕ್ಷಿ.

"ಹುಬ್ಬಳ್ಳಿ ಗಜೆಟ್‌ನ ಸಂಪಾದಕತ್ವವನ್ನು ನಾನು ವಹಿಸಿ ಇಂದಿಗೆ ಒಂದು ವರ್ಷವಾಯಿತು. ...ಮೊದಲು ನಾನು ಬರೆದ ಲೇಖನಗಳೆಲ್ಲವನ್ನೂ ಅವರ (ಡಾ॥ ಹರ್ಡೀಕರರ) ಮುಂದೆ ಓದಿ ಅವರ ಒಪ್ಪಿಗೆಯನ್ನು ಪಡೆದ ನಂತರವೇ ಮುದ್ರಣಕ್ಕೆ ಕಳುಹಿಸಬೇಕಾಗುತ್ತಿತ್ತು. ಹೋದ ವರ್ಷದಲ್ಲಿ ಈ ಪರಿಪಾಠವನ್ನು ಅವರು ಮೆಲ್ಲ ಮೆಲ್ಲನೆ ಬಿಟ್ಟುಬಿಟ್ಟರು. "ಇದು ವರೆಗೆ ಮೊದಲು ನೋಡಿ ತಿದ್ದುತ್ತಿದ್ದೆ. ಇನ್ನು ಮೇಲೆ ಪತ್ರದಲ್ಲಿ ಪ್ರಸಿದ್ಧವಾದ ಮೇಲೆ ನೋಡಿ ಅವಶ್ಯ ಕಂಡಲ್ಲಿ ಕಿವಿ ಹಿಂಡುವೆ" ಎಂದು ಅವರು ಹೇಳಿದರು ..."

ಜಯಹಿಂದ ಪತ್ರಿಕೆ ಮುಂದೆ ಕೆಲ ಕಾಲ ನಡೆದು ೧೯೫೭ರಲ್ಲಿ ನಿಲ್ಲಿಸಲ್ಪಟ್ಟಿತ್ತು ●

# ಹತ್ತರ ಗಂಟುಗಳು




ಒಂದರಿಂದ ಹತ್ತು.
ಆಟ ಊಟ ಓಟಗಳ ಜಗತ್ತು.

ಇಪ್ಪತ್ತಕ್ಕೆ ವಂಕ ಮೀಸೆ ಮೂಡುತ್ತದೆ,
ಕ್ಯಾಲೆಂಡರ್ ಕಂಡರೂ ಎದೆ ಹಾಡುತ್ತದೆ.
ಮೂವತ್ತಕ್ಕೆ ಮದುವೆ.
ಮೇಲೆ ಒಂದೋ ಎರಡೋ ಮರಿಗಳು,

ನಾಲ್ವತ್ತಕ್ಕೆ ಚಾಳೀಸು
ಇಬ್ಬರಿಗೂ– ಅಥವಾ ಒಬ್ಬರಿಗಾದರೂ
ಕುಟುಂಬ ಯೋಜನೆ.

ಐವತ್ತಕ್ಕೆ ಅಭಿನಂದನ ಗ್ರಂಥ.
ಮಾಲಾರ್ಪಣೆ- ಶಾಲಾರ್ಪಣೆ.
ಆಗಲೇ ಅರವತ್ತರ ಯೋಚನೆ.

ಅರವತ್ತಕ್ಕೆ ಅದ್ದೂರಿಯ ಸಮಾರಂಭ.
ನಿಧಿ ಅರ್ಪಣೆ ತುಲಾಭಾರ—ಹಳೆ ಸರಕಿನ
ಪುನರ್ಮುದ್ರಣ ಇತ್ಯಾದಿ.

ಅರವತ್ತು ದಾಟಿದರೆ ಗೋವಿಂದ.
ಒಂದು ಅಂದರೆ ಹನ್ನೊಂದು ಅಂದರೆ ಇನ್ನೊಂದು,
ಬರೀ ಬೆರಳು ಎಣಿಸುತ್ತ ಬಾಕೀ ಜೀವನ.

ಎಪ್ಪತ್ತು ಎಂಬತ್ತು ತೊಂಬತ್ತು ಬರುತ್ತವೆ
ಅಥವಾ ಬರಬಹುದು.
ಸಾಯುವ ಮುನ್ನ ನೂರು ದಾಟಿದರೆ
ಸರಕಾರದವರು ಸ್ಟ್ಯಾಂಪೂ ಹೊರಡಿಸಬಹುದು.
ಅದನ್ನೊಮ್ಮೆ ನೋಡಿಯೇ ಸಾಯಬಹುದು,

* * *

ಒಂದರಿಂದ ನೂರರ ವರೆಗಿನ
ಈ ಹತ್ತರ ಗಂಟುಗಳು
ಹತ್ತು ವರ್ಷಕ್ಕೊಮ್ಮೆ ಗಂಟು
ಬೀಳದಿದ್ದರೆ—

ಬರಿ ಬಿಡಿ ಕಾಳುಗಳ ಕೂಡ
ಚಿನ್ನಾಟವಾಡುತ್ತ ಆಡುತ್ತ
ಒಂದು ದಿನ ಚೆಂಗನೇ ನೆಗೆದು
ಹೋಗಬಹುದಿತ್ತು.

ಚಂದ್ರಶೇಖರ ಪಾಟೀಲ

# ತುರ್ತು ವಿಶೇಷಾಂಕ


SAVITHRI AGENCIES
NEWS PAPERS & MAGAZINES
ಇದು ತುರ್ತಾಗಿ ಹೊರಬಂದ ವಿಶೇಷಾಂಕ ಸಾರ್, ಮುಖಪುಟ ಮುಂದಿನವಾರ ಬರುತ್ತೆ....


ಇದು ತುರ್ತಾಗಿ ಬರೆದಿರುವ ಲೇಖನವಾದ್ದರಿಂದ ಕೃತಿಚೌರ್ಯ ಅನಿಸಿದರೆ ತೀರಾ ಆಕಸ್ಮಿಕ - ಅಂತ ಸಂಪಾದಕರಿಗೆ ಒಂದು ಪತ್ರವನ್ನೂ ಬರೆದುಬಿಟ್ಟಿದ್ದೇನೆ.


ವಿಶೇಷಾಂಕಕ್ಕೆ ತುರ್ತಾಗಿ ಒಂದು ವಿಶೇಷ ಲೇಖನ ಬೇಕಂತೆ ಕಣೇ. ಅಸ್ವೀಕೃತ ಲೇಖನಗಳ ಕಂತೆ ತಗೊಂಡು ಬಾ ಸ್ವಲ್ಪ ನೋಡ್ತೀನಿ ....


ತುರ್ತು ಲೇಖನ ಬೇಕೂಂತ ಕೇಳಿದ್ದಿರಲ್ಲ
ತಗೊಳ್ಳಿ. ಯಾರೋ ಒಬ್ಬರು ಸೊಗಸಾದ
ಲೇಖನ ಕಳಿಸಿದ್ದಾರೆ - 'ತುರ್ತು ಪರಿಸ್ಥಿತಿ'ಯ ಬಗ್ಗೆ....


ನಮ್ಮ ವಿಶೇಷಾಂಕಕ್ಕೆ ತುರ್ತಾಗಿ ಒಂದು
ಕಥೆ ಬರೆದುಕೊಡಿ ಸಾಹಿತಿಗಳೇ,
ದಿಢೀರ್ ಸ್ಫೂರ್ತಿಯನ್ನ ಕವರ್‌ನಲ್ಲಿಟ್ಟಿದ್ದೇವೆ...


ದೀಪಾವಳೀ ವಿಶೇಷಾಂಕಕ್ಕಾಗಿ ತುರ್ತಾಗಿ ಒಂದು
ಲೇಖನವನ್ನು ಬರೀತಾ ಕೂತಿದ್ದಾರೆ - ಯಾವುದಕ್ಕೂ
ಸಮಯ ವ್ಯರ್ಥ ಮಾಡದೆ - !-

ಎಂ. ವಿಶ್ವನಾಥ್

# ತಲೆಯಿಲ್ಲದ ಕತೆಗಳು, ಅಡ್ಡಾದಿಡ್ಡಿ ಕಾಲುಗಳು 'ಕೇಂದ್ರವಸ್ತು'ವೇ ಇಲ್ಲದ ಮಹಿಳಾ ಕಾದಂಬರಿಗಳು

★ ಗಿರಡ್ಡಿ ಗೋವಿಂದರಾಜ

**ಯಾವ ಬಗೆಯ ಕಲಾವಂತಿಕೆಯೂ ಇಲ್ಲದ ಮಹಿಳಾ ಕಾದಂಬರಿಗಳ ಅತಂತ್ರವನ್ನು ಸ್ಥೂಲವಾಗಿ ವಿವರಿಸುವ ಗಿರಡ್ಡಿ ಗೋವಿಂದ ರಾಜರು, ಶ್ರೇಷ್ಠ ಕೃತಿಯ ರಚನೆಯ ದಿಕ್ಕಿನಲ್ಲಿ ಲೇಖಕಿಯರು ಇನ್ನೂ ಬಹಳ ದೂರ ನಡೆಯಬೇಕಾಗಿದೆ ಎನ್ನುತ್ತಾರೆ. ಈ ಲೇಖನದಲ್ಲಿ. ಅನುಭವಗಳಿಲ್ಲ, ಅನುಭವಗಳಿಲ್ಲ ಎನುತ್ತಾರಲ್ಲಾ, ಅದಕ್ಕೆ ಕಾರಣವೇನು ? ಎಂಬುದನ್ನು ಹೇಮಾ ಅವರು ಪುಟ ೫೫ರ ಲೇಖನದಲ್ಲಿ ವಿವರಿಸಿದ್ದಾರೆ. ಎರಡೂ ಲೇಖನಗಳ ಮಜಲುಗಳನ್ನೂ ನೋಡಿರಿ.**

ಯಾವುದೇ ಒಂದು ಕಾದಂಬರಿ ಯಾವುದರ ಬಗ್ಗೆ ಇದೆ ಎಂಬ ಪ್ರಶ್ನೆಗೆ ಎರಡು ಬಗೆಯ ಉತ್ತರ ಕೊಡಬಹುದು. ಮೊದಲನೆಯದಾಗಿ, ಕಾದಂಬರಿ ಕೆಲವು ಘಟನೆ ಮತ್ತು ವ್ಯಕ್ತಿಗಳ ಬಗೆಗೆ ಇರುತ್ತದೆ. ಇದು ಅದರ ಕಥೆ. ಈ ಕಥೆಯನ್ನು ಸುಲಭವಾಗಿ ಸಂಗ್ರಹಿಸಿ ಹೇಳಬಹುದು. ಎರಡನೆಯದಾಗಿ, ಈ ಕಥೆಯ ಹಿಂದೆ ಯಾವುದೋ ಒಂದು ನಂಬಿಕೆ, ತತ್ವ, ಬದುಕಿನ ಬಗೆಗಿನ ತಿಳುವಳಿಕೆ ಇರುತ್ತದೆ. ಇದನ್ನು ಕಥೆಯಿಂದ ಬೇರ್ಪಡಿಸಿ ಅಮೂರ್ತ ರೂಪದಲ್ಲಿ ಸಂಗ್ರಹಿಸಿ ಹೇಳಬಹುದು. ಇದು ಕಾದಂಬರಿಯ ವಸ್ತು. ಈ ವಸ್ತುವೇ ಕಾದಂಬರಿಯ ಆತ್ಮ. ಅದಕ್ಕೆ ಕಥೆ, ಭಾಷೆ, ತಂತ್ರಗಳ ದೇಹವಿಲ್ಲದೆ ಅದು ಮೂರ್ತವಾಗಿ ಕಾಣಿಸಿಕೊಳ್ಳಲಾರದು. ನಾಟ್ಯಸಂಕೇತಗಳೆಂದು ಕರೆಯಬಹುದಾದ ಪಾತ್ರ, ಕ್ರಿಯೆ ಮಾತು, ಸಂದರ್ಭ ಇತ್ಯಾದಿಗಳಿಂದ ಕೂಡಿದ ಕಥೆ ವಸ್ತುವನ್ನು ನಾಟ್ಯೀಕರಿಸಿ ತೋರಿಸುವ ಸಾಧನವಾಗುತ್ತದೆ. ಕಥೆಯನ್ನು ಸುಲಭವಾಗಿ ಗ್ರಹಿಸಬಹುದಾದಂತೆ ಈ ವಸ್ತುವನ್ನು ಗ್ರಹಿಸಲಿಕ್ಕಾಗುವದಿಲ್ಲ. ಒಂದು ಕಾದಂಬರಿಯ ವಸ್ತುವೇನು ಎಂದು ಗುರುತಿಸುವದು ಎಷ್ಟು ಕಷ್ಟದ ಸಂಗತಿ ಎಂಬುದು ಅನೇಕ ಆಧುನಿಕ ಓದುಗರ ಗಮನಕ್ಕೆ ಬಂದಿರಬಹುದಾದ ಸಂಗತಿ. ಕೃತಿಯ ಹಿಂದಿನ ಕಾದಂಬರಿಕಾರನ ಉದ್ದೇಶವೇನು ಎಂಬುದು ಇಲ್ಲಿಯ ಮುಖ್ಯ ಪ್ರಶ್ನೆ. ಈ ಉದ್ದೇಶವನ್ನು ಹೆಚ್ಚೆಂದರೆ ೮–೧೦ ಶಬ್ದಗಳಲ್ಲಿ ಸಂಗ್ರಹಿಸಿ ಹೇಳಲು ಸಾಧ್ಯವಾಗಬೇಕು ಎಂದು ಪರ್ಸಿ ಲಬಕ್ ಎಂಬ ವಿಮರ್ಶಕ ಆಗ್ರಹಪೂರ್ವಕವಾಗಿ ಹೇಳುತ್ತಾನೆ. ಹೀಗೆ ಒಂದು ಮಾತಿನಲ್ಲಿ ಹೇಳಲು ಸಾಧ್ಯವಾಗದಂಥ ವಸ್ತುವಿದ್ದರೆ ಅದು ಕಾದಂಬರಿಗೆ ಸರಿಯಾದ ವಿಷಯವಾಗಲಾರದು ಎಂದು ಅವನ ಅಭಿಪ್ರಾಯ. ಕೃತಿ ಸಣ್ಣದೇ ಇರಲಿ, ದೊಡ್ಡದೇ ಇರಲಿ; ಸರಳವಾಗಿರಲಿ. ಸಂಕೀರ್ಣವಾಗಿರಲಿ; ಒಂದೇ ವ್ಯಕ್ತಿ ಅಥವಾ ಘಟನೆಯನ್ನು ಕುರಿತಿರಲಿ, ಹಲವಾರು ವ್ಯಕ್ತಿ–ಘಟನೆಗಳನ್ನು ಕುರಿತಿರಲಿ; ಅದರ ವಸ್ತುವನ್ನು ಹತ್ತು ಶಬ್ದಗಳಲ್ಲಿ ಸಂಗ್ರಹಿಸಿ ಹೇಳಲು ಖಂಡಿತ ಸಾಧ್ಯವಿದೆ.

ಆದರೆ ಹೀಗೆ ಸಂಗ್ರಹಿಸಿ ಹೇಳಿದಷ್ಟು ಯಾವ ಕೃತಿಯ ವಸ್ತುವೂ ಸರಳವಾಗಿರುವದಿಲ್ಲ. ಒಂದು ಕಾದಂಬರಿಯ ವಸ್ತು 'ಶ್ರೀಮಂತ ವರ್ಗದಿಂದ ದಲಿತರ ಶೋಷಣೆ' ಎಂದು ಹೇಳಿದಾಗ ಲೇಖಕ ಇಲ್ಲಿ ಯಾವ ಪಕ್ಷವನ್ನು ವಹಿಸುತ್ತಾನೆಂಬುದು ಗೊತ್ತಾಗುವದಿಲ್ಲ. ಇಂಥ ಶೋಷಣೆ ಏಕಪಕ್ಷೀಯವಾಗಿರಲಿಕ್ಕಿಲ್ಲ. ಶೋಷಿತನೂ ಇನ್ನೊಂದು ರೀತಿಯಲ್ಲಿ ಮತ್ತೊಬ್ಬನನ್ನು ಶೋಷಿಸುತ್ತಿರಬಹುದು. ಶೋಷಕನೂ ಒಂದು ವಿಶಿಷ್ಟ ಪರಿಸರದಲ್ಲಿ ಅಸಹಾಯಕನಾಗಿರಬಹುದು. ಅಥವಾ ಅವನ ಔದಾರ್ಯವೇ ಶೋಷಣೆಯ ವ್ಯವಸ್ಥೆಯನ್ನು ಅಪ್ರತ್ಯಕ್ಷವಾಗಿ ಗಟ್ಟಿಗೊಳಿಸುತ್ತಿರಬಹುದು. ಹೀಗೆ ವಸ್ತು ಕಥೆಯ ಸಂದರ್ಭದಲ್ಲಿ ಅನೇಕ ಬಗೆಯಾಗಿ ಸಂಕೀರ್ಣವಾಗಬಹುದು. ಇಂಥ ವಸ್ತು ನೈತಿಕ ಬಿಕ್ಕಟ್ಟಾಗಿರಬಹುದು; ಸಾಮಾಜಿಕ ಸಮಸ್ಯೆಯಾಗಿರಬಹುದು; ಹಳತು–ಹೊಸತರ ಘರ್ಷಣೆಯಾಗಿರಬಹುದು; ಕೌಟುಂಬಿಕ ತೊಡಕು ಆಗಿರಬಹುದು; ವೈಯಕ್ತಿಕ ಆಯ್ಕೆಯಾಗಿರಬಹುದು; ವ್ಯಕ್ತಿತ್ವಗಳ ತಿಕ್ಕಾಟವಾಗಿರಬಹುದು. ಅಥವಾ ಕಥೆಯ ಉದ್ದಕ್ಕೂ ಕಾಣಿಸಿಕೊಳ್ಳುವ ವಿಶಿಷ್ಟ ಜೀವನ ದೃಷ್ಟಿಯೂ ಆಗಿರಬಹುದು. ಬದುಕು ಒಂದು ಸವಾಲು, ಅಥವಾ ನಿರರ್ಥಕವಾದುದು ಎಂಬ ಅನಿಸಿಕೆಯೂ ಆಗಿರಬಹುದು. ಒಟ್ಟಿನಲ್ಲಿ ಅದು ಬದುಕಿನ ಯಾವದೋ ಅಂಶದ ಮೇಲೆ ವಿಶೇಷ ಬೆಳಕು ಚೆಲ್ಲುತ್ತದೆ. ಈ ಅರ್ಥದಲ್ಲಿ ವಸ್ತು ವಿಶಿಷ್ಟವೂ ಹೌದು, ಸಾಮಾನ್ಯವೂ ಹೌದು.

ಕಾದಂಬರಿಯಲ್ಲಿ ವಸ್ತುವನ್ನು ಸರಿಯಾಗಿ ಗ್ರಹಿಸುವದು ಬದುಕಿನಲ್ಲಿ ಅನುಭವಗಳ ಅರ್ಥವನ್ನು ಗ್ರಹಿಸುವಷ್ಟೇ ಕಠಿಣವಾದ ಕೆಲಸ. ಆದರೆ ಅದನ್ನು ಸರಿಯಾಗಿ ಗ್ರಹಿಸದ ಹೊರತು ಒಂದು ಕೃತಿಯ ಅಂಗಗಳಾದ ಘಟನೆ, ಪಾತ್ರ, ಸಂಘರ್ಷ, ನಿರೂಪಣೆಯ ಕೋನ, ಸಾಂಕೇತಿಕತೆ, ವ್ಯಂಗ್ಯ ಮುಂತಾದವುಗಳ ಔಚಿತ್ಯವನ್ನು ನಿರ್ಧರಿಸಲಿಕ್ಕೆ ಆಗುವದಿಲ್ಲ, ಎಂದರೆ, ವಸ್ತುವೇ ಕಥೆಗೆ ವ್ಯಾಪ್ತಿಯನ್ನು, ಸಂಗತಿಗಳಿಗೆ ಅರ್ಥವನ್ನು ಒದಗಿಸುವ ಕೇಂದ್ರವಾಗಿರುತ್ತದೆ. ಅಂತೆಯೇ ವಸ್ತು ಕೃತಿರಚನೆಯಲ್ಲಿ ಮಹತ್ವದ ಪಾತ್ರ ವಹಿಸುತ್ತದೆ.

ಕನ್ನಡ ಕಾದಂಬರಿಕಾರ್ತಿಯರ ಮುಕ್ಕಾಲು ಪಾಲು ಕೃತಿಗಳಲ್ಲಿಯ ಒಡೆದು ಕಾಣುವ ಅಂಶವೆಂದರೆ ಇವುಗಳಲ್ಲಿ ಈ ಬಗೆಯ ಕೇಂದ್ರವಸ್ತುವೇ ಇಲ್ಲದಿರುವುದು. ಇವರಲ್ಲಿ ಹೆಚ್ಚು ಜನ ಕೇವಲ ಘಟನೆ ಇಲ್ಲವೆ ಪಾತ್ರವೇ ಮುಖ್ಯವಾದ ಕಥೆಗಳ ನಿರೂಪಣೆಯಲ್ಲಿಯೇ ಆಸಕ್ತಿ ತಳೆದಿದ್ದಾರೆ. ಈ ಕಥೆಯ ಹಿಂದೆ ಒಂದು ನಿರ್ದಿಷ್ಟವಾದ ಉದ್ದೇಶ. ಘಟನೆ–ಪಾತ್ರ ವರ್ಣನೆ, ಇತ್ಯಾದಿಗಳನ್ನೆಲ್ಲ ಒಂದು ಕೇಂದ್ರಕ್ಕೆ ಜೋಡಿಸುವ ವಸ್ತು ಇಲ್ಲ. ವಸ್ತುವೇ ಇಲ್ಲದ್ದರಿಂದ ಅದರ ಬಗೆಗೆ ಲೇಖಕಿ ತಳೆಯುವ ದೃಷ್ಟಿಕೋನ ಮೌಲ್ಯ-ವಿವೇಚನೆಯ ತೊಡಕು, ಆ ವಸ್ತುವಿನ ಸಂಕೀರ್ಣ ಸ್ವರೂಪವನ್ನು ತೋರಿಸುವ ಸಂವಿಧಾನ ಕೌಶಲ ಇತ್ಯಾದಿಗಳ ಪ್ರಶ್ನೆಯೇ ಏಳುವದಿಲ್ಲ.

ಹೀಗೆ ವಸ್ತುವೇ ಇಲ್ಲದೆ ಕೇವಲ ಕಥೆ ಹೇಳುವ ಕಾದಂಬರಿಕಾರ್ತಿಯರನ್ನು ಎರಡು ಗುಂಪುಗಳಲ್ಲಿ ವಿಂಗಡಿಸಬಹುದು. ಮೊದಲನೆಯ ವರ್ಗದ ಲೇಖಕಿಯರು ಕಥೆಯನ್ನೇನೋ ಹೇಳುತ್ತಾರೆ. ಆದರೆ ಅವರಲ್ಲಿ ಸಹಜತೆ, ಸುಸಂಬದ್ಧತೆಗಳು ಇರುವದಿಲ್ಲ. ಎಂ.ಕೆ. ಜಯಲಕ್ಷ್ಮೀಯವರ "ಹೂವು ಚೆಲ್ಲಿಹ ಹಾದಿ", ಕಾಕೋಳು ಸರೋಜರಾವ್ ಅವರ ಬಹುಪಾಲು ಕಾದಂಬರಿಗಳು, ಗೀತಾ ಕುಲಕರ್ಣಿಯವರ "ಕಂಬನಿ ಒರಸಿದ ಕೈ", ಪ್ರೇಮಾ ಭಟ್ ಅವರ "ಇದ್ದು ಹೋದ ಜೀವ", ನಿರುಪಮಾ ಅವರ "ಪಂಕ್ತಿ" ಮುಂತಾದವು ಈ ವರ್ಗಕ್ಕೆ ಸೇರುವ ಕಾದಂಬರಿಗಳು. ಈ ವರ್ಗಕ್ಕೆ ಸೇರುವ ಲೇಖಕಿಯರೇ ಹೆಚ್ಚಾಗಿದ್ದಾರೆನ್ನಬಹುದು. ಎಲ್ಲರನ್ನೂ ಪ್ರತ್ಯೇಕವಾಗಿ ಚರ್ಚಿಸುವ ಅಗತ್ಯವಿಲ್ಲ. ಪ್ರೇಮಾಭಟ್' ಅವರ "ಇದ್ದು ಹೋದ ಜೀವ"ವನ್ನು ಉದಾಹರಣೆಯಾಗಿ ನೋಡಬಹುದು. ಈ ಕಾದಂಬರಿಗೆ ವಿನ್ಯಾಸವೇ ಇಲ್ಲ. ಕನ್ನಡ ಲೇಖಕಿಯರ ಮುಖ್ಯ ದೋಷಗಳಾದ ಭಾವಾತಿರೇಕ, ಅಸಹಜ ನಿರೂಪಣೆ, ವಿನ್ಯಾಸ ರಾಹಿತ್ಯ, ಅರ್ಥವಂತಿಕೆಯ ಅಭಾವಗಳೆಲ್ಲ ಇಲ್ಲಿವೆ. ಕಾದಂಬರಿಯಲ್ಲಿ ಅನೇಕ ಪಾತ್ರಗಳು ಕಾರಣವಿದ್ದೋ ಇಲ್ಲದೆಯೋ ಸಾಯುತ್ತಲೇ ಹೋಗುತ್ತವೆ. ಅವುಗಳ ಸಾವಿಗೆ ಜಡ್ಡು–ಜಾಪತ್ರೆ-ಅಪಘಾತಗಳಂತಹ ಭೌತಿಕ ಕಾರಣಗಳಿರಬಹುದು,

ಆದರೆ ಕಾದಂಬರಿಯ ಸಂವಿಧಾನಕ್ಕೆ ಅಗತ್ಯವಾದ ಘಟನೆಗಳು ಮಾತ್ರ ಇಲ್ಲಿಲ್ಲ. ಮುಖ್ಯವಾದ ವಿಷಯವೆಂದರೆ—ಈ ಕಾದಂಬರಿಗೆ ಕೇಂದ್ರ ವಸ್ತುವೇ ಇಲ್ಲ. ಆದ್ದರಿಂದ ಕಥೆ ಮತ್ತು ಪಾತ್ರಗಳು ಅತಂತ್ರವಾಗಿವೆ. ಸತ್ತವರಿಗೆಲ್ಲ ಲೇಖಕಿ 'ಇದ್ದು ಹೋದ ಜೀವ' ಎಂದು ಮರುಗುತ್ತ ಕಾದಂಬರಿಯ ಹೆಸರನ್ನು ಸಾರ್ಥಕಪಡಿಸಲು ಯತ್ನಿಸುತ್ತಾರೆ. ಇದು ತೀರಾ ಕೃತಕವೆನಿಸಿಬಿಡುತ್ತದೆ. ಇಂಥ ಕಾದಂಬರಿಗಳು ಮನಬಂದಂತೆ ಬೆಳೆಯುತ್ತ ಹೋಗಿ ಕೊನೆಗೊಮ್ಮೆ ಆಕಸ್ಮಿಕ ಬದಲಾವಣೆಯೊಂದಿಗೆ ಮುಕ್ತಾಯವಾಗುತ್ತವೆ. ಇಂಥ ಕೆಲವು ಕಥೆಗಳು ಜೀವನದಲ್ಲಿ ನಿಜವಾಗಿ ನಡೆದುವು ಎಂಬ ಆಧಾರದ ಮೇಲೆ ಇವು ಕಾದಂಬರಿಯಲ್ಲೂ ಸಹಜವಾಗಿರುತ್ತವೆ ಎಂಬ ನಂಬಿಕೆ ಲೇಖಕಿಯರಿಗಿದ್ದಂತೆ ಕಾಣುತ್ತದೆ. ಆದರೆ ಈ ಕಥೆಗಳ ಹಿಂದಿನ ಅರ್ಥವನ್ನು ಅಥವಾ ವಸ್ತುವನ್ನು ಗುರುತಿಸದೇ ಇರುವದರಿಂದ ಆ ಕೇಂದ್ರವಸ್ತುವಿಗೆ ಅಗತ್ಯವಾದುದನ್ನಷ್ಟೇ ಆಯ್ದುಕೊಳ್ಳುವ ತತ್ವವೂ ದಿಕ್ಕಾಪಾಲಾಗುತ್ತದೆ. ಅಂತೆಯೇ ಇಂಥ ಕಾದಂಬರಿಗಳಲ್ಲಿ ಯಾವುದು ಅಗತ್ಯ, ಯಾವುದು ಅನಗತ್ಯ ಎಂಬ ಪ್ರಶ್ನೆಯೇ ಏಳುವದಿಲ್ಲ.

ಕಥೆಗೆ ಕಾಲಿಲ್ಲ ಎನ್ನುತ್ತಾರೆ. ಈ ಕಾದಂಬರಿಗಳ ಕಥೆಗಳಿಗೆ ಕಾಲುಗಳೇನೋ ಇವೆ; ಆದರೆ ಅಡ್ಡಾದಿಡ್ಡಿಯಾಗಿವೆ. ಮುಖ್ಯ ಸಮಸ್ಯೆಯೆಂದರೆ ಈ ಕಥೆಗಳಿಗೆ ತಲೆ ಇಲ್ಲ. ಎರಡನೆಯ ವರ್ಗದ ಕಾದಂಬರಿಕಾರ್ತಿಯರ ಸಮಸ್ಯೆಯೂ ತಲೆಯದೇ ಆದರೆ ಅವರ ಕಥೆಗಳಿಗೆ ತಲೆ ಇರದಿದ್ದರೂ ಕಾಲು ನೆಟ್ಟಗಿವೆ. ಇವರು ಕಥೆಯನ್ನು ಹೆಚ್ಚು ಸಹಜವಾಗಿ, ಆಕರ್ಷಕವಾಗಿ ಹೇಳಿಕೊಂಡು ಹೋಗಬಲ್ಲರು. ಸಂವಿಧಾನದಲ್ಲಿ ಒಂದು ಬಗೆಯ ಅಚ್ಚುಕಟ್ಟುತನ ಕಾಣುತ್ತದೆ. ಪಾತ್ರಗಳು ಹೆಚ್ಚು ಸುಸಂಗತವಾಗಿ ವರ್ತಿಸುತ್ತವೆ. ಕೆಲವೊಂದು ಸಲ ಕೆಲವು ಪಾತ್ರಗಳ ಚಿತ್ರಣಕ್ಕಾಗಿಯೋ ಆಕರ್ಷಕ ಘಟನೆಗಳಿಗಾಗಿಯೋ ಇವು ಓದಿಸಿಕೊಂಡು ಹೋಗುತ್ತವೆ. ದುರ್ದೈವದಿಂದ ಈ ವರ್ಗದ ಲೇಖಕಿಯರ ಸಂಖ್ಯೆ ತೀರ ಸಣ್ಣದಿದೆ.

ವಾಣಿಯವರ ಕಾದಂಬರಿಗಳು ಮಾತ್ರ ಇಲ್ಲಿ ಸುಲಭವಾಗಿ ನೆನಪಿಗೆ ಬರುತ್ತವೆ. ಅವರ "ತ್ರಿಶೂಲ" "ಬಾಳೆಯ ನೆರಳು" ಉತ್ತಮ ದರ್ಜೆಯ ಕೃತಿಗಳೇನೂ ಅಲ್ಲ. ಆದರೆ ಉಳಿದ ಅನೇಕ ಜನ ಲೇಖಕಿಯ ಕೃತಿಗಳಲ್ಲಿಲ್ಲದ ಸಹಜತೆ, ಔಚಿತ್ಯ ಇವುಗಳಲ್ಲಿ ತಕ್ಕಮಟ್ಟಿಗಾದರೂ ಇದೆ ಎಂಬುದೇ ಒಂದು ವಿಶೇಷ. "ತ್ರಿಶೂಲ" ಕಾದಂಬರಿಯಲ್ಲಿ ಕಾರಿನ ಅಪಘಾತದಿಂದಾಗಿ ಸಾಂಬಶಿವನ್ ಅವರ ಮನೆ ಸೇರಿದ ಪರದೇಶಿ ಶಂಭು ಅಲ್ಲಿ ತನ್ನಂಥವರೇ ಇನ್ನಿಬ್ಬರು ಪರದೇಶಿಗಳನ್ನು ಭೆಟ್ಟಿಯಾಗುತ್ತಾನೆ. ಅರುಣಾ ಹಾಗೂ ಮುತ್ತು ಸ್ವಾಮಿಯರೂ ಹೀಗೇ ಬಂದು ಆ ಮನೆ ಸೇರಿಕೊಂಡವರು. ಶಂಭು ಮನೆತುಂಬ ಓಡಾಡಿ ಎಲ್ಲರ ಪ್ರೀತಿಗೂ ಪಾತ್ರನಾಗುತ್ತಾನೆ. ಅರುಣಾ ಕೂಡ ಎಲ್ಲರ ಮಾತೂ ಕೇಳುತ್ತ ಕುಮಾರನಂಥ ಒರಟನನ್ನೂ ಒಲಿಸಿಕೊಳ್ಳುತ್ತಾಳೆ. ತಮ್ಮದೇ ಆದ ಔದಾರ್ಯದಿಂದ ಸಾಂಬಶಿವನ್ ಮನೆಯ ಹಿರಿತನವನ್ನು ತೂಗಿಸಿಕೊಂಡು ಹೋಗುತ್ತಾರೆ. ವೈವಿಧ್ಯಮಯವಾದ ಪಾತ್ರಗಳು. ಕುಮಾರ–ಅರುಣಾರ ನಡುವಿನ ಪ್ರೀತಿಯ ಬೆಳ




ವಣಿಗೆಯಲ್ಲಿ ಒಂದು ಬಗೆಯ ಅನಿವಾರ್ಯ ಸಹಜತೆ ಇದೆ. ಕಾದಂಬರಿಯ ಕೊನೆಗೆ ಅವರ ಮದುವೆ ನಿಶ್ಚಯವಾಗುತ್ತದೆ. ಶಂಭು, ಮತ್ತು ಸ್ವಾಮಿಯರಿಗೂ ನೌಕರಿ ದೊರೆತು ಸ್ವತಂತ್ರರಾಗುತ್ತಾರೆ. ರಜೆಯ ಮೇಲೆ ಹೋಗಿದ್ದ ಅಡಿಗೆ ಭಟ್ಟರು ತಿರುಗಿ ಬಂದು ಅಡಿಗೆ ಮನೆ ಮತ್ತೆ ಹಳಿಯ ಮೇಲೆ ಬರುತ್ತದೆ. ಮೂವರೂ ಪರದೇಶಿಗಳಿಗೆ ಒಂದು ದಿಕ್ಕು ಸಿಗುವುದರೊಂದಿಗೆ ಕಾದಂಬರಿ ಮುಗಿಯುತ್ತದೆ. ಹೀಗೆ ಕಥೆಯಲ್ಲಿ ಸುಸಂಬದ್ಧವಾದ ಬೆಳವಣಿಗೆ ಇದೆ. ಆದರೂ ಕೇಂದ್ರವಸ್ತು ಮಾತ್ರ ಇಲ್ಲ.

ಈ ಎರಡೂ ವರ್ಗದ ಕಾದಂಬರಿಕಾರರೂ ತಲೆಗೆ ತೊಂದರೆ ಕೊಡುವವರಲ್ಲ. ಆದರೆ ಆಗಾಗ ಕಣ್ಣಿಗೆ ಮಾತ್ರ ಸ್ವಲ್ಪ ತೊಂದರೆ ಕೊಡುತ್ತಾರೆ– ಕಣ್ಣೀರಿನ ಮೂಲಕ ಈ ಎರಡೂ ವರ್ಗದ ಕಾದಂಬರಿಕಾರರಲ್ಲಿ ಸಾಮಾನ್ಯವಾಗಿ ಕಾಣುವ ಇನ್ನೊಂದು ಅಂಶವೆಂದರೆ ಅನಗತ್ಯವಾದ ಮತ್ತು ತೀರ ಪರಿಚಿತವಾದ ವಿವರಗಳನ್ನು ಕೊಡುವುದರಲ್ಲಿ ಕಾಣುವ ಆಸಕ್ತಿ, ಸಂಕ್ಷಿಪ್ತವಾಗಿ ಸಂಗ್ರಹಿಸಿ ಹೇಳಬೇಕಾದ ಅನೇಕ ಸಂಗತಿಗಳನ್ನು ವಿವರವಾಗಿ, ಸಂಭಾಷಣೆ ಸಹಿತ ನಾಟ್ಯೀಕರಿಸಲು ಯತ್ನಿಸುತ್ತಾರೆ. ತಿಂಡಿ–ತೀರ್ಥಗಳ ವಿಷಯದಲ್ಲಂತೂ ಇವರು ಬಹಳ ಉದಾರಿಗಳು. ಗೀತಾ ಕುಲಕರ್ಣಿಯವರ "ಕಂಬನಿ ಒರಸಿದ ಕೈ"ಯಲ್ಲಿ ಪಾತ್ರಗಳಿಗೆ ಮಾತಾಡುವದರಲ್ಲಿ ಪೈಪೋಟಿ. ಇನ್ನೂರು ಪುಟಗಳ ಈ ಸಣ್ಣ ಕಾದಂಬರಿಯಲ್ಲಿ ನಾಲ್ಕೈದು ಕುಟುಂಬಗಳ ಕಥೆ ಇದೆ. ಎಲ್ಲರೂ ಮಾತಾಡುವವರೇ. ಇಂಥ ತೀರ ಪರಿಚಿತವಾದ ವಿವರಗಳನ್ನು ಕೊಡುವುದರಲ್ಲಿ ಸಾಮಾನ್ಯವಾಗಿ ಎಲ್ಲ ಕಾದಂಬರಿಕಾರ್ತಿಯರೂ ಸೇರುತ್ತಾರೆ ಎಂ. ಕೆ. ಇಂದಿರಾ ಅವರ "ಸದಾನಂದ"ದಲ್ಲಿ ಎಷ್ಟೊಂದು ಸಹ ಊಟ ತಿಂಡಿಗಳ ಸಮಾರಾಧನೆ !

ಇನ್ನು ತಮ್ಮ ಕಾದಂಬರಿಗಳಲ್ಲಿ ಕೇಂದ್ರವಸ್ತುವನ್ನು ಉಳ್ಳ ಲೇಖಕಿಯರೂ ಇದ್ದಾರೆ. ಆದರೆ ಅವರ ಸಂಖ್ಯೆ ಹೆಚ್ಚಿಗಿಲ್ಲ. ಇವರು ಆರಿಸಿಕೊಳ್ಳುವ ವಸ್ತು ಎಂಥವು. ಅವನ್ನು ಅವರು ನಿರ್ವಹಿಸುವ ರೀತಿ ಎಂಥವು ಎಂಬುದನ್ನು ಕುರಿತು ಒಂದಿಷ್ಟು ಯೋಚಿಸಬಹುದು.

ಅನುಪಮಾ ನಿರಂಜನರ "ಸಂಕೋಲೆಯೊಳಗಿಂದ" ಕಾದಂಬರಿಯ ವಸ್ತುವನ್ನು ಸ್ಥೂಲವಾಗಿ ಹೆಣ್ಣಿನ ಮೇಲಿನ ಗಂಡಿನ ದಬ್ಬಾಳಿಕೆ ಎಂದು ಹೇಳಬಹುದು. ಈ ಕಾದಂಬರಿಯ ನಾಯಿಕೆ ವಿಜಯಾ ಪರದೇಶಿ ಹುಡುಗಿ. ಚಿಕ್ಕಪ್ಪನ ಮನೆಯಲ್ಲಿ ಬೆಳೆದವಳು. ಚಿಕ್ಕಪ್ಪ ಮತ್ತು ಅವನ ಮಗ ಇಬ್ಬರಿಗೂ ಅವಳ ಮೇಲೆ ವಿಶ್ವಾಸ. ಆದರೆ ಬಡವರು ರಾಮನಾಥನಂಥ ಶ್ರೀಮಂತ ಬಂದು ವಿಜಯಾಳನ್ನು ಒಪ್ಪಿದಾಗ ಚಿಕ್ಕಪ್ಪ ಸಂತೋಷದಿಂದ ಮದುವೆ ಮಾಡಿಕೊಡುತ್ತಾನೆ. ಅಲ್ಲಿಯವರೆಗೆ ಪ್ರೀತಿ ತೋರಿಸಿದ್ದ ರಾಮನಾಥ ಮನೆಗೆ ಬಂದೊಡನೆ ಅವಳನ್ನು ಅಸಡ್ಡೆಯಿಂದ ಕಾಣತೊಡಗುತ್ತಾನೆ. ಅಲ್ಲಿಂದಲೇ ದಬ್ಬಾಳಿಕೆಗೆ ಆರಂಭ. ವಿಜಯಾಳನ್ನು ತವರಿಗೆ ಹೋಗಲು ಬಿಡುವದಿಲ್ಲ. ಅವನ ಕಪ್ಪುಹಣದ ವ್ಯವಹಾರ ಯಾವಾಗಲೂ ಅವನನ್ನು ಮನೆಯಿಂದ ಹೊರಗೇ ಇಡುತ್ತದೆ. ಅವನು ಕುಡಿದು ಬರುತ್ತಾನೆ. ಬೇರೆ ಹೆಂಗಸರ ಸಂಗ ಮಾಡುತ್ತಾನೆ. ಹೆಂಡತಿಯನ್ನು ನಿಕೃಷ್ಟವಾಗಿ ಕಾಣುತ್ತಾನೆ. ಈ ದಬ್ಬಾಳಿಕೆಯನ್ನು ವಿಜಯಾ ಪ್ರತಿಭಟನೆಯೇ ಇಲ್ಲದೆ ಸಹಿಸುತ್ತಾಳೆ. ಅವಳಿಗೆ ತವರಿನ ಬಲವೂ ಇಲ್ಲದೆ, ಈ ಸಹನೆ ಅನಿವಾರ್ಯವಾಗುತ್ತದೆ. ಇಲ್ಲಿ ಲೇಖಕಿ ಸಮಸ್ಯೆಯನ್ನು ಸ್ವಲ್ಪ ಸುಲಭಗೊಳಿಸಿಕೊಳ್ಳುತ್ತಾರೆ. ವಿಜಯಾ ಪರದೇಶಿಯಾದ್ದರಿಂದ ಅವಳಿಗೆ ತವರಿನ ಬಲ ಇಲ್ಲ. ಬಹುಶಃ ಅಂಥ ಬೆಂಬಲ ಇದ್ದರೆ ಪ್ರತಿಭಟನೆ ಸಾಧ್ಯವಾಗಬಹುದಿತ್ತು. ಈ ನಡುವೆ ಅವಳು ತವರು ಮನೆಯಲ್ಲಿ ಅವಳ ಅಣ್ಣನ ಗೆಳೆಯ ಸುಬ್ಬುವನ್ನು ಪ್ರೀತಿಸಿದ್ದನೆಂದು ಅಂದುಕೊಳ್ಳತೊಡಗುತ್ತಾಳೆ. ಇದೇನು ಅಂಥ ನಂಬಿಕೆ ಹುಟ್ಟಿಸುವ ವಿಷಯವಲ್ಲ. ಕಾದಂಬರಿಯಲ್ಲಿ ಈ ವಿಷಯದ ಬೆಳವಣಿಗೆ ನಂಬಿಕೆ ಹುಟ್ಟಿಸುವಷ್ಟು ಗಟ್ಟಿಯಾಗಿಲ್ಲ. ಈ ಸ್ಥಿತಿಯಲ್ಲಿ ರಾಮನಾಥ ಒಮ್ಮೆಲೆ ಎಲ್ಲವನ್ನೂ ಕಳೆದುಕೊಂಡು ಬೀದಿಯ ಭಿಕಾರಿಯಾಗುತ್ತಾನೆ. ವಿಜಯಾಳಿಗೆ ಸಿಫಿಲಿಸ್ ಅಂಟಿಸುತ್ತಾನೆ. ಅವಳು ಆಸ್ಪತ್ರೆಯಲ್ಲಿ ಅನಾಥಳಂತೆ ಸಾಯುತ್ತಾಳೆ. ಹೀಗೆ ಹೆಣ್ಣು ಗಂಡಿನ ದಬ್ಬಾಳಿಕೆಗೆ, ದೌರ್ಜನ್ಯಕ್ಕೆ ಸಿಕ್ಕು ಮೂಕವಾಗಿ ಅನುಭವಿಸಿ ಸಾಯುವ ದುರಂತ ಚಿತ್ರವನ್ನು ಇಲ್ಲಿ ಕೊಡಲಾಗಿದೆ. ಈ ಕಥೆಯನ್ನು ಮೂರು ಭಾಗಗಳಲ್ಲಿ ಮೂರು ಜನ ಹೇಳುತ್ತಾರೆ. ಮೊದಲು ಸ್ವತಃ ವಿಜಯಾ,

ನಡುವೆ ನೆರೆಮನೆಯ ಹುಡುಗಿ ನಂದಾ, ಕೊನೆಗೆ ನರ್ಸ್ ನೀಲಾ. ನಂದಾ ಹಾಗೂ ನೀಲಾ ಅವರ ನಿರೂಪಣೆಗಳಲ್ಲಿ ವಿಜಯಾಳ ಕಥೆ ನೇರವಾಗಿ ಮುಂದುವರಿಯದೆ, ಅವರ ಸ್ವಂತದ ಕಥೆಗಳನ್ನೂ ಸೇರಿಸಿಕೊಳ್ಳುವುದರಿಂದ ವಿಷಯಾಂತರವಾಗಿದೆ. ಕೆಲವು ವಿಷಯಗಳು ಅನಾವಶ್ಯಕವಾಗಿ ಪುನರುಕ್ತವಾಗಿವೆ. ಲೇಖಿಕೆಯವರಿಗೆ ಇವರಿಬ್ಬರ ಕಥೆಗಳ ಮೂಲಕ ಕೇಂದ್ರ ವಸ್ತುವಿಗೆ ಹೊಸ ಮಗ್ಗುಲನ್ನು ಜೋಡಿಸಿ, ಅದಕ್ಕೆ ಪೂರಕವಾಗಿ, ಬದುಕನ್ನು ದಿಟ್ಟತನದಿಂದ ಎದುರಿಸಿದ ಹೆಣ್ಣುಗಳ ಉದಾಹರಣೆಗಳನ್ನು ಕೊಡುತ್ತಿರುವುದಾಗಿ ನಂಬಿಕೆ ಇದೆ– ಎಂಬುದು ಮುನ್ನುಡಿಯಿಂದ (ಮೊದಲ ಮುದ್ರಣ) ತಿಳಿಯುತ್ತದೆ. ಆದರೆ ಹಾಗಾಗುವುದಿಲ್ಲ. ಗಂಡಿನ ದೌರ್ಜನ್ಯ–ದಬ್ಬಾಳಿಕೆಗಳ ಕೇಂದ್ರವಸ್ತುವಿಗೆ ಈ ಕಥೆಗಳು ಸಂಬಂಧ ಹೊಂದಿಲ್ಲ. ಲೇಖಿಕೆ ಕಾದಂಬರಿಯ ವಸ್ತು 'ಸ್ತ್ರೀ–ಸ್ವಾತಂತ್ರ್ಯ' ಎಂದಿದ್ದಾರೆ. ಆ ಅರ್ಥದಲ್ಲೂ ನಂದಾ, ನೀಲಾರ ಕಥೆಗಳು ಸ್ವತಂತ್ರರಾದ ಸ್ತ್ರೀಯರ ವಸ್ತುವನ್ನು ಪ್ರತಿನಿಧಿಸುವುದಿಲ್ಲ. ಬದಲಾಗಿ, ವಿಜಯಾಳ ಗಂಡ ರಾಮನಾಥನ ದೃಷ್ಟಿಕೋನದ ಮೂಲಕ ಅವನ ಕಥೆಯನ್ನೂ ಹೇಳುವುದು ಸಾಧ್ಯವಾಗಿದ್ದರೆ ವಸ್ತುವಿಗೆ ಹೆಚ್ಚಿನ ಸಂಕೀರ್ಣತೆ ಬರಬಹುದಾಗಿತ್ತು. ಅಸಹಜವೆಂದು ಕಾಣುವ ಅನೇಕ ಬೆಳವಣಿಗೆಗಳಿಗೆ ಸಮಾಧಾನ ಕೊಡಲು ಸಾಧ್ಯವಾಗುತ್ತಿತ್ತು. ಈಗಿರುವಂತೆ, ಮೊದಲನೆಯದಾಗಿ, ಮುಖ್ಯ ಸಮಸ್ಯೆಯನ್ನು ಅನುಕೂಲಕ್ಕೆ ತಕ್ಕ ಹಾಗೆ ಸುಲಭಗೊಳಿಸಿಕೊಂಡಿರುವುದರಿಂದ ವಸ್ತುವಿನ ಸಾರ್ವತ್ರಿಕತೆ ಕಡಿಮೆಯಾಗಿದೆ. ಎರಡನೆಯದಾಗಿ, ಕಾದಂಬರಿಯ ವಸ್ತು ಯಾವುದೆಂಬುದರ ಬಗ್ಗೆ ಸ್ಪಷ್ಟ ಕಲ್ಪನೆ ಇಲ್ಲದುದರಿಂದಾಗಿ ಗೊಂದಲ ಹುಟ್ಟಿದೆ.

ಇವರದೇ ಇನ್ನೊಂದು ಕಾದಂಬರಿ "ಚಿತ್ತಮೋಹನ"ದಲ್ಲಿ ವಿಧವಾ ವಿವಾಹದ ಸಮಸ್ಯೆ ಇದೆ. ಕಾದಂಬರಿಯ ನಾಯಕಿ ಜಾನಕಿ ಎರಡು ಮಕ್ಕಳ ತಾಯಿಯಾದ ಮೇಲೆ ವಿಧವೆಯಾಗುತ್ತಾಳೆ. ಮಕ್ಕಳು ಮತ್ತು ಅತ್ತೆ–ಮಾವಂದಿರಿರುವ ಸಂಸಾರವನ್ನು ನಿರ್ವಹಿಸಲು ಆಕೆ ನೌಕರಿ ಮಾಡಬೇಕಾಗುತ್ತದೆ. ಈ ಸಮಯದಲ್ಲಿಯೇ ಅವಳ ಸಾಂಪ್ರದಾಯಿಕ ಜೀವನದೃಷ್ಟಿ ಹಾಗೂ ದೈಹಿಕ ಬಯಕೆಗಳ ನಡುವೆ ಹೋರಾಟ ಆರಂಭವಾಗುತ್ತದೆ. ಇದೇ ಹೊತ್ತಿಗೆ ಒಂದು ಮಗು ಇದ್ದು ವಿದುರನಾಗಿರುವ ಆಫೀಸಿನ ಯಜಮಾನ ಕಾಮತನಿಗೂ ಅವಳಿಗೂ ಪ್ರೀತಿ ಬೆಳೆಯುತ್ತದೆ. ಮದುವೆಯ ನಿರ್ಣಯವೂ ಆಗುತ್ತದೆ. ಆದರೆ ತನ್ನ ಮೊದಲ ಮಕ್ಕಳನ್ನು ಜೊತೆಗೆ ತರಬಾರದೆಂದು ಕಾಮತನ ನಿರ್ಬಂಧ. ಜಾನಕಿ ಪ್ರತಿಭಟಿಸುತ್ತಾಳೆ. ಆದರೂ ಕೊನೆಗೆ ಅವಳೇ ಸೋಲಬೇಕಾಗುತ್ತದೆ. ಆದರೆ ಇದಕ್ಕಿಂತ ಹೆಚ್ಚಿನ ಕಷ್ಟ ಅತ್ತೆ ಮಾವಂದಿರಿಗೆ ಈ ವಿಷಯವನ್ನು ಹೇಗೆ ತಿಳಿಸಬೇಕೆಂಬುದರಲ್ಲಿ ಕಾಣುತ್ತದೆ. ಆ ಭಾರವನ್ನು ಕಾಮತನೇ ವಹಿಸಿಕೊಳ್ಳುತ್ತಾನೆ. ಆ ದಿನ ಬೆಳಿಗ್ಗೆ ಮದುವೆಗಾಗಿ ರಜಿಸ್ಟ್ರಾರ್‌ರ ಕಚೇರಿಗೆ ಕರೆದೊಯ್ಯಲು ಕಾಮತ್ ಬರಬೇಕು. ಅದೇ ದಿನ ಅವನು ಅತ್ತೆ ಮಾವಂದಿರಿಗೆ ವಿಷಯ ತಿಳಿಸಬೇಕು. ಆದರೆ ಕಾಮತ್ ಕಾರು ಅಪಘಾತದಲ್ಲಿ ಹಿಂದಿನ ಸಂಜೆ ಸತ್ತನೆಂದು ಪತ್ರಿಕೆಯಲ್ಲಿ ಸುದ್ದಿ ಬರುತ್ತದೆ. ಕಾದಂಬರಿಯ ಸಮಸ್ಯೆಗೆ ಲೇಖಿಕೆ ಹೀಗೆ ಆಕಸ್ಮಿಕ ಅಪಘಾತವನ್ನುಂಟು ಮಾಡಿದ್ದಾರೆ. ಮುಂಬಯಿಯಂಥ ಊರುಗಳಲ್ಲಿ ಅಪಘಾತಗಳು ಸಾಮಾನ್ಯವಾಗಿರಬಹುದು. ಆದರೆ ಕಾದಂಬರಿಯ ಈ ಸಂದರ್ಭದಲ್ಲಿ ಅದು ತೀರ ಅನಪೇಕ್ಷಣೀಯ. ಯಾಕೆಂದರೆ ಕಾದಂಬರಿಯ ನಿಜವಾದ ಸಮಸ್ಯೆ ಆರಂಭವಾಗಬೇಕಾದದ್ದು ಅವರ ಮದುವೆಯಿಂದ. ಹಿಂದೆ ಬಿಟ್ಟು ಬಂದ ಮಕ್ಕಳ ಬಗೆಗಿನ ಜಾನಕಿಯ ಭಾವನೆ, ಈ ಹೊಸ ಸನ್ನಿವೇಶಕ್ಕೆ ಹೊಂದಿಕೊಳ್ಳಬೇಕಾದ ಮಾನಸಿಕ ತಯಾರಿ, ಈ ಮದುವೆಯಿಂದಾಗಿ ಕಾಮತನ ಸಾಮಾಜಿಕ ಅಂತಸ್ತಿನ ಮೇಲೆ ಉಂಟಾಗಬಹುದಾದ ಪರಿಣಾಮ–ಇವೆಲ್ಲ ಹೆಚ್ಚು ಗಂಭೀರವಾದ ಸಮಸ್ಯೆಗಳು. ಸಮಸ್ಯೆಯ ನಿಜವಾದ ಬಿಕ್ಕಟ್ಟಿರುವುದೇ ಇಲ್ಲಿ. ಲೇಖಿಕೆಯ ಸಾಮರ್ಥ್ಯ ಒರೆಗೆ ಹಚ್ಚಬೇಕಾದುದು ಇಲ್ಲಿಯೇ. ಆದರೆ ಕಾದಂಬರಿಯ ಕಠಿಣ ಘಟ್ಟದಲ್ಲಿ ಲೇಖಿಕೆ ಮುಖ್ಯ ಪಾತ್ರಕ್ಕೆ ಅಪಘಾತವನ್ನುಂಟು ಮಾಡಿ ತಾವು ಪಾರಾಗಿ ಬಿಡುತ್ತಾರೆ. ಇಲ್ಲಿ ಸಮಸ್ಯೆ ಸ್ಪಷ್ಟವಾಗಿದ್ದರೂ ಲೇಖಿಕೆ ಅದನ್ನು ಎದುರಿಸುವುದಿಲ್ಲ. ಸಮಸ್ಯೆಯ ಪೂರ್ವ ತಯಾರಿಯಲ್ಲೇ ಕಾದಂಬರಿ ಮುಗಿದು ಬಿಡುತ್ತದೆ. ಅರ್ಥಾತ್, ಕಾದಂಬರಿ ಎಲ್ಲಿ ಆರಂಭವಾಗಬೇಕಾಗಿತ್ತೋ ಅಲ್ಲಿ ಮುಗಿದು ಬಿಡುತ್ತದೆ. ಮುಖ್ಯವಾಗಿ ಇದು ಆಳವಾದ ನೈತಿಕ ದೃಷ್ಟಿಕೋನವೊಂದರ ಅಭಾವದ ಪರಿಣಾಮವಾಗಿದೆ.

ಎಂ. ಕೆ. ಇಂದಿರಾ ಅವರ "ಸದಾನಂದ" ಕಾದಂಬರಿಯಲ್ಲಿ ಮೊದಮೊದಲು ವಸ್ತು ಸ್ಪಷ್ಟವಾಗುವುದಿಲ್ಲ. ನಂತರ "ಮದುವೆಯ ಸಂಬಂಧಗಳಲ್ಲಿ ದೈವದ ಪಾತ್ರ. ಈ ಕಾದಂಬರಿ ವಸ್ತುವೇನೋ ಎನಿಸುತ್ತದೆ. ಗೌರಿ ತನಗಾಗಿಯೇ ಇರುವ ಹೆಣ್ಣು ಎಂದು ತಿಳಿದುಕೊಂಡಿದ್ದ ಮೂರ್ತಿ ಅವಳನ್ನು ಬಿಟ್ಟು ಬೇರೊಬ್ಬಳನ್ನು ಮದುವೆಯಾಗುತ್ತಾನೆ. ಗೌರಿಗೆ ಗೊತ್ತಾದ ವರ ಅಪಘಾತದಲ್ಲಿ ಅವಳ ಕಾಲು ಮುರಿದುದರಿಂದ ಕೈಬಿಡುತ್ತಾನೆ. ರಾಜುವಿಗೆ ಗೊತ್ತಾಗಿದ್ದ ಜಾನಕಿ ಸಹ ಬೇರೊಬ್ಬನನ್ನು ಮದುವೆಯಾಗಬೇಕಾಗುತ್ತದೆ. ಮದುವೆಯಾದ ತಿಂಗಳಲ್ಲೇ ಗಂಡನನ್ನು ಕಳೆದುಕೊಂಡ ಕಮಲ ಬೇರೆ. ಇಷ್ಟಾದಮೇಲೆ ಕಾದಂಬರಿಗೆ ಬೇರೊಂದು ತಿರುವು ಬರುತ್ತದೆ. "ಅಂಗವಿಕಲರ ಹಾಗೂ ಬಾಲ ವಿಧವೆಯರ ವಿವಾಹದಸಮಸ್ಯೆ" ಪ್ರಮುಖವಾಗುತ್ತದೆ. ಇದಕ್ಕೆ ಸರಿಯಾದ ಆದರ್ಶವಾದಿ ಲೇಖಕ ವಿದುರ ಸದಾನಂದ ಕಾದಂಬರಿಯನ್ನು ಪ್ರವೇಶಿಸುತ್ತಾನೆ. ರಾಜುವಿನ ಜೊತೆ ಸಹಜವಾಗಿ ಮಾತಾಡುತ್ತ ಆಡುತ್ತ ತಾನೆಂದೂ ನೋಡದ ಕುಂಟಿ ಗೌರಿಯನ್ನು ಮದುವೆಯಾಗಲು ತಯಾರಾಗುತ್ತಾನೆ. ರಾಜು ಅವಳನ್ನು ತಾನೇ ಮದುವೆಯಾಗುವುದಾಗಿ ನಿರ್ಧರಿಸಿ, ತನ್ನ ಅಕ್ಕ ಬಾಲವಿಧವೆಯನ್ನು ಮದುವೆಯಾಗಬೇಕೆಂದು ಕೇಳಿದಾಗ ಅವಳನ್ನು ಸಹ ಸರಿಯಾಗಿ ನೋಡಿರದ ಸದಾನಂದ, ಅಷ್ಟೇ ಸಹಜವಾಗಿ ಒಪ್ಪಿಕೊಳ್ಳುತ್ತಾನೆ. ಇಂಥ ಜನ ಇದ್ದಾಗ ಯಾವ ಸಮಸ್ಯೆಗಳು ಯಾಕೆ ಉಳಿದಾವು? ಲೇಖಿಕೆಯೇನೋ ಸದಾನಂದನ ಪಾತ್ರದಲ್ಲಿ ಅಹಂಭಾವವಿಲ್ಲದ ಆದರ್ಶವಾದವನ್ನು ಚಿತ್ರಿಸಲು ಸಾಕಷ್ಟು ಪ್ರಯತ್ನಪಟ್ಟಿದ್ದಾರೆ. ಹಾಗೆಯೇ ರಾಜು-ಗೌರಿಯರ ನಡುವಿನ ಸಂಬಂಧದಲ್ಲೂ ಇಂಥಭೂಮಿಕೆಯನ್ನು ಸಿದ್ಧಪಡಿಸಲು ಮರೆತಿಲ್ಲ. ಇದನ್ನೆಲ್ಲ ಒಪ್ಪಿಕೊಂಡರೂ, ಈ ಬಗೆಯ ಪಾತ್ರಗಳಿಂದಾಗಿ ಸಮಸ್ಯೆಯ ಪರಿಹಾರ ಬಹಳ ಸುಲಭವಾಗಿಬಿಡುತ್ತದೆ. ಅಂತೆಯೇ ಇದೊಂದು ವಿಶಿಷ್ಟ ಪ್ರಸಂಗವಾಗಿ ಬಿಡುತ್ತದೆಯೇ ಹೊರತು, ಸಾರ್ವತ್ರಿಕತೆಯನ್ನು ಪಡೆಯುವುದಿಲ್ಲ. ನಮ್ಮ ಲೇಖಿಕಿಯರು ಸಮಸ್ಯೆಯ ಬಿಕ್ಕಟ್ಟನ್ನು ಸಲೀಸಾಗಿ ಬದಿಗೆ ಸರಿಸಿ, ಆದರ್ಶವಾದ, ಭಾವನಾವಕತೆಗಳಿಗೆ ಮೊರೆಹೋಗುವುದಕ್ಕೆ ಇದೊಂದು ನಿದರ್ಶನ. ಎಂದರೆ ಆಯ್ದುಕೊಂಡ ವಸ್ತುವನ್ನು ಅಥವಾ ಸಮಸ್ಯೆಯನ್ನು ಅದರ ಎಲ್ಲಾ ಬಿಕ್ಕಟ್ಟುಗಳೊಂದಿಗೆ ನೇರವಾಗಿ ಎದುರಿಸುವಲ್ಲಿ ಅವರು ಅಸಮರ್ಥರಾಗಿದ್ದಾರೆ.

ಕೇಂದ್ರ ವಸ್ತುವಿನ ಮೇಲೆ ಕಣ್ಣಿಟ್ಟು, ಸುವಿಧಾನ ಪ್ರಜ್ಞೆಯಿಂದ ಕಾದಂಬರಿಗಳನ್ನು ರಚಿಸಿದ ಲೇಖಿಕೆರಲ್ಲಿ ತ್ರಿವೇಣಿಯವರು ಖಂಡಿತವಾಗಿಯೂ ಮಹತ್ವದ ಸ್ಥಾನ ಪಡೆಯುತ್ತಾರೆ. ಅವರ ಕಾದಂಬರಿಗಳ ರಚನೆ

ಯಲ್ಲಿ ಕಥೆಗಿಂತ ವಸ್ತುವೇ ಆರಂಭ ಬಿಂದುವಾಗಿದೆ ಎನ್ನಬಹುದು. "ಬೆಕ್ಕಿನ ಕಣ್ಣು" "ಶರಪಂಜರ"ಗಳಂಥ ಕಾದಂಬರಿಗಳಲ್ಲಿ ಮನೋ ವೈಜ್ಞಾನಿಕ ಸಮಸ್ಯೆಗಳನ್ನು ಕುರಿತು ಅವರು ಬರೆದಿದ್ದಾರೆ. ವಸ್ತುವಿನ ಆಯ್ಕೆಯ ದೃಷ್ಟಿಯಿಂದ ಇದು ಗಮನಾರ್ಹ. ಏಕೆಂದರೆ ಹೆಚ್ಚಿನ ಲೇಖಕಿಯರೆಲ್ಲ ಕೌಟುಂಬಿಕ ವಿಷಯಗಳನ್ನೇ ಕುರಿತು ಬರೆಯುತ್ತಿದ್ದಾಗ ಇವರು ವಸ್ತುವಿನ ಕ್ಷೇತ್ರವನ್ನು ಹೆಚ್ಚಿಸಿಕೊಂಡರು. "ಬೆಕ್ಕಿನ ಕಣ್ಣು" ಅಷ್ಟೊಂದು ಯಶಸ್ವಿಯಾಗಿಲ್ಲ. ಇದು ಹೆಚ್ಚಾಗಿ ಒಂದು ಕೇಸ್ ಹಿಸ್ಟರಿಯ ರೀತಿಯಲ್ಲಿ ನಿರೂಪಿತವಾಗಿದೆ. ಜೊತೆಗೆ ರಾಜಶೇಖರನ ಪಾತ್ರದ ಪ್ರವೇಶದಿಂದಾಗಿ, ಹಾಗೂ ಮಲತಾಯಿ ಪದ್ಮಳ ಅವಸರದ ಪರಿವರ್ತನೆಯಿಂದಾಗಿ ಸಮಸ್ಯೆಯ ಪರಿಹಾರ ಸುಲಭವಾಗಿದೆ. ಆದೇ "ಶರಪಂಜರ"ದ ಸಮಸ್ಯೆ ಹೆಚ್ಚು ಮಾನವೀಯ ಸಿಲುಕು ತೊಡಕುಗಳಿಂದ ಸಹಜವಾಗಿ ಬೆಳವಣಿಗೆ ಪಡೆಯುತ್ತದೆ. ಲೇಖಕಿ ಸಮಸ್ಯೆಯ ಬಿಕ್ಕಟ್ಟಿನೊಂದಿಗೆ ಸುಲಭವಾಗಿ ಒಪ್ಪಂದ ಮಾಡಿಕೊಳ್ಳದಿರುವುದರಿಂದ ಹೆಚ್ಚು ಸಂಕೀರ್ಣವಾಗಿದೆ.

ಆದರೆ "ಸೋತು ಗೆದ್ದವಳು", "ಬೆಳ್ಳಿ ಮೋಡ", "ಹೃದಯ ಗೀತ" ಕಾದಂಬರಿಗಳ ವಸ್ತು ಹೆಚ್ಚು ಭಾವನಾತ್ಮಕವಾಗಿವೆ. ಪರಿಹಾರಗಳೂ ಅಷ್ಟೇ ಭಾವನಾತ್ಮಕವಾಗಿವೆ. ಜೊತೆಗೆ ಈ ಕಾದಂಬರಿಗಳ ವಸ್ತು ತೆಳುವಾಗಿವೆ. ಸಮಸ್ಯೆಯ ಬೇರೆ ಬೇರೆ ಮಗ್ಗಲುಗಳನ್ನು ಕಥೆಯ ಚೌಕಟ್ಟಿನೊಳಗೆ ಸೇರಿಸಿಕೊಳ್ಳುವ, ವಸ್ತುವಿನ ಹೆಚ್ಚಿನ ಸಾಧ್ಯತೆಗಳನ್ನು ಶೋಧಿಸುವ ಪ್ರಯತ್ನ ಇಲ್ಲಿ ಕಾಣುವುದಿಲ್ಲ. ಒಂದು ಸಣ್ಣ ಕತೆಗಾಗಬಹುದಾದ ವಸ್ತುವನ್ನು ಹಿಗ್ಗಿಸಿ ಕಾದಂಬರಿಯಾಗಿ ಬರೆದಂತಿದೆ. ಇದೇ ಧಾಟಿಯ "ಅಪಸ್ವರ" ಹೆಚ್ಚು ಯಶಸ್ವಿಯಾಗಿರುವ ಕಾದಂಬರಿ ಎನ್ನಬಹುದು. ತನಗೆ ಸರಿ ಹೊಂದದ ಬದುಕಿನ ಪರಿಸರದೊಂದಿಗೆ ಹೊಂದಿಕೊಳ್ಳಲಾರದೆ ತೊಳಲಾಡಿ ಸೋತ ಮೀರಾ ಕೊನೆಗೊಮ್ಮೆ ಈ ಬಂಧನದಿಂದ ಪಾರಾಗಿ ಹೋಗಬೇಕೆನ್ನುವ ನಿರ್ಧಾರದಲ್ಲಿ ಅಪರಿಹಾರ್ಯತೆ ಇದೆ. ಆದರೆ ಕೊನೆಗೆ ಮತ್ತೆ ಅವಳ ಗಂಡ ಶಾಮುವಿನ ಔದಾರ್ಯ ಸಮಸ್ಯೆಯನ್ನು ಮೃದುಗೊಳಿಸಿಬಿಡುತ್ತದೆ. "ಕಂಕಣ"ದಲ್ಲಿ ವಸ್ತುವಿನ ಹಲವು ಮುಖಗಳನ್ನು ಕಥೆಯ ಚೌಕಟ್ಟಿನಲ್ಲಿ ತಂದು, ಅವುಗಳಲ್ಲಿ ಪರಸ್ಪರ ಹೋಲಿಕೆಯನ್ನು ಏರ್ಪಡಿಸಿ, ಸಂಕೀರ್ಣತೆಯನ್ನು ಸಾಧಿಸುವ ಪ್ರಯತ್ನವೇನೋ ಇದೆ. ಆದರೆ ಕೊನೆಗೆ ಮತ್ತೆ ನಾಯಕಿಯ ಭಾವನಾತ್ಮಕ ನಿರ್ಣಯ ಸಮಸ್ಯೆಯನ್ನು ಸಡಿಲಗೊಳಿಸಿಬಿಡುತ್ತದೆ. ಈ ಭಾವನಾತ್ಮಕತೆ ಅನೇಕ ಜನ ಲೇಖಕಿಯರ ಕೃತಿಗಳನ್ನು ಕೆಡಿಸಿದೆ.

ಎಚ್. ಎಸ್. ಪಾರ್ವತಿಯವರ "ಜೀವನ ಜಾಲ" ನಮ್ಮ ಲೇಖಕಿಯರ ಬಗ್ಗೆ ಹೊಸ ಭರವಸೆಯನ್ನು ಹುಟ್ಟಿಸುವ ಕೃತಿ. ಇದು ಯಶಸ್ವಿಯಾದ ಮಹತ್ವದ ಕೃತಿಯಲ್ಲವಾದರೂ ಆ ದಿಸೆಯಲ್ಲೊಂದು ಗಮನಾರ್ಹ ಪ್ರಯತ್ನ. ಈ ಕಾದಂಬರಿಯ ಉದ್ದಕ್ಕೂ ತುಂಬಿರುವ ವ್ಯಾಕುಲದ ಧ್ವನಿ ಭಾವನಾವಶತೆಗೆ ಇಳಿಯದೆ ಪ್ರಾಮಾಣಿಕ ಕಳಕಳಿಯನ್ನು ತೋರಿಸುವುದರಿಂದ ಹೆಚ್ಚು ಪ್ರಬುದ್ಧವಾಗಿದೆ. ನಮ್ಮ ಲೇಖಕಿಯರಲ್ಲಿ ಇದು ಅಪರೂಪದ ಗುಣ. ಇದೂ ಸಹ ಒಂದು ಮಧ್ಯಮ ವರ್ಗದ ಹೆಣ್ಣಿನ ಕಥೆ. ಅನಿವಾರ್ಯವಾದ ಕಾರಣಗಳಿಂದಾಗಿ ಅವಿವಾಹಿತಳಾಗಿ ಉಳಿಯಬೇಕಾಗಿ ಬಂದ ವಿದ್ಯಾವಂತ ಹೆಣ್ಣಿನ ಮನಸ್ಸಿನ ತುಮುಲವನ್ನು ಚಿತ್ರಿಸುವ ಇದರ ವಸ್ತು ಹೆಣ್ಣುಮಕ್ಕಳ ಲೇಖನಿಗೆ ಅಪರಿಚಿತವೇನೂ ಅಲ್ಲ. ಆದರೆ ವಸ್ತುವನ್ನು ಲೇಖಕಿ ಒಪ್ಪವಾಗಿ ನಿರ್ವಹಿಸಿದ್ದಾರೆ, ನೇರವಾಗಿ ಎದುರಿಸಿ ಬರೆದಿದ್ದಾರೆ. ನೆನಪಿನ ಮೂಲಕ ಫ್ಲ್ಯಾಷ್‌ಬ್ಯಾಕಿನಲ್ಲಿ ಕಥೆ ಹೇಳಿರುವ ರೀತಿ ಅತ್ಯಂತ ಸರಳವಾಗಿದೆ. ವಸ್ತುವಿಗೆ ಅನುಕೂಲವಾಗುವಂತೆ ಕೆಲವು ಪಾತ್ರಗಳ ನಡತೆಯನ್ನು ಬದಲಿಸಿರುವ ರೀತಿ ಅಷ್ಟೊಂದು ಸಹಜವೆನಿಸುವುದಿಲ್ಲ. ಉದಾಹರಣೆಗೆ ಸತೀಶನ ನಡತೆ ಒಮ್ಮೆಲೆ ಬದಲಾದುದಕ್ಕೆ ಅವನ ಪಾತ್ರದಲ್ಲಿ ಬಲವಾದ ಆಧಾರಗಳೇನೂ ಇಲ್ಲ. ನಂತರ ಕಾದಂಬರಿಯ ನಾಯಕಿ ನಳಿನಿಯ ಮದುವೆಯ ಪ್ರಯತ್ನಗಳಲ್ಲಿ ಕಾಣಿಸುವ ಅನಾನುಕೂಲತೆಯ ಅಂಶಗಳು ತೀರಾ ಅವಸರದಲ್ಲಿ ಮುಗಿದು ಹೋಗಿವೆ. ಆದರೆ ಲೇಖಕಿ ಈ ಸಮಸ್ಯೆಯನ್ನು ಹೆಚ್ಚು ವಿಶಾಲವಾದ ಪರಿಪ್ರೇಕ್ಷ್ಯದಲ್ಲಿಟ್ಟು ನೋಡಲು ಯತ್ನಿಸಿದ್ದಾರೆ ಎಂಬುದಕ್ಕೆ ನಳಿನಿಯ ಸ್ಥಿತಿಯೊಡನೆ, ಅವಳ ತಾಯಿಯ ಕಥೆ, ಗೌರಿ–ವಿಮಿ–ಸುನಂದರ ದಾಂಪತ್ಯಗಳ ವೈವಿಧ್ಯಗಳನ್ನು ಹೋಲಿಕೆಗಾಗಿ ಬಳಸಿಕೊಂಡಿರುವ ರೀತಿಗಳಲ್ಲಿ ನಿದರ್ಶನಗಳಿವೆ. ನಿಧಾನವಾಗಿ ಬೆಳೆಯುತ್ತ, ಹಬ್ಬುತ್ತ ಹೋಗುವ ಬದುಕಿನ ಬಲೆಯಲ್ಲಿ ತಾನು ಏಕಾಕಿಯಾಗಿ ಹೋರಾಟದವಿಲ್ಲದೆ ಸಿಲುಕಿಕೊಳ್ಳುವ ಸ್ಥಿತಿಯನ್ನು ನಾಯಿಕಿ ಅರ್ಥ ಮಾಡಿಕೊಂಡು, ಅದನ್ನು ಒಪ್ಪಿಕೊಳ್ಳುವ ರೀತಿಯಲ್ಲಿ ಪ್ರಬುದ್ಧತೆಯ ಚಿಹ್ನೆಗಳಿವೆ. ಕಾದಂಬರಿಯ ಬರವಣಿಗೆಯಲ್ಲಿ ಅರ್ಥವಂತಿಕೆಯನ್ನೂ ವಿನ್ಯಾಸವನ್ನೂ ಸಾಧಿಸಲು ಕನ್ನಡ ಲೇಖಕಿಯರು ಕಲಿಯ ತೊಡಗಿರುವುದು ಸಂತೋಷದ ಸಂಗತಿ.

ಈ ಪ್ರಬಂಧ ಕನ್ನಡ ಕಾದಂಬರಿಕಾರ್ತಿಯರ ಸಮಗ್ರ ಸಮೀಕ್ಷೆಯಲ್ಲ. ಆದ್ದರಿಂದ ಎಲ್ಲರನ್ನೂ ಹೆಸರಿಸಿ ಚರ್ಚಿಸುವ ಅಗತ್ಯವಿಲ್ಲ. ಹೆಚ್ಚಿನ ಕೃತಿಗಳು ವಿವರ ವಿಶ್ಲೇಷಣೆಯನ್ನು ತಡೆದುಕೊಳ್ಳುವಂಥವೂ ಅಲ್ಲ. ಆದರೆ ಹೆಣ್ಣುಮಕ್ಕಳ ಲೇಖನಿಗೆ ಅಪರಿಚಿತವಾದ ವಸ್ತುವನ್ನು ಒಳಗೊಂಡಿದೆ ಎಂಬ ಕಾರಣಕ್ಕಾಗಿ ಸಿ. ಎನ್. ಜಯಲಕ್ಷ್ಮೀದೇವಿಯವರ "ಗ್ರಾಮಲೀಲೆ" ಯನ್ನು ಹೆಸರಿಸಬಹುದಾಗಿದೆ. "ಗ್ರಾಮಲೀಲೆ" ಹಳ್ಳಿಯ ಲೀಲೆಗಳನ್ನು, ರೋಮ್ಯಾಂಟಿಕ್ ಮುಗ್ಧತೆಗಳನ್ನು ಕುರಿತು ಹಾಡುವ ದನಿಯಲ್ಲಿ ಆರಂಭವಾದರೂ, ಮುಂದೆ ಹಳ್ಳಿಯ, ಸಮಾಜದ ರೀತಿ–ನೀತಿಗಳನ್ನು ಕುರಿತು ವಿವರಗಳನ್ನು ಕೊಡುವುದರ ಕಡೆಗೆ ಹೆಚ್ಚು ಲಕ್ಷ್ಯ ಕೊಟ್ಟಿದೆ. "ಹಳ್ಳಿಗರ ಆಚಾರ, ವ್ಯವಹಾರ, ನಡೆ–ನುಡಿಗಳ ನೈಜ ಚಿತ್ರಣ" ಈ ಕಾದಂಬರಿಯ ಉದ್ದೇಶ ಎಂದು ಲೇಖಕಿಯೇ ಹೇಳಿದ್ದಾರೆ. ಆದ್ದರಿಂದ ಇಲ್ಲಿ ಕಥಾನಕ ಗೌಣವಾಗಿದೆ. ಎಂದರೂ ಕಥೆ ಸಾಕಷ್ಟಿದೆ. ಆದರೆ ಕಥೆಯಲ್ಲಿ ಬೆಳಗಾದರೆ ಹಳ್ಳಿಯ ಬೆಳಗಿನ ವೈಶಿಷ್ಟ್ಯಗಳ ಚಿತ್ರಣ, ಮದುವೆಯಾದರೆ ಅದರ ವಿವರಗಳು, ಹೊಲದಲ್ಲಿ ಬಿತ್ತಿದ್ದೇ ನೆವವಾಗಿ ಬಿತ್ತುವ ಬಗ್ಗೆ ಮಾಹಿತಿ ಹೀಗೆ ಗ್ರಾಮ ಜೀವನದ ವಿಷಯ

 ನಮ್ಮೆಲ್ಲ ಗ್ರಾಹಕರಿಗೆ ದಿವ್ಯ ದೀಪಾವಳಿಯ ಹಾರ್ದಿಕ ಶುಭಾಶಯಗಳು 

# ಅಪೂರ್ವ ಭಾಗ್ಯ ಚಕ್ರಗಳು




ತಮ್ಮ ಸಾರಿಗೆ ಸಮಸ್ಯೆಗಳಿಗೆ ತೀವ್ರ ಸಮಾಧಾನ, ಸುಲಭಕಾರ್ಯ, ಮೋಜಿನ ಚಲನೆ, ನಂಬುಗೆಯ ಮಿತ್ರ; ತಮ್ಮ ಅಮೂಲ್ಯ ಸಮಯ ಹಾಗೂ ಹಣದ ಉಳಿತಾಯಕ್ಕಾಗಿ ಮನಮೋಹಕ ನಮ್ಮ ಕಾಣಿಕೆಗಳು.

7 ಪೈಸೆಗೆ ೧ ಕಿ. ಮಿ. ಚಲಿಸುವ

ಹಾಗೂ ರಿಸರ್ವ ಸಿಸ್ಟೀಮನೊಂದಿಗೆ

# 'ಡಾರ್ಟ್ ಮೊಪೆಡ್ಸ'



ಫೋನ್ ನಂ. 5105

ವಿವರಗಳಿಗಾಗಿ ಸಂದರ್ಶಿಸಿರಿ

# ಕುಷ್ಟಗಿ ಇನ್ ಕಾರ್ಪೊರೇಟೆಡ್

ಸ್ಟೇಶನ್ ರೋಡ (ಸುದರ್ಶನ ಟಾಕೀಜ ಹಿಂದುಗಡೆ)

ಹುಬ್ಬಳ್ಳಿ-೫೮೦೦೨೦

(KULKARNI PUBLICITY)




ಆರೋಗ್ಯ ಶಾಸ್ತ್ರದಲ್ಲಿ ವಿಶ್ರಾಂತಿ ಪಾಠ ಮಾಡ್ತಿದ್ದಾರೆ...ನಮ್ಮ ಮೇಷ್ಟ್ರು

ದಲ್ಲಿ ತಮಗೆ ಗೊತ್ತಿರುವುದನ್ನೆಲ್ಲಾ ಹೇಳಬೇಕೆಂಬ ಆಶೆ ಹೆಚ್ಚಾಗಿ ಬಿಟ್ಟಿದೆ. ಇಂಥ ಕಾದಂಬರಿಗಳಿಗೆ ಸಾಮಾನ್ಯವಾಗಿರುವಂತೆ ಹಳ್ಳಿಗಾಡಿನ ಆಡು ನುಡಿಯ ಉಪಯೋಗವೂ ಇದೆ. ಇದನ್ನೆಲ್ಲಾ ತಡೆ ಹಾಯ್ದು ನೋಡಿದಾಗ ವಿಘಟನೆಗೀಡಾಗುತ್ತಿರುವ ಹಳ್ಳಿಯ ಜೀವನದ ಚಿತ್ರಣ ಇಲ್ಲಿ ಸಿಗುತ್ತದೆ. ಹಳ್ಳಿಗಳ ಬದುಕನ್ನು ವ್ಯಾಪಕವಾಗಿ ಹಾಳು ಮಾಡುತ್ತಿರುವ ವೈಷಮ್ಯ, ದಾಯಾದಿತನ, ಚೆನ್ನಾಗಿರುವವರನ್ನು ಕೆಡಿಸಬೇಕೆನ್ನುವ ಹೊಟ್ಟೆಕಿಚ್ಚು, ಹಿಂಸೆ, ಹೊಡೆದಾಟ, ಬೆಳಗಾದರೆ ಹತ್ತಿರದ ಹೊಲಗಳಲ್ಲಿ ನಡೆಯುವ ಜಗಳ, ಕೋರ್ಟು ಕಚೇರಿಗಳಿಗೆ ಅಲೆದಾಡಿ ಹಾಳಾಗುವ ಅಜ್ಞಾನ, ಬೆಳೆ ಹಾಳು ಮಾಡುವ ದುಷ್ಟತನ. ಇಂಥ ವಿಷಯಗಳನ್ನು ಕಾಳಯ್ಯ–ವೆಂಕಟಯ್ಯರ ಕಥೆಯ ಮೂಲಕ ಲೇಖಕಿ ಚೆನ್ನಾಗಿಯೇ ಚಿತ್ರಿಸಿದ್ದಾರೆ. ಆದರೆ ಸನ್ನಿವೇಶಗಳ ನಿರ್ಮಾಣದಲ್ಲಿ ಶಕ್ತಿ ಸಾಲದು. ಹೆಚ್ಚಿನ ವಿಷಯಗಳನ್ನು ಸಂಗ್ರಹಿಸಿ ಮಾಹಿತಿಯಾಗಿ ನಿರೂಪಿಸುತ್ತಾರೆ. ವೆಂಕಟಯ್ಯ ಕಾಳಯ್ಯನ ಮೇಲೆ ಹಗೆ ಸಾಧಿಸಲು, ಅಸಮಾಧಾನಗೊಳ್ಳಲು ಕಾರಣಗಳು ಸ್ಪಷ್ಟವಾಗಿಲ್ಲ. ವೆಂಕಟಯ್ಯನ ಮಗ ಕೃಷ್ಣ ಮತ್ತು ಅವನ ಹೆಂಡತಿಯ ಮಾತುಗಳು ತೀರಾ ನಾಟಕೀಯವಾಗಿವೆ. ಲೇಖಕಿ ವಸ್ತುವಿನ ವಿನ್ಯಾಸ ಹಾಗೂ ಇಂಗಿತಾರ್ಥಗಳ ಬಗ್ಗೆ ಹೆಚ್ಚು ನಿಷ್ಠುರವಾದ ದೃಷ್ಟಿ ತಳೆಯಬೇಕಾಗಿದೆ. ಆದರೂ ಹೆಣ್ಣುಮಕ್ಕಳು ಸಾಮಾನ್ಯವಾಗಿ ಆಯ್ದುಕೊಳ್ಳುವ ಕೌಟುಂಬಿಕ ಸಮಸ್ಯೆ, ಹೆಣ್ಣಿನ ಕಷ್ಟಗಳನ್ನು ಬಿಟ್ಟು ಬೇರೆ ವಸ್ತುಗಳ ಕಡೆಗೆ ಲಕ್ಷ್ಯ ಕೊಟ್ಟಿರುವುದು ಆಶಾದಾಯಕವಾಗಿದೆ. ಆದರೆ ಇಲ್ಲಿ ಜಯಲಕ್ಷ್ಮೀದೇವಿಯವರು ಆರಿಸಿಕೊಂಡಿರುವ ವಸ್ತು ಲೇಖಕಿಯರಲ್ಲಿ ಹೊಸದಾದರೂ ಕನ್ನಡ ಕಾದಂಬರಿಯಲ್ಲಿ ಸಾಕಷ್ಟು ಚರ್ವಿತ ಚರ್ವಣವಾದುದೆಂಬುದನ್ನು ಮರೆಯುವಂತಿಲ್ಲ.

ಈ ಎಲ್ಲ ಚರ್ಚೆಯ ಹಿನ್ನೆಲೆಯಲ್ಲಿ ನೋಡಿದಾಗ ನಮ್ಮ ಲೇಖಕಿಯರ ದೌರ್ಬಲ್ಯಗಳು ಸ್ಪಷ್ಟವಾಗಿ ಕಾಣುತ್ತವೆ. ಹೆಚ್ಚಿನ ಕೃತಿಗಳಲ್ಲಿ ವಸ್ತು ಎಂಬುದೇ ಇಲ್ಲದುದರಿಂದ ಕಥೆ ಕಾಡು–ಕಲ್ಪನೆಗಳಿಂದ ಎತ್ತೆತ್ತಲೋ ಬೆಳೆದು ಎಲ್ಲಿಯೋ ಮುಗಿಯುತ್ತದೆ. ವಸ್ತು ಇದ್ದಾಗಲೂ ಅದು ತೀರ ತೆಳುವಾಗಿರುತ್ತದೆ. ಪರಿಚಿತವಾದ, ಎಷ್ಟೋ ಸಲ ಅನವಶ್ಯಕವಾದ ವಿವರಗಳನ್ನು ಪೇರಿಸುತ್ತ ಹೋಗುತ್ತಾರೆ. ಸಮಸ್ಯೆಯ ಬಿಕ್ಕಟ್ಟು ಒಂದು ಅಪರಿಹಾರ್ಯವಾದ ನೈತಿಕ ಸಮಸ್ಯೆಯಾಗಿ ನಿಲ್ಲುವ ಸಂದರ್ಭಗಳು ಬಹಳ ಕಡಿಮೆ. ಹಾಗೆ ನಿಂತಾಗ ಭಾವನಾತ್ಮಕ ತಿರುವಿನಲ್ಲಿ ಸಮಸ್ಯೆಗೆ ಸುಲಭ ಪರಿಹಾರವನ್ನು ಕಂಡುಕೊಳ್ಳುವ ಪ್ರವೃತ್ತಿ ಹೆಚ್ಚಾಗಿದೆ. ಇವರಲ್ಲಿ ಸಂಕೋಚಗಳು ಹೆಚ್ಚು. ಸಮಸ್ಯೆಗಳನ್ನು ಬಿಚ್ಚು ಮನಸ್ಸಿನಿಂದ ಪ್ರಾಮಾಣಿಕವಾಗಿ ನಿರ್ವಹಿಸುವ ಧೈರ್ಯ ಕಡಿಮೆ. ವಸ್ತುವಿನ ಇತರ ಸಾಧ್ಯತೆಗಳನ್ನು ಶೋಧಿಸಿ ಮುಖ್ಯ ವಸ್ತುವಿಗೆ ಪೂರಕವಾಗಿ ದುಡಿಸಿಕೊಳ್ಳುವ, ಆ ಮೂಲಕ ವಸ್ತುವನ್ನು ಸಂಕೀರ್ಣ ಹಾಗೂ ಗಟ್ಟಿಗೊಳಿಸುವ ಪ್ರಯತ್ನಗಳು ಕಾಣುವುದಿಲ್ಲ.

ಇದು ಲೇಖಕಿಯರಿಗೇ ವಿಶಿಷ್ಟವಾದ ಸಂಗತಿಯೇನೂ ಅಲ್ಲ. ಇದೇ ರೀತಿ ಬರೆಯುವ ಹಲವಾರು ಜನ ಲೇಖಕರೂ ಇದ್ದಾರೆ. ಟಿ. ಕೆ. ರಾಮರಾವ್, ಎಸ್. ವಿ. ಶ್ರೀನಿವಾಸ ರಾವ್, ಶ್ರೀನಿವಾಸ ಉಡುಪ, ಸೂರ್ಯನಾರಾಯಣ ಚಡಗ ಇತ್ಯಾದಿ. ಕೃಷ್ಣಮೂರ್ತಿ ಪುರಾಣಿಕರ ಹಲವು ಕಾದಂಬರಿಗಳೂ ಅಷ್ಟೇ. ಇಂಥ ಲೇಖಕರನ್ನು ಸಹ ವಿಮರ್ಶಕರು ಗಂಭೀರವಾಗಿ ಪರಿಗಣಿಸಿಲ್ಲ. ಇಂಥ ಸ್ಥಿತಿಯಲ್ಲಿ ಪುರುಷ ವಿಮರ್ಶಕರು ತಮ್ಮ ಬಗ್ಗೆ ಪಕ್ಷಪಾತ ಮಾಡುತ್ತಿರುವರೆಂದು ಲೇಖಕಿಯರು ಆಪಾದಿಸುತ್ತಿರುವುದರಲ್ಲಿ ಏನೇನೂ ಹುರುಳಿಲ್ಲ. ಹಾಗೆ ನೋಡಿದರೆ ಇವರು ಮಹಿಳೆಯರು ಎಂಬ ಕಾರಣಕ್ಕಾಗಿ ಇವರ ಕೃತಿಗಳಿಗೆ ಸಿಗಬೇಕಾದುದಕ್ಕಿಂತ ಹೆಚ್ಚಿನ ಗಮನ ಸಿಕ್ಕಿದೆ. ವಾಸ್ತವವಾಗಿ ನಮ್ಮ ವಿಮರ್ಶೆ, ಸಮೀಕ್ಷೆಗಳಲ್ಲೆಲ್ಲ ಮಹಿಳೆಯರ ಸಲುವಾಗಿ ಪ್ರತ್ಯೇಕ ವಿಭಾಗಗಳನ್ನು ಕಲ್ಪಿಸಿಕೊಳ್ಳುವುದೇ ಒಂದು ವಿಶೇಷ ರಿಯಾಯತಿ. ಯೋಗ್ಯತೆಯುಳ್ಳ ಲೇಖಕಿಯರ ಕೃತಿಗಳೂ ಒಟ್ಟಿನಲ್ಲಿ ಉತ್ತಮ ಸಾಹಿತ್ಯ ಕೃತಿಗಳ ಸಾಲಿನಲ್ಲಿಯೇ ಸೇರಬೇಕು. ಇಂಗ್ಲೀಷಿನಲ್ಲಿ ಉತ್ತಮ ಕಾದಂಬರಿಕಾರರ ಸಾಲಿನಲ್ಲಿ ಜೇನ್ ಆಸ್ಟಿನ್, ಜಾರ್ಜ್ ಎಲಿಯಟ್, ವ್ಹರ್ಜೀನಿಯ ವೂಲ್ಫ್‌ರ ಹೆಸರು ಯಾವ ಬೇಧ ಭಾವವೂ ಇಲ್ಲದೇ ಬರುತ್ತದೆ. ಹಿಂದೀ ಕವಿಗಳಲ್ಲಿ ಮಹಾದೇವಿ ವರ್ಮಾರ ಹೆಸರೂ ಸಹಜವಾಗಿ ಬರುತ್ತದೆ. ಆದರೆ ಕನ್ನಡದಲ್ಲಿ ಹೀಗಾಗಿಲ್ಲ. ಪ್ರತ್ಯೇಕವಾಗಿ ಒಂದು ಭಾಗವನ್ನು ಮಾಡಿಕೊಳ್ಳದಿದ್ದರೆ ಯಾವ ಲೇಖಕಿಯ ಹೆಸರೂ ನಮ್ಮ ಉತ್ತಮ ಲೇಖಕರ ಹೆಸರಿನೊಡನೆ ಬರಲಾರದು.

ಒಂದು ವರ್ಗದ ಓದುಗರಲ್ಲಿ, ಅದರಲ್ಲೂ ವಿಶೇಷವಾಗಿ ಮಧ್ಯಮ ವರ್ಗದ ಸುಶಿಕ್ಷಿತ ಹೆಣ್ಣುಮಕ್ಕಳಲ್ಲಿ ಮಹಿಳೆಯರ ಕಾದಂಬರಿಗಳು ಜನಪ್ರಿಯವಾಗಿರುವುದು ನಿಜ. ಅಂತೆಯೇ ಅವರಿಗೆ ಸುಲಭವಾಗಿ ಪ್ರಕಾಶಕರು ದೊರೆಯುತ್ತಾರೆ. ಆದರೆ ಜನಪ್ರಿಯತೆಯೊಂದೇ ಯಶಸ್ಸಿನ ಮಾನದಂಡವಾಗಲಾರದು. ಹಾಗಿದ್ದ ಪಕ್ಷದಲ್ಲಿ ಎನ್. ನರಸಿಂಹಯ್ಯನವರು ನಮ್ಮ ಅತ್ಯುತ್ತಮ ಲೇಖಕರಾಗಿರಬೇಕಿತ್ತು.

ಅನೇಕ ಸಲ ತಮ್ಮ ಸೋಲಿಗೆ ನಮ್ಮ ಲೇಖಕಿಯರು ನಮ್ಮ ಸಾಮಾಜಿಕ, ಕೌಟುಂಬಿಕ, ಪರಿಸರವನ್ನು ದೂಷಿಸುತ್ತಾರೆ. ಗಂಡಿನ ಗುಲಾಮಳಾಗಿ ಮನೆಯ ನಾಲ್ಕು ಗೋಡೆಗಳ ನಡುವೆ ಬಾಳಬೇಕಾದ ಹೆಣ್ಣಿಗೆ ವಿಶಾಲ ಜಗತ್ತಿನ ಅನುಭವ ಸಿಕ್ಕಲಿಲ್ಲ. ವಿಚಾರ ಮಾಡಲು ಅವಕಾಶ ದೊರೆಯಲಿಲ್ಲ ಎನ್ನುತ್ತಾರೆ. ಇದು ಇಂದಿನ ಮಧ್ಯಮ ವರ್ಗದ ಲೇಖಕರ ಸ್ಥಿತಿಯೂ ಹೌದು. ಕುಟುಂಬವನ್ನು ಸಲಹುವುದಕ್ಕಾಗಿ ಲೇಖಕರಲ್ಲಿ ನೌಕರಿ ಮಾಡಬೇಕಾಗಿದೆ. ನೌಕರಿ ಎಂದರೆ ಗುಲಾಮಗಿರಿಯೇ. ಅಧಿಕಾರಶಾಹಿಯ ಚಕ್ರದಲ್ಲಿ ನೌಕರದಾರ ಸಹಿಸಬೇಕಾದ ಅಪಮಾನಗಳೆಷ್ಟು, ದಬ್ಬಾಳಿಕೆ ಎಷ್ಟು?

ಇಂಗ್ಲೀಷ್ ಸಮಾಜದಲ್ಲೂ ಈಗ ಭಾರತೀಯ ಸಮಾಜದಲ್ಲಿ ಹೆಣ್ಣುಮಕ್ಕಳಿಗೆ ಇರುವಂಥ ಪರಿಸ್ಥಿತಿಯೇ ಇದ್ದಾಗಲೂ ಶೋಷಣೆಯ ನಡುವೆಯೇ ಜೇನ್ ಆಸ್ಟಿನ್, ಎಮಿಲಿ ಬ್ರಾಂಟೆ, ಜಾರ್ಜ್ ಎಲಿಯಟ್‌ರಂತಹ ಮಹತ್ವದ ಲೇಖಕರು ಹುಟ್ಟಲು ಸಾಧ್ಯವಾಯಿತು. ಜೇನ್ ಆಸ್ಟಿನ್ ಹದಿನೆಂಟನೆಯ ಶತ

ಬೇಕಿರಲಿಕ್ಕಿಲ್ಲ

ಎಲ್ಲ ಕಾಲದಲ್ಲೂ ನನ್ನ ಕಣ್ತುಂಬ
ತುಂಬಿಕೊಂಡು ಇನ್ನೇನನ್ನೂ
ನೋಡದಂತೆ ಮಾಡಿರುವ ಸೊಗಸುಗಾತಿ
ನಿನ್ನ ಸ್ಥಿತಿಯೂ ನನ್ನದಕ್ಕಿಂತ ಬೇರಿರಲಿಕ್ಕಿಲ್ಲ!

* ಪಂಚಾಕ್ಷರಿ ಹಿರೇಮಠ

ಮಾನದ ಸಾಂಪ್ರದಾಯಿಕ ಮಧ್ಯಮ ವರ್ಗದ ಸೃಷ್ಟಿಯಾಗಿದ್ದಳು. ಎಮಿಲಿ ಬ್ರಾಂಟೆಯೂ ಹೊರಗಿನ ಜಗತ್ತನ್ನು ಕಂಡವಳಲ್ಲ. ಜಾರ್ಜ್ ಎಲಿಯಟ್ ಕೂಡ ವಿಕ್ಟೋರಿಯನ್ ಯುಗದ ಮಡಿವಂತ, ನೈತಿಕ, ಸಂಕೋಚಗಳಿಗೆ ಪ್ರಸಿದ್ಧವಾದ ವಾತಾವರಣದಲ್ಲಿ ಹುಟ್ಟಿದವಳು. ಇವರಾರೂ ತಮ್ಮ ಪರಿಸ್ಥಿತಿಯ ವಿರುದ್ಧ ಹೋರಾಡಿದವರಲ್ಲ. ಹಾಗಿದ್ದೂ ಇಡಿಯ ಸಾಹಿತ್ಯದಲ್ಲೇ ಅಪೂರ್ವವೆನಿಸುವ ಕೃತಿಗಳನ್ನು ಕೊಡಲು ಅವರಿಗೆ ಸಾಧ್ಯವಾಯಿತು. ತಮ್ಮ ಅನುಭವದ ಪರಿಮಿತ ಸೀಮೆಯಲ್ಲೇ ಇದನ್ನವರು ಸಾಧ್ಯ ಮಾಡಿದರು. ಇದಕ್ಕೆ ಮುಖ್ಯ ಕಾರಣವೆಂದರೆ ಅವರಿಗಿದ್ದ ಪ್ರಬುದ್ಧವಾದ ಜೀವನ ಸೃಷ್ಟಿ. ಗಟ್ಟಿಮುಟ್ಟಾದ ಸೂಕ್ಷ್ಮ ನೈತಿಕ ಪ್ರಜ್ಞೆ. ಬದುಕಿನ ಸಂಕೀರ್ಣತೆಯ ಅರಿವು, ಆಯ್ದುಕೊಳ್ಳುವ ವಸ್ತುವಿನ ಅರ್ಥವಂತಿಕೆ ಹಾಗೂ ಇದಕ್ಕೆಲ್ಲ ರೂಪ ಕೊಡುವ ಕಲಾಪ್ರಜ್ಞೆ. ಜೇನ್ ಆಸ್ಟಿನ್ ಹಾಗೂ ಜಾರ್ಜ್ ಎಲಿಯಟ್‌ರನ್ನು ಎಫ್. ಆರ್. ಲೀವಿಸ್ ಇಂಗ್ಲೀಷ್ ಕಾದಂಬರಿಯ ಮಹಾ ಪರಂಪರೆಯಲ್ಲಿ "ಮೇಜರ್" ಲೇಖಕರೆಂದು ಪರಿಗಣಿಸುತ್ತಾನೆ. ಲಾರೆನ್ಸ್, ಕೊನ್ರ್ಯಾಡ್‌ರಂಥ ಲೇಖಕರ ಸಾಲಿನಲ್ಲಿ ಅವರನ್ನು ನಿಲ್ಲಿಸುತ್ತಾನೆ. ಈ ಮೇಜರ್ ಲೇಖಕರು ಮುಂದಿನ ಪೀಳಿಗೆಗಾಗಿ ಬದುಕಿನ ಹಾಗೂ ಕಲೆಯ ಸಾಧ್ಯತೆಗಳನ್ನು ವಿಸ್ತರಿಸಿಕೊಡುತ್ತಾರೆಂದು ಅವನು ಹೇಳುತ್ತಾನೆ. ಈ ಎರಡೂ ದೃಷ್ಟಿಯಿಂದ ನೋಡಿದಾಗ ನಮ್ಮ ಲೇಖಕಿಯರ ಸಾಧನೆ ಗಣ್ಯವೆಂದು ಹೇಳಲಿಕ್ಕಾಗುವದಿಲ್ಲ. ಅಂತೆಯೇ ಅಲ್ಲಲ್ಲಿ ಕಾಣುವ ಕೆಲವು ಒಳ್ಳೆಯ ಕೃತಿಗಳನ್ನು ಎತ್ತಿ ತೋರಿಸಲು ಸಾಧ್ಯವಾದರೂ, ಕನ್ನಡ ಸಾಹಿತ್ಯದ ಒಟ್ಟು ಸಾಧನೆಯಲ್ಲಿ ಅವರ ಹೆಸರು ಮೇಲೆ ಬರುವುದಿಲ್ಲ.

> **ಗಾದೀ ಮಾತು**
>
> ಮುತ್ತು ಒಡೆದರೆ, ಹೊತ್ತು ಹೋದರೆ
> ಮತ್ತೆ ಬಾರದು ಎಂಬುದು ಗಾದೆ ಮಾತು
> ಮುತ್ತು ಕೊಟ್ಟರೆ ಮತ್ತು ಬಪ್ಪುದು
> ಹೊತ್ತು ಹೋದುದೇ ಗೊತ್ತು ಆಗದು
> ಎಂಬುದು ಗಾದೀ ಮಾತು!
>
> ಅನಂತ ಕಲ್ಲೋಳ




ಈ ಸ್ಥಿತಿಯಲ್ಲಿ ವೀಣಾ ಯಲಬುರ್ಗಿಯವರ "ಗಂಡಸರು"ದಂಥ ಕೃತಿ ಒಂದು ಅಪವಾದವೆಂದೇ ಹೇಳಬೇಕು. ಹೆಣ್ಣುಮಕ್ಕಳ ಕೃತಿಗಳಲ್ಲಿ ಸಾಮಾನ್ಯವಾಗಿರುವ ಸಂಕೋಚಗಳು ಇಲ್ಲಿ ಇಲ್ಲ. ಒಂದು ಬಗೆಯ ಪ್ರಖರವಾದ ಪ್ರಾಮಾಣಿಕತೆ ಕಣ್ಣು ಕುಕ್ಕುತ್ತದೆ. ವಸ್ತುವಿನ ಜೊತೆಗೆ ಸಂಭಾವಿತತನ ಮುಂತಾದ ಅಪ್ರಾಮಾಣಿಕ ಸೋಗಿನಿಂದ ಯಾವುದೇ ರೀತಿಯಲ್ಲೂ ಒಪ್ಪಂದ ಮಾಡಿಕೊಳ್ಳದೆ ನೇರವಾಗಿ ಎದುರಿಸಿ ಬರೆಯುವ ಧೈರ್ಯ ಇಲ್ಲಿ ಕಾಣುತ್ತದೆ. ಇಲ್ಲಿ ಪ್ರಾಮಾಣಿಕತೆ, ಧೈರ್ಯ, ನಿಸ್ಸಂಕೋಚ ಇತ್ಯಾದಿಗಳನ್ನು ಈ ಕೃತಿಯು ಲೈಂಗಿಕ ವಿವರಗಳ ಧಾಷ್ಟ್ರ್ಯದ ವಿಷಯದಲ್ಲಿ ಬಳಸುತ್ತಿಲ್ಲ. ವಸ್ತುವನ್ನು ಕಾದಂಬರಿಯ ಕೇಂದ್ರದಲ್ಲಿ ಸರಿಯಾಗಿ ಗುರುತಿಸಿ, ಅದರ ಬೆಳವಣಿಗೆಯನ್ನು ಸಪ್ರಮಾಣವಾಗಿ ತೂಗಿಸಿಕೊಂಡು ಹೋಗಿರುವುದರಲ್ಲಿ ಈ ಕೃತಿಯ ಮಹತ್ವವಿದೆ. ಈ ಕೃತಿಯ ನಾಯಿಕೆ ವಿವಿಧ ಸ್ವಭಾವದ ಗಂಡಸರ ಸಂಪರ್ಕದಲ್ಲಿ ಬರುತ್ತ ಹೋದಂತೆ ಪ್ರೇಮ ಇತ್ಯಾದಿ ಭಾವನೆಗಳು ಮೊಂಡವಾಗುತ್ತ ಹೋಗಿ, ಕೊನೆಗೆ ಅರ್ಥ ಕಳೆದುಕೊಂಡು ಭಾವನಾರಹಿತ ಸ್ಥಿತಿಯನ್ನು ತಲುಪುತ್ತವೆ. ಈ ದುರಂತದ ಹಿಂದೆ ವಿಶಿಷ್ಟ ಅರ್ಥದಲ್ಲಿ ನೈತಿಕ ಪ್ರಜ್ಞೆಯೂ ಕೆಲಸ ಮಾಡುತ್ತಿದೆ ಎನ್ನುವುದು ಗಮನಿಸಬೇಕಾದ ವಿಷಯ.

ವಸ್ತುವಿನ ಸ್ಪಷ್ಟ ಕಲ್ಪನೆ, ಬದುಕಿನೊಂದಿಗೆ ಅದು ಹೊಂದಿರುವ ಸಂಬಂಧ. ಅದರ ವಿವಿಧ ಮುಖಗಳ ಪ್ರಮಾಣ ಜ್ಞಾನ, ಸಮಸ್ಯೆಯನ್ನು ಯಾವ ರೀತಿಯಲ್ಲಿ ಸರಳಗೊಳಿಸಿಕೊಳ್ಳದ ನಿಷ್ಠುರತೆ, ಇವುಗಳಿಗೆ ಕೇಂದ್ರವಾಗಿರುವ ಸೂಕ್ಷ್ಮ ನೈತಿಕ ಧ್ವನಿ, ಇವನ್ನೆಲ್ಲ ಸಾಹಿತ್ಯವಾಗಿಸಬಲ್ಲ ಕಲಾವಂತಿಕೆ–ಇತ್ಯಾದಿಗಳಿಲ್ಲದೆ ಯಾವ ಕೃತಿಯೂ ಶ್ರೇಷ್ಠವಾಗಲಾರದು. ಈ ದಿಕ್ಕಿನಲ್ಲಿ ನಮ್ಮ ಲೇಖಕಿಯರು ಇನ್ನೂ ಬಹಳ ದೂರ ನಡೆಯಬೇಕಾಗಿದೆ. ಈಗಿದ್ದಂತೆ ಅವರು ಇನ್ನೂ ಕಥಾ ನಿರೂಪಣೆ, ಪಾತ್ರ ಚಿತ್ರಣ, ಸಂಭಾಷಣೆ ಮುಂತಾದ ಕಲೆಯ ಪ್ರಾಥಮಿಕ ಹಂತಗಳಲ್ಲೇ ಇದ್ದಾರೆ. ●

---

** ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರವು ನಡೆಸಿದ "ಮಹಿಳೆ ಮತ್ತು ಕನ್ನಡ ಸಾಹಿತ್ಯ" ಎಂಬ ವಿಚಾರ ಸಂಕಿರಣದಲ್ಲಿ ಸಾದರಪಡಿಸಿದ ಪ್ರಬಂಧ.

# ಗೌರೀ ನಿಟ್ಟಾಸ

* ಶಂ.ಶಾ

ನಾಲ್ಕೈದು ವಾರ ಮಣಿ ಮುಂಬಯಿಗೆ ಹೋದವನು ಅದೇ ಊರಿಗೆ ಮರಳಿದ್ದೆ ಮುನ್ನಾದಿನ ರಾತ್ರಿ. ಮರುದಿನ ಬೆಳಗಿನಲ್ಲೇ ಸಮನ್ಸ್ ಬಂದಿತು. "ನಿಮ್ಮನ್ನ ವಕೀಲರ ಮನ್ಯಾಗ ಕರದ್ದಾರ್ರೀ" ಹಾಲಿನ ಹಾಕಪ್ಪ ಹೊರಗಿನಿಂದಲೇ ಒದರಿದ ಸೈಕಲ್ಲು ನಿಲ್ಲಿಸದೆ.

"ಎಲಾ ಇವನ?" ಎಂದೆ. ನಾನು ಊರಿಗೆ ಬಂದದ್ದು ಹೇಗೆ ಗೊತ್ತಾಯಿತು. ಯಾವಾಗ ಗೊತ್ತಾಯಿತು ಎಂದೆಲ್ಲ ಕೇಳಬೇಕೆಂದು ಮಾಡಿದ್ದ ಹೂಂ ಮತ್ತೆ ! ಒಂದು ನಂಬರ ಕೋರ್ಟಿನಲ್ಲಿ ಮಕಾರು ಆದಾಗ ಎರಡು ನಂಬರ ಕೋರ್ಟಿನಲ್ಲಿ ಯಾರದೋ ಮತ್ತೊಂದೇ ಕೇಸು ನಡೆಸಿದ ಹರಕಂಗೀ ಮರೆಮಾತಪ್ಪ ವಕೀಲರ ಹಾಗೆ ಆಗಬಾರದು.

"ಅಪ್ಪರ ಮೂರತೆ" ಹಾಕಪ್ಪ ಹಿಂದೆ ನೋಡದೆ ಒದರಿದ "ಬಾಯಿಗೋಳ ಕರದ್ದಾರ್ರೀ" ಬಾಯಿಯವರ ಕೋರ್ಟಿನಲ್ಲಿ ಮುಂದತು ಎನ್ನುವ ಶಬ್ದವೇ ಇಲ್ಲ. ಅಂಗಿಗೆ ಗುಂಡಿ ಹಾಕಿಕೊಳ್ಳುತ್ತ, ಕಣ್ಣಿಗೆ ಚಾಳಸಿ ಏರಿಸುತ್ತ ಗೂಟದ ರುಮಾಲು ಬಗಲಿಗೆ ಹಾಕಿಕೊಂಡು ಉಂಗುಟ ಕಿತ್ತಿದ ಚಪ್ಪಲಿ ಎಳೆಯುತ್ತ ಹೆಜ್ಜೆ ಸರಿಸಿದೆ.

"ಸಂಕಪ್ಪ ಲಗೂ ಬಂದಿ ಭಾಳ ಛಲೋ ಆತು" ಭಾಗೀರಥಿಬಾಯಿ ಅಂಗಳದಲ್ಲಿ ಬಾಗಿ ಹಸಿ ಸೆಗಣಿಯ ಮೇಲೆ ರಂಗೋಲಿಯಲ್ಲಿ ರಾಮನ ತೊಟ್ಟಿಲು ಹಾಕುತ್ತಿದ್ದವರು ಸೊಂಟದ ಮೇಲೆ ಕೈ ಇಟ್ಟುಕೊಂಡು ನಿಂತರು. ಅಂದರೆ ರಂಗೋಲಿ ಪೂರ್ಣ ಹಾಕಿ ಆಗಿರಲಿಲ್ಲ. ಆದರೆ ಅವರು ಬೇರೆ ರಂಗೋಲಿ ಹಾಕಿದ್ದು ನಮ್ಮೂರಲ್ಲಿ ಯಾರೂ ನೋಡೇ ಇಲ್ಲ. ನೈಲಾನ್ ಯುಗ ಬಂದರೂ ಅವರ ತೊಟ್ಟಿಲ ಹಗ್ಗ ಮೊದಲಿನಷ್ಟೇ ದಪ್ಪ. ಬೇಡಿ ಬಯಸಿ ಯಜ್ಞ ಮಾಡಿದ ಬಳಿಕ ಹುಟ್ಟಿದ ರಾಮದೇವರು ನೋಡಿರಿ. ಅದ್ರ ಹಗ್ಗ ಹೇಗೆ ನಡೆದೀತು?

"ಊರಿನಿಂದ ಯಾವಾಗ ಬಂದೀ?" ವಕೀಲೀನ ಬಾಯಿ ಪ್ರಶ್ನೆ ಹಾಕಿದರು. "ನನಗಿಂತ ನಿಮಗೇ ಹೆಚ್ಚು ಗೊತ್ತು" ನಾನೆಂದೆ. 'ಹಾಹಾಹಾ.' ಎಂದು ನಕ್ಕ. "ಅವರು ಇದ್ದಾರ ಒಳಗ" ಅವರು ಮತ್ತ ಬಾಗಿದಾಗ ನಾನು ಪಾವಟಿಗೆ ಏರಿ ಮನೆಯೊಳಗೆ ಕಾಲು ಹಾಕಿದೆ

ಅಡಿಗೆ ಮನೆಯಲ್ಲಿ ಗ್ಯಾಸ್ ಮುಂದೆ ಕುಳಿತು ವಕೀಲ ಸಾಹೇಬರು ಹಾಲು ಕಾಯಿಸುತ್ತಿದ್ದರು. ಓದುವ ಚಾಳಶಿ ಹಾಕಿಕೊಂಡು ಹಾಲು ಉಕ್ಕುವದನ್ನು ನಿಟ್ಟಿಸುತ್ತಿದ್ದರು. ನಾನು ಕಂಬಕ್ಕೆ ಆನಿಸಿ ಒಳಿತೆ.

ಭಾಗೀರಥಿಬಾಯಿ ಒಳಗೆ ಬಂದವರು ದೇವರ ಮುಂದೆ ಪದ್ಮ ಹಾಕತೊಡಗಿದರು. ಅವರ ದೊಡ್ಡ ದೇವರಿಗೆ ಒಂದೇ ರಂಗೋಲಿ ಇಷ್ಟ ಇರಬೇಕು, "ಸಂಕಪ್ಪ ಬಂದಾನ" ಅವರೆಂದಾಗ ಅಪ್ಪರ ಮೂರ್ತೆ ತಿರುಗಿ ನೋಡಿದರು. ಚಾಳಶಿಯ ಸಂದಿಯಿಂದ ಕಣ್ಣು ತೂರಿ ನಕ್ಕಂತೆ ಮಾಡಿದರು.

"ಸಂಕಪ್ಪ, ಗೌರೀ ಕೂಡಸೋದರ" ಬಾಯಿಯವರು ಹೇಳಿದಾಗ ನನಗೆ ಏನೂ ಅರ್ಥವಾಗಲಿಲ್ಲ. ಹೊರಸು ಬಿಗಿಯುವದು, ಹಗ್ಗ ಹೊಸೆಯುವದು. ಹೂರಣ ಹೋಳಿಗೆ, ಗೋದಿಹುಗ್ಗಿ ಪಾಯಸ. ಇವೆಲ್ಲ ವಿದ್ಯೆ ನನ್ನಲ್ಲಿವೆ ಆದರೆ ಹಿತ್ತಾಳೆ ತಂಬಿಗೆಗೆ ಕೇವೆ ಹಚ್ಚಿ ಸುಣ್ಣದ ಕೇಸರೀ ಬಣ್ಣ ಚಿಕ್ಕೆ ಇಟ್ಟು ಗೌರಿ ಬರೆಯುವ ಕೆಲಸ ನಾನಿನ್ನೂ ಮಾಡಿಲ್ಲ. ನಾನು ಹಾಗೆ ಹೇಳಿದೆ.

"ಅಯ್ಯ ನಿನ್ನ ಗೌರೀ ಬರೀಲಿಕ್ಕೆ ಕರಸಲಿಲ್ಲ"

"ಹಂಗಾರ?"

"ಸಂಕಪ್ಪ ನಮ್ಮ ಮನ್ಯಾಗ ಇಲೀ ಭಾಳ ಆಗ್ಯಾವ ನೋಡು" ನನಗೆ ಪಂಚನಾಮೆಯದೂ ಮರಾವೆಯದೂ ಸಂಬಂಧ ಹತ್ತಲಿಲ್ಲ, ಪ್ರವಾಸದ ದಣಿವಿನಿಂದ ರಾತ್ರಿ ನಿದ್ದೆಯಾಗಿರಲಿಲ್ಲ. ತಲೆ ಜಾಡಿಸಿಕೊಂಡೆ. ಸಡಿಲೆನಿಸಿದ ರುಮಾಲು ಬಿಚ್ಚಿ ಐದು ಮಿನಿಟಿನವರೆಗೆ ತಿದ್ದಿ ತೀಡಿ ಸುತ್ತಿಕೊಂಡೆ. ಉಳಿದ ಚುಂಗು ಅಮಾತಾಗಿ ತುರುಕಿದೆ.

ಅಪ್ಪರ ಮೂರತೆ ಗ್ಯಾಸ್ ಬಂದು ಮಾಡಿ ತಿರುಗಿದರು. ಎರಡು ಮರಿ ಇಲಿಗಳು ನಮ್ಮ ಮುಂದೆಯೇ ಛಪ್ಪಾಪಾಣೀ ಆಡತೊಡಗಿದವು. "ಬರೇ ಹಿಂಗ ಓಡಾಡತಾವ ನೋಡು. ಹಗಲಿಲ್ಲ, ರಾತ್ರಿಯಿಲ್ಲ ವಕೀಲರು ಉಸಿರು ಹಾಕಿದರು.

"ಹಳೆ ಮನಿ. ಮಣ್ಣು ಗ್ವಾಡಿ."



"ಆದರ ಖರೇನೋ. ಆದರ ಗೌರಿ ಹ್ಯಾಂಗ ಕೂಡಸೋಬೇಕಂತ ಕಾಳಜಿ ಆಗೇದ" ಬಾಯಿ ಸಾಹೇಬರು.

ನಾನಾ ಕಿಸೆಯಲ್ಲಿಯ ಚಂಚಿ ತೆಗೆದು ಸಣ್ಣಾಗಿ ಅಡಿಕೆ ಕತ್ತರಿಸಿದೆ. ಮುಂದೆ ಒಡ್ಡಿದ ವಕೀಲರ ಕೈಯಲ್ಲಿ ಒಂದಿಷ್ಟು ಹಾಕಿ ಉಳಿದದ್ದು ಮುಕ್ಕಿದೆ. ಅಷ್ಟರಲ್ಲಿ ಒಂದು ದೊಡ್ಡ ಇಲಿ ಜಂತಿಯಿಂದ ಪಟ್ಟನೆ ನನ್ನ ತೊಡೆಯ ಮೇಲೆ ಬಿದ್ದು ಸಟ್ಟನೆ ಓಡಿತು. ನಾನು ಗಡಬಡಿಸಿ ಎದ್ದು ನಿಂತು ನೀರಿಗೆ ಹಾಡಿಸಿಕೊಂಡೆ.

"ಹಿಂಗ ತ್ರಾಸ ಕೊಡತಾವ ಸಂಕಪ್ಪ ಇನ್ನ ಗೌರಿನ್ನ ಬಿಟ್ಟಾವೇನೋ? ಆಕಿ ಹೊಟ್ಟ್ಯಾಗ ಅಕ್ಕಿ ಗೋದಿ ಹಾಕಿರ್ತದ" ಈಗ ನನ್ನ ಟ್ಯೂಬ್‌ಲೈಟ್ ಪಕಪಕ ಮಾಡಿತು.

"ಎಲಾ ಇವನ" ಎಂದೆ. ಅದರಾಗೇನದ ಗೌರಿಗೆ ಇನ್ನೂ ಎಂಟು ದಿವಸ. ಒಂದು ಬೆಕ್ಕು ತಂದರ ಆತು.

"ಅದೂ ಆದ್ಸ" ಬಾಯಿ ಅಂದರು. ಬಾ ಬಿಸ್ ಬಿಸ್ ಬಿಸ್ ಮಾಡಿದರು. ಗ್ಯಾಸ್ ಬುಡುಕಿನಿಂದ ಹಳದಿ ಬಿಳಿ ಬಣ್ಣದ ಬೆಕ್ಕು ಪ್ರತ್ಯಕ್ಷವಾಯಿತು. ಮೈ ಮುರಿದುಕೊಂಡು ಆಕಳಿಸಿತು. ಭಾಗೀರಥಿಬಾಯಿ ಹಿತ್ತಾಳೆಯ ಮುಚ್ಚಳಿಕೆಯಲ್ಲಿ ಹಾಲು ಹಾಕಿದರು. ಬೆಕ್ಕು ಕಣ್ಣು ಮುಚ್ಚಿ ಹಾಲು ಕುಡಿಯತೊಡಗಿತು. ಹಾಕಪ್ಪನ ಹಾಲು. ಕಣ್ಣು ಮುಚ್ಚದೆ ಇನ್ನೇನು ಮಾಡೀತು? ಅದರ ಹೊಟ್ಟೆಯ ಕೆಳಗಿನಿಂದ ಎರಡು ಇಲಿ ಮರಿಗಳು ಜಿದ್ದು ಹಾಕಿ ಪಾರಾದವು. "ಅಂ? ಎಂದೆ" ಇದೇನು ರಬ್ಬರ್ ಬೆಕ್ಕೋ, ಪ್ಲಾಸ್ಟಿಕ್ ಬೆಕ್ಕೋ?"

"ಎಂಟು ದಿವಸದ ಮರಿ ಇದ್ದಾಗ ಇವರು ಇದನ್ನು ತಂದರು ನೋಡು. ಹಿಂಗಾಗಿ, ಪಾಪ, ಇದಕ್ಕ ಸಣ್ಣಂದಿಂದ ಇದರ ಅವ್ವ ಇಲಿ ಹಿಡಿಯೋದು ಕಲಿಸಲೇ ಇಲ್ಲ."

"ಅದರಾಗೇನದ ಬಿಡ್ರಿ. ಈಗ ಎಷ್ಟೋ ಪತ್ರ ಮೂಲಕ ಪ್ರಶಿಕ್ಷಣ ಅಂತ ಕರೆಸ್ಪಾಂಡನ್ಸ್ ಕೋರ್ಸ್ ಸುರೂ ಆವ. ಇದರದೂ ಒಂದು ಇರಬೇಕಲ್ಲ,"

"ಅದನ್ನು ತೊಗೊಂಡೆ" ವಕೀಲರು

"ಕಾಲೇಜದವರು ವಿ. ವಿ, ಯವರು ಸಂಜೀ ಡಿಗ್ರಿ ಡಿಪ್ಲೋಮಾ ಕೋರ್ಸ್ ಇಟ್ಟಿಲ್ಲೇನ್ರಿ?"

"ಈ ಊರಾಗ ಸರ್ಟಿಫಿಕೇಟು ಕೋರ್ಸ್ ಅದ "ಭಾಗೀರಥಿಬಾಯಿ ಅಂದರು. "ನಿಮ್ಮ ವಕೀಲರು ದಿನಾ ಬೆಕ್ಕನ್ನ ಕರಕೊಂಡು ಕ್ಲಾಸಿಗೆ ಹೋಗತಿದ್ದರು. ಇವರು ಎರಡು ಇಲಿ ಹಿಡಿದರು ನೋಡು"

"ಸತ್ತದ್ದು?"

"ಅಲ್ಲಪಾ ಜೀವಂತ ಆದರ ಸುದ್ದಿ ಈ ಬೆಕ್ಕಿಗೇನು ತಲ್ಯಾಗ ಹೋಗಲಿಲ್ಲ. ಆ ಹಿಡಿದದ್ದು ಇಲಿ ಬೆಕ್ಕಿಗೆ ಕೊಟ್ಟರು. ಸುಂಡ್ಲಿ ಇದು ತಿಂದೀತು. ಮುಂದೆ ನಾಲ್ಕು ದಿವಸ ಅಪಚನ ಮೈ ಕೈಯೆಲ್ಲಾ ಬಾತು ಹೈರಾಣ ಹಿಡಿಸಿತು"

"ಮುಂದs?"

"ಮುಂದೇನು, ದನದ ಡಾಕ್ಟರರಿಗೆ ತೋರಿಸಿದೆ, ವಕೀಲರು ಬಯಾನಾ ಸುರುಮಾಡಿದರು, "ಅಂವಾ ಅಂದೆ. ಹಸೀ ಮಾಂಸ ಪಚನ ಆಗಿರಲಿಕ್ಕಿಲ್ಲ. ಬೇಯಿಸಿ ಹಾಕರಿ."

"ಛೇ ಛೇ ಅಬ್ರಹ್ಮಣ್ಯಂ"

"ಸುಬ್ರಹ್ಮಣ್ಯಂ. ನಾನೂ ಮಗಾ ಬಿಡಲಿಲ್ಲ. ಎರಡು ಮರಿ ಇಲಿ ಹಿಡಿದು ಅಂಗಳದಾಗ ಕಿಚ್ಚು ಮಾಡಿ ಛಲೊತ್ನಾಗಿ ಬದನೀಕಾಯಿಗತೆ ಸುಟ್ಟು ಸುಲದು ತಿನಿಸಿದೆ"

"ಅಯ್ಯೋಯ್ಯೋಯೋ... ನಾನು ಕಿವಿ ಮುಚ್ಚಿಕೊಂಡೆ.

"ಅಂದರೂ ಇದಕ್ಕ ದಕ್ಕಲಿಲ್ಲ ನೋಡು" ಭಾಗೀರಥಿಬಾಯಿ.

"ಮೈ ಕಾಲು ಬಾಲ ಸೈತ್ ಬಾತು ಹೋದರೂ, ಡಾಕ್ಟರ ಅಂದ ಇದಕ್ಕ ಇಲೀ ಅಲರ್ಜಿ, ಆದ್ಸ ಅಂತ"

"ಮತ್ತೊಂದು ಬೆಕ್ಕು ತರಬೇಕಾಗಿತ್ತು."

"ಏನು ಸುಡಲೇ ಎಲ್ಲಾ ತುರ್ತು ಸಂತಾನ"



"...ನಾನೇನು ಪಟಾಕಿ ಬಚ್ಚಿಟ್ಟು ಕೊಂಡಿಲ್ಲಾರೀ...ಪಪ್ ಚಡ್ಡೀದು ಗುಂಡಿ ಕಿತ್ತೋಗಿದೆ."

ಭಾಗೀರಥಿಬಾಯಿ ಚಹಮಾಡುತ್ತಿದ್ದದರ ಕಡೆ ಖರೇನೇ ನನ್ನ ಲಕ್ಷ ಇರಲಿಲ್ಲ. ನನ್ನ ಮುಂದೆ ಕಪ್ಪು ಬಸಿ ಬಂದಾಗಲೇ ಆಶ್ಚರ್ಯ ಆದದ್ದು. ವಕೀಲರು ಚಕ್‌ಚಕ್ ಮಾಡುತ್ತ ಕಪ್ಪಿನಿಂದಲೇ ಕುಡಿದರು. ನಾನು ಘುರ್ ಘುರ್ ಮಾಡುತ್ತ ಬಸಿಯಿಂದ ಕುಡಿದೆ.

"ನಗರ ಸಭೆಯವರು ಔಷಧ ಕೊಡ್ತಾರ"

"ಅದನ್ನೂ ತರಿಸಿದೆ. ಇಲಿ ಸಂಖ್ಯಾ ಬೆಳೀತು, ಬಹುಶಃ ಅದೇನರೇ ಕುಟುಂಬ ಕಲ್ಯಾಣ ಔಷಧ ಇರಬೇಕು"

"ಪ್ಯಾಟ್ಯಾಗನೂ ಔಷಧ ಸಿಗ್ತದs"

"ಅದೂ ಆತು" ಬಾಯಿ ಎಂದರು. "ಹಿಟ್ಟು ಎಣ್ಣೆ ಕೂಡಿಸಿ ಕಲಿಸಿ ಹಾಕಿದರು. ಮುಂದೆ ಎಂಟು ದಿನ ನಮ್ಮ ಮನೀ ಅಂದರ ಮಳೆಗಾಲದಾಗಿನ ಮುನಸಿಪಾಲಟಿ ತಿಪ್ಪಿ ಆಗಿತ್ತು. ಅಷ್ಟು ಗಬ್ಬು ನಾತು ಏನಪ್ಪಾ ಎಲ್ಲೋ ಹಾಡ್ಯಾರ ಇಲಿ ಹೋಗಿ ಸತ್ತಿರಬೇಕು. ನಾವು ನಾಲ್ಕು ದಿವಸ ತಾಟದಾಗ ಹೋಗಿ ಇದ್ದೆವು"

"ಬಲೀ ಸಿಗಲಿಲ್ಲರೀ?"

"ಅದ್ಯಾಕೋ ಸಂಕಪ್ಪ, ಬಲೀನೂ ತರಿಸಿದೆ. ದಿನಾ ತೊಳ ತೊಳದು ಇಡತ್ತಿದ್ದೆ. ಖಮ್ಮ ಖಮ್ಮಗ ಬುರಬುರಿ, ಅಂಚೋಡ ಭಜಿ, ಬಟಾಟಿ ವಡೆ, ಕರಿಗಡಬು ಮಾಡಿ ಹಾಕಿದೆ. ಸ್ಯಾಂಪಲ್ ತಿಂದು ತಿಂದು ಇವರ ತೂಕ ಹತ್ತು ಕಿಲೋ ಬೆಳೀತು."

"ಹತ್ತು ಕಿಲೋ ಏನಿಲ್ಲ ಹಾಂ? ಒಂದೆರಡು ಕಿಲೋ ಬೆಳದಿರಬೇಕು ನೀ ಊರಾಗ ಇದ್ದಿದ್ದಿಲ್ಲ ಸಂಕಪ್ಪ. ನೀ ಇದ್ದರ ನಿನಗೂ ಸಿಗತಿತ್ತು."

"ಆದರ ಸಂಕಪ್ಪಾ ನಿನಗ ಹೇಳೂದಂದರ ಯಾವತ್ತೂ ಇಲಿಗಳ ಪೈಕಿ ಒಂದೂ ಇಲಿ ಸದರೀ ಬಲೆಯಲ್ಲಿ ಬೀಳಲಿಲ್ಲಾ 'ಭಾಗೀರಥೀಬಾಯಿ ರಹಸ್ಯ ಬಯಲು ಮಾಡಿದರು.

"ಎಲಾ ಇವನ..." ಬಾಯಲ್ಲಿ ಸಹಜವಾಗಿ ಬಂದ ಹುಸಿ ಶಾವಿಗೆಯಂತಹ ಒಂದು ಉದ್ದೋ ಉದ್ದ ಬೈ ನುಂಗಿಬಿಟ್ಟೆ.

"ಇಲಿಗಳು ಆ ಬಲೀ ಸುತ್ತ ಓಡ್ಯಾಡಬೇಕು. ತಂತೀ ನಡುವ ಬಾಯಿ ಹಾಕಿ ಹೊರಗಿಂದನs ಕಚೇರಿ ಕಾರಕೂನರ್ಹಾಂಗ ಸಿಕ್ಕಷ್ಟು ತಿನಬೇಕು. ಆದರ ಒಳಗ ತಪ್ಪಿ ಹೋಗಲಿಕ್ಕಿಲ್ಲ."

"ಮನ್ಯಾಗ ಬಾಕೀ ಬೇಕಾದಕಡೆ, ಅಗದೀ ದೇವರ ಪೆಟ್ಟಿಗ್ಯಾಗ ಸೈತ, ಹೋಗಲಿದ್ವು ಖರೇ ಬಲ್ಯಾಗ! ಊಂ ಹೂಂ" ವಕೀಲರು ಮತ್ತೆ ಉಸಿರು ಹಾಕಿದರು.

ನಾನು ರುಮಾಲದ ಸಂದಿಯಲ್ಲಿ ಬೆರಳು ಹಾಕಿ ತಲೆ ತುರಿಸಿಕೊಂಡೆ.

"ಒಂದು ಮಾತು. ನನಗೊಂದು ಪಾಯಿಂಟು ಸಿಕ್ಕದs

"ಅಂ?" ಅವರಿಬ್ಬರೂ ನನ್ನ ಹತ್ತಿರ ಬಂದರು.

ನಾನು ಶಿಸ್ತಾಗಿ ಗೋಡೆಗೆ ಆತು ಕುಳಿತೆ. ಗೆದ್ದ ಪಕ್ಷಗಾರನಂತೆ ನಕ್ಕೆ." ಪ್ರಶ್ನೆ ಬಗೀಹರೀತು"

"ಅಂದರ?" ಮತ್ತೆ ಕಂಕರಂಟ್ ಪ್ರಶ್ನೆ.

"ಗೌರೀ ಕೂಡಸೋ ಪ್ರಶ್ನೆ ಬಿಟ್ಟತು. ಮಾತೇ ಮುಗೀತು"

"ಏನಂತೀ?" ವಕೀಲರು

"ಜಟ್ಟ ಕಡೀತು. ಕೇಸು ಡಿಸ್‌ಮಿಸ್ ಆತು."

"ಅಂದರ ಗೌರೀ ಕೂಡಸಬ್ಯಾಡ ಅಂತೀಯೇನು?" ಭಾಗೀರಥಿಬಾಯಿ ಅಥವಾ ಗೌರೀ ಹೊಟ್ಟ್ಯಾಗ ಧಾನ್ಯದ ಬದಲೀ ರೊಕ್ಕ ರೇಶನ್ ಕಾರ್ಡು ಇಡಬೇಕಂತೀಯೇನು?" ಅಷ್ಟರ ಪೂರತೆ.

"ಗೌರೀ ಕೂಡಸರಿ. ವ್ಯವಸ್ಥಿತ ಏಗಿ ಯಾವ ಬೇಕಾದ ಧಾನ್ಯ ಹಾಕಿ ಕೂಡಸರಿ."

"ಖರೀ ಇಲೀ ಪ್ರಶ್ನೆ?"

"ಬಿಟ್ಟತು. ಮುಗೀತು." ನಾನು ಜಜ್‌ಮೆಂಟ್ ಓದುವವರಂತೆ ಕಟ್ಟ ಮೋರೆ ಮಾಡಿದೆ. "ಸದರೀ ಗೌರಿಯನ್ನು ಇಲಿಯ ಬಲೆಯಲ್ಲಿ ಕೂಡ್ರಿಸತಕ್ಕದ್ದು ಅಂದರೆ ಸದರೀ ಗೌರಿಗೆ ಸದರಿ ಇಲಿಗಳಿಂದ ಯಾವ ತರಹದ ಆತಂಕವೂ ಆಗಲಾರದು ಅಂತಾ"

ಅಷ್ಟರ ಮೂರತೆ ದಂಪತಿಗಳಿಗೆ ಇದೊಂದು ಬಿಟ್ಟರೆ ಹಿಂದೆ ಮುಂದೆ ಎಂದೂ ಒಮ್ಮತವಾಗಿರಲಿಲ್ಲ!"

●

ಸಾವಿರಾರು ವರ್ಷಗಳಿಂದಲೂ ವಿಶ್ವದ ವಿಭಿನ್ನ ಸಮಾಜಗಳಲ್ಲಿ ಅಲ್ಲಿರುವ ಹೆಣ್ಣಿನ ಬಗ್ಗೆ ನಿಶ್ಚಿತ, ನಿರಾಧಾರ ಹಾಗೂ ಏಕತಾನ (Stereotyped) ಅಭಿಪ್ರಾಯಗಳು ರೂಪಿತಗೊಳ್ಳುತ್ತ ಬಂದಿವೆ. ಯಾವುದೇ ಎರಡು ಸಮಾಜಗಳ ಅಭಿಪ್ರಾಯಗಳಲ್ಲಿಯ ಭಿನ್ನತೆಯು ಒಡೆದು ಕಾಣುವಷ್ಟು ಗುರುತರವಾಗಿಲ್ಲ. ಇವುಗಳನ್ನು ಕಾಪಾಡಿ, ಜನರ ಮೌಢ್ಯವನ್ನು ಬೆಳೆಸಿ, ಹೆಣ್ಣು ಹೆಚ್ಚು ತೊಳಲಾಡುವಂತಾಗಲು ಅನೇಕ ಸಾಮಾಜಿಕ, ಧಾರ್ಮಿಕ ಸಂಸ್ಥೆಗಳು ಸಹಕರಿಸುತ್ತ ಬಂದಿವೆ.

ಪೂರ್ವಾಗ್ರಹ ಪೀಡಿತ ಭಾವನೆಗಳ ಪ್ರಭಾವಕ್ಕೆ ಒಳಗಾಗದೇ, ಲೈಂಗಿಕ ಭೇದವನ್ನು ಮೂಲವಾಗಿಟ್ಟುಕೊಂಡು ಯೋಚಿಸುವ ದುರಭ್ಯಾಸದಿಂದ ದೂರವಾಗಿ ಆಲೋಚಿಸಿದರೆ ಗಂಡು–ಹೆಣ್ಣುಗಳ ನಡುವೆ ಈಗ ಬೆಳೆದುನಿಂತ ಕಂದಕಕ್ಕೆ ನಿಜವಾದ ಕಾರಣ ತಿಳಿಯುತ್ತದೆ. ಸ್ಥೂಲವಾಗಿ ಹೇಳುವುದಾದರೆ **ಹೆಣ್ಣಿನ ಹೀನ ಸ್ಥಿತಿಗೆ, ಗುಲಾಮಗಿರಿಗೆ ಅವಳ ವಿಶಿಷ್ಟ ಶರೀರ ರಚನೆ ಕಾರಣವಾಗಿರದೇ ನಿರ್ದಿಷ್ಟ ಸಂಸ್ಕೃತಿ ಹಾಗೂ ಸಮಾಜ ರಚನೆ ಕಾರಣವಾಗಿದೆ.**

ಹುಟ್ಟಿದ ಮಗು ಹೆಣ್ಣು ಅಂದಾಗ ಹೆತ್ತವಳಿಗೆ ತಾನು ತಪ್ಪಿತಸ್ಥಳೆಂಬ ಅಥವಾ ಕೀಳರಿಮೆಯು (Inferiority Complex or feeling) ಅನುಭವವಾಗುತ್ತದೆ. ಅದೇ ಗಂಡುಮಗುವಾದರೆ ಒಂದು ರೀತಿಯ ಹೆಮ್ಮೆ, ಬದುಕಿನಲ್ಲಿ ಏನೋ ಸಾಧಿಸಿದಂತೆ ತನಗೆ ಹೆಣ್ಣು ಹುಟ್ಟಲು ಅಂದರೆ ಮಗುವಿನ ಲಿಂಗನಿರ್ಣಯಕ್ಕೆ (Sex determination) ತನ್ನ ಗಂಡ ಮಾತ್ರ ಕಾರಣವೆನ್ನುವುದು ಕೂಡ ಅವಳಿಗೆ ಗೊತ್ತಿಲ್ಲ. ಹೆಣ್ಣಿನಲ್ಲಿ ಈ ಕೀಳರಿಮೆಯ ಮನಃಸ್ಥಿತಿ ನಿರ್ಮಿತವಾಗುವುದು ಸಹ ಪುರುಷ ಪ್ರಧಾನತೆಗೆ ಒಂದುಸಾಕ್ಷಿ.

ಇಂಥ ಅಪರಾಧೀ ಮನಃಸ್ಥಿತಿಯ ತಾಯಿ ತಾನು ಹೆಣ್ಣಾಗಿ ಹುಟ್ಟಿಬೆಳೆದು ಅನುಭವಿಸಿದ್ದನ್ನೇ ತನ್ನ ಮಗಳ ಮೇಲೂ ಹೇರುತ್ತಾಳೆ. ಮಗಳು ಕ್ರಮೇಣ ಪ್ರಸ್ತುತ ವ್ಯವಸ್ಥೆಯನ್ನು ಅಂದರೆ ಪುರುಷ–ಪ್ರಧಾನ ವ್ಯವಸ್ಥೆಯನ್ನು ತನಗೂ ತಿಳಿಯದಂತೆ ಒಪ್ಪಿಕೊಂಡು ಬಿಡುತ್ತಾಳೆ. ಅವಳ ಮೇಲೆ ಹೇರಲ್ಪಟ್ಟ ಮೌಲ್ಯಗಳೆಲ್ಲ ಅವಳ ತಾಯಿಯವು, ಅಂದರೆ ತಂದೆಯವು. ಹೇಗೆಂದರೆ ಈ ಎಲ್ಲ ಹೆಣ್ಣುಗಳೂ 'ಗಂಡ'ನನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳುವುದು, ಅನುಸರಿಸಿಕೊಂಡಿರುವುದು ಅನಿವಾರ್ಯವಾಗಿದೆ. ತಂದೆಯ ಮೌಲ್ಯ ಅವನ ಸ್ವಂತದವಲ್ಲ; ಮನೆಯಲ್ಲಿ ರೂಢಿಯಾದವುಗಳು. ರೂಢಿಗತ ಮೌಲ್ಯಗಳಿಗೆ ಮೂಲವಾದದ್ದು ಈ ಸಾಮಾಜಿಕ ವ್ಯವಸ್ಥೆ.

ಭಾರತದಲ್ಲಿ ಹೆಣ್ಣು ಮನಸ್ಸು ಮುಂಚ್ಯೆ, ಬೆಳಕಿಗೆ ಸಿಕ್ಕಿ ಇರುವಂತೆ ದೇಶ ವಿದೇಶಗಳಲ್ಲೂ ಇದ್ದದ್ದೇ. ಹೆಣ್ಣು ಅವಳ ಭಾವನೆ, ಚಿಂತನೆ ಮತ್ತು ಒಟ್ಟು ಅವಳ ಸುತ್ತಲಿನ ಸಾಮಾನ್ಯ ಪರಿಸರದಿಂದ ನಿರ್ದೇಶಿಸಲ್ಪಡುವುದು ಹಾಗೂ ಮನೆಯಂಥ ವಿಶಿಷ್ಟ ಪರಿಸರದಿಂದ ಸ್ಪಷ್ಟೀಕರಿಸಲ್ಪಡುವುದು ಅನಿವಾರ್ಯವಾಗಿದೆ. ಇಂದು ಈ ಪರಿಸರ ನಿನ್ನೆ ಇದ್ದದ್ದು, ಮೊನ್ನೆಯೂ ಇದ್ದದ್ದು. ಅಂದರೆ ಯಾವತ್ತು ಪ್ರತಿಶತ ಅರ್ಧಕ್ಕೂ ಮಿಕ್ಕ ಜನ ಊಳುವುದಕ್ಕೆ ಆರಂಭಿಸಿದರೋ ಅಂದಿನಿಂದ. ಕ್ರಮೇಣ ಉತ್ಪ–ಬೆಳೆದದ್ದು. ತಿಂದು ಉಳಿದದ್ದು ಹೆಚ್ಚುವರಿ ಉತ್ಪನ್ನವಾಯಿತು. ಈ ಹೆಚ್ಚುವರಿ ಉತ್ಪನ್ನದ ಮೇಲೆ ಕೆಲವೇ ಕೆಲವು ಜನರು ತಮ್ಮ ಪ್ರಭುತ್ವ ಸ್ಥಾಪಿಸಿದರು. ಹೀಗೆ ಆಸ್ತಿಯ ಪ್ರಭುತ್ವ ಹೊಂದಿದ ಪ್ರಭುಗಳು ಲಕ್ಷಾಗಟ್ಟಲೆ ಉಳುವವರನ್ನು ತಮ್ಮ ಮೌಲ್ಯಗಳ ಒಳಗೆ ಅಳವಡಿಸಿಕೊಂಡರು. ಪ್ರಭುವಿನ ಮೌಲ್ಯಗಳು ಗುಲಾಮನ ಮೌಲ್ಯಗಳಾದವು. ಇದು ಮನೆಯ




★ ಹೇಮಾ, ಧಾರವಾಡ

ಹೊರಗಿನ ಸ್ಥಿತ್ಯಂತರ.

ಮುಂದೆ ತನ್ನ ಆಸ್ತಿ, ಹೆಸರು ತನ್ನಿಂದ ತಾನು ರಕ್ತ–ಮಾಂಸ ಕೊಟ್ಟವರಿಗೇ ಹೋಗಬೇಕಾದದ್ದು ಅನಿಸಿದ್ದರಿಂದ ಮಕ್ಕಳಾರೈಕೆಗೆ ಹೆಚ್ಚಿನ ಗಮನವೀಯಲಾಯಿತು. ಮನೆಯ ಒಳಗಿನ ಉಸ್ತುವಾರಿಯನ್ನೆಲ್ಲ ಹೆಣ್ಣಿಗೆ ಒಪ್ಪಿಸಲಾಯಿತು. ನೈಸರ್ಗಿಕವಾಗಿ ಕೆಲವು ಹೆಚ್ಚಿನ ಜವಾಬ್ದಾರಿಗಳೂ ಹೆಣ್ಣಿಗಿರುವುದು ಇದಕ್ಕೆ ಇನ್ನೊಂದು ಕಾರಣವಾಯಿತು. ಕಾಲಕ್ರಮೇಣ ಮನೆಗೆಲಸ, ಮಕ್ಕಳಾರೈಕೆ ಮಾತ್ರ ಅವಳಿಗಾಗಿ ತೀರ್ಮಾನಿಸಲ್ಪಟ್ಟವು. ಇಂದು ಭಾರತದಲ್ಲಿ ಇದು ಸುಂದರವಾದ ಆದರ್ಶದ ಹೆಸರಿನಲ್ಲಿ ಪ್ರಶಂಸಿಸಲ್ಪಡುತ್ತಿದೆ. ಮತ್ತು ಆ ಕೆಲಸಗಳಲ್ಲಿ ಇರುವ ನಿಜವಾದ ಬಿಂಕಿಗಳು ಗಣನೆಗೆ ಬಾರದ ರೀತಿಯಾಗಿವೆ. **ಮೃದುವಾಗಿರುವುದು. ಅಂಜಿಕೆಯ ಸ್ವಭಾವ ರೂಢಿಸಿಕೊಳ್ಳುವುದು, ವಿನಯ ವಿಧೇಯತೆಗಳನ್ನು ಹೊಂದಿರುವುದು, ಗಂಡನ್ನೇ ಅವಲಂಬಿಸಿರುವುದು ಒಂದು ಹೆಣ್ಣಿನ ಯೋಗ್ಯ ಮತ್ತು ಅತ್ಯವಶ್ಯ ರೀತಿ ಎಂದು ತಿಳಿಯಲ್ಪಟ್ಟವೆ. ಹೆಣ್ಣು ಗಂಡನ್ನು ಹೆಚ್ಚೆಚ್ಚು ಅವಲಂಬಿಸಿದಾಗ ಅವಳಲ್ಲಿ 'ಹೆಣ್ಣುತನ' ಗುರುತಿಸಲ್ಪಡುವುದು, ವರ್ಣಿಸಲ್ಪಡುವುದು ಹೆಚ್ಚಾಗುತ್ತದೆ.** ಹೆಣ್ಣಿನ ಸಾಮಾಜಿಕ ಮಾನ್ಯತೆ, ಘನತೆ, ಅವಳ ಗಂಡನ ಸಾಮಾಜಿಕ ಸ್ಥಾನಮಾನಗಳನ್ನವಲಂಬಿಸಿದೆ. ಒಟ್ಟಿನಲ್ಲಿ ಹೆಣ್ಣು ಎಲ್ಲದರಲ್ಲೂ ಪರತಂತ್ರ (Parasite) ಆಗಿ 'ಮರ್ಯಾದೆ'ಯ ಮುಸುಕಿನಲ್ಲಿ ಮನೆಯ ಒಳಗೆ ಉಳಿದಂತೆ ಗಂಡು ಮನೆಯ ಹೊರಗೆ ಮಾತ್ರ ದುಡಿಯ ತೊಡಗಿದ. ಹೀಗೆ ಲಿಂಗಭೇದ ದುಡಿಮೆ (Division of labour on the basis of sex) ಆರಂಭವಾಯಿತು. ಪುರುಷ ಪ್ರಧಾನತೆಗೆ ಮೂಲವಾದ ಮತ್ತು ಹೆಚ್ಚು ಸತ್ಯವಾದ ಕಾರಣ ಈ ಲಿಂಗಭೇದ ದುಡಿಮೆ. ಮೊದಲಲ್ಲಿ ಆರ್ಥಿಕ ವ್ಯವಸ್ಥೆ, ಕ್ರಮೇಣ ತಾನೇ ತಾನಾಗಿ ಸಾಮಾಜಿಕ, ರಾಜಕೀಯ–ಹೀಗೆ ಎಲ್ಲವೂ ಪುರುಷನ ಕೈಸೇರಿತು. ಅವನು ತನ್ನ ಅನುಕೂಲಕ್ಕೆ ತಕ್ಕ ಮೌಲ್ಯಗಳನ್ನು ಗಡ್ಡಾಯವಾಗಿ ಹೆಣ್ಣಿನ ಮೇಲೆ ಹೊರಿಸಿ, ಅವಳು ಅವುಗಳಿಂದ ತಪ್ಪಿಸಿಕೊಳ್ಳಲಾರದಂತೆ ಎಚ್ಚರಿಕೆ ವಹಿಸಿ, ತನ್ನ ಪ್ರಭುತ್ವವನ್ನು ಸ್ಥಾಪಿಸಿ ದೃಢಪಡಿಸಿಕೊಂಡ.

ಸದ್ಯ ವರ್ಗಸಮಾಜ ಮತ್ತು ಊಳಿಗ ಮಾನ್ಯ ಪದ್ಧತಿ– ಬಂಡವಾಳಶಾಹಿ ಪದ್ಧತಿ ಕೈ ಕೈ ಹಿಡಿದು ನಿಂತ ಬದುಕು ನಮ್ಮೆಲ್ಲರದು. ಊಳಿಗ ಮಾನ್ಯ ಪದ್ಧತಿಯಲ್ಲಿ ಹೆಣ್ಣು ಗಂಡಿನ ಆಸ್ತಿ ರಕ್ಷಣೆಗೆ

ಅನುಗುಣವಾಗುವಂತೆ ತನ್ನ ಇರುವಿಕೆಯನ್ನು ರೂಢಿಸಿಕೊಂಡಳು. ಬಾಲ್ಯ ವಿವಾಹ ಒಪ್ಪಿಕೊಂಡಳು; ಆರ್ಥಿಕ, ಸಾಮಾಜಿಕ ವಿವಿಧ ಹಕ್ಕುಗಳಿಲ್ಲದೇ ನಿಜವಾಗಿ ಬದುಕಲು ಬೇಕಾದ ಭಾವನಾ ಸ್ವಾತಂತ್ರ್ಯವನ್ನೂ ಕಳೆದುಕೊಂಡಳು.

ಲಿಂಗಭೇದ ದುಡಿಮೆಗೆ ಪೂರಕವಾದ ಈ ಸಾಮಾಜಿಕ ವ್ಯವಸ್ಥೆಗೆ ಕಾರಣವನ್ನು ಕೆದಕಿದರೆ ಎಲ್ಲ ಘೋರವಾದ, ಕ್ರೂರವಾದ, ಅಮಾನುಷ, ಹೇಸಿಕೆಯ ವಿಧಿ-ವಿಧಾನಗಳು ಗೋಚರಿಸುತ್ತವೆ. ಇಂದಿನ ಬಂಡವಾಳಶಾಹಿ ವ್ಯವಸ್ಥೆಯಲ್ಲಿ 'ಅಂತಾರಾಷ್ಟ್ರೀಯ ಮಹಿಳಾವರ್ಷ'ವೆಂದು ಬಣ್ಣ ಹಚ್ಚಿ ಹಾರಾಡಿ ಹಾಡಿ-ಹಬ್ಬ ಮಾಡಿದರೂ ಪುರುಷ ಪ್ರಧಾನತೆಯನ್ನು ಅಲ್ಲಾಡಿಸಲಾಗಿಲ್ಲ. ಈಗ ಮಹಿಳೆಯರಿಗೆ ಉದ್ಯೋಗಾವಕಾಶ ಕೊಡಲ್ಪಟ್ಟಿದೆ ಎಂದರೆ ರಸ್ತೆಗಳ ಮೇಲೆ ಓಡಾಡುವ ಹಕ್ಕು ಇದೆ ಎಂಬುದು ಒಂದೇ ಆಗುತ್ತದೆ. ಉದ್ಯೋಗದಲ್ಲಿರುವ ಮಹಿಳೆಯರ ಸಂಖ್ಯೆಯೋ ಅಲ್ಪ ಪ್ರಮಾಣದ್ದು ಎಂಬುದು ಎಂಥವರಿಗೂ ಗೊತ್ತಿರುವುದೇ. ಎಲ್ಲೋ ಒಬ್ಬ ಸಚಿವೆ, ಒಬ್ಬ ಕುಲಪತಿ, ಎಲ್ಲಾ ಹೆಂಗಸರ **ಒಟ್ಟು ಬಂಧ-ವಿಮೋಚನೆಯ ದ್ಯೋತಕ ಅಲ್ಲ. ಅದೇ ಗುರಿ ಎಂಬಂತೆ ಬಣ್ಣ ತೋರುವುದು ಬಂಡವಾಳಶಾಹಿ ಸಮಾಜದ ಬೆಳದಿಂಗಳಂತೆ ಕಾಣಿಸಿ ಕತ್ತಲು ಮೂಡಿಸುವ ಕುತಂತ್ರ.**

ಇಂಥ ವ್ಯವಸ್ಥೆಯಲ್ಲಿ ಗಂಡಿನ ದುಡಿಮೆಯಿಂದ ಉತ್ಪಾದಿಸಲ್ಪಡುವ ಎಲ್ಲ ಸಾಮಗ್ರಿಗಳ ಮೇಲಿನ ಸ್ವಾಮ್ಯ ಪಡೆದಿರುವ ಭೂ ಮಾಲೀಕರ (Manopolist Landlords) ಸ್ವಂತ ಮಜಗಳ ರಕ್ಷಣೆಗಾಗಿ ಹೆಣ್ಣಿಗೆ ವಿಶಿಷ್ಟ ಕಾರ್ಯಗಳು ನಿಯಮಿಸಲ್ಪಟ್ಟಿವೆ. ಗಂಡು ತನ್ನ ದುಡಿಮೆ ಶಕ್ತಿಯನ್ನು ಪ್ರತಿದಿನ ಮಾರಿಕೊಳ್ಳುತ್ತಾನೆ. ಆ ಉತ್ಪಾದನೆ ಬಂಡವಾಳಿಗರ ಕೈಸೇರುತ್ತದೆ. ಮತ್ತೆ ಆ ಪ್ರತಿದಿನ ಅವನ ದುಡಿಮೆ ಶಕ್ತಿಯ ಪುನರುತ್ಪಾದನೆ ಆಗಬೇಕಾಗುತ್ತದೆ. ಅವನಿಗೆ ಬೇಕಾಗುವ ಆಹಾರ, ಬಟ್ಟೆಗಳ ಜೊತೆಗೆ ಅವನ ಮತ್ತು ಅವನ ಕೆಲಸದ ನಡುವಿನ ಪರಕೀಯತೆಯಿಂದಾದ ಎಲ್ಲಾ ನಿರಾಶೆ, ಆಳ-ಆಳಕ್ಕೆ ತುಂಬಿ ನಿಂತ ನೋವು, ಅತೃಪ್ತಿ, ಮಾನಸಿಕ ಖಿನ್ನತೆ (depression)ಗಳನ್ನು ದೂರಮಾಡಿ, ನಾಳೆ ಅವನನ್ನು ಹೊಸ ದುಡಿಮೆ ಶಕ್ತಿಯೊಂದಿಗೆ ಉತ್ಪಾದನಾ ಚಟುವಟಿಕೆಯಲ್ಲಿ ಪಾಲುಗೊಳ್ಳಲು ಕಳಿಸುವ ಕೆಲಸ ಮನೆಯೊಳಗೆ ಇರುವ ಹೆಣ್ಣಿನದು. ಇದು ಕೆಲವೇ ಕೆಲವು ಜನರ ಒಳಿತಿಗೆ ವರ್ಗ ಸಮಾಜವು ರೂಪಿಸಿಕೊಂಡ ವ್ಯವಸ್ಥೆ. ಇಲ್ಲಿ ದುಡಿಮೆಗಾರರೇ ಹೆಚ್ಚು ತುಂಬಿರುವುದರಿಂದ ಅವರು ಪರಸ್ಪರ ತಮ್ಮ ತಮ್ಮ ಕಷ್ಟ-ಸುಖಗಳ ಬಗ್ಗೆ ಸಮಾಧಾನಪಡಿಸಿಕೊಳ್ಳುತ್ತಿರುತ್ತಾರೆ. ಇದು ಮಾನವನ ಸ್ವಭಾವ. ಆದರೆ ಇದನ್ನೆಲ್ಲ ನಿಯೋಜಿಸಿ ದೂರದಲ್ಲಿ ಕುಳಿತಿರುವ ಬಂಡವಾಳಿಗರನ್ನು ಎಂದೂ. ಒಂದು ಬಾರಿಯಾದರೂ 'ಯಾಕೆ ನೀವು ನಮ್ಮ ಬದುಕಿನ ಮೌಲ್ಯಗಳನ್ನು ನಿರ್ಧರಿಸುತ್ತೀರಿ? ಎಂದಾಗಲೀ, ನಮ್ಮ ದುಡಿಮೆಯ ಉತ್ಪಾದನೆ ನಮಗೆ ಸೇರಬೇಕಾದದ್ದು . ಎಂದಾಗಲೀ ಹೇಳುವುದಿಲ್ಲ. ಕೇಳುವುದಿಲ್ಲ.

ಲಿಂಗಭೇದ ದುಡಿಮೆ ಇಲ್ಲದಾಗುವ ತನಕ ಹೆಣ್ಣು ಗಂಡಿನ ಪ್ರಭುತ್ವಕ್ಕೂ ಹಾಗೂ ಈ ಗಂಡು ಮತ್ತು ಹೆಣ್ಣುಗಳು ಕೂಡಿಯೇ ವರ್ಗ ಸಮಾಜವನ್ನು ನಿರ್ಮಿಸಿ ಸುಖ ಉಪಭೋಗಿಸುವವರ ಪ್ರಭುತ್ವಕ್ಕೂ ಒಳಗಾಗಿರಲೇಬೇಕು. ಹತ್ತಿರದಲ್ಲಿ ಪುರುಷ ಪ್ರಭುತ್ವದಿಂದಾಗಿ ತನ್ನ ಅಸ್ತಿತ್ವವನ್ನೇ ಕಾಣದೆ ಮತ್ತು ದೂರದಲ್ಲಿರುವ ಇದರ ನಿಜವಾದ ಮೂಲಧಾತುವನ್ನು ಕಂಡು, ಗುರುತಿಸಿ ಅದನ್ನು ಮೆಟ್ಟಿ ನಿಲ್ಲುವ ದಿಸೆಯಲ್ಲಿ ಮಹಿಳೆಯರ ಅಥವಾ ಪುರುಷರ ಪ್ರಯತ್ನ ಆಗಿಯೇ ಇಲ್ಲ.

ಹೆಣ್ಣು ಹುಟ್ಟುತ್ತಲೇ ಪರದೇಶಿ. ಅಂದರೆ ಪರರ ಸೊತ್ತು! ಗಂಡಿನ ಸೊತ್ತು: ಇಲ್ಲಿರುವ ಸ್ವಂತ ಆಸ್ತಿ ಒಡೆತನದ (private property ownership) ವ್ಯವಸ್ಥೆಯಲ್ಲಿ ಮನೆಯಲ್ಲಿ ಕೂಡಿಹಾಕಲ್ಪಡುವ ಹೆಣ್ಣು ಕೂಡ ಗಂಡಿನ ಸ್ವಂತ ಆಸ್ತಿ ಎಂದು ಪರಿಗಣಿಸಲ್ಪಟ್ಟಿದ್ದಾಳೆ. ಸ್ವಂತ ಆಸ್ತಿ ಅಂದಕೂಡಲೆ ಅದರ ಒಡೆತನ, ಸರ್ವಾಧಿಕಾರ, ಅದನ್ನು ಅನುಭವಿಸುವ, ಬಿಡುವ, ಇಷ್ಟಬಂದಂತೆ ಅಳವಡಿಸಿಕೊಳ್ಳುವ ಹಕ್ಕು ಗಂಡಿಗೆ ನೀಡಲ್ಪಟ್ಟಂತಾಗಿದೆ. ಒಂದು ಮನಸ್ಸಿನ ಭಾವನೆ ಆಕಾಂಕ್ಷೆ, ವಿಚಾರಗಳನ್ನು ಲಕ್ಷಿಸದಿರುವ ಅಮಾನವೀಯತೆ ಗಂಡಿನದು. ಇಂಥವರು-ತಮ್ಮ ತಲೆಯನ್ನು ಅಧಿಕಾರಶಾಹಿಗಳ (Fascist) ಬಾಡಿಗೆ ಮೌಲ್ಯಗಳಿಂದ ತುಂಬಿಕೊಂಡಿರುವ ಗಂಡುಗಳು ಹೆಣ್ಣನ್ನು ಕಾಣುವ ದೃಷ್ಟಿ ಸೀಮಿತವಾಗಿದೆ-ಹೆಣ್ಣು ಮದುವೆಯಾಗಲು, ಮಕ್ಕಳನ್ನು ಹೊರಲು, ಹೆರಲು, ಪೋಷಿಸಲು ಮಾತ್ರ. ಅದಕ್ಕೆ ಪೂರಕವಾದ ಕಾಮ ಅಷ್ಟೇ ಅವಳಿಂದ ನಿರೀಕ್ಷಿಸಲ್ಪಡುತ್ತದೆ. ಹೀಗೆ ಅವಳು ಕಾಮ ಸಾಧನ (Sen object)ಮಾತ್ರವಾಗಿದ್ದಾಳೆ. ಇದಕ್ಕೆ ತದ್ವಿರುದ್ಧವಾಗಿ ಅಮೇರಿಕಾದ ಮಹಿಳಾ ವಿಮೋಚನಾ ಚಳುವಳಿಯ ಮಹಿಳೆಯರು ಗಂಡಸರನ್ನು ಕಾಮ ಸಾಧನ ಎಂದು ಗಣಿಸಿ ಕಾಮ ಸಂಕೇತಗಳನ್ನು ಸುಟ್ಟು, ಅಬ್ಬರಿಸಿ ಹಾರಾಡಿದ್ದು ಈ ಸಮಸ್ಯೆಗೆ ಪರಿಹಾರವಾಗಲಾರದು.

**ಹೆಣ್ಣಿಗೆ ಗಂಡೇ ಸರ್ವಸ್ವ ಎಂದು ಚಿಕ್ಕಂದಿನಿಂದಲೂ ಹೇಳಿಕೊಡುವುದರಿಂದ ಅವಳು ತನ್ನನ್ನು ತಾನು ಗಂಡಿಗೆ ಮುಡಿಪು ಮಾಡಿಕೊಳ್ಳಬೇಕೆಂಬ ಏಕಮಾತ್ರ ಅನಿಷ್ಟ ಇಚ್ಛೆಯನ್ನು ತನ್ನೆಲ್ಲ ಭಾವನಾತ್ಮಕತೆಯಿಂದ ಪೋಷಿಸಿಕೊಳ್ಳುತ್ತಾಳೆ.** ಹೀಗಾಗಿ ಹೆಣ್ಣಿಗೆ ತಾನು ಗಂಡಿನ ಆಕರ್ಷಣೆಯ ಮೂಲ (ನಿಜವಾದ ಅರ್ಥದಲ್ಲಿ ಕಾಮಸಾಧನವೇ) ಆಗಬೇಕೆನಿಸುವುದರೊಂದಿಗೆ ಗಂಡು ಅವಳಿಗೂ ಕಾಮ ಕುತೂಹಲವಾಗಿ ಬಿಡುತ್ತಾನೆ. ಇಂಥ ಅರ್ಥಹೀನ ಭಾವನಾತ್ಮಕ ಸಮರ್ಪಣೆ ಗುಲಾಮಗಿರಿ ಮೌಲ್ಯಗಳಿಂದ ಪ್ರೇರೇಪಿಸಲ್ಪಡುತ್ತದೆ. ಅಂತೆಯೇ ಈಗ ಸಮತಾಸ್ಥಿತಿಯ ಸಮರ್ಪಣಾ ಭಾವದ ಪ್ರೇಮ, ಕಾಮ ಕಾಣದಂತಾಗಿದೆ.

ಸಾಮಾನ್ಯವಾಗಿ ಹದಿವಯ(Teena ge)ದಲ್ಲಿ ಹುಡುಗ ಹುಡಿಗಿಯರು ಒತ್ತಾಯ ಪೂರ್ವಕವಾಗಿ ಬೇರ್ಪಡಿಸಲ್ಪಡುತ್ತಾರೆ. ಕೆಲವೊಮ್ಮೆ ಸಹಜ ಸ್ನೇಹ ಪರಸ್ಪರ ಮಾತಾಡುವುದು ಸಹ ತಪ್ಪಾಗಿ ಬಿಡುತ್ತವೆ. ಹೆಣ್ಣು ತನ್ನ ಗಂಡನನ್ನು ತಾನೇ ಆರಿಸಿಕೊಳ್ಳಲು, ಒಪ್ಪಿಕೊಳ್ಳಲು ಆಸ್ಪದವೇ ಇಲ್ಲ. ಈ ಸಹಜ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವುದರ ಮುಖಾಂತರ ಜಾತಿವ್ಯವಸ್ಥೆಯನ್ನು ಭದ್ರಪಡಿಸಲಾಗಿದೆ. ಸ್ವಾತಂತ್ರ್ಯ ಕೊಟ್ಟ ಮಾತ್ರಕ್ಕೆ ಜಾತಿವ್ಯವಸ್ಥೆ ಹೇಳ ಹೆಸರಿಲ್ಲದೇ ಹೋಗುವುದೆಂದಲ್ಲ.

ಇಂದು ಅಮೇರಿಕೆಯಂಥ ಮುಂದುವರೆದ ಪಾಶ್ಚಾತ್ಯ ದೇಶಗಳಲ್ಲಿ ಸಹ ಗಂಡು-ಹೆಣ್ಣಿನ ಸಮಾನತೆಗೆ ಅಷ್ಟೊಂದು ಪ್ರಾಮುಖ್ಯತೆಯನ್ನೀಯದಿರುವುದು ಸೋಜಿಗದ ಸಂಗತಿ. ಈ ಸಾಮಾಜಿಕ ಬದಲಾವಣೆ ಸಾಧ್ಯವಾಗದಿರುವುದಕ್ಕೆ ಮುಖ್ಯ ಕಾರಣ-ಸಮಾಜ

ರಚನೆ ಬಂಡವಾಳಶಾಹಿ ವ್ಯವಸ್ಥೆಯಿಂದ ಕೂಡಿದ್ದು ಅಲ್ಲಿಯ ಉತ್ಪಾದನೆಯು ಅವಲಂಬಿಸಿದ ಮುಖ್ಯ ಅಂಶಗಳೆಂದರೆ–ಸ್ಪರ್ಧಾತ್ಮಕತೆ, ಲಾಭದಾಸೆ, ಏಕ ಸ್ವಾಮಿತ್ವ ಹಾಗೂ ಆನುವಂಶಿಕ ಆಸ್ತಿ. ಇಂಥ ವ್ಯವಸ್ಥೆಯಲ್ಲಿ ಅನೇಕ ಅನ್ಯಾಯ, ಅತ್ಯಾಚಾರ ಗಳೊಂದಿಗೆ ಹೆಣ್ಣಿನ ಶೋಷಣೆಯೂ ಪ್ರಧಾನವಾಗಿ ಕಂಡು ಬರುತ್ತದೆ.

**ಸಾಮಾನ್ಯವಾಗಿ ಸಾಮಾಜಿಕ ಅರಿವು ಇಲ್ಲದಿರುವುದರಿಂದ ಭಾರತದಲ್ಲಿ ಶಿಕ್ಷಿತ ಮಹಿಳೆಯರನ್ನು ಒಳಗೊಂಡು ಅತ್ಯಧಿಕ ಸಂಖ್ಯೆಯ ಮಹಿಳೆಯರು ತಮ್ಮ ಸೃಜನಾತ್ಮಕತೆಯನ್ನು ಕ್ಷುಲ್ಲಕ ಆಡಂಬರ ಒಣ ಜಂಭ, ಸೋಗು ಇತ್ಯಾದಿಗಳಲ್ಲಿ ಹಾಳು ಮಾಡುತ್ತಾರೆ.** ಗಂಭೀರ,ವೈಚಾರಿಕ ಸಮಸ್ಯೆಗಳನ್ನು ಗುರುತಿಸುವ, ಅಭ್ಯಸಿಸುವ ಪರಿಪಾಠವಾಗಲೀ, ಅದರ ಅವಶ್ಯಕತೆಯಾಗಲೀ ಅವರಿಗೆ ಕಂಡು ಬರುತ್ತಿಲ್ಲ. ತಮ್ಮ ಈ ಅಕ್ಷಮ್ಯ ನ್ಯೂನತೆಯನ್ನು 'ತಾಳ್ಮೆ', 'ಸಹನೆ'ಗಳ ಹೆಸರಿನಲ್ಲಿ ಮರೆಮಾಡಿ ಪ್ರಶಂಸಿಸಲ್ಪಡುತ್ತಾರೆ. ಹೀಗೆ ಹೊಗಳುವ ಗಂಡಸರು ಹೆಂಗಸರ ದುರ್ಬಲತೆಯನ್ನು ಇನ್ನೂ ಹೆಚ್ಚಿಸುತ್ತಾರೆ. ಇದರ ಅರಿವು ಹೊಂದಿದ ಮಹಿಳೆಯರು ಸಹ ಬೇಕಾದದ್ದಕ್ಕಾಗಿ ಸಿಡಿದೇಳುವುದಕ್ಕಿಂತ ಇದ್ದುದನ್ನು ಒಪ್ಪಿಕೊಳ್ಳುವುದು ಒಳ್ಳೆಯದು ಅನ್ನುವ ತಪ್ಪು ಅಭಿಪ್ರಾಯ ಒಪ್ಪಿರುವುದರಿಂದಲೇ ಈ ವ್ಯವಸ್ಥೆ ಇನ್ನೂ ಗಟ್ಟಿಯಾಗುತ್ತಿದೆ.

ಇಷ್ಟು ದಿನಗಳವರೆಗೆ ಹೆಣ್ಣಿಗಿಂತ ಗಂಡಿಗೆ ಹೆಚ್ಚಿನ ದೈಹಿಕ ಶಕ್ತಿಯಿದೆ ಎಂದುಕೊಂಡಿರುವುದು ನಿರಾಧಾರವಾದದ್ದು ಹಾಗೂ ಅಸತ್ಯವಾದದ್ದು ಎಂದು ಇಂದಿನ ವಿಜ್ಞಾನ ಪ್ರಮಾಣೀಕರಿಸಿದೆ. ಅಂಗವಿಕಲತೆ ಮತ್ತು ಕಠಿಣ ಪರಿಸ್ಥಿತಿಗಳನ್ನು ಎದುರಿಸುವಲ್ಲಿ ಅಸ್ಥಿರ್ಯತೆ ಹೆಣ್ಣಿಗಿಂತ ಗಂಡಿನಲ್ಲೇ ಹೆಚು ಅನ್ನುವುದು ಸ್ಪಷ್ಟವಾಗಿದೆ. ಈ ಮಾತು ಜೀವನದ ಪ್ರತಿಯೊಂದು ಹಂತಕ್ಕೂ ಅನ್ವಯಿಸುವುದಲ್ಲದೇ ಬಾಲ್ಯಾವಸ್ಥೆಯಲ್ಲಿ ಗುರುತರವಾಗಿರುತ್ತದೆ. ಒಂದೇ ಪರಿಸರ (Environment) ದಲ್ಲಿ ಗಂಡು, ಹೆಣ್ಣುಗಳ ಮೇಲೆ ನಡೆಸಿದ ಪ್ರಯೋಗಗಳು ಈ ಸತ್ಯವನ್ನು ಬೆಳಕಿಗೆ ತಂದಿವೆ. ಸಾಹಿತ್ಯದೊಂದಿಗೆ ಹೋಲಿಸಿ ಹೇಳುವುದಾದರೆ ವಿಜ್ಞಾನವು ಹೆಣ್ಣನ್ನು ಮುಕ್ತಗೊಳಿಸುವ ದಿಸೆಯಲ್ಲಿ ಅರಿವು ಮೂಡಿಸಲು ಹೆಚ್ಚು ಸಹಾಯಮಾಡುತ್ತಿದೆ.

**ಒಟ್ಟಿನಲ್ಲಿ ಸಮಾಜ ಹೆಣ್ಣನ್ನು ನೋಡುವ ದೃಷ್ಟಿ ಅಂದರೆ ಒಂದು ಗಂಡು ಹೆಣ್ಣನ್ನು ನೋಡುವ ದೃಷ್ಟಿ ಮತ್ತು ಒಂದು ಹೆಣ್ಣು ಹೆಣ್ಣನ್ನು ನೋಡುವ ದೃಷ್ಟಿ ಮುಖ್ಯವಾಗಿ ಸಂಕುಚಿತವಾಗಿರುವುದಕ್ಕೆ ಅಧೋಗತಿಗಿಳಿದಿರುವುದಕ್ಕೆ ಗಂಡು ಅಥವಾ ಹೆಣ್ಣು ಕಾರಣವಾಗಿಲ್ಲ; ಈ ಸಾಮಾಜಿಕ ವ್ಯವಸ್ಥೆ (Social Conditioning) ಕಾರಣವಾಗಿದೆ.**

ಸ್ವತಂತ್ರ ಹಾಗೂ ಜಾತ್ಯಾತೀತ ರಾಷ್ಟ್ರವಾದ [illegible]ದಲ್ಲಿ ಹೆಣ್ಣು–ಗಂಡುಗಳಿಗೆ, ಅಲ್ಪ ಸಂಖ್ಯಾತರಿಗೆ ಬೇರೆ ಬೇರೆ ಕಾಯ್ದೆಗಳಾಗಿರುವುದು ಆಶ್ಚರ್ಯಕರ ಹಾಗೂ ಅಸಂಬದ್ಧ. ವಿವಾಹ ವಿಚ್ಛೇದನ, ಆಸ್ತಿ ಹಕ್ಕುಗಳಲ್ಲಿಯಂತೂ ಈ ವೈಷಮ್ಯ ಅಧಿಕವಾಗಿ ಕಂಡುಬರುತ್ತದೆ. ಹೆಣ್ಣಿನ ಸ್ಥಿತಿಯನ್ನು 'ಸುಧಾರಿಸುವ' ದೃಷ್ಟಿಯಿಂದ ಕಾಯ್ದೆಗಳಲ್ಲಿ ಸ್ವಲ್ಪ ಮಟ್ಟಿಗೆ ಬದಲಾವಣೆಯೇನೋ ಆಗಿದೆ ನಿಜ. ಆದರೆ ಅದೆಲ್ಲ ಕಾಗದದಲ್ಲಿ ಮಾತ್ರ ಉಳಿದದ್ದು ಸ್ಪಷ್ಟವಿದೆ. ಕಡ್ಡಾಯ ಸಾಕ್ಷರತೆ ವಾಸ್ತವಿಕ ಸತ್ಯವಾಗುವವರೆಗೆ ಸದ್ಯದ ರೀತಿಯಲ್ಲಿ ಕಿಂಚಿತ್ತೂ ಬದಲಾವಣೆ ಆಗುವುದಿಲ್ಲ. ಈ ವಿಷಯದಲ್ಲಿ ಸರಕಾರ ಒಂದು ಯೋಜನೆಯನ್ನು ರೂಪಿಸಿಕೊಂಡು ಅದನ್ನು ಕಾರ್ಯಗತ ಮಾಡುವುದು ಉತ್ತಮ. ಕಡ್ಡಾಯ ಸಾಕ್ಷರತೆ ಅಂದರೆ ಕೇವಲ ಅಕ್ಷರಜ್ಞಾನ ಮಾತ್ರವಾಗಿರದೇ ಶಿಕ್ಷಣ ಧ್ಯೇಯವಾಗಿರಬೇಕು. ಅಂದಾಗ ಅನ್ಯರನ್ನು ಅವಲಂಬಿಸುವ ಅವಶ್ಯಕತೆ ಕಡಿಮೆಯಾಗುವುದು. ಅಲ್ಲದೆ ಸಹಜವಾಗಿ ಹೆಣ್ಣಿನಲ್ಲಿ ಜೀವನ ಹಾಗೂ ಜಗತ್ತಿನ ಬಗ್ಗೆ ವ್ಯಾವಹಾರಿಕ ದೃಷ್ಟಿ ಬೆಳೆಯುತ್ತದೆ.

ಹೆಣ್ಣು ದೈಹಿಕವಾಗಿ, ಮಾನಸಿಕವಾಗಿ ಗಂಡಿಗೆ ಸಮಾನವಾದ ಸಾಮರ್ಥ್ಯ ಹೊಂದಿರುವುದರಿಂದ ಅವಳು ಯಾವುದೇ ಕ್ಷೇತ್ರದಲ್ಲೂ ಗಂಡಿಗೆ ಸಮನಾಗಿ ದುಡಿಯಬಲ್ಲಳು. ಆದುದರಿಂದ ಅವಳಿಗೂ ಸಮಾನ ಉದ್ಯೋಗಾವಕಾಶ ದೊರೆಯಬೇಕು. ಹೆಣ್ಣಿಗೆ ಪ್ರತ್ಯೇಕ ಸ್ಥಳ ಕಾಯ್ದಿಟ್ಟು ಅವಳನ್ನು ಅಂತರದಲ್ಲೇ ಇಡುವ ಸ್ಥಿತಿ ಬೇಕಿಲ್ಲ. ಉದ್ಯೋಗದಿಂದ ಆರ್ಥಿಕ ಸಾಮರ್ಥ್ಯ, ಮಾನಸಿಕ ಸ್ಥೈರ್ಯ, ಸಮಾನಭಾವಗಳು ಸಹಜವಾಗಿ ವಿಕಸಿಸುತ್ತವೆ. ಜೊತೆಗೆ ಈಗ ಹೆಣ್ಣನ್ನು ಆವರಿಸಿಕೊಂಡಿರುವ ಮೂಢನಂಬಿಕೆ ಹಾಗೂ ಅವಳನ್ನು ಅವನತಿಗೆ ತಳ್ಳುತ್ತಿರುವ ಇನ್ನೂ ಅನೇಕ ಸ್ಥಿತಿಗಳು ತೆಳುವಾಗುತ್ತ, ಇಲ್ಲದಾಗುವ ಸಾಧ್ಯತೆಯನು ಅಲ್ಲಗಳೆಯಲಾಗದು.

ಮಗುವನ್ನು ಹೊರುವ, ಹೆರುವ ವಿಶೇಷ ಜವಾಬ್ದಾರಿ ಹೆಣ್ಣಿಗಿರುವುದರಿಂದ ಬೇಕಾದಾಗ ಮಕ್ಕಳನ್ನು ಪಡೆಯುವ ಹಾಗೂ ಎರಡು ಮಕ್ಕಳ ನಡುವಿನ ಅಂತರವನ್ನು ನಿರ್ಧರಿಸುವ ವಿಶೇಷ ಹಕ್ಕು ಅವಳಿಗೆ ನೀಡಲ್ಪಡಬೇಕು. ಹಾಗೆ ನೋಡಿದರೆ ಈ ಹಕ್ಕು ಅವಳಿಗೆ ದೊರೆಯುವುದರಿಂದ ಮಾತ್ರ ಉದ್ದೇಶ ಸಾಧಿಸುವದಿಲ್ಲ. ಅದಕ್ಕೆ ಜೊತೆಯಲ್ಲಿ ಗಂಡನ ಸಹಕಾರ ಬೇಕು. ಇಬ್ಬರಲ್ಲಿಯೂ ಪರಸ್ಪರ ತಿಳುವಳಿಕೆ ಇರಬೇಕು.

ಹೆಣ್ಣು ವೈಜ್ಞಾನಿಕ ದೃಷ್ಟಿಯನ್ನು ವಸ್ತುನಿಷ್ಠವಾಗಿ (Object thinking) ಯೋಚಿಸುವುದನ್ನು ರೂಢಿಸಿಕೊಳ್ಳಬೇಕು. ಇದು ಶಿಕ್ಷಣದಿಂದಲೇ ಸಾಧ್ಯ. ಒಟ್ಟಿನಲ್ಲಿ ಶಿಕ್ಷಣ, ಉದ್ಯೋಗ, ಆರ್ಥಿಕ ಸ್ವಾತಂತ್ರ್ಯ, ಸಾಮಾಜಿಕ ಸ್ಥಾನ–ಮಾನ, ಮಾನಸಿಕ ದೃಢತೆ ಒಂದಕ್ಕೊಂದು ಹಾಸು ಹೊಕ್ಕಾಗಿ ಹೆಣೆದುಕೊಂಡಿವೆ.

ಮಹಿಳಾ ವಿಮೋಚನೆ ಎಂದು ಹೇಳುವಾಗ ಸದ್ಯದ ಸ್ಥಿತಿಯ ವಿರುದ್ಧ ಸ್ಥಿತಿ ನಿರ್ಮಾಣವಾಗಬೇಕೆಂದಿಲ್ಲ. ಇದನ್ನು ಅನೇಕ ಪುರುಷರು, ಮಹಿಳೆಯರು ತಪ್ಪು ಅರ್ಥಮಾಡಿಕೊಂಡು 'ಹೆಣ್ಣು ಕಚೇರಿಗೆ ಹೋಗಲು ಶುರು ಮಾಡಿದರೆ ಗಂಡಸರು ಅಡಿಗೆ ಮನೆಯಲ್ಲಿ ಸೌಟು ಹಿಡಿಯಬೇಕಾಗುತ್ತದೆ' ಎಂದು ಚೇಷ್ಟೆ–ಧ್ವನಿಯಲ್ಲಿ ಹೇಳುತ್ತಾರೆ. ಹೆಣ್ಣಿನ ಧ್ವನಿ ಹೀಗೆ ಅಪಸ್ವರವಾಗಿರುವುದಕ್ಕೆ ಕಾರಣ ಕೆಲವು ಉಚ್ಚ ವರ್ಗದ ಮಹಿಳೆಯರ ಚಟುವಟಿಕೆಗಳು, ಮಹಿಳಾ ಮಂಡಳ, ಅಕ್ಕನ ಬಳಗ, ಯಂಗ್ ವಿಮೆನ್ಸ್‌ಕ್ಲಬ್ ಇತ್ಯಾದಿ ಸಂಘ ಕಟ್ಟಿಕೊಂಡು ಮಹಿಳೆಯರು 'ಗಂಡಸರ ದಾಸ್ಯದಿಂದ ಸಿಡಿದೇಳುವುದು' ಸ್ತ್ರೀ ಸ್ವಾತಂತ್ರ್ಯ. ವಿಮೋಚನೆ ಅಂದರೆ ಗಂಡಸರನ್ನು ಅಧೀನಪಡಿಸಿಕೊಳ್ಳುವುದು ಮುಂತಾಗಿ ಅನೇಕ ಅನರ್ಥಕಾರಿ ಭಾವನೆಗಳನ್ನು ಬಿಂಬಿಸುತ್ತಿರುವುದು ಒಟ್ಟು ಮಹಿಳಾ ವಿಮೋಚನೆಯ ಅರ್ಥವನ್ನೇ ಹದಗೆಡಿಸುತ್ತಿದೆ.

ಸದ್ಯ ಹೆಣ್ಣು–ಗಂಡುಗಳಲ್ಲಿ ನಡೆಯುತ್ತಿರುವ ಪೈಪೋಟಿ, ಘರ್ಷಣೆ ಅನಾವಶ್ಯಕವೆನ್ನುವುದನ್ನು ಇಬ್ಬರೂ ಮೊದಲು ಮನಗಾಣಬೇಕು; ಇಬ್ಬರೂ ಜೊತೆಯಾಗಿಯೇ ಸಾಮಾಜಿಕ ವ್ಯವಸ್ಥೆಯತ್ತ ತಮ್ಮ ಲಕ್ಷ್ಯವನ್ನು ಕೇಂದ್ರೀಕರಿಸಬೇಕು. ಈಗ ಅತ್ಯವಶ್ಯವಾಗಿ ಬೇಕಾಗಿರುವುದು ಸಾಮಾಜಿಕ ಬದಲಾವಣೆಯಲ್ಲ; ಆಮೂಲಾಗ್ರವಾದ ಕ್ರಾಂತಿ, ಕಾರ್ಯಗೌರವ, ಆರ್ಥಿಕ ಭದ್ರತೆ, ಸಮಾನತೆಗಳು ಬದುಕಿನ ಮೌಲ್ಯಗಳಾದರೆ ಮಾನವನ ಉನ್ನತಿಗೆ ಕಾರಣವಾಗಿ ಅದರಿಂದ ಹೆಣ್ಣಿನ ಬಂಧವಿಮೋಚನೆಯೂ ಸಾಧ್ಯವಾಗುತ್ತದೆ. ●●



ಬೆಳಕಾಗಿಸಿದ್ದೇನೆ!

ಸುತ್ತಲೂ ಎತ್ತಲೂ ಕತ್ತಲು ಗೆಳತಿ।
ನೀ ಬರುವ ಹಾದಿಯಲಿ ಬೆಳಕಾಗಲೆಂದು
ಎದೆಯ ಹಣತೆಯಲಿ ಪ್ರೇಮರಸ ಸುರಿದು
ಒಲುಮೆಯ ಬತ್ತಿ ಹೊಸೆದು ಹಣತೆಯಲಿರಿಸಿ
ವಿರಹದುನ್ನಿಗೆ ಹಿಡಿದು ಬೆಳಕಾಗಿಸಿದ್ದೇನೆ।
ಇನ್ನು ಈ ಬೆಳಕಿನಲ್ಲಿ ನೀನು ಬರುವುದೊಂದೆ ಬಾಕಿ।

ಕೆ. ಪಂಚಾಕ್ಷರಿ ಹಿರೇಮಠ

# ಕವನ ಬರೆಯುವ ಧಂಧೆ

ಹೆಜ್ಜೆ ಹೆಜ್ಜೆಗೆ ನೂರು ಕವನ-ಪಥಗಳು ತೆರೆದು
ಕವಲೊಡೆದು ನಮಗಾಗಿ ಕಾಯುತ್ತಿವೆ
ಎಂದು ಹೇಳಿದ ಭೂಪ ಮುಕ್ತಿಬೋಧ,
ವಾಹ್, ಎಂಥ ಶೋಧ !

ನನ್ನ ಮಟ್ಟಿಗೆ ಮಾತ್ರ
ಈ ಕವನ ಬರೆಯುವ ಧಂಧೆ
ದಯವಿಟ್ಟು ದಯಪಾಲಿಸಿದ ಕಷ್ಟಗಳ ಮುಂದೆ
ಎಷ್ಟೆಂದು ಹೇಳಲಿ?

ಬರೆಯುವುದಕ್ಕೆ ಕೂಡುತ್ತೇನೆ. ಬರೆಯೊಳಿದ ಹಾಗೆ
ಹೆಂಡತಿ ನಗುತ್ತಾಳೆ ದೂರುತ್ತಾಳೆ ಹತ್ತಿರದಲ್ಲಿ
ಬರುತ್ತಾಳೆ. ಮೈತುಂಬ ದೆವ್ವ
ಬಂದವರಂತೆ ನನನ್ನೆ ಎಡೆ ಹಿಡಿದು-
ಕೊಳ್ಳುತ್ತಾಳೆ. ಹಿತ್ತಲದಲ್ಲಿ
ಮಾವಿನ ಮರಕ್ಕೊರಗಿ ಮತ್ತೆ
ಕವನದ ಆ ಮತ್ತ
ಹುಡುಗಿಯ ಮುಖ ನೆನೆಸಿಕೊಳ್ಳುತ್ತೇನೆ.

ಮಗಳು, ಅವಳನ್ನೆತ್ತಿಕೊಂಡು ಅವ್ವ
ಕೆಲಸ ಇನ್ನೇನೆಂದು ಅಳು...
ನನ್ನ ದರಿದ್ರ ಹಾಳು ಮುಖಕ್ಕೆ
ಮತ್ತೆ ಪೆನ್ನಿನ ಮಸಿ ಮಾತ್ರ ಬಡಿಯುತ್ತದೆ,
ನೊಂದ ನರನರವೆ ಭೈರವಿಯ ಮಿಡಿಯುತ್ತದೆ.
ಕವನಕ್ಕೆ ನೂರು ದಾರಿಗಳುಂಟು,
ದಾರಿದಾರಿಗೆ ನೂರು ಕವಲುದಾರಿಗಳುಂಟು;
ಎಂದ ಕವಿರಾಯನಿಗೆ
ನನ್ನಂತೆ ಪ್ರಶ್ನೆಗಳ ಬಲೆ
ಎದುರು ಬಂದಿತ್ತೆ? ಇತ್ತೆ,
ತಲೆ?

ಅಂದ ಹಾಗೆ,
ಕವಿತೆ ಬರೆಯುವುದಕ್ಕೆ ತಲೆ ಬೇಕೆ ?
ನಾ ಓದಿದ ಎಷ್ಟು ಕವಿತೆಗಳಲ್ಲಿ ತಲೆ
ಇತ್ತು? ಇದೆ? ಮಸಿ. ಬರಿ ಮಸಿ. ಮುಸಿಮುಸಿ
ಹರಿದಾಡುವ ಮಸಿ. ನೀಲಿ ಕೆಂಪು ಹಸಿರು ಕರಿ ಮಸಿ
ಈ ಕವನಗಳ ಜಾತಿ ಇಷ್ಟೇ.
ಬರೆಯುವವರೂ ಈ ಕುಲಕ್ಕಂಟಿ
ಈ ಮರಕ್ಕಂಟಿ ನಾನು ಕುಳಿತಂತೆ



ಬಣ್ಣಬಣ್ಣದ ಗೆರೆಯ ನಡುವೆ ಸಿಕ್ಕವರು
ಆದರೂ ನಕ್ಕವರು

ನಾವೆಲ್ಲ ಅವರೇ, ಅವ್ವ ನೀಲಿ ಇಲ್ಲ ಹಸಿರು,
ಮಗಳು ನಾ ಬರೆಯಲಾಗದ ಮುಗುಳು ಬಿಳಿ
ನಾ ನಿರಂತರ ಕಪ್ಪು.
ಈಕೆ ಎಲ್ಲ ಕೂಡಿದ ಧಿಗ್ಗನೆನ್ನುವ ಸ್ಪಿರಿಟ್ಟು,
ಎಲ್ಲಿದೆ ತಪ್ಪು?
ಇವರೆಲ್ಲ ನನ್ನ ಕವನ
ಇದ್ದಿರಬಹುದು. ಸುದ್ದೀ ಮಾಡಿ ಮುಂದಿ ಹೇಳುವ ಹಾಗೆ
ನಾ ಮಾತ್ರ ಇವರ ಪಾಲಿಗೆ ಕವನ
ನೂರು ದಾರಿಗಳಲ್ಲಿ ಟಿಸಿಲೊಡೆದು ಹರಡಿರುವ
ವಿಸ್ತಾರ ಗಗನ,

**ಸಿದ್ಧಲಿಂಗ ಪಟ್ಟಣಶೆಟ್ಟಿ**



ರಾಜಿ ಮನೆಯ ಮುಂದಿನ ಜಗಲಿಯ ಮೇಲೆ ಕುಳಿತಿದ್ದಳು. ಅವಳ ಎದುರಿಗೇನೇ ದ್ರಾಕ್ಷಿ ಬಳ್ಳಿಯ ಟೊಂಗೆಗಳು ಕಲ್ಲು ಬಂಡೆಯ ಕಂಬದ ಮೇಲೆ ಹಾಕಿದ ಹಂತಿಯ ಮಂಟಪದ ತುಂಬ ಹಬ್ಬಿ ಮಸ್ತಾಗಿ ಬೆಳೆದಿವೆ. ಅಗಲವಾದ ಹಸಿರು ಎಲೆಗಳು, ನಿಬಿಡವಾದ, ಶಾಖೋಪಶಾಖೆಗಳು, ಅವಕ್ಕೆ ತೂಗಾಡುವ ದುಂಡು ದುಂಡಾದ ಅಪಕ್ವ ದ್ರಾಕ್ಷಿ ಗೊಂಚಲುಗಳು. ಇವು ಕೆಲವು ದಿನಗಳ ನಂತರ ಹಳದಿಯಾಗಿ ಹಣ್ಣಾಗುತ್ತವೆ. ಬಿಸಿಲಿನ ತಾಪದಿಂದ ಇವುಗಳಲ್ಲಿ ಮಾಧುರ್ಯ ತುಂಬಿ ಬರಬಹುದು. ಅದರ ಸಮೀಪದಿಂದ ಹಾಯ್ದು ಹೋಗುವಾಗ ಕೈ ಎತ್ತರಿಸಿ ನಾಲ್ಕಾರು ದ್ರಾಕ್ಷಿ ಹಣ್ಣನ್ನು ಹರಿದುಕೊಳ್ಳುವುದೆಂದರೆ ಅವಳಿಗೆ ಎಲ್ಲಿಲ್ಲದ ಖುಷಿ. ತಾಜಾ ಹಣ್ಣುಗಳು ಅದರಲ್ಲೂ ಶಾಖೆಗಳಲ್ಲಿ ತೂಗಾಡುತ್ತಿರುವವು, ಬಿಸಿಲಿಗೆ ಹೊಳೆಯುತ್ತಿರುವ ದುಂಡು ದುಂಡಾದ ಹಣ್ಣುಗಳು, ತುಂಬ ರುಚಿಯಾಗಿರುತ್ತವೆ.

ಅವಳ ದೃಷ್ಟಿ ಒಂದರ ಹಿಂದೊಂದರಂತೆ ಮೆಲ್ಲ ಮೆಲ್ಲನೆ ಸಾಗುತ್ತಿದ್ದ ಬಿಳಿಯ ಮೋಡಗಳ ಮೇಲೆ ಹಾಗೂ ಎತ್ತರವಾಗಿ ನೇರವಾಗಿ ಬೆಳೆದ ಮರಗಳ ಮಧ್ಯದಲ್ಲಿ ಬಾಗಿದ ಶಾಖೆಗಳ ಮೇಲೆ ನೆಟ್ಟಿತ್ತು. ದೂರದ ವರೆಗೂ ಹಬ್ಬಿರುವ ಬೆಟ್ಟಗಳ ತುದಿಯಲ್ಲಿ ಹೊಗೆ ಹಾಯುತ್ತಿರುವ ಹಾಗೆ ತೋರುತ್ತಿತ್ತು. ಬೆಟ್ಟಗಳ ಮೇಲೆ ಕಾಡು ಹೂಗಳ, ಬೇಲಿಯ ಮೇಲಿನ ಹೂಗಳ, ಒಣಗಿದ ಲಂಟ ಗಿಡಗಳ ಜಾತ್ರೆ ನಡೆದ ಹಾಗೆ ತೋರುತ್ತಿತ್ತು ಅವಳಿಗೆ.

ಹಚ ಹಸಿರು ಬೆಳೆಗಳ ತೊನೆಯುತ್ತಿದ್ದ ಹೊಲಗಳಿಂದ ಬೇರೆಯಾಗಿ ಒಂದು ವಿಶಾಲವಾದ ಬಯಲಿ

ನಲ್ಲಿ ಅಂಕುಡೊಂಕಾಗಿ ಬೆಳೆದ ಹೆಂಡದ ಮರಗಳಿದ್ದವು.

ಗಳೆ ಹೊಡೆದು, ಹೊಲಗಳಿಗೆ ನೀರು ಹಾಯಿಸಿ, ಹೊಲಗಳಲ್ಲಿಯ ಪೈರನ್ನು ಕಾದು, ಬಿಸಿಲು ಗಾಳಿಯಲ್ಲಿ ಇಡೀ ದಿನ ದುಡಿದು, ದಣಿದು ಹಣ್ಣಾಗಿ ಬಂದ ಒಕ್ಕಲು ಮಕ್ಕಳ ದೇಹಕ್ಕೆ ಹೊಸ ಚೇತನ ಹಾಗೂ ಆರಾಮ ನೀಡುವ ವಸ್ತುವೆಂದರೆ ಅವರ ಪಾಲಿಗೆ ಈ ಹೆಂಡವೊಂದೇ. ಪರಿಶ್ರಮದ ನಂತರ ಇನ್ನೇನು ನಡ ಮುರಿದು ಹೋಗುತ್ತದೆ ಎನ್ನುವಾಗ ಹೆಂಡ ಗುಟುಕರಿಸಿದರೆ ಸಾಕು ಹೋದ ಜೀವ ಬಂದಂತಾಗುತ್ತದೆ ಅವರಿಗೆ.

ರಾಜಿ ತನ್ನ ಮನೆಯ ಜಗಲಿಯ ಮೇಲೆ ಕುಳಿತು ಅತ್ತಿತ್ತ ನೋಡುತ್ತಲಿದ್ದಳು. ಹೊಡೆ ಮುರಿವ ಹಸಿರಿನಿಂದ ತುಂಬಿದ ಹೊಲಗಳು ಗಾಳಿಯ ತೆರೆಗಳಲ್ಲಿ ಹೊಯ್ದಾಡುವುದನ್ನು ಕಂಡ ಅವಳಿಗೆ ಒಂದು ವಿಚಿತ್ರವಾದ ಸಂತೋಷವಾಗುತ್ತಿತ್ತು. ಇದರಿಂದಾಗಿ ಅವಳ ಹೃದಯದ ಯಾವುದೋ ಒಂದು ಕಡೆಯಿಂದ ಸಂತೋಷದ ಒಂದು ಅಲೆ ಎದ್ದು ಅತ್ಯಲ್ಪ ಕಾಲದಲ್ಲಿಯೇ ಅದು ಅವಳ ಸಮಗ್ರ ದೇಹವನ್ನೆಲ್ಲ ವ್ಯಾಪಿಸಿತು. ಈ ಸಂತೋಷವನ್ನು ವರ್ಣಿಸಲಾಗುವುದಿಲ್ಲ. ಕೇವಲ ಅನುಭವಿಸಬೇಕು. ಈ ಅಲೌಕಿಕ ಸಂತೋಷ ಅವಳ ದೇಹದ ಪ್ರತಿಯೊಂದು ಅಂಗದಲ್ಲೂ ಸುತ್ತಿ ಸುತ್ತಿ ಸುಳಿಯುತ್ತಲಿದೆ ಎಂದೆನಿಸುತ್ತಲಿತ್ತು ರಾಜಿಗೆ. ಈ ಕಾರಣದಿಂದಾಗಿಯೇ ಇರಬೇಕು. ಅವಳ ಮುಖ ಎಷ್ಟೊಂದು ಸುಂದರವಾಗಿತ್ತೆಂದರೆ ಈ ಸಮಯದಲ್ಲಿ ಹೊಲದ ಬದುವಿನ ಸಮೀಪದ ಪಾತಿಯ ಮಗ್ಗಲು ಬೆಳೆದ ಕಾಡು ಗುಲಾಬಿಯ ಚೆಲುವೂ ಕೂಡ ಅವಳ ಈಗಿನ ಚೆಲುವಿನ ಮುಂದೆ ಕಳಪೆಯಾಗಿ ತೋರುತ್ತಿತ್ತು.

* * *

ಆದರೆ......

ಇಂದು ರಾಜಿಯ ಮುಖದಲ್ಲಿ ಒಂದು ಆಳವಾದ ಚಿಂತೆಯ ಛಾಯೆಯಿತ್ತು. ಯಾವುದೋ ಆಂತರಿಕ ಗಹನವಾದ ವೇದನೆ ಹಾಗೂ ಅದನ್ನು ಸಹಿಸಲು ಅಸಾಧ್ಯವೆನ್ನುವ ಅಸಹಾಯಕತೆಯ ಅರಿವೂ ಮೂಡುತ್ತಿತ್ತು. ಆ ಬಟ್ಟಲುಗಣ್ಣುಗಳಲ್ಲಿ ತುಂಬಿರುವ ವ್ಯಾಕುಲತೆಯನ್ನು ಕಂಡವರಿಗೆ ಯಾರ್ವಾ... ಎಳೆಯ ಮಕ್ಕಳ ಹಾಗೆ ನಗು ಸಗುತ್ತಲಿರುತ್ತಿದ್ದ ಹರೆಯದ ಈ ಹೆಣ್ಣಿನ ಮೇಲೆ ಯುಗದ ನೋವನ್ನು ಉಂಡ ಮುದಿ ಹೆಣ್ಣಿನಲ್ಲಿರುವ ವ್ಯಾಕುಲತೆ ಮನೆ ಮಾಡಿದೆ ಈಗ ಅವಳ ನರ ನರಗಳಲ್ಲೂ ಒಂದು ರೀತಿಯ ಉರಿ. ಈ ಉರಿಯನ್ನು ಕಡಿಮೆಗೊಳಿಸಿಕೊಳ್ಳಬೇಕೆಂದೇ ಕೂತಲ್ಲಿಂದಲೇ ಸಣ್ಣ ಸಣ್ಣ ವಸ್ತುಗಳನ್ನು ತುಂಬ ಆಸಕ್ತಿಯಿಂದ ನೋಡುತ್ತಿದ್ದಾಳೆ. ಸಾವಿರಾರು ಸಲ ನೋಡಿರಬಹುದಾದ ಗಿಡಗಂಟೆ, ಗುಡ್ಡ ಬೆಟ್ಟ, ಮೋಡ, ಏನೂ ಬೆಳೆಯದ ಭೂಮಿ, ಬೆಳೆಗಳಿಂದ ತುಂಬಿದ ಹೊಲ, ದ್ರಾಕ್ಷಿಯ ಬಳ್ಳಿ, ಅಂಕು ಡೊಂಕಾದ ಕಾಲುದಾರಿ, ಗುಡಿಸಲುಗಳು, ಅವುಗಳ ಮಣ್ಣಿನ ಗೋಡೆಗಳು, ಅವುಗಳನ್ನು ಸೆಗಣಿಯಿಂದ ಸಾರಿಸಿ ಅದರ ಮೇಲೆ ಜೋರು ಬಿಟ್ಟ ಕೆಮ್ಮಣ್ಣಿನ ಹಾಗೂ ಸುಣ್ಣದ ಪಟ್ಟೆಗಳು, ಚಪ್ಪರದ ಮುಂದೆ ಹಾದ ಗಳಗಳ ಮೇಲೆ ಒಣಗಲು ಹಾಕಿದ ಧೋತರ, ಬಣ್ಣದ ಸೀರೆಗಳು ನೀಲಿ–ಕೆಂಪು, ಹಳದಿ ಸೀರೆಗಳು, ಬಂಗಾರ ವರ್ಣದ ಅಂಚಿರುವ ಸೀರೆಗಳು, ಎಲ್ಲವನ್ನೂ ತನ್ನ ಬಾಲ್ಯದಿಂದಲೂ ರಾಜಿ ನೋಡುತ್ತ ಬಂದಿದ್ದರೂ ಇಂದು ಇವುಗಳನ್ನೆಲ್ಲ ಬಹು ಕುತೂಹಲಿಯಾಗಿ ದುರ್ಬೀನಿನ ಕಣ್ಣಿನಿಂದ ನೋಡುತ್ತಿದ್ದಾಳೆ. ತನ್ನ ಒಳಗೆ ಹತ್ತಿ ಉರಿಯುತ್ತಿರುವ ಉರಿ ಹೀಗಾದರೂ ಕಡಿಮೆಯಾದೀತೇನೋ ಎಂದು

ಹೊಲಗಳಿಂದಾಚೆ ಇರುವ ಗುಡ್ಡದ ಇಳಿಜಾರಿನಲ್ಲಿ ಕುರಿಮಂದೆ ಕಾಯುವ ಹುಡುಗರ "ಹುಸ್ಸಾ ಹುಸ್ಸಾ ಹ್ಯಾ...ಹ್ಹು..." ಎಂಬ ಕೂಗು ಕೆಳಗೆ ಊರಲ್ಲಿಯೂ ಕೇಳಿ ಬರುತ್ತಲಿದೆ. ಕೆರೆಯಲ್ಲಿ ಜಳಕಮಾಡುವವರು ಜೋರು ಜೋರಾಗಿ ಮಾತನಾಡುತ್ತಿರುವಂತೆ ಗಾಳಿ ಅತ್ತಿಂದ ಇತ್ತ ಬೀಸಿದರೆ ಆ ಧ್ವನಿಯನ್ನು ತಂದು ಕೇಳಿಸುತ್ತದೆ ಗಾಳಿ.

ಹಳ್ಳಿಯ ಶಾಲೆಯಲ್ಲಿ ರಾಜಿಯ ನಾಲ್ಕು ಮಕ್ಕಳೂ ಓದಲು ಹೋಗಿವೆ. ಜಗಿಯಾ ಇನ್ನೂ ಹೊಲದಲ್ಲಿ ಕೆಲಸ ಮಾಡುತ್ತಲಿದ್ದ. ಹಾಗೆ ನೋಡಿದರೆ ಮಳೆಯ ಆರಂಭ ಕಾಲದಿಂದಲೇ ಹೊಲದಲ್ಲಿ ಕೆಲಸ ಹೆಚ್ಚಾಗುತ್ತದೆ.

ರಾಜಿಗೆ ಬೇಡವೆಂದರೂ ರಾತ್ರಿಯ ಜಗಳ ನೆನಪಾಗಿ ಕಾಡುತ್ತಲಿತ್ತು. ರೈತ ತನ್ನ ದೇಹದ ದಣಿವಾರಿಸಿಕೊಳ್ಳಲೋಸುಗವೇ ಹೆಂಡ ಕುಡಿಯುತ್ತಾನೆ. ಮದುವೆ ಮುಂಜಿವೆಯಲ್ಲಿ, ಪಾಪ ಪರಿಹಾರ ಮಾಡಿಕೊಳ್ಳುವ ಕಾಲದಲ್ಲಿ ಮನಸ್ವೀ ಕುಡಿಯುತ್ತಾರೆಂಬುದೇನೋ ನಿಜ. ಹಬ್ಬಗಳಲ್ಲಂತೂ ಮೂರ್ಛೆ ಹೋಗುವ ಹಾಗೆ ಹೆಂಡ ಕುಡಿದು ಜೋಲಿ ಹೊಡೆಯುತ್ತಿರುತ್ತಾರೆ. ಆಗ ಇವರು ಸಣ್ಣ ಸಣ್ಣ ವಿಷಯಕ್ಕೆ ಜಗಳಾಡುತ್ತಾರೆ. ಹೊಡೆದಾಟ, ಬಡಿದಾಟವೂ ಆಗ ನಡೆಯುತ್ತದೆ. ಮನೆಯಲ್ಲಿ ಹೆಂಡಂದಿರನ್ನೂ ಹೊಡೆಯುತ್ತಾರೆ–ದನ ಹೊಡೆದ ಹಾಗೆ. ಕೆಲ ಸಲ ಇಬ್ಬರು ಒಳ್ಳೆ ಗೆಳೆಯರು ಕೂಡ ಬದ್ಧ ವೈರಿಗಳಾಗುತ್ತಾರೆ. ಹೆಚ್ಚು ಕುಡಿಯುವುದು, ಕುಡಿದು ಬಾಯಿಗೆ ಬಂದಂತೆ ಬೊಗಳುವುದು, ಜೋರಾಗಿ ಕೇಕೆ ಹಾಕುವುದು, ಕೂಡಿ ಹಾಡುವುದು, ಕುಣಿಯುವುದು. ಚೀರುವುದು ಕೂಡ ಬಡಿದಾಟ ಹೊಡೆದಾಡದಷ್ಟೇ ಅವಶ್ಯವಾಗಿದೆ. ಈ ರೀತಿಯಿಂದ ಅವರು ಜೀವನದ ಸಣ್ಣ ಸಣ್ಣ ಸಂತೋಷವನ್ನು ಹಾಗೂ ದೊಡ್ಡ ದೊಡ್ಡ ದುಃಖವನು ಪರಸ್ಪರರು ಹಂಚಿಕೊಳ್ಳುತ್ತಾರೆ.

* * *

ಬಹು ಭಯಾನಕ ಯಾತನೆ, ಮನೆತನದ ಸಂಕಷ್ಟಗಳು, ಅತ್ತೆ ಮನೆಯವರ ಕೆಟ್ಟ ವರ್ತನೆ, ತವರು ಮನೆಯ ನಿರಂತರ ನೆನಪು, ತಂದೆ ತಾಯಿಗಳ ಪ್ರೀತಿ, ಸೋದರರ ವಾತ್ಸಲ್ಯ, ಓರಗೆಯ ಗೆಳತಿಯರ ಜೊತೆ ಆಡಿದ ಸುಖದ ದಿನಗಳು! ಈ ಎಲ್ಲವನ್ನೂ ಮನ ಬಿಚ್ಚಿ ತಮ್ಮ ನೋವು ನಲಿವುಗಳನ್ನು ತಮ್ಮ ಗೀತದಲ್ಲಿ ತೋಡಿಕೊಂಡರು. ಈ ನೆಲದ ಹೆಣ್ಣು ಮಕ್ಕಳು. ಈ ಜಾನಪದಗಳು ನೇರ ಅಂತರಂಗದಿಂದ ಹೊರಟಿದ್ದರಿಂದಲೇ ಇನ್ನೊಂದು ಹೃದಯವನ್ನು ಹೊಗಲು ಸಾಧ್ಯವಾಯಿತು. ಮುಸುಕಿನಲ್ಲಿಯೇ ಮುಗುಳ್ನಗುವ ಹಾಗೂ ರೋದಿಸುವವಳ ಹೃದಯದಲ್ಲಿರುವ ಸುಖವೇನು ಹಾಗೂ ದುಃಖವೇನು ? ಎಂಬುದನ್ನೂ ಈ ಜಾನಪದಗಳೇ ಲೋಕಕ್ಕೆ ತಿಳಿಪಡಿಸಿದವು. ಈ ಜಾನಪದಗಳ ಧಾಟಿ ಅದೆಷ್ಟೋ ವರ್ಷಗಳ ಹಿಂದಿನದಾದರೂ ಇಂದಿಗೂ ಅದು ನಮ್ಮ ಮನವನ್ನು ಹಿಡಿದು ನಿಲ್ಲಿಸುತ್ತದೆ. ತನ್ನ ಮಾಂತ್ರಿಕ ಶಕ್ತಿಯಿಂದ. ಈ ಗೀತಗಳನ್ನು ಮೃದು ಮಧುರ ಕಂಠದಿಂದ ಹಾಡ ತೊಡಗಿದರೆ ಸಾಕು, ವಾತಾವರಣವೆಲ್ಲ ಸುಂದರ ಸ್ವಪ್ನವಾಗಿ ಪರಿಣಮಿಸುತ್ತದೆ. ಈ ಜೀವನವನ್ನು ನವ ನಾಗರಿಕತೆಯಲ್ಲಿ ಬೆಳೆದ ಪಟ್ಟಣದವರು ಅರಿಯರು. ರಾಜಿಗೆ ಏನೋ ಸಮಾಧಾನ ಈ ಗೀತಗಳನ್ನು ಕೇಳಿದಾಗಲೆಲ್ಲ.

* * *

ಆ ರಾತ್ರಿ ಅದೇನೋ ಅದೆಷ್ಟು ಕುಡಿದು ಬಂದಿದ್ದನೋ ಅರಿಯಳು ರಾಜಿ. ರೆಪ್ಪೆ ಮುಚ್ಚಿ ಮುಚ್ಚಿ ಯೋಚಿಸಿದಳು. ಹೊಲಸು ಹೊಲಸು

ಉರ್ದು ಮೂಲ:
**ನಜಮಾ ನಿಕಹತ್**

ಅನುವಾದ:
**ಪಂಚಾಕ್ಷರಿ ಹಿರೇಮಠ**

ಬೈಗಳು. ನಂತರ ದನಗಳಿಗೆ ಹೊಡೆಯುವ ಕೋಲಿನಿಂದ ಮನ ಬಂದಂತೆ ಅವಳನ್ನು ಹೊಡೆದಿದ್ದ ಜಗಿಯಾ ಈಗಲೂ ಹೊಡೆತ ತಿಂದ ಭಾಗದಲ್ಲಿ ನೋವು, ಉರಿ. ಎಲ್ಲಕ್ಕಿಂತ ಹೆಚ್ಚಿನ ಉರಿ ಅವಳ ಎದೆಯಲ್ಲಿತ್ತು. ಭಟ್ಟಿ ಉರಿಯುತ್ತಿರುವ ಉರಿಯ ಹಾಗೆ ಭೂಮಿಯ ಒಳಗೇ ಉರಿಯುವ ಜ್ವಾಲಾಮುಖಿಯ ಹಾಗೆ.

ರಾಜಿಯನ್ನು ಹೊಡೆಯುತ್ತ ಹೊಡೆಯುತ್ತ ಜಗಿಯಾ ತಾನೇ ಸೋತು ಕೈಯಲ್ಲಿದ್ದ ಕೋಲನ್ನು ಆಚೆ ಒಗೆದ. ಮತ್ತ ಹಲ್ಲು ಕಡಿಯುತ್ತ–"ಲೇ ರಂಡಿ, ನನ್ನ ಉಪಕಾರ ಮರೀಬ್ಯಾಡ. ನೀನು ಹೇಳಿ ಕೇಳಿ ವಿಧವೆ. ನಿನಗೂ ಬದುಕಲಿಕ್ಕ ಅವಕಾಶ ಮಾಡಿಕೊಟ್ಟೆ ಎಂಬುದನ್ನ ಮರೀ ಬ್ಯಾಡ." ಎಂದ.

"ವಿಧವೆ?"– ರಾಜಿ ಉರಿಯುತ್ತಿರುವ ಮೆದುಳಿನಲ್ಲಿಯೇ ಯೋಚಿಸಿದಳು. ಈ ಮಾತು ಅವಳ ಮೆದುಳಿಗೆ ಬೆಂಕಿಯ ಹಾಗೆ ಹತ್ತಿಕೊಂಡಿತು. ರಾತ್ರಿಯಿಂದ ಹಿಡಿದು ಇಲ್ಲಿಯವರೆಗೂ ಸಾವಿರ ಸಲ ಜಗಿಯಾನ ಈ ಶಬ್ದ ಹಾಗೂ ದ್ವೇಷದಿಂದ ಹಲ್ಲು ಕಡಿಯುತ್ತಿರುವ ಅವನ ಮುಖ ಇವುಗಳ ನೆನಪೇ ನೆನಪು. ರಾತ್ರಿಯೆಲ್ಲ ಅವಳು ಮೊಣಕಾಲ ಸಂದಿನಲ್ಲಿ ಮುಖವಿರಿಸಿಕೊಂಡು ತನ್ನ ಹಣೆಬರಹಕ್ಕಾಗಿ ಕಣ್ಣೀರು ಹಾಕಿದಳು.

ಒಮ್ಮೆ ಹೆಣ್ಣಿನ ಹಣೆಬರಹ ಹಾಳಾಯಿತೆಂದರೆ ಅದನ್ನು ಸರಿಪಡಿಸುವುದಕ್ಕಾಗಿ ಮಾಡುವ ಪ್ರಯತ್ನಕ್ಕೆ ತೆತ್ತ ಬೇಕಾದ ಬೆಲೆ ಅಪಾರ. ತನ್ನ ಹೆಂಡತಿ ಸತ್ತ ಮೇಲೆ ಜಗಿಯಾ ಕೂಡ ಒಂದು ವರ್ಷ ಕಾಲ ಒಂಟಿಯಾಗಿ ಜೀವಿಸಿದ. ಸತ್ತು ಹೋದ ಅವಳು ನಾಲ್ಕು ಚಿಕ್ಕ ಮಕ್ಕಳನ್ನು ಬಿಟ್ಟು ಹೋಗಿದ್ದಳು ಅವುಗಳ ಆರೈಕೆ ಮಾಡಲು ಜಗಿಯಾನ ಹೊರತು ಬೇರೆ ಯಾರೂ ಇರಲಿಲ್ಲ.

ಜಗಿಯಾ ತನ್ನ ಮಕ್ಕಳಿಗೆ ಒಲೆ ಹೊತ್ತಿಸಿ ರೊಟ್ಟಿ ಮಾಡುತ್ತಾನೆ ಸಣ್ಣವಕ್ಕೆ ಮಣ್ಣಿನ ಬಟ್ಟಲದಲ್ಲಿ ಹಾಲು ಕುಡಿಸುತ್ತಾನೆ. ದೊಡ್ಡವಕ್ಕೆ ರೊಟ್ಟಿ ತಿನ್ನಿಸಿ ಮನೆಯಲ್ಲಿಯೇ ಇರುವಂತೆ ತಾಕೀತು ಮಾಡಿ ಕೆಲಸಕ್ಕೆ ಹೋಗುತ್ತಾನೆ. ತಿರುಗಿ ಬರುವ ಹೊತ್ತಿಗೆ ಮನೆಯಲ್ಲಿ ಏನಾದರೂ ನಡೆದೇ ನಡೆದಿರುತ್ತದೆ. ಒಬ್ಬ ಮಗ ಕೈ ಸುಟ್ಟುಕೊಂಡಿದ್ದರೆ, ಇನ್ನೊಬ್ಬ ಎಲ್ಲೋ ಹೋಗಿರುವ ಸುದ್ದಿ, ಮತ್ತೊಬ್ಬ ಹಸಿವಿನಿಂದ ಒದ್ದಾಡುತ್ತಿರುವ ಸ್ಥಿತಿ–ಇದೆಲ್ಲ ಕಂಡ ಜಗಿಯಾ ಹತಾಶನಾಗುತ್ತಿದ್ದ. ಜಟ್ಟಿಯಂಥ ಇಂಥ ಗಂಡಸು ಕೂಡ ಭಗವಂತನ ನಿಷ್ಠುರತೆಗಾಗಿ ಕಣ್ಣೀರಿಡುತ್ತಿದ್ದ. ಹಬ್ಬ ಹುಣ್ಣಿಮೆಯ ದಿನಗಳಲ್ಲಿ ಅವನು ಕುಡಿದು ಬಂದಾಗಲಂತೂ ಒಂಟಿ ಜೀವನ ಅವನನ್ನು ಸುಡುತ್ತಲಿತ್ತು. ಮನೆಯಲ್ಲಿ ದುಡಿದು ಬಂದಾಗ ಅಂತಃಕರಣದಿಂದ, ಪ್ರೀತಿಯಿಂದ ಕಂಡು ಉಪಚರಿಸುವವರು ಯಾರೂ ಇಲ್ಲವೆನ್ನುವ ಮಾತೇ ಅವನನ್ನು ಸುಟ್ಟು ಸುಣ್ಣ ಮಾಡುತ್ತಲಿತ್ತು. ಒಂದು ರೀತಿಯ ಪರದೇಶಿ ಜೀವನವಾಗಿತ್ತು ಅವನದು. ಅವನಿಗಾಗಿ ಬದುಕುವ, ಅವನ ಬಗೆಗೆ ಆಸ್ಥೆ ವಹಿಸುವ, ಅವನ ಕಾಳಜಿ ಮಾಡುವ ಅವನ ಹೊಟ್ಟೆ ನೆತ್ತಿ ನೋಡಿಕೊಳ್ಳುವ ಯಾರೂ ಇರಲಿಲ್ಲ...ಯಾರೂ ಇರಲಿಲ್ಲ...ಇಂಥದೇ ಅಶಾಂತಿಗೆ ಮನ ಈಡಾದ ಗಳಿಗೆಯಲ್ಲಿ ಕಟ್ಟಿಗೆಯ ಪೆಟ್ಟಿಗೆಯಲ್ಲಿಟ್ಟಿದ್ದ ಮೊದಲ ಹೆಂಡತಿಯ ಬೆಳ್ಳಿಯ ತೋಡೆಗಳನ್ನು ತೆಗೆದುಕೊಂಡು ರಾಮೂ ಹಾಗೂ ಜೇನೂನೊಂದಿಗೆ ರಾಜಿಯ ಗುಡಿಸಲ ಕಡೆಗೆ ಹೊರಟ.

ರಾಜಿ ವಿಧವೆ. ಇನ್ನೂ ಹರೆಯದಾಕೆ. ದುಡಿಮೆ ಅವಳ ದೇಹವನ್ನು ಮಾಟವಾಗಿಸಿತ್ತು. ಹಳ್ಳಿಯ ಒಳ್ಳೆಯ ಹೆಣ್ಣಿನಲ್ಲಿರಬಹುದಾದ ಎಲ್ಲ ಗುಣಗಳೂ ಅವಳಲ್ಲಿದ್ದವು. ಎಲ್ಲಕ್ಕಿಂತ ಹೆಣ್ಣಿನಲ್ಲಿ ನೋಡುವ ವೈಶಿಷ್ಟ್ಯವೇನೆಂದರೆ ಅವಳು ಮಾತುಗಾತಿಯಾಗಿರಬಾರದು. ಅಂಥವಳನ್ನು ಮಾವನ ಮನೆಯವರು ಹಾಗೂ ಗಂಡ ತುಂಬ ಮೆಚ್ಚುತ್ತಾರೆ. ಆಕಳದ ಹಾಗೆ ಸೀದಾ, ಸಾದಾ ಸಭ್ಯವಾಗಿರಬೇಕು. ಹಾಗೂ ಎತ್ತಿನ ಹಾಗೆ ದುಡಿಯುವ ಹೆಣ್ಣಾಗಿದ್ದರೆ ಅವಳು ಎಂದೂ ಮನೆ ಮಾರು ಇಲ್ಲದವಳಾಗುವುದಿಲ್ಲ. ಆದರೆ ರಾಜಿಯ ಗಂಡ ಭರ್ತಿ ತಾರುಣ್ಯದಲ್ಲಿಯೇ ಸತ್ತು ಹೋಗಿದ್ದ. ಅವಳು ಒಂಟಿಯಾದಳು. ನಿಸ್ಸಹಾಯ ಹಾಗೂ ಮನೆ ಮಾರು ಇಲ್ಲದವಳಾದಳು. ಅವಳು ತನ್ನ ತಾಯಿಯ ಗುಡಿಸಲಿನಲ್ಲಿರುತ್ತಿದ್ದಳು. ದಿನವೆಲ್ಲ ದುಡಿದು ಹಣ್ಣಾಗಿ ಗುಡಿಸಲಕ್ಕೆ ಬಂದರೆ ಒಂಟಿತನ ಅವಳನ್ನು ಗಬ ಗಬ ತಿನ್ನುತ್ತಿತ್ತು. ಅವಳು ವಿಧವೆಯಾಗಿ ತಾಯಿಯ ಹತ್ತಿರ ಬಂದಾಗ ತಾಯಿ ಜಡ್ಡಾಗಿ ಹಾಸಿಗೆ ಹಿಡಿದಿದ್ದಳು. ತಾಯಿಯ ಕೊನೆಯ ದಿನಗಳಲ್ಲಿ ರಾಜಿ ಭರ್ಪೂರ ಸೇವೆ ಮಾಡಿದಳು. ಆದರೆ ತಾಯಿ ಬಹಳ ದಿನ ಉಳಿಯಲಿಲ್ಲ. ಆಕೆಯ ಸಾವಿನಿಂದ ರಾಜಿ ಇಷ್ಟು ದೊಡ್ಡ ಜಗತ್ತಿನಲ್ಲಿ ಏಕಾಕಿಯಾದಳು. ಜಗಿಯಾನಿಗೆ ಈ ಎಲ್ಲ ಮಾತುಗಳು ರಾಮೂ ಹಾಗೂ ಜೇನೂವಿನಿಂದ ತಿಳಿದಿದ್ದವು. ಇವರಿಬ್ಬರೂ ರಾಜಿಯನ್ನು ಮನೆ ತುಂಬಿಸಿಕೊಳ್ಳಲು

ಜಗಿಯಾನಿಗೆ ಗಂಟು ಬಿದ್ದಿದ್ದರು. ಜಗಿಯಾ ಕೂಡ ಪ್ರತಿ ಹೆಜ್ಜೆಗೂ ಒಂದು ಹೆಣ್ಣಿನ ಅವಶ್ಯಕತೆಯನ್ನು ಅನುಭವಿಸುತ್ತಿದ್ದ. ಅದರಲ್ಲೂ ನಾಲ್ಕು ಸಣ್ಣ ಸಣ್ಣ ಮಕ್ಕಳಿರುವಾಗಲಂತೂ ಇನ್ನೂ ಅವಶ್ಯವೆನ್ನಿಸುವುದು ಸ್ವಾಭಾವಿಕ. ಜಗಿಯಾ, ರಾಮೂ ಹಾಗೂ ಜೇನೂ ಅವರಿಗ ತನ್ನ ಸಮ್ಮತಿಯನ್ನೂ, ಸೂಚಿಸಿದ್ದ. ಕೆಲ ದಿನಗಳಿಂದ ಜಗಿಯಾನ ಪರವಾಗಿ ಇವರು ಮಾತುಕತೆ ನಡೆಸಿದ್ದರು. ಅಂತೂ ಕೊನೆಗೊಂದು ದಿನ ಜಗಿಯಾ ಬೆಳ್ಳಿಯ ತೋಡೆಗಳನ್ನು ರಾಜಿಯ ಕಾಲಲ್ಲಿ ತೊಡಿಸಿದ. ಬಂಧು-ಬಾಂಧವರ ಊಟಕ್ಕಾಗಿ ಹೆಂಡದ ಮಗಿಗಳು ಬಂದವು. ರಾಮು ಹಾಗೂ ಜೇನೂ ಕಂಠಮಟ ಕುಡಿದು ಗದ್ದಲವೆಬ್ಬಿಸಿದರು. ಹಾಡು. ಕುಡಿತ ಕುಣಿತ ಬಹಳ ರಾತ್ರಿಯ ವರೆಗೂ ನಡೆಯಿತು.

ವಿಧವೆಯ ಎರಡನೆಯ ಮದುವೆಯಾಗುವುದಿಲ್ಲ. ಇದೇ ರೀತಿ ಕೂಡಿಕೊಳ್ಳುತ್ತಾರೆ. ರಾಜಿ ತಲೆಬಾಗಿ ಜಗಿಯಾನ ಹಿಂದೆ ಹಿಂದೆ ನಡೆದು ಅವನ ಗುಡಿಸಲು ಹೊಕ್ಕಳು. ನಿಸ್ತೇಜವಾಗಿದ್ದ, ನಿರ್ವರ್ಣವಾಗಿದ್ದ ಜೀವನ ಅಂದಿನಿಂದ ವರ್ಣಮಯವಾಯಿತು.

ರಾಜಿ ಅವನ ನಾಲ್ಕು ಮಕ್ಕಳನ್ನು ತನ್ನುಡಿಯಲ್ಲಿ ಹಾಕಿಕೊಂಡಳು. ಓರ್ವ ತಾಯಿಯ ಉಡಿ ಅದೆಷ್ಟು ಪವಿತ್ರ ಹಾಗೂ ಪ್ರೇಮದಿಂದ ಕೂಡಿರುತ್ತದೆಂಬುದನ್ನು ಶಬ್ದದಲ್ಲಿ ವರ್ಣಿಸುವದು ಬಹುಶಃ ಯಾರಿಗೂ ಅಸಾಧ್ಯವೆಂದೇ ತೋರುತ್ತದೆ. ನಾಲ್ಕು ಮುದ್ದು ಮಕ್ಕಳ ಮುಗ್ಧ ಮುಖಿಗಳಲ್ಲಿರುವ ಮುಗುಳ್ನಗೆಯಲ್ಲಿ ರಾಜಿ ತನ್ನ ದುಃಖ. ಯಾತನೆ ಮರೆತಳು.

ಆ ಊರಲ್ಲಿ ಮೊದಲ ಸಲ ಶಾಲೆ ಆರಂಭವಾದಾಗ ರಾಜಿ ಜಗಿಯಾ ಬೇಡವೆಂದರೂ ಅವನ ಕೂಡ ಗುದ್ದಾಡಿ ಮಕ್ಕಳನ್ನು ಶಾಲೆಗೆ ಕಳಿಸಿದಳು. ಮಕ್ಕಳ ನಾಳಿನ ದಿನಗಳನ್ನು ನಿರ್ಮಿಸಲು ರಾಜಿ ಈಗಿನಿಂದಲೇ ಟೊಂಕಕಟ್ಟಿದಳು. ಮಕ್ಕಳ ಯಾವುದೇ ಬೇಡಿಕೆಯಿರಲಿ ರಾಜಿ ಆತ್ಮುಕರೆವಾದರೂ ಜಗಿಯಾನಿಂದ ಆ ಬೇಡಿಕೆ ಪೂರೈಸುತ್ತಿದ್ದಳು.

ಆದರೆ ಇಂದು ಜಗಿಯಾನ ಹೀನ ಮಾತುಗಳಿಂದ ಅವಳ ಮನಸ್ಸು ಮುರಿದು ಹೋಗಿತ್ತು. ಅವನು ಇಂದು ಕೂಡ ಅವಳನ್ನು ವಿಧವೆಯೆಂದೇ ತಿಳಿಯುತ್ತಾನೆ- ಅವಳನ್ನು ತಂದು ಕೈ ಹಿಡಿದು ಜೀವನದಲ್ಲಿ ಪಾಲ್ಗೊಂಡ ಬಳಿಕವೂ... ಅವಳೊಂದಿಗೆ ಬೆಳದಿಂಗಳ ರಾತ್ರಿಗಳಲ್ಲಿ ನಕ್ಕು ನಲಿದು ತನ್ನದೆಯ ಮಾತುಗಳನ್ನು ಹೇಳಿಯೂ... ಅವಳು ವಿಧವೆಯೆಂದರೆ...

ಅವಳೆದೆಯಲ್ಲಿ ಹಾವಿನ ವಿಷಪೂರಿತ ಹೆಡೆಯ ಹಾಗೆ ಮತ್ತೆ ಮತ್ತೆ ತಲೆಯೆತ್ತುತ್ತದೆ ತಾನು ವಿಧವೆ... ಎಂಬ ಜಗಿಯಾನ ಮಾತು... ಅವಳಿಗೆ ತನ್ನವರೆಂಬುವವರು ಯಾರೂ ಇಲ್ಲ... ಅವನು ಏನಾದರೂ ಅವಳಿಗೆ ಮಾಡಿದರೆ ಅದು ತಾನು ಉಪಕಾರ ಮಾಡುತ್ತಿರುವುದಾಗಿ ತಿಳಿಯುತ್ತಾನೆ...

ರಾಜಿ ಹೀಗೆಯೇ ಅದೆಷ್ಟೋ ಹೊತ್ತು ಕುಳಿತೇ ಇದ್ದಳು... ಯೋಚಿಸುತ್ತಿದ್ದಳು. ಅವಳಿಗ ತಿಳಿಯುತ್ತಿತ್ತು... ಆದರೆ ಹೇಳಲಾಗುತ್ತಿರಲಿಲ್ಲ. ಆಳವಾದ ಯೋಚನೆಯಲ್ಲಿ ಮುಳುಗಿದಳು...ನಾನಂತೂ ಈ ಮನೆಗೆ ಬಂದ ಕೂಡಲೇ ಇದು ನನ್ನದೇ ಮನೆಯೆಂದು ತಿಳಿದೆ.... ಈ ಮಕ್ಕಳನ್ನು ನನ್ನವೇ ಮಕ್ಕಳೆಂದು ತಿಳಿದು ಜೋಪಾನ ಮಾಡತೊಡಗಿದೆ... ಜಗಿಯಾನನ್ನು ನನ್ನ ಸರ್ವಸ್ವವೆಂದು ತಿಳಿದು ನನ್ನನ್ನು ಸಂಪೂರ್ಣವಾಗಿ ಅವನಿಗೆ ಅರ್ಪಿಸಿಕೊಂಡೆ... ಹಾಗಾದರೆ ಇದೆಲ್ಲ ನನ್ನ ಭ್ರಮೆಯೇನು...

ರಾಜಿ ರಾತ್ರಿಯಿಂದ ಏನನ್ನೂ ತಿಂದಿರಲಿಲ್ಲ. ಆದರೂ ಅವಳಿಗೆ ಹಸಿವೆಯಾಗುತ್ತಿರಲಿಲ್ಲ, ಉಣ್ಣಬೇಕೆನ್ನಿಸುತ್ತಿರಲಿಲ್ಲ...ಈ ಮೊದಲು ಜಗಿಯಾ ಬೈದಾಗ ಹೊಡೆದಾಗ ಇಂಥ ಯಾತನೆ ಅವಳಿಗೆ ಆಗಿರಲಿಲ್ಲ. ಇಂದೇ ಏನಾಯಿತು. ಅವಳಿಗೆ?...ಇಂಥ ಜಗಳಗಳು ಇಲ್ಲಿ ದಿನ ನಿತ್ಯ ನಡೆಯುತ್ತವೆ. ಯಾವಾಗಲೂ ಇಂಥದನ್ನೇ ಇಲ್ಲಿ ಅವಳು ನೋಡುತ್ತ ಬಂದಿದ್ದಾಳೆ... ಆದರೆ ಇಂದಿನ ಹಾಗೆ ಅವಳೆದೆಯಲ್ಲಿ ಬೆಂಕಿಯಾಗಿ ಉರಿಯುತ್ತಿರುವ ಉರಿಯನ್ನು ಈ ಹಿಂದೆ ಎಂದೂ




ಅನುಭವಿಸಿರಲಿಲ್ಲ. ಇದು ಎಲ್ಲವನ್ನೂ ಸುಟ್ಟು ಅಂಗಾರ ಮಾಡುವ ಉರಿ...ಒಂದು ಜಬರದಸ್ತ ಮಹಾಪೂರ ಬಂದು ಜೀವನದ ಎಲ್ಲ ಅಂಗಗಳೂ ಕೊಚ್ಚಿ ಹೋಗುವ ತೆರದಿ ಆಗಿದೆ ಈಗ ಅವಳ ಸ್ಥಿತಿ...ಮನುಷ್ಯ ಎಲ್ಲ ರೀತಿಯ ಮಾತನಾಡುತ್ತಾನೆ....ದುಃಖದ ಸಂತೋಷದ ವೇದನೆಯ...ಸಿಟ್ಟಿನ ಮಾತುಗಳನ್ನು ಆಡುತ್ತಾನೆ... ಆದರೆ ಕೆಲ ಮಾತುಗಳು ಬಂದೂಕಿನ ಗುಂಡಿನ ಹಾಗೆ ಎದೆಯಲ್ಲಿ ನೆಡುತ್ತದೆ. ಬೆಂಕಿಯ ಹಾಗೆ ಎದೆಯಲ್ಲಿ ಅಂಟಿಕೊಳ್ಳುತ್ತವೆ. ಇದರಲ್ಲಿ ಎಲ್ಲವೂ ಸುಟ್ಟು ಬೂದಿಯಾಗುತ್ತದೆ...ಸುಡುವ ಕಣ್ಣೀರಿನ ಎರಡು ಹನಿಗಳು...ರಾಜಿಯ ಗಲ್ಲದ ಮೇಲಿಂದ ಜಾರಿ ಕುಬಸದ ತೆರೆದ ಕೊರಳಿನಿಂದ ಹಾದು... ಮೇಲೆ ಬರುತ್ತವೆ...ಸುಡುತ್ತಿರುವ ಎದೆಯ ಕಣ್ಣೀರಿನ ಎರಡು ಹನಿಗಳು...

ಇಂದು ಅವಳು ಮೊದಲ ಬಾರಿಗೆ ಡಾಕ ಬಂಗ್ಲೆಯ ಚೌಕೀದಾರನ ಮುಂದೆ ಕೈ ಜೋಡಿಸಿದಳು. ಅವನ ಕಾಲುಗಳನ್ನು ಹಿಡಿದಳು. ಪ್ರಾರ್ಥಿಸಿದಳು. ಪಟ್ಟಣದಿಂದ ವಿಶ್ರಾಂತಿಗಾಗಿ ಬರುವ ಸಾಹೇಬರಿಗೆ, ಬಾಬುಗಳಿಗೆ, ಎದುರಿಗಿರುವ ಕೆರೆಯಿಂದ ನೀರು ತರುವೆನೆಂದು ಹೇಳಿದಳು. ಕಸಗುಡಿಸುವುದು. ಬೀಸುವುದು, ಭಾಂಡೆ ತೊಳೆಯುವುದು ಎಲ್ಲವನ್ನೂ ಮಾಡುವೆನೆಂದು ಅಲ್ಪರಿದಳು. ಕೆಲಸ ಕೊಡಿ. ದುಡಿದು ಹೊಟ್ಟೆ ಹೊರೆದುಕೊಳ್ಳುವೆನೆಂದಳು... ಅಳತೊಡಗಿದಳು. ...ಆಗ ಅವನು ಅವಳಿಂದ ಹತ್ತು ರೂಪಾಯಿ ಪಡೆದು ಈ ಎಲ್ಲ ಕೆಲಸ ಮಾಡಬಹುದೆಂದು ಹೇಳಿದ. ಈ ರೀತಿ ರಾಜಿ ದುಡಿದು ತನ್ನ ಹೊಟ್ಟೆ ತುಂಬಿಕೊಳ್ಳಲಾರಂಭಿಸಿದಳು.

ಡಾಕ ಬಂಗ್ಲೆಯಲ್ಲಿ ಕೆಲಸ ಮುಗಿಸಿ ತನ್ನ ಗುಡಿಸಿಲಿಗೆ ಬಂದು ಜಗಲಿಯ ಮೇಲೆ ಕುಳಿತ ರಾಜಿ ಹಲವಾರು ಯೋಚನೆಯಲ್ಲಿ ಮಗ್ನಳಾಗಿದ್ದಳು...

ಇಳಿ ಹೊತ್ತಿಗೆ ಜಗಿಯಾ, ರಾಮೂ ಹಾಗೂ ಜೇನೂನೊಂದಿಗೆ ಬಂದ ಹಾಗೂ ತನ್ನ ಗುಡಿಸಿಲಿನ ಹೊರಗೆ ಅಂಗಳದಲ್ಲಿದ್ದ ಹೊರಸಿನ ಮೇಲೆ ಕುಳಿತ... ಅವರು ಮೂವರೂ ಯಾವುದೋ ವಿಷಯವನ್ನು ಕುರಿತು ಜಗ್ಗಿ ಜಗ್ಗಿ ಮಾತನಾಡಲಾರಂಭಿಸಿದರು... ಯಾವುದೋ ಪಂಪಸೆಟ್‌ನ ಬಗ್ಗೆ...

"ಸೆಕೆಂಡ ಹ್ಯಾಂಡೇನೋ ನಿಜ! ಆದರೆ ಬಾವಿಯ ಮೇಲೆ ಅದನ್ನು ಹಚ್ಚಿ ಒಂದು ವರುಷ ಕೂಡ ಆಗಿಲ್ಲ.

ಆದರೂ ಹೊಸ ಸೆಟ್‌ನ ರೀತಿಯೇ ಬೇರೆ." ಆಗ ಜಗಿಯಾ ತಲೆಯಾಡಿಸುತ್ತ ಹೇಳಿದ-"ಏನು ಹೇಳುತ್ತಿರುವೆ ನೀನು...ಹೊಸದಂದರೆ ಅದರ ಕಿಮ್ಮತ್ತು ಬಹಳ ಆಗ್ತದ. ನೀನು ಅದನ್ನು ಖರೀದಿಸೋದು "ಸಾಧ್ಯನ ಇಲ್ಲ" ಎಂದ.

ಆಗ ರಾಮೂ -"ನಾನು ಯಾವ ಪಂಪ್‌ಸೆಟ್‌ನ ಬಗ್ಗೆ ಹೇಳುತ್ತಿರುವೆನೋ ಅದನ್ನು ಅದರ ಮಾಲಕ ಬಹಳಂದ್ರ ಬಹಳ ಕಡಿಮೆ ದಿವಸ ವಾಪರಸ್ಯಾನ."

"ಅದೂ ಹೌದನ್ನು...ನೋಡಾಕ ಅದು ಸೆಕೆಂಡ್ ಹ್ಯಾಂಡ ಅನ್ನಿಸೋದೇ ಇಲ್ಲ...ಹೊಸದರಂಗ ಕಾಣಸ್ತದ...ಆದರ ಸೆಕೆಂಡ ಹ್ಯಾಂಡ್ ಅನ್ನೋ ಕಾರಣದಿಂದ ಬೆಲೆ ಇಳವದ..." ಎಂದ ಜೇನೂ.

"ಅವಶ್ಯಕತೆಯನ್ನು ಪೂರೈಸಿಕೊಳ್ಳೋದಕ್ಕ ತಗೊಳ್ಳಬೇಕಾಗ್ತದ...ಆದರೂ ಮನಸ್ಸಿನಿಂದ ಈ ಮಾಲು ಹಳೆಯದು ಎನ್ನುವ ಮಾತು, ಯಾರೋ ಇದನ್ನು ಈ ಮೊದಲು ಉಪಯೋಗಿಸ್ಯಾರ, ಬಳಸ್ಯಾರ ಎನ್ನುವ ಮಾತು ಮಾತ್ರ ಮಾಯ ಆಗೋದೇ ಇಲ್ಲ... ಎಂದ ಜಗಿಯಾ ಸತ್ತ ದನಿಯಲ್ಲಿ...

ರಾಜಿ ಈ ಎಲ್ಲ ಮಾತುಗಳನ್ನು ಚಿತ್ತಗೊಟ್ಟು ಕೇಳುತ್ತಿದ್ದಳು....ಅವರ ಮಾತು ಮುಗಿದಾಗ ಅವರಾಡಿದ್ದೆಲ್ಲ ಯಾವುದೋ ಪಂಪಸೆಟ್‌ನ ಬಗ್ಗೆ ಅಲ್ಲ ತನ್ನನ್ನೇ ಕುರಿತು ಆಡಿದ ಮಾತುಗಳವು ಎನ್ನಿಸಿತು ರಾಜಿಗೆ.

ಮುದುಡಿದ ಮನಸ್ಸಿನಿಂದ ರಾಜಿ ಅಲ್ಲಿಂದ ಎದ್ದು ಒಳಗೆ ಹೋದಳು.

●●



# ಸಿನಿಮಾ ಟಿಕೀಟುಗಳ ಕಾಳ ಸಂತೆ ಅಂತ್ಯವಿದೆಯೇ ಇದಕೆ ?

ಬಿಂ. ನಾ. ಗರುಡಾಚಾರ್

ಮೊದಲನೇ ಪ್ರದರ್ಶನ ಮೊದಲನೇ ಸೀಟೇ ಬೇಕು, ಇದಕ್ಕಾಗಿ ಎಷ್ಟು ಖರ್ಚಾದರೂ ಪರವಾಯಿಲ್ಲ ಅನ್ನೋ ಹಟ ಎಲ್ಲಿಯವರೆಗೆ ಸಿನಿಮಾ ವೀಕ್ಷರಲ್ಲಿ ಇರುವುದೋ ಅಲ್ಲಿಯವರೆವಿಗೆ ಸಿನಿಮಾ ಟಿಕೆಟ್ಟುಗಳ ಕಾಳಸಂತೆ ನಿಲ್ಲುವುದು ಅಸಾಧ್ಯವೇ ಈ ಕಾಳಸಂತೆ ಶುರುವಾದದ್ದೂ ಸಹ, ಸಿನಿಮಾಗಳ ಪ್ರಾರಂಭದಿಂದಲೇ. ೫೦೦ ಜನ ಕೂಡುವ ಜಾಗದಲ್ಲಿ ೧೦೦೦ ಜನ ಕ್ಯೂನಿಂತರೆ, ಉಳಿದ ೫೦೦ಜನ ಹಣ ಚೆಲ್ಲಲು ತಯಾರೇ ಆಗಿರುತ್ತಾರೆ. ಕೆಲವಾರು ಜನ ಈ ಕಪ್ಪು ಟಿಕೆಟ್ಟುಗಳನ್ನು ಮಾರುವವರನ್ನು ತೆಗೆದುಕೊಳ್ಳುವವರನ್ನು ಅನೌಪಚಾರಿಕ ಕೇಳಲಾಗಿ, ಅವರು ಹೇಳಿದ ವಿಷಯಗಳಿವು.

ಹೊಸ ಸಿನಿಮಾಗಳು ಶುರುವಾದಾಗ ಬೆಳಗ್ಗೆ ೮–೧೦ ಗಂಟೆಯ ವೇಳೆಗೆ ಕೆಲವು ಜನ ಸಿನಿಮಾ ಮಂದಿರಗಳ ಬಳಿ ಬಂದು ಅಲ್ಲಿ ನಿಂತಿರುವ ಹುಡುಗರಿಗೆ ೪–೫ ಟಿಕೆಟ್ಟು ತೆಗೆದಿಟ್ಟಿರಿ, ಒಂದು ಟಿಕೀಟಿಗೆ ೧ ರೂಪಾಯಿ ಜಾಸ್ತಿ ಕೊಡ್ತೀವಿ ಎಂದು ಹೇಳಿ ಹೋಗ್ತಾರೆ. ಈ ಹುಡುಗರು ಟಿಕೀಟು ಕಿಟಕಿಯ ಬಳಿ ಕಾದು ಕ್ಯೂನಲ್ಲಿ ನಿಂತು ಬಿಸಿಲಿನಲ್ಲಿ ಒಣಗಿ, ಛಳಿಯಲ್ಲಿ ನಡುಗಿ, ಮಳೆಯಲ್ಲಿ ನೆನೆದು, ೫–೬ ಟಿಕೀಟು ತೆಗೆದು ಒಂದೊಂದು ಪ್ರದರ್ಶನಕ್ಕೆ ೫–೬ ರೂಪಾಯಿನಂತೆ ದಿನಕ್ಕೆ ೧೦–೧೫ ರೂ ಸಂಪಾದನೆ ಮಾಡಿಕೊಳ್ಳುತ್ತಾರೆ. ಅವರ ವಾದ ವೇನೆಂದರೆ, ಇದೊಂದು ಜೀವನದ ಮಾರ್ಗ. ಇದರಲ್ಲಿ ಕಳ್ಳತನವಿಲ್ಲ. ಬೆವರು ಸುರಿಸಿ ದುಡಿದುಕೊಳ್ಳುವ ವೃತ್ತಿ ಎಂದು ಅವರ ವಾದ. ಇತ್ತೀಚೆಗೆ, ೮೦ಕ್ಕೂ ಜಾಸ್ತಿ ಸಿನಿಮಾ ಮಂದಿರಗಳಿರುವ ಬೆಂಗಳೂರಿನಲ್ಲಿ ಸುಮಾರು ೧೦೦೦ಜನರಿಗೆ ಈ ವೃತ್ತಿ ಸ್ವಂತವಾಗಿ ತಮ್ಮ ಕೈಕಾಲುಗಳ ಮೇಲೆ ನಿಂತುಕೊಳ್ಳುವಂತೆ ಮಾಡಿದೆ ಎಂದು ಒತ್ತಿ ಒತ್ತಿ ಹೇಳುತ್ತಾರೆ. ಈ ಟಿಕೀಟುಗಳನ್ನು ಕೊಂಡು ಕೊಳ್ಳುವವರ ವಾದವೇನೆಂದರೆ, ರಾಜಾಜಿನಗರದಿಂದಲೋ ಜಯನಗರದಿಂದಲೋ, ಇಂದಿರಾನಗರದಿಂದಲೋ ೮–೧೦ ರೂಪಾಯಿಗಳನ್ನು ಆಟೋರಿಕ್ಷಾಗಳಿಗೆ ತೆತ್ತು ವಾರಾಂತ್ಯದಲ್ಲಿ ಮನರಂಜನೆಗೆಂದು ಕೆಂಪೇಗೌಡ ಸರ್ಕಲ್ಲಿಗೆ ಬಂದರೆ, ಅಲ್ಲಿಯ ಸಿನಿಮಾ ಮಂದಿರಗಳಲ್ಲಿ ಕಾಣುವ ಬೋರ್ಡು "ಸಿನಿಮಾ ಮಂದಿರ ಭರ್ತಿಯಾಗಿದೆ" "ಸ್ಥಳವಿಲ್ಲ", ಎಂದು. ಇದಕ್ಕಾಗಿ ಮಾಡುವುದಾದರೂ ಏನು. ೧–೨ ರೂಪಾಯಿಗಳನ್ನು ಜಾಸ್ತಿ ಕೊಟ್ಟು ಬಂದ ಕೆಲಸ ಮಾಡಿಕೊಂಡು ಹೋಗುವುದು. ಇನ್ನು ಕೆಲವರು ತಾವೇಕೆ ಕ್ಯೂನಲ್ಲಿ ನಿಲ್ಲಬೇಕು, ಅದರಲ್ಲೂ ಬಿಸಿಲಿನಲ್ಲಿ ಮಳೆಯಲ್ಲಿ, ಛಳಿಯಲ್ಲಿ ಮೈಲುಗಟ್ಟಲೆ "ಹನುಮಂತನ ಬಾಲದಂತೆ ಬೆಳೆದಿರುವ ಕ್ಯೂಗಳಲ್ಲಿ ಹೇಗೆ ಕಾಲಹರಣ ಮಾಡಿಕೊಂಡಿರುವುದು. ಈ ರೀತಿ ಮಾಡುವವರಿಗೆ ಏನಾದರೂ ಪ್ರತಿಫಲ ಕೊಟ್ಟರೆ ತಪ್ಪೇನು ಎಂದು. ಅಂತೂ ದೊಡ್ಡ ನಗರಗಳಲ್ಲಿ ಈ ಟಿಕೀಟುಗಳ ಕಾಳಸಂತೆ ಶಾಶ್ವತವಾದ ವೃತ್ತಿಯಾಗಿದೆ. ಇದರಿಂದ ಹೊಡೆದಾಟ, ಬೈಗಳು, ಬೇರೆ ಜನಗಳು ಈ ವೃತ್ತಿಗೆ ಬರದಂತೆ ಮಾಡುವ ಕಾನೂನು ಬಾಹಿರ ಕ್ರಮಗಳು ಜಾಸ್ತಿಯಾಗುತ್ತಾ ಇರುತ್ತವೆ. ಈ ಬಂಡವಾಳವಿಲ್ಲದ ವ್ಯಾಪಾರದಲ್ಲಿ ಬೇರೆಯವರು ಕ್ಯೂನಲ್ಲಿ ನಿಲ್ಲುವುದಂತೂ ಅಸಾಧ್ಯವಾಗುವಂತಹ ಸನ್ನಿವೇಶಗಳು ವಿಪರೀತ. ಜೇಬುಗಳ್ಳತನ, ಕೈಗಡಿಯಾರ ಕಳ್ಳತನ, ಕತ್ತಿನಿಂದ ಚೈನುಗಳ ಸೆಳೆತ ಇದಂತೂ ಸರ್ವೇಸಾಧಾರಣ. ಈ ಕೆಲಸಗಳಿಗೆ ಸಿನಿಮಾ ಮ್ಯಾನೇಜರುಗಳು, ಬಂದೋಬಸ್ತಿಗಾಗಿ

ಬರುವ ಕೆಲವು ಪೋಲೀಸ್ ವ್ಯಾದೆಗಳೂ ಸಹ ಪರೀಕ್ಷಾಗುವ ಸಂಭವಗಳೂ ಉಂಟು. ಸ್ವಲ್ಪ ವಾಗ್ಯುದ್ಧ ಪ್ರಾರಂಭವಾದರೆ ಸಾಕು. ಸಿನಿಮಾ ಮಂದಿರಗಳ ಅಲಂಕಾರ ಗಾಜುಗಳು, ಈ ಜನರ ಕಲ್ಲಿಗೆ ತುತ್ತು. ಇದೊಂದು ತರಹ ನಿತ್ಯ ಸಮಸ್ಯೆಯಾಗಿ ಪರಿಣಮಿಸಿದೆ. ಆದರೆ ಪೋಲೀಸಿನವರು ಇದಕ್ಕೆ ಕೇವಲ ಮೂಕಪ್ರೇಕ್ಷಕರಾಗಿದ್ದಾರೆಂದು ಹೇಳಲು ಸಾಧ್ಯವಿಲ್ಲ. ಕಳೆದ ವರ್ಷ ಕಳ್ಳಟಿಕೇಟು ಮಾರಾಟಗಾರರ ಮೇಲೆ ೮೭೮ ಕೇಸುಗಳನ್ನು ಹಾಕಲಾಯಿತು. ಈ ವರ್ಷ ಇದುವರೆಗೆ ೪೧೩ ಕೇಸುಗಳನ್ನು ಹಾಕಲಾಗಿದೆ. ಇದರಲ್ಲಿ ಅನೇಕರಿಗೆ ೫ರಿಂದ ೭೫ ರೂಪಾಯಿಗಳವರೆಗೆ ಜುಲ್ಮಾನೆ ಸಹಾ ಆಗಿದೆ. ಮುಂಬರುವ ದಿವಸಗಳಲ್ಲಿ ಇನ್ನೂ ಜಾಸ್ತಿ ಧಾಳಿಗಳನ್ನು ನಡೆಸಿ, ಮೊಕದ್ದಮೆಗಳನ್ನು ಹೂಡಬೇಕೆಂಬ ಆದೇಶವನ್ನು ಸಹಾ ನೀಡಲಾಗಿದೆ.

ಆದರೆ ಕೇವಲ ಧಾಳಿ, ಮೊಕದ್ದಮೆಗಳಿಂದ ಈ ಪಿಡುಗಿನ ನಿವಾರಣೆಯಾಗುತ್ತದೆಂದರೆ ಅದು ಕೇವಲ ಕನಸು. ಇದರ ಪರಿಹಾರಕ್ಕೆ ಬೇರೆ ಮಾರ್ಗಗಳನ್ನು ಹುಡುಕಬೇಕಾಗಿದೆ.

ಕಳ್ಳ ಮಾರಾಟದ ಮುಖ್ಯಕಾರಣವೆಂದರೆ ನಗರಗಳ ಒಂದೆರಡೇ ಜಾಗಗಳಲ್ಲಿ ಸಿನಿಮಾಗಳ ಕೇಂದ್ರೀಕರಣ. ಬೆಂಗಳೂರಲ್ಲಂತೂ. ಕೆಂಪೇಗೌಡರಸ್ತೆಯ ಸುತ್ತುಮುತ್ತಿನಲ್ಲೇ ೨೦ಕ್ಕೂ ಹೆಚ್ಚು ಸಿನಿಮಾಗಳಿವೆ. ಇನ್ನು ಮುಂದಾದರೂ ಬಡಾವಣೆಗಳಲ್ಲಿ ಸಿನಿಮಾಗಳಿಗೆ ಅವಕಾಶಕೊಡಬೇಕು. ಉದಾರಹಣೆಗೆಗಾಗಿ ಹೇಳಬೇಕಾದರೆ. ಇಪ್ಪೊಂದು ಸುಖ್ಯೆಯಲ್ಲಿ ಖಾಯಂ ಸಿನಿಮಾ ಮಂದಿರಗಳಿದ್ದರೂ ಬೆಂಗಳೂರಿನ ಬಡಾವಣೆಗಳ ಅಂಚಿನಲ್ಲಿ ೧೦–೧೫ ಸಂಚಾರಿ ಸಿನಿಮಾಗಳಿವೆ. ಇದಕ್ಕಾಗಿ ಇನ್ನು ಮುಂದೆ ಕೇವಲ ಬಡಾವಣೆಗಳಲ್ಲಿ ಮಾತ್ರ ಸಿನಿಮಾಗಳ ಕಟ್ಟಡಗಳಿಗೆ ಅವಕಾಶ ನೀಡುವ ನೀತಿಯನ್ನು ರೂಪಿಸಬೇಕು.

ಎಲ್ಲಾ ತರಗತಿಗಳಿಗೂ ಮುಂಗಡವಾಗಿ ಸ್ಥಳ ಕಾದಿರಿಸುವ ಅವಕಾಶವನ್ನು ಕಡ್ಡಾಯವಾಗಿ ಮಾಡಬೇಕು. ಇದರಿಂದ ಹೊಸ ಪ್ರದರ್ಶನದ ದಿನದಂದು ಗಂಟೆಗಳ ಮುಂಚೆ ಬಂದು ಕ್ಯೂಗಳಲ್ಲಿ ನಿಲ್ಲುವ ಪ್ರಶ್ನೆಯೇ ಉದ್ಭವಿಸದಂತೆ ಆಗುತ್ತದೆ. ಹಾಗೇನಾದರೂ ಮುಂಗಡವಾಗಿ ಸ್ಥಳಗಳು ಭರ್ತಿಯಾಗದಿದ್ದರೆ ಟಿಕೇಟುಗಳನ್ನು ಮಾರಲು ಒಂದೊಂದು ತರಗತಿಗಳಿಗೆ ೩–೪ ಕಡೆ ಟಿಕೇಟು ಮಾರಲು ಅವಕಾಶ ಮಾಡಬೇಕು. ಇದರಿಂದ ಮಂದಿರಗಳ ಆವರಣದಿಂದ ರಸ್ತೆಯ ಫುಟ್‌ಪಾತ್‌ಗಳ ಆಕ್ರಮಣ ಸಹ ನಿಲ್ಲುತ್ತದೆ. ಇದರ ಜತೆಗೆ ತಲಾ ಒಂದೇ ಟಿಕೆಟ್ಟು ಎನ್ನುವ ಆಧಾರದ ಮೇಲೆ ಟಿಕೇಟುಗಳ ಮಾರಾಟವಾದರೆ, ಕಾಳಸಂತೆ ತನ್ನಷ್ಟಕ್ಕೆ ತಾನೆ ಮಾಯವಾಗುವ ಪ್ರಸಂಗ ಬರುತ್ತದೆ. ಇದರಿಂದ ಮಂದಿರಗಳ ಕಟ್ಟಡಗಳಿಗೆ ಹಾನಿ ಸಹಾ ನಿಲ್ಲುವ ಸಾಧ್ಯತೆ ಇರುವುದರಿಂದ ಸಿನಿಮಾ ಮಾಲೀಕರುಗಳು ಈ ತತ್ವವನ್ನು ಕಡ್ಡಾಯವಾಗಿ ಅನುಸರಿಸುವಂತೆ ಸಹಕರಿಸಬೇಕು.

ಅನಧಿಕೃತವಾದ ಅಧ್ಯಯನವೊಂದನ್ನು ನಡೆಸಿದಾಗ ನಗರಗಳಲ್ಲಿರುವವರಿಗೆ ಕೇವಲ ಸಿನಿಮಾವೊಂದೇ ಮನರಂಜನೆಗಾಗಿ ಇರುವ ವಸ್ತುವಾಗಿದೆ. ಇದಕ್ಕಾಗಿ ಸಂಗೀತ, ನಾಟಕ, ನೃತ್ಯ ಮುಂತಾದ ಇತರ ಮನರಂಜನೆಯ ಕಾರ್ಯಕ್ರಮಗಳನ್ನು ಏರ್ಪಡಿಸಿ ಜನ ಜಂಗುಳಿ ಹಂಚಿಹೋಗುವಂತಾಗಬೇಕು ಸಾಂಸ್ಕೃತಿಕ ಸಂಘಗಳು ಈ ದಿಶೆಯಲ್ಲಿ ಗಮನವಿಡಬೇಕು. ಬೆಂಗಳೂರಿನಂತಹ ದೊಡ್ಡ ನಗರಗಳಲ್ಲಿ ದೂರದರ್ಶನದ ಏರ್ಪಾಡಾದರೆ ಸಿನಿಮಾಗಳ ಕಡೆ ಹೋಗುವ ಆಸೆ ಬಹಳಷ್ಟು ಕಡಿಮೆಯಾಗುತ್ತದೆ.

ಅಂತೂ ಯಾವ ದೃಷ್ಟಿಯಿಂದ ನೋಡಿದರೂ ಈ ಕಾಳಸಂತೆಯು ಮುಂದುವರಿಕೆ ಸಮಾಜಕ್ಕೆ ಹಾನಿ ತರುವಂತಹದೇ ವಿನಾ, ಇದರಿಂದ ಪ್ರಯೋಜನವಿಲ್ಲ ಕಾನೂನಿನಿಂದ ತಡೆಗಟ್ಟಬಹುದಾದ ಮತ್ತೊಂದು ಸಲಹೆಯೇನೆಂದರೆ ಈ ಅಪರಾಧ ವೆಸಗುವವರಿಗೆ ಜಾಮೀನಿಲ್ಲದಂತಾಗಬೇಕು. ೬ ತಿಂಗಳಿಗೆ ಕಡಿಮೆಯಿಲ್ಲದಂತೆ ಕಾರಾಗೃಹವಾಸವಾಗಬೇಕು. ಆಗಲೇ ಇದು ಕಡಿಮೆಯಾದೀತು. ಕಾನೂನಿಗೆ ಮಿಗಿಲಾಗಿ ಸಿಮ್ಮೆಲ್ಲರಲ್ಲಿ, ಹೇಗೇ ಆಗಲಿ ಎಲ್ಲೇ ಆಗಲಿ ಸಿನಿಮಾ ಸೋಡಿಯೇ ತೀರಬೇಕೆಂಬ ಪ್ರವೃತ್ತಿ ಅಳಿಯಬೇಕು. ಅಂದೇ ಈ ಸಮಸ್ಯೆಗೆ ಅಂತಿಮ ಪರಿಹಾರ.





ಸ್ಪೆಟರ್ಸ್ ಮಾರುವ ಟಿಬೇಟಿಯನ್ನೊಬ್ಬ ಟಿಬೇಟಿಯನ್
ಭಾಷೆಯಲ್ಲಿ ಹಾಡನ್ನೊಂದು ಹಾಡುತ್ತಿದ್ದ
ಅದನ್ನು ಬರೆದವ ಅವಗೆ ಗೊತ್ತಿಲ್ಲ
ಟಿಬೇಟಿಯನ್ನರೆಲ್ಲ ಬಲು ಆಸಕ್ತಿಯಿಂದ
ಈ ಕವಿತೆ ಹಾಡುತ್ತಾರೆಂದ
ತನ್ನ ಹೆಸರು ಚುಂಗಥು ನೋ ಹುಂವಾಕಲ್ಲಿನೋ
ಅಂದ:

ಹತ್ತೂ ದಿಕ್ಕಿನ ಉಸಿರಾಡಿಸು
ವವರಿಗೆಲ್ಲ ಸಟಕ್ಕನೇ
ಯುದ್ಧ ಸಂಭವಿಸುವ
ಹೆದರಿಕೆ

ಆದರೂ ಆಗಬಹುದು ನೀವೂ ಕೇಳುವಿರಿ:
ಮುಂಚೂಣಿ ಗಡಿಯಲ್ಲಿ
ಭಾರವಾದ ಬೂಡ್ಸುಗಳ ಸಪ್ಪಳ
ದೈತ್ಯಾಕಾರದ ಟ್ಯಾಂಕರುಗಳ
ಇಪ್ಪತ್ನಾಲ್ಕು ತಾಸಿನ ಮೊರೆತ
ಮೃತ್ಯುವೇ ಬೆಂಬತ್ತಿರುವ ಸೈರನ್ನುಗಳ ಕೂಗು
ಬಂದೂಕುಗಳ ರವಾನೆ
ಗಾಯಗೊಂಡವರ ಆರ್ತನಾದ
ಸತ್ತವರು ಕೊಳೆಸಿದ
ಮಾಂಸದ ದುರ್ನಾತ
ಮನುಷ್ಯನನ್ನು ತಿನ್ನಲು ಹೊಂಚಿಹಾಕಿ
ಸದ್ದಿಲ್ಲದೆ ಹಾರುತ್ತಿರುವ ಹದ್ದುಗಳ ನೆರಳುಗಳು
ಯುದ್ಧದಿಂದಾಗುವ ಪರಿಣಾಮದಿಂದ
ಓಡಿ ಬಂದ ಜನರಿಗಾಗಿ ದೂರದಲ್ಲಿ
ತಯಾರಾಗುತ್ತಿರುವ ನಿರ್ವಾಸಿತ ಗುಡಿಸಲುಗಳು

ಅಕ್ಕ ತಂಗಿಯರ ಮೇಲೆ ಬಲಾತ್ಕಾರ
ಮಾಡುವ ಸೈನಿಕರು ಆ
ಲಿಂಗ
ನ ವಿರೋಧಿಸುವವರ ಹೆಣಗಳು–

ಶತ್ರುಗಳೆಷ್ಟು ಜನ ಸತ್ತರು ಎಂದು ಲೋಕಸಭೆ
ಯಲ್ಲಿ ಕೇಳುವ ಎಂಪಿಗಳು ಇಷ್ಟಿಷ್ಟು
ಇಂಚು ನೆಲ ಗೆದ್ದಿದ್ದೇವೆಂದು
ಉತ್ತರಿಸುವ ಪ್ರಧಾನಿ
ಮುನ್ನುಗ್ಗಿ ಮುನ್ನುಗ್ಗಿ
ವೈರಿಯನು ನುಂಗಿ ಹಾಕಿ
ಎಂದು ಹಾಡುವ ಕವಿಗಳು
ಸತ್ತರೆ ಸ್ವರ್ಗ ಗೆದ್ದರೆ ದೇಶ ಎಂದು
ಕಾಲು ಗಟ್ಟಲೇ ಬರೆಯುವ ಸಂಪಾದಕರು
ದಾರಿಯಲ್ಲೆಲ್ಲ ನಿಧಿ ಸಂಗ್ರಹಿಸುವ ಜನರು.

ಅಯ್ಯೋ ನಿಲ್ಲಿಸಿ ನಿಲ್ಲಿಸಿ ಈ ಹಿಂಸೆಯನು
ಜನರಲ್ಲರೇ ರಾಜಕಾರಣಿಗಳೇ ಲೇಖಕರೇ ಕವಿಗಳೇ
ಸಾಕು ಮಾಡಿ ಗೊತ್ತಿಲ್ಲ ನಿಮಗೆ
ಗುಂಡೆಂದರೇನೆಂಬುದನು
ನಿಮಗೆಂದೂ ಗುಂಡು ಬಡಿದಿಲ್ಲ
ನಿಮ್ಮ ಅಕ್ಕತಂಗಿಯರ
ಗರ್ಭವನು ಬಂದೂಕಿನಿಂದ ಯಾರೂ ಸೀಳಿಲ್ಲ;
ಸಾಕು ಸಾಕು ಸಾಕು
ಮಾಡಿ ಯುದ್ಧ,

● ಸರಜೂ ಕಾಟಕರ

# ಆಟದತ್ತ ಆಟಗಾರ್ತಿಯರ ಅನಿಸಿಕೆ

ಎನ್. ಗಾಯತ್ರಿದೇವಿ ★

ದಿನಪತ್ರಿಕೆಯೊಂದರಲ್ಲಿ ಬಂದ ಚಿತ್ರ: ಯೌವನದ ಹೊಸ್ತಿಲಲ್ಲಿದ್ದ ಮಹಿಳಾ ಕ್ರೀಡಾಪಟು. ಓಟದ ಭಂಗಿ, ಎದ್ದುಕಾಣುತ್ತಿದ್ದ ಅಂಗಾಂಗಗಳು. ನಗೆ ಮುಖ.

ಕ್ರೀಡೆಯಲ್ಲಿ ನಿರತರಾಗಿದ್ದಾಗ ಮಹಿಳಾ ಕ್ರೀಡಾಪಟುಗಳ ವ್ಯಕ್ತಿತ್ವ ಇದು. ಅಂಗಾಂಗಗಳ ಚಲನೆ, ಕ್ರೀಡಾ ಉಡುಗೆಯಿಂದ ಎದ್ದು ಕಾಣುವ ದೈಹಿಕ ಸೌಂದರ್ಯ; ಕುತೂಹಲಕ್ಕೆ ಎಡೆಮಾಡಿದ್ದ ಅಂಗಾಂಗಗಳು ಹೊರ ನೋಟಕ್ಕೆ ಲಭ್ಯ. ಪ್ರೇಕ್ಷಕರಿಗೆ ಇದು ಮೋಜೂ ಹೌದು. ಅಂಥವರಿಗೆ ಛೀಮಾರಿ ಹಾಕಬೇಕೆಂಬುದು ಹಲವರ ಕೂಗು.



ಕೊಕ್ಕಡೀರ ಚೋಪಯ್ಯ ಅಕ್ಕಮ್ಮ

ಇಂಥ ಒಂದು ಸ್ಥಿತಿಯಲ್ಲಿ ನಮ್ಮ ಮಹಿಳಾ ಕ್ರೀಡಾಪಟುಗಳೇನು ಹೇಳುವರು? ತಮ್ಮ ಅಂಗಾಂಗಗಳ ಪ್ರದರ್ಶನವಾಗುತ್ತಿದೆ ಎಂಬ ಸ್ಪಂದನ ಅವರಿಗುಂಟೆ? 'ಮುಟ್ಟಿ'ನ ದಿನಗಳಲ್ಲಿ ಅವರು ಸಹಜಸ್ಥಿತಿಯಿಂದ ಸ್ಪರ್ಧೆಗಳಲ್ಲಿ ಪಾಲ್ಗೊಳ್ಳುವುದು ಸಾಧ್ಯವೆ? ಜೊತೆಗೆ 'ಮಲತಾಯಿ ಧೋರಣೆ' ಹಾಗೂ ರಾಜಕೀಯ.

ಈ ಎಲ್ಲದರ ಬಗ್ಗೆ ಮಹಿಳಾ ಕ್ರೀಡಾಪಟುಗಳಿಗೆ ತಮ್ಮದೇ ಆದ ನಿಲುವುಗಳಿವೆ. ಅವರ ದೃಷ್ಟಿಕೋನದತ್ತ ಸಾಗಿ ವೀಕ್ಷಿಸುವುದೇ ಈ ಲೇಖನದ ಪ್ರಯತ್ನ.

## ಅಥ್ಲೆಟಿಕ್ ಅರಗಿಣಿ

ಕರ್ನಾಟಕದ ಅಥ್ಲೆಟಿಕ್ಸ್ ಪ್ರಪಂಚದಲ್ಲಿ ಒಂದೂವರೆ ದಶಕದಿಂದ ಮೆರೆಯುತ್ತಿರುವ ಐರಿನ್ ಸಾಲ್ಡಾನಾಗೆ ಈ ಬಗ್ಗೆ ವೇದನೆಯೂ ಇದೆ, ಸಿಟ್ಟೂ ಉಂಟು.

ಕ್ರೀಡೆಗಾಗಿ ತೊಡುವ ಉಡುಪಿನ ಬಗ್ಗೆ ಆಕೆಗೆ ಯಾವುದೇ ಅನಿಸಿಕೆ ಇಲ್ಲ. ಪ್ರೇಕ್ಷಕರ ಪುಂಡುತನಕ್ಕೆ "ಉದಾಸೀನವೇ ಮದ್ದು" ಎನ್ನುತ್ತಾರೆ. ಮೈದಾನದಲ್ಲಿ ಸುಲಲಿತವಾಗಿ ಚಲಿಸಲು ಉಡುಗೆ 'ಫಿಟ್' ಆಗಿರಲೇಬೇಕು. ಅಂಗಾಂಗಗಳ ಚಲನೆಯಾಗುತ್ತದೆ. ಆದರೆ ಆಟದಲ್ಲಿ ಮೈಮರೆತಿರುವಾಗ ಅದರ ಬಗ್ಗೆ ನೆನಪೆಲ್ಲಿ? ಜೀವನದೃಷ್ಟಿ ಬದಲಾಗಿ, ಪ್ರೇಕ್ಷಕರೂ ವಿಶಾಲ ಮನೋಭಾವದವರಾಗಬೇಕು. ಇದು ಐರಿನ್‌ರ ಅಹವಾಲು. ವಿಶಿಷ್ಟ ದಿನಗಳಲ್ಲಿ ಮೊದಲು ಮುಜುಗರವಿತ್ತು. ಆದರೆ ಆಟದಲ್ಲಿ ಅದನ್ನು ಪರಿಗಣಿಸಲಾಗುವುದಿಲ್ಲ. ಅಂಥ ದಿನಗಳಲ್ಲಿ ಸ್ವಲ್ಪ ಅಭ್ಯಾಸ ನಡೆಸಿದರೆ ಸ್ಪರ್ಧೆಗಳಲ್ಲಿ ಪಾಲ್ಗೊಳ್ಳುವುದು ಸುಲಭ. ದೈಹಿಕ ಬದಲಾವಣೆಗಿಂತಾ ಮಾನಸಿಕ ತಡೆಯೇ ಹೆಚ್ಚು ಎನ್ನುತ್ತಾರೆ ಈ ಅಥ್ಲೆಟಿಕ್ ಅರಗಿಣಿ.

ಮಹಿಳೆಯರ ಬಗ್ಗೆ ತಾತ್ಸಾರವಿದೆ. ಒಂದು ಈವೆಂಟ್‌ನಲ್ಲಿ ವಿಫಲರಾದರೆ ಅವರ ಕ್ರೀಡಾ ಕ್ಷಿತಿಜವೇ ಮುಚ್ಚುತ್ತದೆ. ಪುನಃ ಪುನಃ ಯತ್ನ ಮಾಡಲು ಅವಕಾಶ ಕಡಿಮೆ—ಇದು ಐರಿನ್‌ರ ವೇದನೆ. ಏಷ್ಯನ್‌ಗೇಮ್ಸ್‌ಗಳಲ್ಲಿ ಬೆಳಗದಿದ್ದರೆ ನಮ್ಮ ಮಹಿಳೆಯರಿಗೆಲ್ಲಿ ಆಡುವುದು ಸಾಧ್ಯ? ಎಂಬ ಮಾತುಗಳು. ರಾಜ್ಯದಾಚೆ ಟೂರ್ನಿಯಲ್ಲಿ ಭಾಗವಹಿಸಲು ಹೊರಟಾಗಿನ ನೆನಪು: ನೆರವು ನಕಾರ. ಪಂದ್ಯ ಆರಂಭವಾಗುವ ಕೆಲವೇ ಗಂಟೆ ಮೊದಲು ತಲುಪಬೇಕಾಗಿದ್ದ ಸ್ಥಳಕ್ಕೆ ಪ್ರವೇಶ. ಇದರೊಂದಿಗೆ ರಾತ್ರಿ ಬಸ್‌ನಲ್ಲಿ ನಿಂತು ಪ್ರಯಾಣ. ಇದು ಆಟದ ಮೇಲೆ ಪರಿಣಾಮ ಬೀರುವುದಿಲ್ಲವೆ? ಯಾರಿಗೂ ಹೊಣೆ ಬೇಡ— ಐರಿನ್ ದುಃಖ ಇದು.

## ಆಕ್ರೋಶ

ಕ್ರೀಡೆಗೆ ಪ್ರೋತ್ಸಾಹ ಕೊಡಬೇಕು, ರಾಷ್ಟ್ರ ಕ್ರೀಡೆಗಳಿಗೆ ತಕ್ಕ ಉತ್ತೇಜನ ನೀಡಬೇಕು ಎಂದೆಲ್ಲಾ ಮಾತುಗಳಿವೆ. ಆದರೆ ಸಂಘ-ಸಂಸ್ಥೆಗಳ ರಾಜಕೀಯದಲ್ಲಿ ಕ್ರೀಡಾಪಟುಗಳು ಬಳಲುತ್ತಾರೆ. ಎಷ್ಟೋ ಅವಕಾಶಗಳೂ ತಪ್ಪಿ ಹೋಗುತ್ತವೆ. ಕರ್ನಾಟಕ ರಾಜ್ಯ ಒಲಿಂಪಿಕ್ಸ್‌ನಲ್ಲಿ ಐರಿನ್ ಪಾಲ್ಗೊಳ್ಳಲಿಲ್ಲ. ಸಂಸ್ಥೆಗಳ ಒಳ ರಾಜಕೀಯದಲ್ಲಿ ವಿಜಯಾ ಬ್ಯಾಂಕ್ ಭಾಗವಹಿಸಲಾಗಲಿಲ್ಲ. ಆ ಬ್ಯಾಂಕ್ ಉದ್ಯೋಗಿಯಾದ ಐರಿನ್‌ಗೆ ಈ ರಾಜಕೀಯದಿಂದ ಬೇಸರ ಬಂದಿರುವುದು ಸಹಜವೇ.

ಕ್ರೀಡೆಗಾಗಿ ಸಮಯ ಸವೆಸಿ, ತರಬೇತಿ ಪಡೆದು ರಾಜ್ಯದ ಉತ್ತಮ



ಈವೆಂಟ್‌ನಲ್ಲಿ ಪಾಲ್ಗೊಳ್ಳುವುದು ಸಾಧ್ಯವಿಲ್ಲವೆಂದರೆ ನಾವು ಚಿಂತಿಸದಿರುವುದು ಸಾಧ್ಯವೆ? ಇದು ಕ್ರೀಡಾಪಟುಗಳ ಮೇಲೆ ಗಾಢ ಪರಿಣಾಮ ಬೀರುತ್ತದೆ. ನಮ್ಮೆಲ್ಲ ಅಭ್ಯಾಸವೂ ವ್ಯರ್ಥವಾಯಿತಲ್ಲಾ... ಇದು ಐರಿನ್‌ರ ಆಕ್ರೋಶ. ಸರ್ಕಾರದ ಮಧ್ಯಪ್ರವೇಶವೇ ಇದಕ್ಕೆ ಪರಿಹಾರ, ಇದು ಐರಿನ್‌ರ ನಿಲುವೂ ಹೌದು.

## ಆಟಗಾರರ ಸಂಘ

ಆಟದಲ್ಲಿ ತಲ್ಲೀನರಾಗಿರುವಾಗ ವೇಷದ ಬಗ್ಗೆ ಯಾರು ಚಿಂತಿಸುತ್ತಾರೆ? ಪ್ರೇಕ್ಷಕರು ಅಂಗಾಂಗಗಳ ಚಲನೆಯತ್ತ ಗಮನಿಸುವರೆಂದು ಯಾರು ಲಕ್ಷಿಸುತ್ತಾರೆ?

ಖ್ಯಾತ ಟೇಬಲ್ ಟೆನ್ನಿಸ್ ಪಟು ಉಷಾ ಸುಂದರರಾಜ್ ಅವರ ಅಭಿಪ್ರಾಯಗಳಿವು. ಆಟಕ್ಕೆ ತಕ್ಕ ಉಡುಪು ಅಗತ್ಯ. ಸೀರೆ ಉಟ್ಟು ಆಡಲುಹೋಗುವುದು ಸಾಧ್ಯವೆ? ಅಲ್ಲಿ ಅದು ಅಸಹನೀಯ ದೃಶ್ಯವಾಗೇ ಕಾಣುತ್ತದೆ. ಮನೆಯಲ್ಲಿ ಸಾಕಷ್ಟು ಪ್ರೋತ್ಸಾಹವಿದ್ದಾಗ ಉಡುಗೆ-ತೊಡಿಗೆಗಳಿಗೆ ಆತಂಕ ಅಡ್ಡಿ ಇಲ್ಲ. ಅಲ್ಲದೆ ಆಟದ ಅಂಗಳದಲ್ಲಿ ಅಲ್ಲಿನ ಒಪ್ಪ ಹೇಗೋ ಹಾಗೆ-ಇವು ಅವರ ಅನಿಸಿಕೆಗಳು.

ರಾಜಕೀಯ ಕೆಲವೆಡೆ ಇರಬಹುದು. ಕ್ರೀಡಾಪಟುಗಳಿಂದ ಬರುವ ಪ್ರಲೋಭ ಪಕ್ಷಪಾತಕ್ಕೆ ಎಡೆ ಮಾಡುತ್ತದೆ. ಸಂಸ್ಥೆಯ ಒಲವು ಪಡೆಯಲು ಹಾದಿ ಹಾಕುತ್ತದೆ. ಪಕ್ಷಪಾತ ಧೋರಣೆ ಕೆಲವು ಕಡೆ ಇರಬಹುದು ಎನ್ನುತ್ತಾರೆ ಉಷಾ.

ಇದೆಲ್ಲವುಕ್ಕಿಂತಾ ಹೊಸದಾಗಿ ಆರಂಭವಾಗಿರುವ ಸಂಸ್ಥೆ ಬಗ್ಗೆ ಮಾತಾಡುವುದು ಉಷಾ ಅವರಿಗೆ ಸುಲಭ, ಸರಳ ಟೇಬಲ್ ಟೆನ್ನಿಸ್ ಆಟಗಾರರ ಸಂಸ್ಥೆಯಾದ ಇದು ಆಟಗಾರರ ಹಿತಾಸಕ್ತಿಗಳನ್ನು ಕಾಪಾಡಲು ಪ್ರಾರಂಭವಾಗಿದೆ. ಪ್ರವಾಸ ಕೈಗೊಳ್ಳುವಾಗ ಅಗತ್ಯ ಇರುವ ಆಟಗಾರರಿಗೆ ಸಹಾಯ ಹಸ್ತ ಚಾಚುವುದು, ಅಧಿಕಾರಿಗಳು ಪಕ್ಷಪಾತ ಧೋರಣೆ ತಾಳದಂತೆ ನೋಡಿಕೊಳ್ಳುವುದು ಇವೇ ಮುಂತಾದವು ಈ ಸಂಸ್ಥೆಯ ಉದ್ದೇಶ.

## ಗಾಂಭೀರ್ಯದ ಗಡಿ

ಹುಡುಗಿಯರು ಚೆಲುವಿಗೆ ಮಾಧ್ಯಮ. ಗಾಂಭೀರ್ಯ ಅವರ ಹುಟ್ಟುಗುಣ. ಈ ಗಡಿಯನ್ನು ದಾಟಬಾರದು. ಅವರ ಒನಪು-ರೂಪ ಹಾಳಾಗಬಾರದಂತಹ ಆಟಗಳಲ್ಲಿ ನಿರತವಾದರೆ ಚೆನ್ನು.

ಹಿರಿಯ ಆಟಗಾರ್ತಿ, ಈಗ ರಾಜ್ಯ ಲಾನ್ ಟೆನ್ನಿಸ್ ಅಸೋಸಿಯೇಷನ್ನಿನ ಕಾರ್ಯದರ್ಶಿ ಶ್ರೀಮತಿ ಲೀಲಾ ಶಾಂತಮಲ್ಲಪ್ಪ ಅವರ ಅನಿಸಿಕೆ ಇದು.

ಕಬಡ್ಡಿ, ಕ್ರಿಕೆಟ್, ಫುಟ್‌ಬಾಲ್‌ಗಳಂಥ ಆಟಗಳಲ್ಲಿ ಹೆಣ್ತನವಿಲ್ಲ. ಮುಖ್ಯವಾಗಿ ಕಬಡ್ಡಿಯಾಡುವುದರಿಂದ ಹೆಣ್ತನ ಮರೆಯಾಗುತ್ತದೆ. ಮರುಷರಂತೆ ಆಡಬೇಕಾಗುವುದರಿಂದ ಆಕೆ ತನ್ನ ಗಾಂಭೀರ್ಯ ಕಳೆದುಕೊಳ್ಳುವಳು. ಬೆಳಗ್ಗಿನಿಂದ ಸಂಜೆವರೆಗೆ ಆಡುವ ಕ್ರಿಕೆಟ್ ನಿಂದ ಅವಳೇನಾಗಬೇಕು? ಅವರಿಗೆ ತಕ್ಕ, ಅವರಿಗೆ ಒಪ್ಪುವ ಆಟ ಆಡಿದರೆ ಸರಿಹೊಂದುತ್ತದೆ. ಅನವಶ್ಯ ಅಂಗಾಂಗ ಚಲನೆ ಕೂಡ ಇರುವುದಿಲ್ಲ. ಅವರಿಗೆ ಸರಿಹೊಂದುವ ಆಟ ಆಡಿ ಗಾಂಭೀರ್ಯ ಉಳಿಸಿಕೊಳ್ಳಲಿ ಇದು ಲೀಲಾ ಅವರ ನಿಲುವು. ಟೆನ್ನಿಸ್, ಕೊಕ್ಕೋ, ಬ್ಯಾಸ್ಕೆಟ್ ಬಾಲ್ ಇವು ತಕ ಎಂದೆನ್ನುತ್ತಾರೆ. ಅವರು.

ಅಂಗಾಂಗ ಚಲನೆಯಿಂದಲೇ ವಿದೇಶಿ ಮಹಿಳೆಯರಲ್ಲಿ ಭಾರತೀಯ ಸ್ತ್ರೀಯರಿಗಿರುವ ಗಾಂಭೀರ್ಯ (ಅಥವಾ ಹೆಣ್ತನ) ಕಾಣ ಬರುವುದಿಲ್ಲ. ಅವರ ನಡಿಗೆಯೋ ಒಂದು ತೆರನಾಗಿರುತ್ತದೆ. ಇದು ಗಮನಿಸಬೇಕಾದ ಅಂಶ ಹಾಗೂ ವಿದೇಶೀಯರು ಭಾರತೀಯ ಮಹಿಳೆಯರತ್ತ ಒಲವಿನ ದೃಷ್ಟಿ ಬೀರುವುದಕ್ಕೂ ಇದೇ ಕಾರಣಕ್ಕಾಗಿಯೇ – ಲೀಲಾ ಅವರ ಚಿಂತನೆಯಿದು.

ಇಂದೂ ಮಹಿಳಾ ಕ್ರೀಡಾಪಟುವೆಂದು ಬೆಟ್ಟು ಮಾಡಿತೋರಿಸುತ್ತಾರಲ್ಲಾ?

ಕ್ರೀಡಾಂಗಣದಲ್ಲಿ ಸಾಕಷ್ಟು ಅನುಭವ ಇರುವ ಲೀಲಾ ಅವರು ಇದನ್ನು ಒಪ್ಪುತ್ತಾರೆ. ಕುಟುಂಬದ ಸಂಪೂರ್ಣ ಸಹಕಾರವಿದ್ದರೆ ಮಾತ್ರ ಸ್ತ್ರೀ ಕ್ರೀಡಾಕ್ಷೇತ್ರದಲ್ಲಿ ಬೆಳಗುವುದು ಸಾಧ್ಯ. ಮನೆಯವರು ಒಪ್ಪಿದರೆ ಪ್ರತಿಭೆ ಅರಳುವುದು. ಹೆಣ್ಣು ಮಕ್ಕಳನ್ನು ಹೊರಗೆ ಕಳಿಸುವುದು. ಜವಾಬ್ದಾರಿಯುತದ್ದು. ಜೊತೆ ಇಲ್ಲದೆ ಹೊರಟ ಟೂರ್ನಿಗಳಿಗೆ ಕಳಿಸಲು ಯೋಚಿಸಬೇಕಾಗುತ್ತದೆ. 'ಬೆಳೆದ ಮಕ್ಕಳು. ಮದುವೆ ಚಿಂತೆ ಇರುತ್ತದೆ'- ಹೀಗೆಂದು ಯೋಚಿಸುವ ಲೀಲಾ ಅವರಿಗೆ ಮನೆಯಲ್ಲಿ ತಕ್ಕಷ್ಟು



ಕಮಲಜಿತ್ ಸಿಂಧು

ಪ್ರೋತ್ಸಾಹ ಇದ್ದುದರಿಂದ ಬೆಳಗಲು ಸಾಧ್ಯವಾಯಿತು.

ಪ್ರತಿಭೆ ಇದ್ದೂ ಮನೆಯವರ ಅಡ್ಡಿಯಿಂದ ಸುಪ್ತವಾಗಿ ಉಳಿದವರು ಇದ್ದಾರೆ. 'ಷಟಲ್ ಬ್ಯಾಡ್ ಮಿಂಟನ್ ನಲ್ಲಿದ್ದಾರೆ' ಎಂದು ಲೀಲಾ ಹೇಳುತ್ತಾರೆ. ರಾಜಕೀಯ ಒತ್ತಡ ಕಾಣಬರುವುದಿಲ್ಲ. ಪ್ರತಿಭೆಗೆ ಪುರಸ್ಕಾರ ಎಂದು ಅವರು ಅಭಿಪ್ರಾಯಪಡುತ್ತಾರೆ.

ವಿಶಿಷ್ಟ ದಿನಗಳಲ್ಲಿ ಸ್ತ್ರೀಯರಿಗೆ ಆಡುವುದು ಕಷ್ಟವೆ? ಇದಕ್ಕೆ ಮಾನಸಿಕ ಸ್ಥಿತಿಯೇ ಕಾರಣ. ದೈಹಿಕವಾಗಿ ಯಾವುದೇ ತೊಂದರೆಯಾಗುವುದಿಲ್ಲವೆಂದು ಈಗ Prove ಆಗಿದೆ.



ಶಾಂತಾ ರಂಗಸ್ವಾಮಿ

ರಾಜಕೀಯದ ಗಾಳಿ ಪ್ರವೇಶಿಸಿಲ್ಲ ಎನ್ನುವುದು ಅವರ ಅನಿಸಿಕೆ. ಆದರೆ ಮಹಿಳಾ ಕ್ರಿಕೆಟ್ ಆಟಗಾರರಿಗೆ ಇನ್ನೂ ಹೆಚ್ಚಿನ ಪ್ರೋತ್ಸಾಹ ಅಗತ್ಯ ಎನ್ನುತ್ತಾರೆ.

## ಮಾತೆಯರ ಮಮತೆ

ಇದೇ ವಿಷಯಗಳ ಬಗ್ಗೆ ಮಾತೆಯರ ನಿಲುವೇನು?

ಮಡಿವಂತಿಕೆ ಇನ್ನೂ ಕಂಡು ಬರುತ್ತಿರುವ ಕಾಲವಿದು. "ಈಗೇನೋ ಪರವಾಗಿಲ್ಲ. ಮುಂದೆ ಹೇಗೆ? ಒಂದು ವಯಸ್ಸಿನಲ್ಲಿ ಹೆಣ್ಣುಮಕ್ಕಳನ್ನು ಹೊರಗೆ ಕಳುಹಿಸುವುದು ಚಿಂತೆಯ ವಿಷ್ಯ" ಎನ್ನುವ ಓರ್ವ ತಾಯಿ ಇದು ಜವಾಬ್ದಾರಿಯ ಕೆಲಸ ಮನೆಯವರು ಹೋದರೆ ಪರವಾಗಿಲ್ಲ ಎನ್ನುತ್ತಾರೆ"

ಮಗಳು ಆಟದಲ್ಲಿ ಮುಂದುವರೆಯಲಿ ಹೊರಗಿನ ಟೂರ್ನಿಗಳಲ್ಲೂ ಭಾಗವಹಿಸಲಿ ಆದರೆ ಒಬ್ಬಳನ್ನೇ ಹೇಗೆ ಕಳುಹಿಸುವುದು– ಇದು ಮತ್ತೋರ್ವರ ಪ್ರಶ್ನೆ. 'ಸರಿಯಾದ ಜೊತೆ' ಇದ್ದೇ ಇರಬೇಕು ಎನ್ನುತ್ತಾರೆ ಹಲವು ಮಂದಿ ತಿಳಿಯದ ಕಡೆಗಳಿಗೆ ಅರಿಯದ ಬಾಲಕಿಯರನ್ನು ಹೇಗೆ ಕಳಿಸೋದು ಎನ್ನುವ ತಾಯಿಯೋರ್ವರು ಅವಳಿಗೆ ಸ್ನೇಹಿತೆಯರ ಜೊತೆ ಇದ್ದರೆ ಪರವಾಗಿಲ್ಲ ಎನ್ನುತ್ತಾರೆ.

ಅವರು ಕ್ರೀಡಾಪಟುವಿನ ತಾಯಿ. ಮಗಳಿಗೆ ಎಲ್ಲ ಪ್ರೋತ್ಸಾಹವೂ ಕೊಟ್ಟಿದ್ದಾರೆ. ಅವಳ ಪ್ರತಿಭೆ ಅರಳಲು ಅಡ್ಡಿ ಮಾಡೋದಿಲ್ಲ ಎನ್ನುವ ಅವರು ಅವಳ ಹೊಣೆಗಾರಿಕೆ ಅವಳಿಗೆ ಗೊತ್ತು. ಆದ್ದರಿಂದ ಚಿಂತೆ ಇಲ್ಲ ಎನ್ನುತ್ತಾರೆ.

ಸಂಪ್ರದಾಯ ಉಳ್ಳ ಮನೆ. ಮಡಿ–ಮೈಲಿಗೆಯ ಗಾಳಿ ತುಂಬಿದೆ. ಮಗಳು ಕ್ರೀಡಾಪಟು. ವಿಶಿಷ್ಟ ದಿನಗಳಲ್ಲಿ ಆಕೆ ಅಭ್ಯಾಸಕ್ಕೆ ಹೋಗಲೂ ಬಾರದೆನ್ನುವ ವಾತಾವರಣ. ಇದು ಮಾನಸಿಕ ಕ್ಲೇಶಕ್ಕೆ ದಾರಿ ಮಾಡುವುದಿಲ್ಲವೆ ಎಂದು ಪ್ರಶ್ನಿಸಿದರೆ ತಾಯಿಯದು ಚಿಂತನಶೀಲ ಉತ್ತರ: ಸ್ತ್ರೀ ತನ್ನ ಸಹಜಸ್ಥಿತಿ ಮರೆಯಲಾಗುವುದಿಲ್ಲ. ಇಂದೇನು ಆಟ ಆಡಬಹುದು. ಆದರೆ ನಾಳೆ ಮದುವೆಯಾಗುವ ಹುಡುಗಿ ಆಟಗಾರ್ತಿ ಎಂಬ ಬಿರುದಿನಿಂದಲೇ ಹುಡುಗಿಯನ್ನು ನಿರಾಕರಿಸಿದರೆ? ಭವಿಷ್ಯದ ಬಗ್ಗೆ ಚಿಂತಿಸಲೇ ಬೇಕು. ಏಕೆಂದರೆ ಆಟ ಎಂದೆಂದಿಗೂ ನಿಲ್ಲುವಂತಹುದಲ್ಲ.

"ಹುಡ್ಗೀರೂ ಆಡಿದ್ರೇನೋಡಿ ಅಂದ–ಚಂದ ಚಲೋ ಆಗೆ ಕಾಣಿಸ್ತದೆ" ಇದು ಸಾಮಾನ್ಯ ಮಹಿಳೆ ಸಹಜ ಸ್ಥಿತಿಯಲ್ಲಿ ಆಡಿದರೆ ಯಾವ ಪರಿಣಾಮವೂ ಆಗದು ಎನ್ನುವ ಅವರು ಯಾವುದಕ್ಕೂ ಸಾಮಾಜಿಕ ಮೌಲ್ಯಗಳು ಬದಲಾಗಬೇಕು ಎನ್ನುತ್ತಾರೆ.

## ತಾರತಮ್ಯ ಇಲ್ಲ

ಕ್ರಿಕೆಟ್ ಹುಡುಗರ ಆಟ ಎನ್ನುವ ಕಾಲ ಇದಲ್ಲ. ರಾಷ್ಟ್ರದ ಅಗ್ರಮಾನ್ಯ ಕ್ರಿಕೆಟ್‌ಪಟು ಶಾಂತಾ ರಂಗಸ್ವಾಮಿ ಅವರು ಈ 'ಪುರುಷ' ಆಟದಲ್ಲಿ'ಸಾಧನೆಗೈದವರು. ಕ್ರೀಡೆಯಲ್ಲಿ ತಾರತಮ್ಯ ಇಲ್ಲವೆನ್ನುವ ಅವರು ಆಟಕ್ಕೆ ತಕ್ಕಂಥ ಉಡುಪು ಅಗತ್ಯ ಎನ್ನುತ್ತಾರೆ.

ಅಂಗಾಂಗಗಳ ಪ್ರದರ್ಶನ ಅನಿವಾರ್ಯ. ಅಲ್ಲದೆ ಆಡುವ ಸಮಯದಲ್ಲಿ ಅದರ ಬಗ್ಗೆ ಚಿಂತೆ ಬರುವುದಿಲ್ಲ. ಪ್ರೇಕ್ಷಕರ ಕೂಗಿಗೆ ಬೆಲೆ ತೆರುವುದೂ ಸಾಧ್ಯವಿಲ್ಲ ಎನ್ನುವುದು ಅವರ ವಾದ. ಅವರಿಗಂತೂ ಮನೆಯಲ್ಲಿ ಪ್ರೋತ್ಸಾಹವಿತ್ತು. ಅಡ್ಡಿ ಆತಂಕಗಳು ಉಂಟಾಗಲಿಲ್ಲ.



ರೀಟಾ ಡಿಸೋಜ



ಐರಿನ ಸಾಲ್ವಾನಾ



ಯರ ಅಭಿಪ್ರಾಯ. ಚೆಂದದ ಹುಡುಗಿಯರು ಆಟ ಆಡಿದರೆ ಅಡ್ಡಿ ಏನು? ಉಡುಗೆ ಅಲ್ಲಿಗೆ ತಕ್ಕಂತೆ ಇರಬೇಕು. ಹುಡುಗ್ರು ಆಡಿಕೊಂಡ್ರೆ ಏನೀಗ ಎನ್ನುವ ಅವರು ಸರಿಯಾದ ಕ್ರೀಡೆಗಳಲ್ಲಿದ್ದರೆ ಹುಡುಗಿಯರ ದೈಹಿಕ ಶಕ್ತಿ ಮಿನುಗುತ್ತದೆ ಎನ್ನುತ್ತಾರೆ. ಇಂದಿನ ಆಧುನಿಕ ವಸ್ತುಗಳಿಂದ ವಿಶಿಷ್ಟ ದಿನಗಳೇನು ಅಡ್ಡಿಪಡಿಸುವುದಿಲ್ಲ ಎಂದು ಅವರು ಹೇಳುತ್ತಾರೆ.

## ಪ್ರೇಕ್ಷಕ ಗಣ

ಹುಡುಗಿಯರ ಆಟ ನೋಡೋದಕ್ಕೇ ಹೋಗ್ತೀವಿ. ಅದೊಂದು ಆಕರ್ಷಣೆ ಇದು ಕೆಲ ಪ್ರೇಕ್ಷಕರ (ಪುರುಷರ) ನುಡಿಗಳು. ಆಕರ್ಷಣೆ ಉಂಟು. ಅಡ್ಡಿ ಏನು ಎನ್ನುತ್ತಾರೆ ಅವರು. ಅವರೇನು ಆಡ್ತಾರೆ ಎಂಬ ತಾತ್ಸಾರದಿಂದ ಹೋಗುವವರು ಕೆಲವರು. ಕ್ರೀಡಾ ಮನೋಭಾವದಿಂದ ಹೋಗುವವರು ಹಲವರು. ಗುಲ್ಲು, ಗೇಲಿ ಮಾಡಲೆಂದು ಕೆಲವರು ಮಹಿಳಾ ಕ್ರೀಡಾಕೂಟಗಳಲ್ಲಿ ಪ್ರೇಕ್ಷಕರಾಗುತ್ತಾರೆ. ಆದರೆ ಅದರ ಬಗ್ಗೆ ಹೆಚ್ಚಿನ ಮಹತ್ವ ನೀಡಬಾರದು ಎಂಬುದು ಕ್ರೀಡಾಪಟುಗಳ ಅಭಿಪ್ರಾಯ.

ಮಹಿಳೆಯರು ಈಗ ಕ್ರೀಡಾಕ್ಷೇತ್ರದ ಎಲ್ಲ ಭಾಗಗಳಲ್ಲಿಯೂ ರಾರಾಜಿಸುತ್ತಿದ್ದಾರೆ. ಆದರೆ ಪ್ರೋತ್ಸಾಹ, ಅವಕಾಶ ಕಡಿಮೆ ಎಂಬ ಕೂಗು ಕ್ರೀಡಾಪಟುಗಳಲ್ಲಿದೆ. ಮಹಿಳಾ ಕ್ರೀಡೆಯತ್ತ ಹೊಸ ದೃಷ್ಟಿ ಅಗತ್ಯ. ಬೆಟ್ಟು ಮಾಡುವ ಬೆಪ್ಪುತನ ಸಾಕು. ಬದಲಾಗುತ್ತಿರುವ ಸಾಮಾಜಿಕ ಮೌಲ್ಯದಲ್ಲಿ ಜನ ಸಮುದಾಯ ಪಾಲ್ಗೊಂಡು ತಾರತಮ್ಯ ಮರೆಯಬೇಕು. ಕ್ರೀಡಾ ಮನೋಭಾವದಿಂದ ಕಣ್ಣು ಹಾಯಿಸಿದರೆ ಎಲ್ಲವೂ ಆರೋಗ್ಯಕರವಾಗೇ ಇರುತ್ತದೆ ಎನ್ನುವುದು ಕ್ರೀಡಾಪಟುಗಳ ಅನಿಸಿಕೆ.

ಜೊತೆಗೆ ಉತ್ತೇಜನ ಇನ್ನಷ್ಟು ಹೆಚ್ಚಬೇಕು. ಅವಕಾಶಗಳು ಹೆಚ್ಚಾಗಿ ಪ್ರತಿಭೆ ಬೆಳಗಲು ಸಾಮರ್ಥ್ಯ ಅಭಿವೃದ್ಧಿ ಪಡಿಸಿಕೊಳ್ಳಲು ನೆರವುಬೇಕು. ಮಹಿಳಾ ಕ್ರೀಡಾ ತರಬೇತಿ ಶಿಬಿರಗಳು ಪತ್ರಿಕೆಗಳಲ್ಲಿ ಮಾತ್ರ. ಇವು ಹೆಚ್ಚಾದರೆ ಮಹಿಳಾ ಕ್ರೀಡಾಪಟುಗಳಿಗೆ ನೆರವು ದಕ್ಕಿದಂತಾಗುತ್ತದೆ. ರಾಷ್ಟ್ರದ ಕ್ರೀಡಾಪ್ರತಿಭೆಯ ಜ್ಯೋತಿಯು ಬೆಳಗುತ್ತದೆ. ●



ರಾಜ್ಯ ಲಾನ್ ಟೆನ್ನಿಸ್ ಅಸೋಸಿಯೇಷನ್ನಿನ ಕಾರ್ಯದರ್ಶಿ ಶ್ರೀಮತಿ ಲೀಲಾ ಕಾ.ತಮ್ಮಲ್ಲಪ್ಪ



ಶಶಿಕಲಾ ಮಣಿ

ದಂತವೈದ್ಯರು ಹೇಳುತ್ತಾರೆ.

# ನಿಯಮಿತವಾಗಿ ಹಲ್ಲುಗಳನ್ನು ಸ್ವಚ್ಛಮಾಡಿ ಒಸಡುಗಳನ್ನು ಮಸಾಜು ಮಾಡಿಕೊಂಡರೆ ದಂತಕ್ಷಯ ತಡೆದು ಒಸಡುಗಳ ತೊಂದರೆ ನಿವಾರಣೆಯಾಗುತ್ತದೆ

ಆಕರ್ಷಕ ಕಿತ್ತಳೆ— ಬಣ್ಣದ ಪ್ಯಾಕ್‌ನಲ್ಲಿ

ಫೋರ್‌ಹೆನ್ಸ್ ಉಪಯೋಗಿಸುತ್ತಿರುವವರು ಸ್ವಸಂತೋಷದಿಂದ ಹೇಳುತ್ತಾರೆ.

**"ನನ್ನ ಒಸಡುಗಳು ಸುದೃಢ ಮತ್ತು ಸ್ವಾಸ್ಥ್ಯಪೂರ್ಣವಾಗಿವೆ"**

"ಕಳೆದ ಮೂರು ವರ್ಷಗಳಿಂದ ನಿಮ್ಮ 'ಫೋರ್‌ಹೆನ್ಸ್ ಟೂಥ್‌ಪೇಸ್ಟ್' ಉಪಯೋಗಿಸಿ ನನ್ನ ಒಸಡುಗಳು ಸುದೃಢ ಮತ್ತು ಸ್ವಾಸ್ಥ್ಯಪೂರ್ಣವಾಗಿವೆ. ಮೊದಲು ನನ್ನ ಒಸಡುಗಳು ತೊಂದರೆ ಕೊಡುತ್ತಿದ್ದವು. ಈಗ ನಾನು ನಿಮ್ಮ ಟೂಥ್‌ಪೇಸ್ಟ್‌ನಿಂದಾಗಿ ಈ ತೊಂದರೆಯಿಂದ ಪಾರಾಗಿದ್ದೇನೆ."

(ಸಹಿ) ಡಿ.ಎನ್. ದಾಸ್, ಶಿಖರಪುರ್.

**"ನನ್ನ ಬಾಯಿಯ ದುರ್ಗಂಧ ಹೋಯಿತು ಒಸಡುಗಳ ತೊಂದರೆ ಇಲ್ಲವಾಯಿತು"**

"....ರಾಜಮಹೇಂದ್ರಿಯ ಒಬ್ಬ ದಂತವೈದ್ಯರು...ಹಲ್ಲು ಮತ್ತು ಒಸಡುಗಳ ತೊಂದರೆಗಾಗಿ ಫೋರ್‌ಹೆನ್ಸ್ ಉಪಯೋಗಿಸಲು ನನಗೆ ಹೇಳಿದರು. ಕೂಡಲೇ ಅವರ ಸಲಹೆಯನ್ನು ಪಾಲಿಸಿದೆನು. ಮತ್ತು ಅತ್ಯಲ್ಪ ಕಾಲದಲ್ಲಿ ನನ್ನ ಬಾಯಿಯ ದುರ್ವಾಸನೆ ಹೋಯಿತು. ಒಸಡುಗಳ ತೊಂದರೆ ಇಲ್ಲವಾಯಿತು. ನಿಜ ಹೇಳಬೇಕೆಂದರೆ, ಅಂದಿನಿಂದ ನಾನು ಒಬ್ಬನೆ ಅಲ್ಲ, ನಮ್ಮ ಇಡೀ ಪರಿವಾರದವರು (ನಾವು ಒಟ್ಟು 9 ಜನ !) ಫೋರ್‌ಹೆನ್ಸ್ ಉಪಯೋಗಿಸುತ್ತಿದ್ದೇವೆ. ಈ ರೂಢಿ ಮತ್ತು ಶ್ರದ್ಧೆಗಳು ಮುಂಬರುವ ಪೀಳಿಗೆಯಲ್ಲೂ ಮುಂದುವರಿಯುವವು ಎಂಬ ವಿಶ್ವಾಸ ನನಗಿದೆ."

(ಸಹಿ) ಪಿ.ಜೆ. ಅಾಕ್ಟುಸ್, ಚೀರಾಲಾ, ಆಂಧ್ರಪ್ರದೇಶ್.

(ಈ ಪತ್ರಗಳ ಫೋಟೋ-ಪ್ರತಿಗಳನ್ನು ಜೆಫ್ರೀ ಮೇನರ್ಸ್ ಅಂಡ್ ಕಂ.ಲಿ. ಅವರ ಯಾವುದೇ ಆಫೀಸಿನಲ್ಲಿ ಬೇಕಾದರೂ ನೀವು ಕಾಣಬಹುದು).

ಹಲ್ಲುಗಳ ಸರಿಯಾದ ಸಂರಕ್ಷಣೆಗಾಗಿ ಪ್ರತಿದಿನ ರಾತ್ರಿ ಮತ್ತು ಮುಂಜಾನೆ ನಿಮ್ಮ ಹಲ್ಲುಗಳನ್ನು ಬ್ರಶ್ ಮಾಡಲು ಮತ್ತು ನಿಮ್ಮ ಒಸಡುಗಳನ್ನು ಮಸಾಜು ಮಾಡಲು ಫೋರ್‌ಹೆನ್ಸ್ ಉಪಯೋಗಿಸಿರಿ. ಜೊತೆಗೆ ಫೋರ್‌ಹೆನ್ಸ್ ಡಬ್ಬಲ್ ಆ್ಯಕ್ಷನ್ ಟೂಥ್ ಬ್ರಶ್ ಉಪಯೋಗಿಸಿರಿ, ಯಾಕೆಂದರೆ ಹಲ್ಲುಗಳನ್ನು ಸ್ವಚ್ಛಗೊಳಿಸಲು ಮತ್ತು ಒಸಡುಗಳನ್ನು ಮಸಾಜು ಮಾಡಲು ಇದನ್ನು ವಿಶೇಷವಾಗಿ ತಯಾರಿಸಲಾಗಿದೆ.

***ಉಚಿತ!*** ಹಲ್ಲು ಮತ್ತು ಒಸಡುಗಳ ರಕ್ಷಣೆಯ ಬಗ್ಗೆ ಬೋಧಪ್ರದ ವರ್ಣರಂಜಿತ ಪುಸ್ತಿಕೆ. ಕೃಪೆಮಾಡಿ 25 ಪೈಸೆಯ ಅಂಚೆಯ ಸ್ಟ್ಯಾಂಪನ್ನು ಜೊತೆಗಿಟ್ಟು ಫೋರ್‌ಹೆನ್ಸ್ ಡೆಂಟಲ್ ಎಡ್ವೈಸರಿ ಬ್ಯೂರೋ. ಡಿಪಾರ್ಟಮೆಂಟ ಪೋಸ್ಟ್ ಬ್ಯಾಗ್ ನಂ. 11463, ಬೊಂಬಾಯಿ 400 020 ಈ ವಿಳಾಸಕ್ಕೆ ಬರೆಯಿರಿ, ಬೇಕಾದ ಭಾಷೆಯನ್ನು ನಮೂದಿಸಿರಿ.







## ಫೋರ್‌ಹೆನ್ಸ್

ದಂತವೈದ್ಯರಿಂದ ಸೃಷ್ಟಿಸಲ್ಪಟ್ಟ ಟೂಥ್‌ಪೇಸ್ಟ್





ಅವರಿಗೆ ಪಟಾಕಿ ಹೊಡಿ-ಯೋದಿಕ್ಕೆ ಇಷ್ಟಾ ಇಲ್ಲಾಂತ ಕಾಣುತ್ತೆ. ಆಗ್ಲಿಂದ ಅದರ ಮುಂದೆ ಸುಮ್ನೆ ನೋಡ್ತಾ ಕೂತಿದ್ದಾರೆ.



ಪಟಾಕಿಗಳಿಗೂ ಗೊತ್ತಾಗಿಹೋಗಿದೆ ನೋಡಪ್ಪಾ....ಈಗ ತುರ್ತುಪರಿಸ್ಥಿತಿ ರದ್ದಾಗಿದೇಂತ. ಅದಕ್ಕೇ ಜಾಸ್ತಿ ಶಬ್ದ ಮಾಡ್ತಿವೆ.

# ಪಟ ಪಟ ಎನ್ನುವ ಪಟಾಕಿ ಬಂತು

H.S. ಮಧುರಾನಾಥ್

ಈ ಸಲ ಪಟಾಕಿ ಹೊಡೆ-ಯೋದು ಬೇಡ. ವನೇಲರೊ ತಗಡಿನ ಬಾಗಿಲಿಗೆ ಕೋಲು ತಗೊಂಡು ಹೊಡಿ ಅದೇ ತರಹ ಶಬ್ದ ಬರುತ್ತೇಅಂತ ಹೇಳಿದ್ರು ನಮ್ಮಪ್ಪ





ಅಮ್ಮ ಕೂಗಾಡ್ತಾ ಇದ್ರೆ ಇದೇ ತರಹ ಶಬ್ದ ಅಲ್ವೇನೋ ಬರೋದು

ನೀನು ಮಾತನಾಡೋದೇ ಪಟಾಕಿ ಹೊಡೆದಂಗೆ.... ಬೇರೆ ಏನೂ ನಿನಗೆ ಕೊಡಿಸಲ್ಲ ಅಂದ್ಬಿಟ್ಲು ನಮ್ಮಮ್ಮ.



# ಹೋರಾಟದ ಅಂಗವಾಗಿ ರಂಗಭೂಮಿ

ಪ್ರಸನ್ನ

ಬಿಡುವಿನ ವೇಳೆಗೊಂದು ಹವ್ಯಾಸ–ಎನ್ನುವುದು ರಂಗಭೂಮಿಯ ಬಗೆಗೆ ನಮಗಿರುವ ಸಾಮಾನ್ಯ ಕಲ್ಪನೆ. ಉತ್ತರ ಕರ್ನಾಟಕದ ಕೆಲವು ಕಡೆ ಉಳಿದಿರುವ ಕಂಪನಿಗಳನ್ನು ಬಿಟ್ಟರೆ ಕರ್ನಾಟಕದಲ್ಲಿ ಜೀವಂತ ಇರುವ ರಂಗಭೂಮಿಯನ್ನು ನಾವು 'ಹವ್ಯಾಸಿ ರಂಗಭೂಮಿ' ಎಂದೇ ಕರೆಯುತ್ತೇವೆ. ರಂಗಭೂಮಿ ಬಿಡುವಿನ ಹವ್ಯಾಸವಾಗುವುದಕ್ಕಿಂತ ಹೆಚ್ಚಿನದೇನನ್ನು ಸಾಧಿಸಬಹುದು ಎಂದು ನಾವು ಯೋಚಿಸುವುದೇ ಇಲ್ಲ. ನಮ್ಮಲ್ಲಿರುವ ಪರಿಸ್ಥಿತಿಯನ್ನೇ ಸಾರ್ವತ್ರೀಕರಿಸಿ ಎಲ್ಲ ಕಾಲಕ್ಕೂ ಎಲ್ಲ ದೇಶಗಳಲ್ಲೂ ರಂಗಭೂಮಿಗೆ ಇಂತಹ ಸೀಮಿತ ಉದ್ದೇಶ ಮಾತ್ರ ಇದೆ ಎಂದು ನಿರ್ಧಾರಕ್ಕೆ ಬಂದುಬಿಡುತ್ತೇವೆ. ಇದು ನಿಜವಲ್ಲ; ಯಾವುದೇ ಸಾಂಸ್ಕೃತಿಕ ಕಾರ್ಯಕ್ರಮ ಆ ಯುಗದ ಮನಸ್ಥಿತಿಯನ್ನು ಪ್ರತಿಬಿಂಬಿಸುತ್ತಿರುತ್ತದೆ. ಅನೇಕ ವೇಳೆ ಆ ಕಾಲದ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಹೋರಾಟದಲ್ಲಿ ಭಾಗಿಯಾಗಿರುತ್ತದೆ. ಶೇಕ್ಸ್‌ಪಿಯರನ ನಾಟಕಗಳು ಎಲಿಜಬೆತಿಯನ್ ಯುಗದ ತುಮುಲಗಳ ಪರಿಣಾಮದಿಂದ ಹುಟ್ಟಲಿಲ್ಲವೇ? ವಚನ ಸಾಹಿತ್ಯ, ಮಧ್ಯಯುಗದಲ್ಲಿ ನಡೆದ ಸಾಮಾಜಿಕ ಬದಲಾವಣೆಗಳ ಕೂಗಾಗಲಿಲ್ಲವೇ? ನಂತರದ ಜನಾಂಗಗಳಿಗೆ ತನ್ನ ಕಾಲದ ಪ್ರತಿಬಿಂಬವಾಗುವ ರಂಗಭೂಮಿ ಕೆಲವು ವೇಳೆ ತೀರ ಉತ್ಕಟವಾಗಿ ಅಂದಿನ ಹೋರಾಟಗಳಲ್ಲಿ ಭಾಗಿಯಾದ ಉದಾಹರಣೆಗಳಿವೆ.

**ಅಜಿಟ್ ಪ್ರಾಪ್ ಗುಂಪುಗಳು:** ವಿಯಟ್ನಾಮ್‌ಲ್ಲಿನ ಹೋರಾಟ ತುಂಬ ದೀರ್ಘವಾದುದು. ಫ್ರೆಂಚ್ ವಸಾಹತಾಗಿದ್ದ ವಿಯೆಟ್ನಾಮ್‌ನಲ್ಲಿ ಹೊ.ಚಿ. ಮಿನ್ಹ್ ಅವರ ನೇತೃತ್ವದಲ್ಲಿ ನಡೆದ ಹೋರಾಟದ ಫಲವಾಗಿ ಫ್ರೆಂಚರು ಸೋತು ಕಾಲ್ತೆಗೆದರು. ಆದರೆ ಹೋಗುವಾಗ ದೇಶವನ್ನು ಎರಡು ಹೋಳುಗಳಾಗಿ ಮಾಡಿ ಹೋದರು. ಹೊ.ಚಿ. ಮಿನ್ಹ್ ಅವರ ನೇತೃತ್ವದಲ್ಲಿನ ವಿಮೋಚನಾ ಪಡೆಯ ಪೂರ್ಣ ಹತೋಟಿಯಲ್ಲಿದ್ದ ಉತ್ತರ ಪ್ರದೇಶಗಳು 'ಉತ್ತರ ವಿಯೆಟ್ನಾಂ' ಆಯಿತು. ದಕ್ಷಿಣ ಭಾಗಕ್ಕೆ ನಾಮಕಾವಾಸ್ತೆ ಆಡಳಿತವೊಂದು ಪ್ರಾಪ್ತವಾಗಿ ಅದು ಅಮೇರಿಕನ್‌ರ ಕಮ್ಯುನಿಸ್ಟ್ ದಮನ ನೀತಿಗೆ ನೆಲೆಯಾಯಿತು. ದಕ್ಷಿಣ ವಿಯಟ್ನಾಮ್‌ನಲ್ಲಿನ ಜನತೆಯ ಹೋರಾಟ ಮಾತ್ರ ಮುಂದುವರೆಯಿತು, ಅಮೇರಿಕನ್ನರು ದಕ್ಷಿಣ ವಿಯೆಟ್ನಾಮ್‌ನಿಂದ ಕಾಲ್ತೆಗೆಯುವಂತೆ ಮಾಡಿ, ಒಡೆದು ಹೋದ, ವಿಯೆಟ್ನಾಮ್ ಮತ್ತೆ ಒಂದುಗೂಡುವಂತೆ ಮಾಡುವುದು ಈ ಹೋರಾಟದ ಉದ್ದೇಶವಾಗಿತ್ತು. ಹತ್ತಾರು ವರ್ಷಗಳವರೆಗೆ ನಡೆದ ಈ ಹೋರಾಟ ಮೂಲತಃ ಗೆರಿಲ್ಲಾ ರೀತಿಯ ಹೋರಾಟ. ಗೆರಿಲ್ಲಾ ಹೋರಾಟಗಾರರಿಗೆ ಅಲ್ಲಿನ ಸ್ಥಳೀಯರ ಪೂರ್ಣ ಬೆಂಬಲ ಇತ್ತು.

ಇಂತಹ ಗೆರಿಲ್ಲಾ ಹೋರಾಟದ ಅಂಗವಾಗಿ 'ಅಜಿಟ್ ಪ್ರಾಪ್' ನಾಟಕದ ಗುಂಪುಗಳು ಹುಟ್ಟಿಕೊಂಡವು. 'ಅಜಿಟ್ ಪ್ರಾಪ್' ಎಂದರೆ ಚಳುವಳಿಯ ಅಂಗ ಎಂಬರ್ಥ. ಈ ನಾಟಕದ ಗುಂಪುಗಳಿಗಿದ್ದ ಮೂಲ ಉದ್ದೇಶ, ಜನರಿಗೆ ಹೋರಾಟದ ಬಗ್ಗೆ ತಿಳಿಸುವುದು, ಮತ್ತು ಅವರಲ್ಲಿ ಹೋರಾಟದ ಮನೋಭಾವವನ್ನು ಉದ್ದೀಪನಗೊಳಿಸುವುದಾಗಿತ್ತು. ಎಲ್ಲ ನಾಟಕಗಳ ಗುಂಪಿನ ಹಾಗೆ ಆರಾಮವಾಗಿ ಬಂದು, ಸ್ಟೇಜ್ ಕಟ್ಟಿ, ಪ್ರಚಾರ ಮಾಡಿ, ಬಣ್ಣ ಬಳಿದುಕೊಂಡು ನಾಟಕವಾಡುವುದು ಅವರಿಗೆ ಸಾಧ್ಯವಿದ್ದಿಲ್ಲ. ಅವರು ಯಾಂಕಿಗಳ ಕಣ್ಣಿಗೆ ಬೀಳುವಂತಿರಲಿಲ್ಲ; ಯಾಂಕಿಗಳ ಬಾಲಬಡುಕರಿಗೂ ಸಿಕ್ಕುವಂತಿರಲಿಲ್ಲ. ಹಾಗಾಗಿ ಕ್ಷಣಮಾತ್ರದಲ್ಲಿ, ಎಲ್ಲೆಂದರಲ್ಲಿ ಕಾಣಿಸಿಕೊಂಡು ಮಿಂಚಿನಂತೆ ನಾಟಕಗಳನ್ನಾಡಿ ಅಷ್ಟೇ ವೇಗವಾಗಿ ಮರೆಯಾಗಿ ಬಿಡುವುದು ಇವರ ಕಾಳಜಿಯಾಗಿತ್ತು. "ಗೆರಿಲ್ಲಾಗಳು ನೀರಿನಲ್ಲಿ ಈಜು ಮೀನುಗಳಿದ್ದಂತೆ. ಮೀನಿಗೆ ನೀರಿನಲ್ಲಿ ಈಜುವುದು ಎಷ್ಟು ಸರಾಗವೋ, ಗೆರಿಲ್ಲಾಗಳಿಗೆ ಜನತೆಯೊಂದಿಗಿನ ಸಂಪರ್ಕ ಅಷ್ಟೇ ಸುಲಭವಾಗಬೇಕು" ಎನ್ನುವುದು ಗೆರಿಲ್ಲಾಗಳ ಬಗ್ಗೆ ಮಾವೋತ್ಸೆ ತುಂಗ್ ಹೇಳಿರುವ ಮಾತು. ಈ ಮಾತು ಅಜಿಟ್ ಪ್ರಾಪ್ ಗುಂಪುಗಳಿಗೂ ಅಷ್ಟೇ ಚೆನ್ನಾಗಿ ಅನ್ವಯಿಸುತ್ತದೆ.

**ಕಾಫಿ ಹೌಸ್ ರಂಗಭೂಮಿ:** ವಿಯಟ್ನಾಮ್ ಯುದ್ಧದ ಪ್ರತಿಫಲನ ಅಮೇರಿಕೆಯಲ್ಲೂ ಆಗುತ್ತಿತ್ತು. ಅಮೇರಿಕಾದ ಸಾಮ್ರಾಜ್ಯಶಾಹಿ ಆಡಳಿತ, ಸಾವಿರಾರು ಮೈಲುಗಳಾಚಿನ ವಿಯೆಟ್ನಾಮ್‌ನಲ್ಲಿ ಕಮ್ಯುನಿಸ್ಟರನ್ನು ದಮನ ಮಾಡುತ್ತೇವೆ ಎಂದುಕೊಂಡು, ತನ್ನ ಸಾವಿರಾರು ಯುವಕರನ್ನು ಯುದ್ಧದಲ್ಲಿ ಬಲಿಕೊಟ್ಟಿತು. ಇದು ಅಲ್ಲಿನ ಜನತೆಗೆ ಸರಿಕಾಣಲಿಲ್ಲ. 'ವಿಯೆಟ್ನಾಮ್‌ನಲ್ಲಿ ಯುದ್ಧ ನಿಲ್ಲಿಸಿ' ಎನ್ನುವ ಭಾರೀ ಚಳುವಳಿ ಅಮೇರಿಕೆ

# ಹೋರಾಟದ ಅಂಗವಾಗಿ ರಂಗಭೂಮಿ

ಯಲ್ಲಿ ಪ್ರಾರಂಭವಾಯಿತು. ಈ ಚಳುವಳಿಯ ಮುಂದಾಳತ್ವವನ್ನು ವಿದ್ಯಾರ್ಥಿಗಳೂ ಬುದ್ಧಿಜೀವಿಗಳೂ ವಹಿಸಿದ್ದರು. ಛಾಮ್‌ಸ್ಕಿಯಂತಹ ಅಮೇರಿಕಾದ ಖ್ಯಾತ ಭಾಷಾ ಶಾಸ್ತ್ರಜ್ಞ ಈ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದ. ವಿಶ್ವವಿದ್ಯಾಲಯ ಹಾಗೂ ಮತ್ತಿತರ ಸಾಂಸ್ಕೃತಿಕ ಕೇಂದ್ರಗಳಲ್ಲಿ ಯುದ್ಧ ವಿರೋಧಿ ಪ್ರದರ್ಶನಗಳು ನಡೆದವು. ಈ ಆಂದೋಲನದಲ್ಲಿ ನಾಟಕವನ್ನು ತುಂಬ ಚೆನ್ನಾಗಿ ಬಳಸಿಕೊಳ್ಳಲಾಯಿತು. ವಿಶ್ವವಿದ್ಯಾಲಯದ ಕಾಫಿ ಹೌಸ್‌ಗಳಲ್ಲಿ ಹಾಗೂ ಮತ್ತಿತರ ಜಾಗಗಳಲ್ಲಿ ಊಟ ತಿಂಡಿಗೆಂದು, ಸಿಗರೇಟ್ ಸೇದಲೆಂದು ಬಂದ ವಿದ್ಯಾರ್ಥಿಗಳ ಎದುರಿಗೆ ಸಣ್ಣ ಪುಟ್ಟ ರೂಪಕಗಳನ್ನು ಅಭಿನಯಿಸಲಾಗುತ್ತಿತ್ತು. ಯುದ್ಧ ವಿರೋಧಿ ಪ್ರಚಾರ ಈ ಎಲ್ಲ ನಾಟಕಗಳ ವಸ್ತು. ಅಮೇರಿಕನ್ ರಂಗಭೂಮಿಯಲ್ಲಿ, ಅದರಲ್ಲೂ ಮ್ಯೂಸಿಕಲ್‌ಗಳಲ್ಲಿ ಕಂಡು ಬರುವ ಭಾರೀ ರಂಗಸಜ್ಜಿಕೆ, ವಿಶಾಲವಾದ ರಂಗಮಂದಿರ, ನೂರಾರು ನಟರು, ಮೂರು ಗಂಟೆಯ ನಾಟಕಗಳು. ಇವಾವುದೂ ಇರದೆ ತೀರಾ ಸರಳವಾಗಿ ನೇರವಾಗುತ್ತಿದ್ದವು ಈ ನಾಟಕಗಳು.

**ರಸ್ತೆ ಬದಿಯ ರಂಗಭೂಮಿ:** ದಿಲ್ಲಿಯಲ್ಲಿನ ಉತ್ಸಾಹಿ ಯುವಕ ಯುವತಿಯರು ಕೆಲವರು ಇಂತಹ ಗುಂಪೊಂದನ್ನು ಕಟ್ಟಿಕೊಂಡಿದ್ದಾರೆ. (ಈ ಲೇಖನದ ಇತರ ಉದಾಹರಣೆಗಳ ಹಾಗೆ ದಿಲ್ಲಿಯ ಈ ಗುಂಪು ಚರಿತ್ರೆಯ ಪುಟಕ್ಕೆ ಸೇರಿ ಹೋಗಿಲ್ಲ ಅದು ಈಗಲೂ ಅಲ್ಲಿ ಕೆಲಸ ಮಾಡುತ್ತಿದೆ.) ಗುಂಪಿನಲ್ಲಿರುವವರು ಬ್ಯಾಂಕ್‌ಗಳಲ್ಲಿ, ಎಲ್.ಐ.ಸಿ.ಗಳಲ್ಲಿ, ಕಾಲೇಜುಗಳಲ್ಲಿ ಕೆಲಸಮಾಡುತ್ತಾರೆ. ಸುಮಾರು ಇಪ್ಪತ್ತು ಜನರಿರುವ ಈ ಗುಂಪು ರಸ್ತೆ ಬದಿಯಲ್ಲಿ, ಪಾರ್ಕ್‌ಗಳಲ್ಲಿ ಹೋಗಿ ನಾಟಕಗಳನ್ನು ಆಡುತ್ತಾರೆ. ಆಗಾಗ ದಿಲ್ಲಿಯ ಸುತ್ತ ಮುತ್ತಲ ಹಳ್ಳಿಗಳವರೆಗೂ ಹೋಗಿ ನಾಟಕಗಳನ್ನು ಆಡಿ ಬರುತ್ತಾರೆ. ಟಿಕೆಟ್ ಇಲ್ಲದೆ ಆಡುವ ಈ ನಾಟಕಗಳೂ ಕೂಡಾ ನಿರಾಡಂಬರ ನಾಟಕಗಳು. ಜನರ ರಾಜಕೀಯ ಪ್ರಜ್ಞೆಯನ್ನು ಮೀಟುವ ಉದ್ದೇಶ ಹೊಂದಿದ ಇವರ ನಾಟಕಗಳು ಎಮರ್ಜೆನ್ಸಿಯ ಸಮಯದಲ್ಲಿ ಮತ್ತು ನಂತರ ಜನರೊಂದಿಗೆ ಪ್ರತಿಕ್ರಿಯಿಸಲು ಪ್ರಯತ್ನ ನಡೆಸಿದೆ.

**ತೆಲುಗಿನಲ್ಲಿ ಬುರ್ರ ಕಥಾ:** ತೆಲಂಗಾಣದ ರೈತರ ಹೋರಾಟದಲ್ಲಿ ಕೂಡಾ ಸಾಂಸ್ಕೃತಿಕ ಮಾಧ್ಯಮಗಳು ತುಂಬ ಉಪಯುಕ್ತ ಪಾತ್ರವನ್ನು ನಿರ್ವಹಿಸಿದ್ದವು. ಸ್ವಾತಂತ್ರ್ಯ ಪೂರ್ವದಲ್ಲೇ ಪ್ರಾರಂಭವಾದ ಈ ಹೋರಾಟದ ಮುಖ್ಯ ತಿಕ್ಕಾಟವಿದ್ದುದು ಜಮೀನುದಾರರಿಗೂ ಹಾಗೂ ಭೂರಹಿತ ರೈತರಿಗೂ ನಡುವೆ. ಆಗ ವಿಮೋಚನಾ ದಳಗಳನ್ನು ಕಟ್ಟಿಕೊಂಡು ಹೋರಾಡಿದ ರೈತರು, ತೆಲಂಗಾಣದ ಅನೇಕ ಭಾಗಗಳನ್ನು ಜಮೀನುದಾರರ ಕರಾಳ ಹಿಡಿತದಿಂದ ಯಶಸ್ವಿಯಾಗಿ ಬಿಡಿಸಿಕೊಂಡಿದ್ದರು. ತೆಲಂಗಾಣದ ಈ ಹೋರಾಟದಲ್ಲಿ ಮತ್ತು ಆರವತ್ತರ ದಶಕದ ಕಡೆಯಲ್ಲಿ ನಕ್ಸಲೀಯ ಚಳುವಳಿಯಲ್ಲಿ ಕೂಡಾ ಅಲ್ಲಿನ ಕ್ರಾಂತಿಕಾರಿಗಳು ರಂಗಭೂಮಿಯನ್ನು ತುಂಬ ಯಶಸ್ವಿಯಾಗಿ ಬಳಸಿಕೊಂಡರು.

'ಬುರ್ರಕಥ' ತೆಲುಗಿನ ಜಾನಪದ ರಂಗಭೂಮಿ. ಬುರ್ರಕಥದಲ್ಲಿ ರಂಗಭೂಮಿಯ ಅಂಶಗಳಿಗಿಂತಲೂ ಹಾಡಿನ ಮತ್ತು ಕಥೆ ಹೇಳುವ ತಂತ್ರಗಳು ಹೆಚ್ಚಾಗಿದೆ. ಹೆಚ್ಚಿನ ನಟರಿಲ್ಲದೆ ಇಬ್ಬರೇ ನಡೆಸಿಕೊಡಬಲ್ಲಂತಹ ಈ ಜಾನಪದ ರಂಗಭೂಮಿ ಅಲ್ಲಿನ ಕ್ರಾಂತಿಕಾರಿ ಕವಿಗಳನ್ನು ತುಂಬ ಆಕರ್ಷಿಸಿತು.

ಈ ರೀತಿಯ ಉದಾಹರಣೆಗಳು ಲೆಕ್ಕವಿಲ್ಲದಷ್ಟು ಸಿಕ್ಕುತ್ತದೆ. ಎರಡನೆಯ ಮಹಾಯುದ್ಧದ ಸಮಯದಲ್ಲಿ ರಷ್ಯನ್ನರು ತಮ್ಮ ರಂಗಮಂದಿರಗಳನ್ನು ಮುಚ್ಚಲಿಲ್ಲ, ಬದಲಿಗೆ ರಂಗಭೂಮಿಯನ್ನು ಉಳಿಸಿಕೊಂಡು ಬಂದರು. ಜೊತೆಗೆ ಅವುಗಳನ್ನು ಯಶಸ್ವಿಯಾಗಿ ಬಳಸಿಕೊಂಡರು. ಯುದ್ಧದಿಂದ, ಬಾಂಬ್ ದಾಳಿಯಿಂದ ಜರ್ಜರಿತವಾಗಿದ್ದ ಪೀಟರ್ಸ್‌ಬರ್ಗ್ ನಂತಹ ಪಟ್ಟಣಗಳಲ್ಲಿ ಸುಂದರ ಪರದೆಗಳ ರಂಗಮಂದಿರಗಳು ಉಳಿದೇ ಇರಲಿಲ್ಲ. ಅಂತಹ ಭಾರೀ ಕಟ್ಟಡಗಳೆಲ್ಲವೂ ಆಸ್ಪತ್ರೆಗಳಾಗಿಯೋ ಅಥವಾ ಮಿಲಿಟರಿ ನೆಲೆಗಳಾಗಿಯೋ ಮಾರ್ಪಾಟಾಗಿ ಬಿಟ್ಟಿದ್ದವು. ಆದರೆ ಮಾಯರ್‌ಹಾಲ್ಡ್‌ನಂತಹ ಖ್ಯಾತ ನಿರ್ದೇಶಕನ ನಾಟಕಗಳು ಅಂತಹ ಕ್ಷೋಭೆಯ ನಡುವೆಯೂ ತುಂಬಿ ನಡೆಯುತ್ತಿದ್ದವು. ವ್ಯತ್ಯಾಸವೆಂದರೆ ಆಗ ನಾಟಕಕ್ಕೆ ಬರುತ್ತಿದ್ದವರು ಶಿಸ್ತುಗಾರ ಪುಟ್ಟಸ್ವಾಮಿಗಳಾಗಿರದೆ ಗಲೀಜು ಬಟ್ಟೆ ತೊಟ್ಟವರು, ರಣರಂಗದ ಒಂದು ಕಡೆಯಿಂದ ಇನ್ನೊಂದು ಕಡೆ ಹೋಗುತ್ತಿರುವ ಸೈನಿಕರು ಆಗಿರುತ್ತಿದ್ದರು. ನಾಟಕಗಳು ನಡೆಯುತ್ತಿದ್ದಾಗ ಯುದ್ಧರಂಗದಿಂದ ಸುದ್ದಿಯೇನಾದರೂ ಬಂದರೆ ನಾಟಕದ ಮಧ್ಯೆ ದೊಡ್ಡ ಗಂಟೆಯೊಂದನ್ನು ಬಾರಿಸಿ ಸುದ್ದಿ ಪ್ರಸಾರಮಾಡಿ ನಂತರ ನಾಟಕಗಳನ್ನು ಮುಂದುವರೆಸುತ್ತಿದ್ದರು. ಕೂಡಲು ಕುರ್ಚಿಯಿಲ್ಲದಿದ್ದರ ನಿಂತೇ ನಾಟಕ ನೋಡುತ್ತಿದ್ದರು. ರಂಗಸ್ಥಳವಿಲ್ಲದಿದ್ದರೆ ದೊಡ್ಡ ಹಾಲಿನ ಮಧ್ಯೆ ರಂಗಸ್ಥಳ ನಿರ್ಮಿಸಿ ಸುತ್ತಲೂ ಕೂತು ನಾಟಕ ನೋಡುತ್ತಿದ್ದರು. ಮಾಯರ್‌ಹಾಲ್ಡ್‌ನ ಕೆಲವು ಖ್ಯಾತ ನಿಯಮಾವಳಿಗಳು ಆಗಲೇ ರೂಪ ಪಡೆದದ್ದು. (ಆತನ Bio mechanics ನಿಯಮಗಳು ಇತ್ಯಾದಿ). ಅರ್ಧ ಪರದೆ ಉಪಯೋಗಿಸುವುದು, ದೀಪಗಳು ಕಾಣುವಂತೆ ರಂಗ ಸಂಯೋಜನೆ ಮಾಡುವುದು, ಇದ್ದದ್ದು ಇದ್ದ ಹಾಗೇ ಕಾಣುವ ರಂಗ ಸಜ್ಜಿಕೆಯನ್ನು ( Naturalistic ) ಕೈ ಬಿಟ್ಟದ್ದು ಎಲ್ಲವೂ ಆಗಲೇ ಜಾರಿಗೆ ಬಂದ ತಂತ್ರಗಳು.

ನಾವಾಡುವ ಭಾಷೆಯನ್ನು ಬೆಳೆಸಲಿಕ್ಕೆ ಸಾಹಿತ್ಯವಿದೆ, ಪತ್ರಿಕೋದ್ಯಮವಿದೆ, ವೈಜ್ಞಾನಿಕ ಬರವಣಿಗೆ

ಹೋರಾಟದ ಅಂಗವಾಗಿ ರಂಗಭೂಮಿ

ಭಾಷಣ, ಚರ್ಚೆ, ಮಾತುಗಾರಿಕೆ ಎಲ್ಲ ಇದೆ. ಹಾಗೆಯೇ ರಂಗಭೂಮಿಯೂ ಮಾಧ್ಯಮವಾಗಿ ಬೆಳವಣಿಗೆ ತೋರಿಸಬೇಕಾದರೆ ಅದು ಬೇರೆ ಬೇರೆ ಸಾಧ್ಯತೆಗಳನ್ನು ಒಡಿಕೊಳ್ಳಬೇಕಾಗುತ್ತದೆ. ಹಾಗಿಲ್ಲದೆ ಬರೇ ಮಧ್ಯಮವರ್ಗದ ಹವ್ಯಾಸವಾಗಿ ಮಾತ್ರ ಉಳಿದರೆ ಅದು ಮುರುಟಿಹೋಗುತ್ತದೆ.



# ಒಂದು ಅಪಘಾತದ ಅನುಭವ

*ಮೂಲ : ಸುಜಾತ
*ಅನು : ಬಾಲಯೋಗಿ

ಶುಕ್ರವಾರ ರಾತ್ರಿ ಗಂಟೆ ೧೧.೩೬. ಎರಡು ರಸ್ತೆಯ ಸೀಳಿನಲ್ಲಿ ಆ ಅಪಘಾತ ನಡೆಯಿತು. ಅದನ್ನು ಕಂಡವ ಒಬ್ಬ ಮಾತ್ರ. ಆತ ಸ್ವಲ್ಪ ಮಟ್ಟಿಗೆ ಭಯಭಕ್ತಿಯ ಆಸಾಮಿ. ವರಮಾನ ತೆರಿಗೆಯನ್ನು ನ್ಯಾಯವಾಗಿ ಸಲ್ಲಿಸುವ ವ್ಯಕ್ತಿ. ನಿದ್ದೆ ಬರದೆ ಬಿಸಿಲುಮಚ್ಚಿನಲ್ಲಿ ಮಲಗಿ ನಕ್ಷತ್ರಗಳನ್ನು ಎಣಿಸುತ್ತಿದ್ದವರು ಒಂದು ಸಿಗರೇಟು ಹಚ್ಚಿ ಮುಂದಿನ ಗೋಡೆಯನ್ನು ಹಿಡಿದು ನಿಂತು ಹೊರಗೆ ಬಗ್ಗಿ ನೋಡುತ್ತಿದ್ದರು. ಅವರ ಮನೆ ಆ ರಸ್ತೆಯ ಸೀಳಿನ ಮೂಲೆಯಲ್ಲಿತ್ತು. ಸ್ವಲ್ಪ ದೂರದಲ್ಲಿ ಚೌಕೀದಾರ ದೊಣ್ಣೆಯನ್ನು ನೆಲಕ್ಕೆ ಬಡಿದ ಶಬ್ದ ಮತ್ತು ಅದರ ಪ್ರತಿಧ್ವನಿಗಳು ಕೇಳಿ ಬಂದವು.

ಮೊದಲು ಆ ಕಾರಿನ ಬೆಳಕು ರಸ್ತೆಯನ್ನು ಗುಡಿಸುತ್ತ ಬಂತು. ಅವರು ಅದನ್ನು ಸರಿಯಾಗಿ ನೋಡಲಿಲ್ಲ. ಅದರ ಎಂಜಿನ್ ಶಬ್ದ ನೀರವತೆಯ ಆಕ್ರಮಿಸಿಕೊಂಡು ಬಿರುಸಿನ ವೇಗದ ಕಾರಣ ಶ್ರುತಿ ಬದಲಾಯಿಸಿ ಹತ್ತಿರ, ಹತ್ತಿರ ಹತ್ತಿರಕ್ಕೆ ಸುಮಾರು ತೊಂಬತ್ತು–ನೂರು ಕಿಲೋ ಮೀಟರ್ ವೇಗದಲ್ಲಿ ಬರುವಾಗ ಅದನ್ನು ಗಮನಿಸಿದರು. "ರಾಮ ರಾಮ ಎಷ್ಟು ಜೋರು!"

ಹಿಂದಿನ ಸೀಟಿನಲ್ಲಿ ಕುಳಿತ ಮಡದಿಯೊಡನೆ ನಗುತ್ತ ಮಾತಾಡುತ್ತ ಸ್ಕೂಟರಿನಲ್ಲಿ ಬರುತ್ತಿದ್ದ ತರುಣ ಯಾವ ಹೊತ್ತಿನಲ್ಲಿ ಏನಾಗಬಹುದೆಂದು ಅವರಿಗೇನು ಗೊತ್ತು? ಸ್ಕೂಟರ್ ಮತ್ತು ಕಾರು ರಸ್ತೆಯ ಮೂಲೆಯಲ್ಲಿ ಒಂದರೊಡನೊಂದು ತಾಕಿ ಅವರ ಕನಸೆಲ್ಲ ನುಚ್ಚು ನೂರಾಗಿ ನೆತ್ತರಿನ ರೂಪದಲ್ಲಿ ಹರಿಯಬೇಕೆಂದು ಯಾರೋ ನಿರ್ಣಯಿಸಿದರೆ ಅವರೇನು ಮಾಡಿಯಾರು?

ಆತ ಆ ಭೀಕರ ಶಬ್ದವನ್ನು ಕೇಳಿ ರಸ್ತೆಯ ದೀಪ ಅವಕಾಶವಿತ್ತ ಬೆಳಕಿನಲ್ಲೇ ನಲವತ್ತು ಅಡಿಯ ಎತ್ತರದಿಂದ ಗಮನಿಸಿದರು. ಸ್ಕೂಟರ್ ನಡೆಸುತ್ತಿದ್ದ ತರುಣ ಎತ್ತಿ ಎಸೆಯಲ್ಪಟ್ಟುದನ್ನು, ಆ ಹೆಣ್ಣು ಮುದ್ದೆಯಾಗಿ ಅಲ್ಲಿ ಬೀಳುವುದನ್ನು, ಸ್ಕೂಟರು ಮೂರು ಉರುಳಾಗಿ ಉರುಳಿ ಬಿದ್ದು ಅದರ ಇಂಜಿನ್ ಇನ್ನೂ ಜೀವಂತವಾಗಿದ್ದು ಹಿಂದಿನ ಚಕ್ರ ಗಿರ್ರನೆ ತಿರುಗುವುದನ್ನು; ಗಾಜುಗಳು ಛಲ್ಲನೆ ಒಡೆದು ಚದುರುವುದನ್ನು, ಆ ಕಾರು ತುಸು ತಡೆದು ನಿಂತುಕೊಳ್ಳಲು ಪ್ರಯತ್ನಿಸುವುದನ್ನು ಬಳಿಕ ನಿಲ್ಲದೆ ತೀವ್ರ ಗತಿಯಲ್ಲಿ ಅಲ್ಲಿಂದ ಓಟ ಕೀಳುವುದನ್ನು ಮತ್ತೆ ಕೆಂಪು ದೀಪ ದೂರ ದೂರಕ್ಕೆ ಹೊರಟು ಹೋಗುವುದನ್ನು...

ಬಳಿಕ ನೆತ್ತರನ್ನು!

ಆ ಅಪಘಾತದ ರೌದ್ರ ದೃಶ್ಯಕ್ಕಿಂತಲೂ ಘಟನೆಯ ಸ್ವರೂಪ ಅವರನ್ನು ನಿಶ್ಚೇಷ್ಟಗೊಳಿಸಿ ಅಲ್ಲಿ ನಿಲ್ಲಿಸಿತು. ಮೊದಲ ನೋಟದ ಭ್ರಮೆಯ ಬಳಿಕ ಅವರನ್ನು ಉಜ್ಜುಗ್ಗಿಸಿದ ಕರುಣೆಯೋ, ಅಥವಾ ಅಂಜಿಕೆಯೊ ಅವರನ್ನು ಕೂಡಲೇ ಅಲ್ಲಿಂದ ಓಡಿ ಕೆಳಕ್ಕೆ ಬರುವಂತೆ ಮಾಡಿತು.

ಸರಿಯಾಗಿ ಹದಿನೆಂಟು ಸೆಕೆಂಡಿನ ಅವಧಿಯಲ್ಲಿ ಕೆಳಕ್ಕೆ ಬಂದು ಬಿಟ್ಟರು. ಬಹು ದೂರದಲ್ಲಿ ಆ ಕಾರಿನ ಕೆಂಪು ದೀಪ ಇನ್ನೂ ಕಾಣಿಸುತ್ತಿತ್ತು. ಮೂರ್ಖತನದಿಂದ ಹತ್ತು ಅಡಿ ದೂರದವರೆಗೆ ಓಡಿ ಹೋದರು, ಹಿಡಿಯುವವರಂತೆ! ಮತ್ತೆ ನಿಂತರು; ಕೆಳಗೆ ಬಿದ್ದವರನ್ನು ಅರಸಿದರು.

ಆ ಹೆಣ್ಣು ಸ್ಕೂಟರಿನ ತಳದಲ್ಲಿ ಸಿಕ್ಕಿ ಬಿದ್ದಿದ್ದಳು. ಅವನು ಒಂದು ಅಂಗಡಿಯ ಮುಂಭಾಗದಲ್ಲಿ ಬಿದ್ದಿದ್ದ. ಸ್ಕೂಟರನ್ನು ಎತ್ತಲು ಪ್ರಯತ್ನಿಸಿದರು. ಸಾಧ್ಯವಾಗಲಿಲ್ಲ. ಅವನ ಬಳಿಗೆ ಧಾವಿಸಿದರು. ಖಂಡಿತವಾಗಿ ಅವನು ಪ್ರಜ್ಞಾಹೀನನಾಗಿದ್ದ. ಕೆಲವು ಸೆಕೆಂಡುಗಳವರೆಗೆ ಅತ್ತಿತ್ತ ಓಡಾಡಿದರು. ಸಣ್ಣ ಸಣ್ಣ ಚೂರುಗಳಾಗಿ ಗಾಜು ಒಡೆದು ಚೆಲ್ಲಿತ್ತು. ಕಪ್ಪು ಮಿಶ್ರ ನೀಲ ವರ್ಣಕ್ಕೆ ತಿರುಗಿದ ನೆತ್ತರಿನ ಗುಪ್ಪೆಗಳ ನಡುವೆ ಅವು ಪ್ರಜ್ವಲಿಸಿದವು. ದೂರದಲ್ಲಿ ಚೌಕಿದಾರ ಓಡಿ ಬರುತ್ತಿರುವ ಸಪ್ಪಳ ಕೇಳಿಸಿತು.

ಬಿದ್ದಿದ್ದವರು ಏಳುವ ಸ್ಥಿತಿಯಲ್ಲಿರಲಿಲ್ಲ. ಚಲನೆಯಲ್ಲಿದ್ದ ಸ್ಕೂಟರನ್ನು ತಡೆದು ನಿಲ್ಲಿಸಲು ಅವರಿಗೆ ಗೊತ್ತಾಗಲಿಲ್ಲ. ಅದರ ಹಿಂದಿನ ಚಕ್ರ ಇನ್ನೂ ತಿರುಗುತ್ತಿತ್ತು. ಆ ಹೆಣ್ಣಿನ ದೇಹ ಚಲಿಸಲಿಲ್ಲ. ಸ್ಕೂಟರನ್ನು ಎತ್ತಿ ಆ ಹುಡುಗಿಯನ್ನು ಪಾರು ಮಾಡಲು ಪ್ರಯತ್ನಿಸಿದರು....ಚೌಕಿದಾರ ಬಂದ. "ಕ್ಯಾ ಹುವಾ" ಎಂದ.

"ಅಪಘಾತ, ಭೀಕರ ಅಪಘಾತ. ಒಂದು ಕಾರಿಗೆ ಡಿಕ್ಕಿ ಹೊಡೆದರು."

"ಕಾರೆಲ್ಲಿ?"

"ಓಡಿ ಹೋಯಿತು."

"ಸಾಸ್‌ಸಾಲಾ" ಎಂದ. ಸುತ್ತ ಮುತ್ತ ನೋಡಿದ. ಹೌಹಾರಿ, "ಬಾಪ್ ರೇ ಎಷ್ಟು ರಕ್ತ?" ಎಂದ.

"ಮೊದಲು ಆಕೆಯನ್ನು ಬಿಡಿಸೋಣ"

ಸ್ಕೂಟರನ್ನು ಎತ್ತಿ ನಿಲ್ಲಿಸಿದ. ಆ ಹೆಣ್ಣನ್ನು ಇಬ್ಬರೂ ಬದಿಗೆ ಎತ್ತಿಕೊಂಡು ಬಂದರು.

"ಸ್ವಲ್ಪ ಇಲ್ಲೇ ಇರು. ನಾನು ಆಸ್ಪತ್ರೆಗೆ ಹೇಳಿ ಬರುತ್ತೇನೆ."

ಅವರು ಆ ಮನೆಯ ಬಾಗಿಲನ್ನು ಬಡಿದರು. ದಡ ಬಡನೆ ಬಡಿದರು. ಆ ಮನೆಯಲ್ಲಿ ಫೋನ್ ಇದೆ, ಕಾರು ಇದೆ. ಬಡಿದರು. ಬಡಿದು ಬಡಿದು ಕೈಗೆ ನೋವಾಯಿತು. ಯಾರೂ ಏಳಲಿಲ್ಲ. ಪರಮಾತ್ಮ ಅವರು ಸಾಯುತ್ತಿದ್ದಾರೆ. "ವೇಕ್ ಅಪ್ ಯೂ ಸಿಲ್ಲಿ ಈಡಿಯಟ್!" ಎಂದು ಗಟ್ಟಿಯಾಗಿಯೇ ಅಂದುಕೊಂಡು ಇನ್ನೂ ಬಡಿದರು.

"ಹಲೋ; ಹಲೋ ಭಾಯ್ ಸಾಬ್!" ಎಂದು ಅರಚಿದರು. ಎದುರು ಮನೆಯಾತನ ಹೆಸರೇನು ಅನಂತನೆ? ಛೀ ಎದುರು ಮನೆಯ ಯಜಮಾನನ ಹೆಸರು ಗೊತ್ತಿಲ್ಲ. ಎಂಥ ನಗರ ಜೀವನ?

"ಕಮಾನ್ ಮ್ಯಾನ್...ಏಳು."

"ಚೌಕಿದಾರ್, ನೀವೂ ಬಂದು ಬಡಿ"

ಅವನು ತನ್ನ ದೊಣ್ಣೆಯಿಂದ ಬಡಿದ ಒಳಗೆ ಸರಪಳಿ ಅಲುಗಾಡಿತು. ಮುಂದಿನ ಬ್ಲಾಕಿಗೆ ಕೇಳಿಸುತ್ತಿದ್ದರೂ ಇನ್ನೂ ಏಕೆ ಎದ್ದಿಲ್ಲ?

"ಕ್ಯಾ ಬಾತ್ ಹೈ?" ಮನೆಯ ಮಹಡಿಯ ಮೇಲಿಂದ ಬಿತ್ತು ಒಂದು ಪ್ರಶ್ನೆ. ನಿದ್ದೆಯ ಮುಖ.

"ಶೋಚನೀಯ ಘಟನೆ, ಪ್ರಾಣ ಹೋಗುವ ಸ್ಥಿತಿಯಲ್ಲಿದ್ದಾರೆ ಇಬ್ಬರೂ" ಎಂದರು.

ಮೊದಲ ಬಾರಿಗೆ ಅವರು ತಮ್ಮ ಮೇಲಂಗಿಯಲ್ಲಿ ರಕ್ತ ಅಂಟಿರುವುದನ್ನು ಗಮನಿಸಿದರು.

"ನಿಮ್ಮ ಕಾರನ್ನು ತರಬೇಕಾಗುತ್ತೆ. ವೆಲಿಂಗ್ಟನ್ ಹಾಸ್ಪಿಟಲ್‌ಗೆ ಹೋಗೋಣ."

"ಒಂದು ನಿಮಿಷದಲ್ಲಿ ಬರ್ತೀನಿ. ಒಳಕ್ಕೆ ಬನ್ನಿ. ಪೋಲೀಸಿಗೆ ಟೆಲಿಫೋನ್ ಮಾಡಿ. ಅದು ಅಗತ್ಯ. ಏನಾಯಿತು?"

"ಕಾರೊಂದು ವೇಗವಾಗಿ ಬಂತು; ಢಿಕ್ಕಿ ಹೊಡೆಯಿತು. ಕಾರಿನವನು ಓಡಿ ಹೋದ. ಚಂಡಾಲ! ಪಾಪಿ!"

"ಪೋಲೀಸರಿಗೆ ಫೋನು ಮಾಡಿಬಿಡಿ."

"ಅವರಿಗೆ ಅದನ್ನು ಪತ್ತೆ ಹಚ್ಚಲು ಸಾಧ್ಯವೆ?"

"ನನಗೆ ತಿಳಿಯದು. ಆದರೂ ಅವರಿಗೆ ಸಮಾಚಾರವನ್ನು ತಿಳಿಸುವುದು ಅಗತ್ಯ. ಆಸ್ಪತ್ರೆಯಲ್ಲಿ ಕೇಳ್ತಾರೆ."

* *

ರಾತ್ರಿ ಗಂಟೆ ೧.೨೦. ಡಾಕ್ಟರ್ ಕತ್ತೆತ್ತಿದರು.

"ಪೋಲೀಸರೆಲ್ಲಿ?" ಎಂದರು ಡಾಕ್ಟರ್.

"ಅವರಿಗೆ ವಿಷಯ ತಿಳಿಸಿದೀವಿ."

"ಯಾವ ಸ್ಟೇಶನ್?"

"ಆನಂದ್ ನಗರ್."

"ದೇಸಾಳ್...ಆನಂದ್ ನಗರ್ ಸ್ಟೇಷನ್ ಕರೆಯಿರಿ. ಯೂ ಸೀ ಸರ್! ಈ ಹುಡುಗಿ ಸತ್ತು ಹೋದಳು.!"

"ಓ...ಗುಡ್ ಗಾಡ್"

"ಪಲ್ಸ್ ಇಲ್ಲ, ಉಸಿರಾಟವಿಲ್ಲ. ಮಸ್ಟ್ ಹ್ಯಾವ್ ಬೀನ್ ಎ ಬ್ಯಾಡ್ ಆಕ್ಸಿಡೆಂಟ್, ಕೂಡಲೇ ಸತ್ತಿರಬೇಕು. ಎಕ್ಸ್‌ಟೆನ್ಸಿವ್ ಇಂಜರೀಸ್."

"ಓ ಗಾಡ್! ಗಾಡ್! ಗಾಡ್!... ಆ ಹುಡುಗ ಏನಾದ?"

"ಕಿವಿಯಿಂದ ರಕ್ತ ಹರೀತಿದೆ. ಒಳಗೆ ಇಂಜುರಿ ಆಗಿರಬೇಕು. ಅವನು ಬದುಕಿಕೋತಾನೆ. ಅವರು ಕೇಸ್ನ ರಿಜಿಸ್ಟರ್ ಮಾಡಿಕೊಂಡರೇನು? ಎಲ್ಲಿ ಅವರು ಕಾಣ್ತಿಲ್ಲವಲ್ಲ?"

"ಪೊಲೀಸ್?"

"ಹೌದು."

"ಗೊತ್ತಿಲ್ಲ. ಫೋನ್ ಮಾಡಿದೆವು. ಬರ್ತೀವಿ ಅಂದರು."

"ನೀವೆಲ್ಲ ಯಾರು?"

"ನಾನು ಅದನ್ನು ಕಂಡವನು."

"ಹೇಗೆ ನಡೆಯಿತು?"

"ಕಾರು ಸ್ಕೂಟರ್ ಎದುರಾಗುವ ಬ್ಲೈಂಡ್ ಕಾರ್ನರ್. ಕಾರಿನಲ್ಲಿ ಬಂದವನು ತುಂಬ ರಭಸವಾಗಿ ಬಂದ. ಇವರು ಸ್ಕೂಟರಿನಲ್ಲಿ ಬರುತ್ತಿದ್ದರು."

"ಕಾರೆಲ್ಲಿ?"

"ಓಡಿ ಹೋದ. ಕಿರಾತಕ!"

"ಯೂ ಮೀನ್...ಡಿಕ್ಕಿ ಹೊಡೆದು ನಿಲ್ಲಿಸಲೇ ಇಲ್ಲವೆ?"

"ಇಲ್ಲ"

"ಬಾಸ್ಟರ್ಡ್! ಸ್ಕೂಟರ್ ಎಲ್ಲಿ?"

"ಅಲ್ಲೇ ಬಿದ್ದಿದೆ. ಚೌಕಿದಾರ ಅಲ್ಲೆ ನಿಂತಿದಾನೆ."



"ನೀವು ಇಲ್ಲಿ ಉಳಿದುಕೊಂಡು ಪ್ರಯೋಜನವಿಲ್ಲ. ಅವನ್ನ ಅಡ್ಮಿಟ್ ಮಾಡಿಕೊಂಡೆವು. ನೀವು ವಾಪಸು ಹೋಗಿ., ಯಾರವರು, ಏನಾದರೂ ಗೊತ್ತಾಗುವುದೆ ಅಂತ ನೋಡಿ. ಇಷ್ಟು ಹೊತ್ತಿಗೆ ಪೋಲೀಸರು ಅಲ್ಲಿಗೆ ಬಂದಿರುತ್ತಾರೆ. ಸ್ಕೂಟರಿನ ಡಿಕ್ಕಿಯಲ್ಲಿ ಏನಾದರೂ ಇದೆಯೆ ಅಂತ ನೋಡಿ. ಅಲ್ಲದಿದ್ದರೆ ಸ್ಕೂಟರಿನ ನಂಬರಿನಿಂದಲೇ ತಿಳಿಯಬೇಕು. ನೀವು ಹೇಗೆ ಬಂದಿರಿ?"

"ಇವರ ಕಾರಿನಲ್ಲಿ"

"ಅವನ ದುರದೃಷ್ಟ. ಆ ಹುಡುಗಿ ಅವನ ಹೆಂಡತಿ ಅಂತ ಕಾಣುತ್ತೆ."

"ಅವಳು ಲಕ್ಷಣವಾಗಿದ್ದಳು."

* *

ಬೆಳಕು ಹರಿಯುವ ಸಮಯ. ದಿಳೆಂಟು ಜನ ನಿಂತಿದ್ದರು. ಒಬ್ಬ ಸಬ್ ಇನ್ಸ್‌ಪೆಕ್ಟರ್, ಇಬ್ಬರು ಪೋಲೀಸ್ ಪೇದೆಗಳು. ಮೂರು ಸೈಕಲ್‌ಗಳು. ಸ್ಕೂಟರ್ ಬಿದ್ದಿದ್ದ ಸ್ಥಳದಲ್ಲಿ ಸೀಮೆ ಸುಣ್ಣದಿಂದ ರೇಖಿಸಲಾಗಿತ್ತು. ಸ್ಕೂಟರ್ ಜಜ್ಜಿ ಹೋಗಿ ಅಂಚಿನಲ್ಲಿ ಬಿದ್ದಿತ್ತು. ರಬ್ಬರ್ ಪ್ರತಿಗಳು; ಗಾಜಿನ ಚೂರುಗಳು; ಚಳಿ ಗಾಳಿ.

ಅಪಘಾತವನ್ನು ಕಂಡವರು ಸಿಟ್ಟಿನಿಂದ ಮಾತಾಡುತ್ತಿದ್ದರು.

"ಸರ್, ಯೂ ಮಸ್ಟ್ ಡೂ ಸಮ್‌ಥಿಂಗ್! ಚಂಡಾಲ, ಚಂಡಾಲ. ಕಾರ್ನ ನಿಲ್ಲಿಸಲೇ ಇಲ್ಲ. ಒಂದು ಹೆಣ್ಣ ಕೊಂದು ಓಡಿ ಹೋಗಿದಾನೆ. ಇನ್ಸ್‌ಪೆಕ್ಟರ್ ಅವನ್ನ ಹಿಡಿಯಿರಿ."

"ಸ್ವಲ್ಪ ಶಾಂತವಾಗಿರಿ. ನೀವು ಆಕ್ಸಿಡೆಂಟ್‌ನ ಕಂಡಿರಿ ಅಲ್ಲವೆ?"

"ಹೌದು."

"ಕಾರಿನ ಬಣ್ಣ ಯಾವುದು?"

"ನೀಲಿ....ಕಪ್ಪು ಮಿಶ್ರ ನೀಲಿ. ಅಥವಾ ಕಪ್ಪು ಬಣ್ಣ. ಖಂಡಿತ ಅದೊಂದು ಅಂಬಾಸಿಡರ್, !

"ನಂಬರ್ ನೋಡಿದಿರಾ?"

"ಇಲ್ಲ"

"ಅವನು ಬ್ರೇಕ್ ಹಾಕಿದನೆ?"

"ಅವನು ನಿಲ್ಲಿಸಲೇ ಇಲ್ಲ ಹುಚ್ಚನಂತೆ ಓಡಿ ಹೋದ. ನಿಲ್ಲಿಸಲೇ ಇಲ್ಲ."

"ಅವನು ಅಂತಿದೀರಿ...ಕಾರಿನಲ್ಲಿ ಇದ್ದುದು ಗಂಡಸು ಅಂತ ಗೊತ್ತೆ? ಎಲ್ಲಿಂದ ನೋಡಿದಿರಿ?"

"ಮಹಡಿಯ ಮೇಲಿನಿಂದ."

ಇನ್ಸ್‌ಪೆಕ್ಟರ್ ಕತ್ತೆತ್ತಿ ನೋಡಿದರು. "ಒಬ್ಬ ಗಂಡಸು ಕಾರನ್ನು ನಡೆಸುತ್ತಿದ್ದಾನೆ" ಎಂದರು.

"ಗೊತ್ತಿಲ್ಲ, ಅಷ್ಟು ಜೋರಾಗಿ ನಡೆಸಿಡಿಕ್ಕಿ ಹೊಡೆದು ನಿಲ್ಲಿಸದೆ ಹೊರಟು ಹೋಗಬೇಕಾದರೆ ಆತ ಒಬ್ಬ ಗಂಡಸು ಅಂತ ಭಾವಿಸ್ತೀನಿ."

"ಪಾಸಿಬಲ್. ಕಾರು ಯಾವ ದಿಕ್ಕಿನಿಂದ ಬಂತು ?"

"ಪೂರ್ವ ದಿಕ್ಕಿನಿಂದ... ಆ ಕಡೆಯಿಂದ."

"ಆ ಕಡೆಯಿಂದ ಅಂದರೆ ನೇರವಾಗಿ ಬಂತೆ, ಅಥವಾ ಅಲ್ಲಿ ಕಾಣುವ ಸಂದಿಯಿಂದ ಬಂತೆ?"

"ನಾನು ಅದನ್ನು ನೋಡಲಿಲ್ಲ. ತುಂಬ ವೇಗವಾಗಿ ಬಂದು ಆ ಸ್ಕೂಟರಿಗೆ ಬಡಿಯುವುದನ್ನು ನೋಡಿದೆ. ನಿಲ್ಲದೆ ಹೊರಟು ಹೋದುದನ್ನು ನೋಡಿದೆ."

"ಅದರ ಹಿಂದಿನ ದೀಪವನ್ನು ಕಂಡಿರಾ?"

"ಹಿಂದೆ. ನೇರವಾಗಿ ಹೋಯಿತು. ರಸ್ತೆಯ ಅಂಚಿನವರೆಗೆ ಹೋಗಿ ಆ ಮೇಲೆ ಎಡಕ್ಕೆ ತಿರುಗಿತು. ನಿಮ್ಮ ಪೋಲೀಸ್ ಸ್ಟೇಶನನ್ನು ದಾಟಿ ಕ್ರಾಸ್ ವರೆಗೆ ಮುಂದುವರಿದು ಎಡ ಭಾಗಕ್ಕೆ ತಿರುಗಿತು."

"ಅದು ಸರಿಯಾಗಿ ಗೊತ್ತಿದೆಯೆ?"

"ಖಂಡಿತ."

"ಕಾರು ದೇವ್‌ನಗರ್‌ಗೆ ಹೋಗಿದೆ."

"ಇನ್ಸ್‌ಪೆಕ್ಟರ್, ಅವನ್ನ ಹಿಡೀತೀರಾ?"

"ಸ್ವಲ್ಪ ಕಷ್ಟ."

"ಕಷ್ಟವೆ? ಪೋಲೀಸ್ ಇರೋದ್ಯಾಕೆ?"

"ನನ್ನ ಪಾಯಿಂಟ್‌ನಿಂದ ಇದನ್ನು ನೋಡಿ. ನೀವು ಒಂದು ಕಾರನ್ನು ಕಂಡಿರಿ. ಅದರ ನಂಬರು ನಿಮಗೆ ಗೊತ್ತಿಲ್ಲ. ಎಲ್ಲಿಂದ ಬಂತು, ಗೊತ್ತಿಲ್ಲ. ಅಪಘಾತ ನಡೆಯಿತು. ಕಾರು ರಸ್ತೆಯ ಕೊನೆಯ ವರೆಗೆ ಹೋಗಿ ತಿರುಗಿತು. ದೇವ್ ನಗರದ ಕಡೆಗೆ. ಅಷ್ಟೇ ನಿಮಗೆ ತಿಳಿದಿರುವುದು. ಅವನು ಉಳಿಸಿ ಹೋದುದೆಂದರೆ ಗಾಜಿನ ಚೂರುಗಳು ಮಾತ್ರ."

"ಇನ್ಸ್‌ಪೆಕ್ಟರ್ ಆ ಕಾರು ದೇವ ನಗರದ ಕಡೆಗೇ ತಿರುಗಿತು. ಆದ್ದರಿಂದ ಹೇಗಾದರೂ ಪ್ರಯತ್ನಿಸಿ ಪತ್ತೆ ಮಾಡಿ ಬಿಡಿ."

"ಹೇಗೆ ?"

"ಆ ಕಾರಿನ ಪೆಯಿಂಟ್ ಸ್ಕೂಟರಿಗೆ ಅಂಟಿಕೊಂಡಿರಬಹುದು."

ಇನ್ಸ್‌ಪೆಕ್ಟರ್ ನಕ್ಕರು.

"ನೀವು ಬಹಳ ಪತ್ತೇದಾರಿ ಕಥೆಗಳನ್ನು ಓದಿದ್ದೀರಿ. ಕ್ರಿಮಿನಾಲಜಿ ಈ ದೇಶದಲ್ಲಿ ಅಷ್ಟು ಮುಂದುವರಿದಿಲ್ಲ"

* * *

ಬೆಳಿಗ್ಗೆ ೬–೧೭. ವಿನಯ್ ಕಣ್ಣು ಬಿಟ್ಟಾಗ ಮೇಲೆ ಫ್ಯಾನ್ ತಿರುಗುತ್ತಿರುವುದನ್ನು ಕಂಡ. ಕಿಟಕಿಯ ಪರದೆ ಅಲ್ಲಾಡುವುದನು ಕಂಡ. ಜತೆಗೆ ಆ ನೆರಳು ಮಂಚದ ಮೇಲೆ ತೂಗಾಡು

"ಪ್ಲೀಸ್ ರಿಲ್ಯಾಕ್ಸ್"

ಬೆಳಗ್ಗೆ ೧೦–೩೦. ಆ ಸರದಾರ್ ಹುಡುಗ ಬಿಚ್ಚಿದ್ದ ಕ್ರ್ಯಾಂಕ್ ಕೇಸನ್ನು ಒರೆಸುತ್ತಿದ್ದ. ಎಣ್ಣೆ ಒಸರುತ್ತಿತ್ತು. ಅವನ ಉಡುಗೆ ಖಾಕಿ ಎಂಬುದು ಕಾಣದಂತೆ ಎಣ್ಣೆ ಕಪ್ಪುಮಯ ಮಾಡಿತ್ತು. ಅಚ್ಚು–ಮೊಳೆಗಳೆಲ್ಲವನ್ನೂ ಕಳಚಿದ್ದ ವ್ಯಾಕ್‌ಸಾಲ್ ಕಾರು ಬೋಳಾಗಿ ಬದಿಯಲ್ಲಿ ನಿಂತುಕೊಂಡಿತ್ತು. ಪೋಲೀಸ್ ಅಧಿಕಾರಿ ಬಂದುದನ್ನು ಆ...ಹುಡುಗ ಗಮನಿಸಲಿಲ್ಲ.

"ಏನಪ್ಪ ಮಾಲೀಕರು ಎಲ್ಲಿ?"

ಕತ್ತೆತ್ತದ ಅವನು "ನಾಷ್ಟಾಕ್ಕೆ ಹೋಗಿದಾರೆ" ಎಂದು ಗೋಣೆತ್ತಿದ.

"ಗರ್ಲ್ ಫ್ಯಾಟಲಿ ನಾಕ್ಡ್"

ನವದೆಹಲಿ, ಏಪ್ರಿಲ್ ೧೮: ಸ್ಕೂಟರಿನಲ್ಲಿ ಬರುತ್ತಿದ್ದ ತರುಣ ದಂಪತಿಗಳನ್ನು ಒಂದು ಕಾರು ಬಡಿದುದರಿಂದ ಹುಡುಗಿ ಸ್ಥಳದಲ್ಲೆ ಮೃತಳಾದಳು. ಕರೋಲ್‌ಬಾಗ್‌ನ ಸರಸ್ವತಿ ಮಾರ್ಗದಲ್ಲಿ ಈ ಅಪಘಾತ ನಡೆಯಿತು. ನಾಪತ್ತೆಯಾದ ಕಾರನ್ನು ಇನ್ನೂ ಕಂಡು ಹಿಡಿಯಲು ಸಾಧ್ಯವಾಗಿಲ್ಲ. ನೆಗ್ಲಿಜೆಂಟ್ ಡ್ರೈವಿಂಗ್ ಕೇಸನ್ನು ದಾಖಲು ಮಾಡಿಕೊಳ್ಳಲಾಗಿದೆ."

ಪರ್ರನೆ ಹರಿದರು. ಗಂಟೆ ಬಡಿದರು. ಬಂದವನ ಕೈಲಿ ಆ ಕಾಗದವನ್ನು ಕೊಟ್ಟು ಸಿಟಿ ಡೆಸ್ಕಿಗೆ ಕಳುಹಿ



"ದೇವ್‌ನಗರದಲ್ಲಿ ಎಷ್ಟು ಅಂಬಾಸಿಡರ್ ಕಾರುಗಳಿವೆ ಅಂತ ಗೊತ್ತಿದೆಯೆ?"

"ಆ ಕಾರು ಖಂಡಿತವಾಗಿ ಜಜ್ಜಿರುತ್ತೆ"

"ನಿಜ; ನೋಡಿ! ಒಂದು ಜಜ್ಜಿಹೋದ ಕಾರನ್ನೆ ನಾವು ಪತ್ತೆ ಮಾಡುತ್ತೇವೆ ಎಂದಿಟ್ಟುಕೊಳ್ಳಿ. ಅದೇ ಕಾರು ಈ ಅಪಘಾತಕ್ಕೆ ಸಂಬಂಧಪಟ್ಟದೆ ಅಂತ ಹೇಗೆ ನಿರೂಪಿಸುವುದು ? ಅದೊಂದು ಅಂಬಾಸಡರ್ ಅಷ್ಟೆ. ಅದನ್ನು ನಡೆಸುತ್ತಿದ್ದುದು ಗಂಡಸೇ? ಹೆಂಗಸೆ? ಅದರ ಬಣ್ಣ ಯಾವುದು? ನಂಬರ್ ಯಾವುದು? ಏನಾದರೂ ತಿಳಿದಿದೆಯೆ ? ಯಾವ ಮಾಹಿತಿಯ ಆಧಾರವನ್ನಿಟ್ಟುಕೊಂಡು ಕೇಸು ಹಾಕುವುದು? ಜಜ್ಜಿಹೋದ ಅಂಬಾಸಿಡರ್ ಎಂಬ ಆಧಾರದಿಂದಲೆ ? ಪೋಲೀಸರ ದೃಷ್ಟಿಯಿಂದ ಇದೆಷ್ಟು ಕಷ್ಟ ಅಂತ ಸ್ವಲ್ಪ ಯೋಚಿಸಿ ನೋಡಿ !"

"ಏನಾದರೂ ಮಾಡಿ ನೀವು ಪತ್ತೆ ಮಾಡಲೇಬೇಕು. ರ್‍ಯಾಸ್ಕಲ್, ಬದ್ಮಾಷ್"

ವುದನ್ನು ನೋಡಿದ; ಇನ್ನೊಂದು ಮಂಚ ಅದರ ಮಗ್ಗುಲಲ್ಲಿ ಇನ್ನೊಂದು ದಾದಿಯ ಶ್ವೇತ ವಸ್ತ್ರವನ್ನು ಕಂಡ.

"ರಾಗಿಣಿ ಎಲ್ಲಿ?" ಎಂದು ಪ್ರಶ್ನಿಸಿದ.

"ರಾಗಿಣಿ ಎಲ್ಲಿ? ನನ್ನ ರಾಗಿಣಿ ಎಲ್ಲಿ?" ಎನ್ನುತ್ತ ಏಳಲು ಪ್ರಯತ್ನಿಸಿದ. ನೋವು ದೇಹಾದ್ಯಂತ ಹರಿಯುವುದನ್ನು ಗ್ರಹಿಸಿದ.

"ಏಳ ಬಾರದು." ಎಂದಳು ದಾದಿ.

"ನನ್ನ ಹೆಂಡತಿ ಎಲ್ಲಿಗೆ ಹೋದಳು ? ಅವಳೆಲ್ಲಿ? ಅವಳ್ನ ಕರೆಯಿರಿ" ಎಂದ. ಮತ್ತೆ ಏಳಲೆತ್ನಿಸಿದ. ಮತ್ತೆ ಆ ನೋವು.

ಡಾಕ್ಟರ್ ಬಂದು ಪ್ರಶ್ನಿಸಿದರು.

"ನಿಮ್ಮ ಹೆಸರೇನು ?"

"ವಿನಯ್". ನನ್ನ ಹೆಂಡತಿ ಎಲ್ಲಿ ?"

"ನಿಮ್ಮ ಮನೆಯ ವಿಳಾಸವೇನು?"

"ಡಾಕ್ಟರ್! ನನ್ನ ಹೆಂಡತಿ ಎಲ್ಲಿ? ನಾನು ಅವಳು ಸ್ಕೂಟರಿನಲ್ಲಿ ಬರುತ್ತಿದ್ದೆವು. ಆದರೆ ಅವಳೆಲ್ಲಿ?" ಮತ್ತೆ ನೋವು.

ಪೋಲೀಸ್ ಉಡುಗೆಯನ್ನು ಕಂಡವನೇ ಮಾಡುತ್ತಿದ್ದ ಕೆಲಸವನ್ನು ಹಾಗೇ ಬಿಟ್ಟು ಎದ್ದು ನಿಂತ. "ಏನು ಬೇಕು?" ಎಂದ.

ಅವರು ಸಣ್ಣ ಆ ವರ್ಕ್‌ಶಾಪನ್ನು ಮೇಲೆ ಕೆಳಗೆ ನೋಡಿದರು. "ಮಾಲೀಕರು ಯಾವಾಗ ಬರ್‍ತಾರೆ?"

"ಹತ್ತು ನಿಮಿಷವಾಗುತ್ತೆ."

"ಬಂದರೆ ಹೇಳು. ಒಂದು ಅಂಬಾಸಡರ್ ಕಾರು ಬಾಗಿಲ ಹತ್ತಿರ ಜಜ್ಜಿಹೋಗಿ ರಿಪೇರಿಗೆ ಬಂದರೆ ಆನಂದ್ ನಗರ್ ಪೋಲೀಸ್ ಸ್ಟೇಶನ್ನಿಗೆ ಸುದ್ದಿ ಕೊಡಬೇಕು ಅಂತ."

"ಅಂಬಾಸಿಡರ್?"

"ಹೌದು. ತಂದವರಿಗೆ ಸುದ್ದಿ ಗೊತ್ತಾಗದಂತೆ ಸುದ್ದಿಕೊಡಬೇಕು. ತಿಳಿಯಿತೆ? ಮತ್ತೆ ಇನ್ನೆಲ್ಲಿ ಇಂಥ ವರ್ಕ್‌ಶಾಪ್ ಇದೆ ?"

"ಮುಂದಿನ ಗೋಲ್ ಚಕ್ಕರ್‌ನಲ್ಲಿ ಒಂದಿದೆ. ಅಲ್ಲೇ ಎರಡನೆ ಸಂದಿಯಲ್ಲಿ ಇನ್ನೊಂದಿದೆ."

ಸಿದರು.

ಹೈಡಲ್‌ಬರ್ಗ್ ರೋಟರಿ ಯಂತ್ರವು ಅಸುರ ವೇಗದಲ್ಲಿ ಆ ಪುಟದ ಭಾಗಕ್ಕೆ ಇಂಕ್ ಬಳಿದು ಮುದ್ರಿಸಿ ರಾಶಿ ಹಾಕುತ್ತಿತ್ತು.

* * *

"ಮಮ್ಮಿ ಮಮ್ಮಿ ಮಾಡರ್ನ್ ಬ್ರೆಡ್!"

"ಜಾದಾ ಪ್ರೋಟೀನ್"

ವಿವಿಧಭಾರತಿಯ ಧ್ವನಿಯ ನಡುವೆ ಟೆಲಿಫೋನ್ ಗಂಟೆ ಬಡಿಯಿತು.

ಕೈಗೆತ್ತಿಕೊಂಡು; ಕೇಳಿದರು.

"ಓ ಗಾಡ್! ಯಾವಾಗ?"

"...................."

"ನೋ, ಇಂಪಾಸಿಬಲ್! ನಿನ್ನೆ ರಾತ್ರಿ ಅವರು ನಮ್ಮ ಮನೆಗೆ ಬಂದಿದ್ದರು..."

ಅವರು ಪ್ರಶ್ನಿಸಿದರು. "ಹೇಗಿದಾನೆ?"

"ಇನ್ನೂ ಅಪ್ರಜ್ಞಾವಸ್ಥೆಯಲ್ಲೇ

ಇದ್ದಾನೆ. ನೋವು ಹೆಚ್ಚಾಗಿರುವುದ ರಿಂದ ಮಾರ್ಫಿಯಾ ಕೊಟ್ಟಿದ್ದಾರೆ ಅನಿಸುತ್ತೆ. ಬದುಕಿಕೋತಾನೆ ಅಂತಾರೆ."

"ಅವನಿಗೆ ಗೊತ್ತಿದೆಯೆ?"

"ಏನು?"

"ಹೆಂಡತಿಯ ಬಗ್ಗೆ?"

"ಇನ್ನೂ ಗೊತ್ತಿಲ್ಲ. ಈಗ ಹೇಳ ಬಾರದು ಅಂದಿದಾರೆ. ಎಡ ಕಿವಿಗೆ ಏಟು ಬಿದ್ದಿದೆ. ಆ ಕಿವಿ ಇನ್ನು ಕೇಳಿ ಸುವುದು ಕಷ್ಟ ಅಂತಿದಾರೆ. ಕಣ್ಣಿ ಗೂ ಏಟು ಬಿದ್ದಿದೆ. ಟೆರಿಬಲ್, ಟೆರಿಬಲ್!"

"ನೀವು ಯಾರು?"

"ಘಟನೆಯನ್ನು ಕಣ್ಣಾರೆ ಕಂಡವ."

"ಕಾರನ್ನು ಪತ್ತೆ ಮಾಡುವರೆ?"

"ಕಷ್ಟ ಅಂತಿದಾರೆ. ಪೋಲೀಸ್ ಇನ್ಸ್‌ಪೆಕ್ಟರ್ ಮುಂದೆ ಕಿರುಚಿಯೇ ಬಿಟ್ಟಿದೀನಿ."

"ದೆಹಲಿಯ ಪೋಲೀಸರು! ನಿನ್ನೆ ರಾತ್ರಿ, ಸಾರ್! ನಿನ್ನೆ ರಾತ್ರಿ ಇವರು ಜೀವಂತವಾಗಿದ್ದರು. ನಾವು ಒಂದು ಪಾರ್ಟಿಯಲ್ಲಿದ್ದವು. ನಾನು, ನನ್ನ ಹೆಂಡತಿ, ಇವನು, ರಾಗಿಣಿ...ರಾಗಿಣಿ ಎಷ್ಟು ಒಳ್ಳೆಯ ಹುಡುಗಿ ಅಂತ ಗೊತ್ತೆ? ಇದೆಂಥ ನ್ಯಾಯ? ಯಾವೋ ನೋ ಒಬ್ಬ ಬ್ಲಡಿ ಈಡಿಯಟ್ ಕಾರನ್ನ ಜೋರಾಗಿ ಬಿಟ್ಟುಕೊಂಡು ಬಂದುದರಿಂದ ಇವರ ಜೀವನ ಒಂದು ಕ್ಷಣದಲ್ಲಿ ಹಾಳಾಯಿತು. ಇವನಿಗೆ ಪ್ರಜ್ಞೆ ಬಂದ ಮೇಲೆ ಯಾರು ಹೇಳ್ತಾರೆ. ಯಾರಾದರೂ ಹೇಳಲೇಬೇಕಲ್ಲ! ಹೇಳಿ ದಾಗ ಏನಾಗುತ್ತೊ?"

"ಇವನ ತಾಯಿ-ತಂದೆ ಎಲ್ಲಿ?"

"ಸುದ್ದಿ ಕೊಟ್ಟಿದೀವಿ. ಲಕ್ನೋದಿಂದ ಬರಬೇಕು.!"

'ಯಾರಾದರೂ ಅವನಿಗೆ ಹೇಳಲೇ ಬೇಕು. ಹೇಳುತ್ತಾರೆ."

ಹೇಳಿದರು.

* * *

ಹದಿನಾಲ್ಕು ದಿನಗಳ ಬಳಿಕ ಗುರು ವಾರ ಸಂಜೆ ಓ-ಷಿ. ಗಣೇಶ್ ಕತ್ತ ತ್ತಿದ. ಎದುರಿಗೆ ಒಬ್ಬ ವೃದ್ಧರು ಮತ್ತು ಒಬ್ಬ ತರುಣ ನಿಂತಿದ್ದರು. ತರುಣನ ಮುಖದ ಎಡ ಭಾಗದಲ್ಲಿ X ಪ್ಲಾಸ್ಟ ಇತ್ತು. ಟೆರಿಲಿನ್ ಶರಟಿನ ಒಳ ಭಾಗದಲ್ಲಿ ತೋಳಿಗೆ ಬ್ಯಾಂಡೇಜ್ ಕಟ್ಟಿರುವುದು ಕಾಣಿಸಿತು. ಮುಖದ ಮೇಲೆ ಕೆಲವು ದಿನಗಳ ಕ್ಷೌರ ಬಾಕಿ ಉಳಿದಿತ್ತು. ಅವನ ಮುಖದಲ್ಲಿ ಕಂಡ ಶೂನ್ಯವನ್ನು ಗಣೇಶರೆ ಅಳೆಯ ಲಾಗಲಿಲ್ಲ.

"ಏನಾಗಬೇಕು?"



"ಒಬ್ಬ ಮನುಷ್ಯನ್ನ ಕಂಡು ಹಿಡಿಯ ಬೇಕು." ಎಂದ ಆ ತರುಣ.

"ನನ್ನ ಹೆಸರು ಗಣೇಶ್."

"ನನ್ನ ಹೆಸರು ವಿನಯ್. ಇವರ ಹೆಸರು ನಟೇಶನ್. ಅಪಘಾತವನ್ನು ಕಂಡವರು."

"ಯಾವುದು?"

"ಕಳೆದ ತಿಂಗಳು ಹದಿನೆಂಟನೇ ತಾರೀಖು ರಾತ್ರಿ ಮನೆಯ ಮುಂಭಾಗದಲ್ಲಿ ಒಂದು ಅಪಘಾತ ನಡೆಯಿತು. ಭೀಕರ ಅಪಘಾತ. ನಾನು ನೋಡಿದೆ. ಇವರು ಸ್ಕೂಟರಿನಲ್ಲಿ ತಮ್ಮ ಹೆಂಡತಿಯೊಡನೆ ಬರುತ್ತಿದ್ದರು. ಅಡ್ಡ ರಸ್ತೆಯಿಂದ ವೇಗದಿಂದ ಬಂದ ಕಾರಿಗೆ ಬಡಿದು..."

"ನನ್ನ ಹೆಂಡತಿ ಸತ್ತಳು. ನನ್ನ ಒಂದು ಕಿವಿ ಕೇಳಿಸದಂತಾಯಿತು. ನನ್ನ ಎಡ ಗಣ್ಣು ಸರಿಯಾಗಿ ಕಾಣಿಸುತ್ತಿಲ್ಲ. ನನ್ನ ನೌಕರಿಯನ್ನು ಕಳೆದುಕೊಳ್ಳುತ್ತೇನೆ. ತರುಣನ ಧ್ವನಿಯಲ್ಲಿ ನೋವಿತ್ತು.

"ಐ ಆಂ ಸಾರಿ, ಭೀಕರವಾದ ಘಟನೆ ಅಂತ ಕಾಣುತ್ತೆ. ಕಾರನ್ನು ನಡೆಸುತ್ತ ಬಂದವನು ಏನಾದ? ಯಾರವನು?

"ಐ ಮೀನ್...ಹಿಟ್ ಅಂಡ್ ರನ್?"

"ಹೌದು. ಅವನು ಕಾರನ್ನು ನಿಲ್ಲಿಸದೆ ಬಂದ ವೇಗದಲ್ಲೇ ಓಡಿ ಹೋಗಿ ಬಿಟ್ಟ."

"ಪೋಲೀಸಿಗೆ ತಿಳಿಸಿದಿರಾ?"

"ತಿಳಿಸಿದೆವು."

"ಏನಂದರು?"

"ವಿಚಾರಿಸ್ತಿದೀವಿ ಅಂತಿದಾರೆ. ಹದಿನೈದು ದಿನಗಳು ಕಳೆದು ಹೋ ದವು"

"ಐಸೀ...ಇದರಲ್ಲಿ ನಾನೆಲ್ಲಿ ಬರ್ತೀನಿ?"

"ಮಿಸ್ಟರ್ ಗಣೇಶ್, ನನಗೋಸ್ಕರ ನೀವು ಅವನನ್ನು ಪತ್ತೆ ಹಚ್ಚಬೇಕು. ಹೇಗಾದರೂ, ಎಷ್ಟು ಖರ್ಚಾದರೂ ನಾನು ಅವನನ್ನು ನೋಡಬೇಕು. ಯಾರ ವನು? ನನ್ನ ಹೆಂಡತಿಯನ್ನು ಕಳೆದು ಕೊಂಡು, ಉಳಿದುದನ್ನೆಲ್ಲ ಹಾರ ಬಿಟ್ಟು ಬದುಕಿರುವುದು ಅವನನ್ನು ನೋಡ ಬೇಕು ಎಂಬ ಇಚ್ಛೆಯಿಂದ."

"ನೋಡಿ?"

"ಅಳಿದುಳಿದಿರುವ ನನ್ನ ಶಕ್ತಿಯನ್ನೆಲ್ಲ ಪ್ರಯೋಗಿಸಿ ಅವನನ್ನು ಕೊಂದು ಹಾಕ ಬೇಕು."

"ಅವನು ಅಂತ ಹೇಗೆ ಹೇಳ್ತೀರಿ?"

"ಒಬ್ಬ ಗಂಡಸು ಮಾತ್ರ ಹಾಗೆ ನಿಷ್ಕರುಣೆಯಿಂದ ಓಡಿ ಹೋಗಬಲ್ಲ"

"ಬೇರೆ ಯಾವ ಸಾಕ್ಷ್ಯಗಳೂ ಇಲ್ಲವೆ?"

"ಅಪಘಾತದ ದೃಶ್ಯವನ್ನು ಇವರು ಕಂಡರು."

"ಏನು ಕಂಡಿರಿ?"

"ಒಂದು ಅಂಬಾಸಿಡರ್. ತುಂಬ ವೇಗದ ಗತಿಯಲ್ಲಿ ಬಂತು. ಬಡಿಯಿತು. ನಿಲ್ಲದೆ ಹೊರಟು ಹೋಯಿತು."

"ಅಷ್ಟೇ?"

"ಹೌದು."

"ಅದರ ನಂಬರ್?"

"ಗೊತ್ತಿಲ್ಲ?"

"ನೋಡಿದವರು ನೀವೊಬ್ಬರು ಮಾತ್ರ?"

"ಹೌದು."

"ಹೇಗೆ ಪತ್ತೆ ಮಾಡುವುದು ಹೇಳಿ"

"ಗೊತ್ತಿಲ್ಲ. ಆದರೆ ಅವನನ್ನು ನಾನು ನೋಡಬೇಕು."

"ಇದುವರೆಗೆ ಪೋಲೀಸರಿಂದ ಪತ್ತೆ ಮಾಡಲು ಸಾಧ್ಯವಾಗಿಲ್ಲ?"

"ಇಲ್ಲ."

"ನನಗೆ ಸಾಧ್ಯವೆಂದು ಹೇಳಿದವ ರಾರು? ನಾನೊಬ್ಬ ವಕೀಲ. ನನ್ನ ಕಾರ್ಯಕ್ಷೇತ್ರ ನ್ಯಾಯಾಲಯ. ನನ್ನ ಸಾಮರ್ಥ್ಯ ಕಾಣಬಲ್ಲ ಸ್ಥಳ ಅದು ಮಾತ್ರ."

"ನಿಮ್ಮ ಬಗ್ಗೆ ಕೇಳಿದೀನಿ. ಯೋಗ್ಯತೆ ಯನ್ನು ಪ್ರದರ್ಶಿಸಲು ಇಂಥದೇ ಸ್ಥಳ ಅಂತ ಇದೆಯೆ? ನಿಮಗೆ ಇದು ಸಾಧ್ಯ ಅಂತ ಒಬ್ಬರು ಹೇಳಿದರು."

"ನಾನು ಹೇಳ್ತೀನಿ, ನನ್ನ ಕೈಲಿ ಆಗುಲ್ಲ"

"ಏಕೆ?"

"ವಿವರಣೆ ಸಾಲದು."

"ಹಾಗಿದ್ದರೆ ನಿಮ್ಮ ಬಳಿಗೆ ಬರು ತ್ತಿದ್ದೆವೆ."

"ನಿಜ. ಒಂದು ಕೇಸನ್ನು ಕೈಗೆತ್ತಿ ಕೊಳ್ಳಬೇಕಾದರೆ, ಅದನ್ನು ಪತ್ತೆ ಮಾಡ ಬೇಕಾದರೆ ಅರ್ಧ ಪರ್ಸೆಂಟ್ ಛಾನ್ಸಾ ದರೂ ಇರಬೇಕಲ್ಲವೆ?"

"ಇದರಲ್ಲಿ ಛಾನ್ಸ್ ಎಷ್ಟಿವೆ?"

"ಅಕೋ ಅಲ್ಲಿ, ರಸ್ತೆಯಲ್ಲಿ ಒಬ್ಬರು ಹೋಗ್ತಿದಾರಲ್ಲ, ಅವರು ಜವಹರ ಲಾಲ್ ನೆಹ್ರು ಅನ್ನಲು ಎಷ್ಟು ಛಾನ್ಸ್ ಇರಬೇಕು.?"

"ಮಿಸ್ಟರ್ ಗಣೇಶ್, ತಮಾಷೆ ಯಾಗಿ ಮಾತಾಡ್ತೀರಿ. ಆದರೆ ನನ್ನ ಅವಸರ, ಭಾವನೆ, ತಿರಸ್ಕಾರ, ಇವು ಗಳನ್ನು ಸ್ವಲ್ಪ......"

"ಸಂಪೂರ್ಣವಾಗಿ ಅರ್ಥ ಮಾಡಿ ಕೊಂಡೆ, ನಿಮ್ಮದು ಬಹಳ ಸಂಕಟ

ವುಂಟು. ವಾಹನಾಪಘಾತ ಕೇಸು. ಅನ್ಯಾಯ. ನಿಮ್ಮ ಹಸ್ತ ಸ...ಗಳು ನಾಗರಿಕತೆಯ ಹೆಸರಿನಲ್ಲಿ ಬಲಿಯಾಗಿವೆ. ಆದರೆ ಈ ಘಟನೆ ಆಕಸ್ಮಿಕ. ಅಂದು ಅರ್ಧ ನಿಮಿಷ ತಡವಾಗಿ ನೀವು ಬಂದಿದ್ದರೆ ಇಂದು ನಾನು ನಿಮ್ಮನ್ನು ಸಂಧಿಸಲಾಗುತ್ತಿರಲಿಲ್ಲ. ಸಂಧಿಸಿದ್ದರೂ ಜೊತೆಯಾಗಿ ಸಂಧಿಸುತ್ತಿದ್ದೆ. ಆದುದು ಒಂದು ಫ್ರೀಕ್. ಆಕಸ್ಮಿಕ ಘಟನೆ. ಫೇಟಲಿಸಮ್‌ನಲ್ಲಿ ನಂಬಿಕೆ ಬರಿಸುತ್ತೆ. ಈ ಕ್ಷಣದಲ್ಲಿ ನೀವು ಸಂತೋಷವಾಗಿದೀರಿ, ಮುಂದಿನ ಕ್ಷಣದಲ್ಲಿ ಎಲ್ಲವನ್ನೂ ಕಳೆದುಕೊಳ್ಳುತ್ತೀರಿ. ಹೀಗೇಕೆ ಅಂತ ಕಾರಣವನ್ನು ತಿಳಿಸಲು ಸಾಧ್ಯವೆ?"

"ಅವನೇ ಕಾರಣ. ನೀವು ಅವನನ್ನು ಪತ್ತೆ ಮಾಡಬೇಕು."

"ಒಂದು ಅಪಘಾತವಾಗಲು ಕಾರಣ ಎರಡು ಪಾರ್ಟಿಗಳು."

"ನೋಡಿ ಮಿಸ್ಟರ್ ಗಣೇಶ್. ಅವನು ಜೋರಾಗಿ ಬಂದ. ಹಾರನ್ ಮಾಡಲಿಲ್ಲ. ಕಾರಿನ ಹೆಡ್ ಲೈಟನ್ನು ನೋಡಲಿಲ್ಲ. ನಾನು ಪಾರಾಗಲು ಅವನು ಅವಕಾಶವನ್ನೇ ಕೊಡಲಿಲ್ಲ. ಹೀ ವಾಸ್ ಮ್ಯಾಡ. ಡಿಕ್ಕಿ ಹೊಡೆಸಿ ಓಡಿ ಹೋದ. ನನಗೆ ಅದನ್ನು ಮಾತ್ರ ಸಹಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಕಾರನ್ನು ನಿಲ್ಲಿಸಿ ಕೂಡಲೇ ಆಸ್ಪತ್ರೆಗೆ ಕೊಂಡೊಯ್ದಿದ್ದರೆ ನನ್ನ ಹೆಂಡತಿ ಬದುಕಿರುತ್ತಿದ್ದಳು. ಅಂತಹ ಆ ಕ್ಷಣಗಳನ್ನು ಅವನು ನಮಗೆ ನೀಡಲಿಲ್ಲ."

"ಇರಬಹುದು. ಅದಕ್ಕಾಗಿ ಅವನನ್ನು ಪತ್ತೆ ಹಚ್ಚಿ ಕೊಂದು ಹಾಕಬೇಕು ಅಂತೀರಾ?"

"ಅದಕ್ಕಾಗಿಯೇ ನಾನು ಬದುಕಿರುವುದು."

"ಸಾರಿ...ನಿಮ್ಮ ಆಕ್ರೋಶ ನ್ಯಾಯವಾದುದು. ಅವನು ಕಣ್ಣಿಗೆ ಬಿದ್ದರೆ ಅವನನ್ನು ನೀವು ತೀರಿಸಿ ಬಿಟ್ಟರೂ ನಾನು ಆಶ್ಚರ್ಯಪಡುವುದಿಲ್ಲ. ಆದರೆ ಅವನನ್ನು ಕಂಡು ಹಿಡಿಯುವುದು ಹೇಗೆ? ನಿಮಗೆ ಯಾರೋ ತಪ್ಪಾದ ಮಾಹಿತಿ ನೀಡಿದ್ದಾರೆ. ನಾನೊಬ್ಬ ವಕೀಲ. ಯಕ್ಷಿಣಿ ತಿಳಿದವನಲ್ಲ. ನನ್ನಿಂದ ಆಗುವುದಿಲ್ಲ. ಹೋಪ್‌ಲೆಸ್ ಕೇಸು ಯಾವುದು ಅಂತ ನನಗೆ ಸುಲಭವಾಗಿ ಹೇಳಿ ಬಿಡಲು ಸಾಧ್ಯ."

"ಇರಲಿ, ಆದರೂ ನೀವು ಪ್ರಯತ್ನ ಮಾಡಬೇಕು ಅಂತ ಇಷ್ಟಪಡ್ತೀನಿ. ಅದಕ್ಕಾಗಿ ಎಷ್ಟು ಖರ್ಚಾದರೂ ಸರಿ."

"ಮಾಹಿತಿಯೇ ಇಲ್ಲವಲ್ಲ, ಯಾವ ಆಧಾರದ ಮೇಲೆ ಹೊರಡಲಿ?"

"ಕಾರಿನ ಬಣ್ಣ ಕಪ್ಪು. ಅಥವಾ ಕಪ್ಪು ಮಿಶ್ರ ನೀಲಿ ಬಣ್ಣ. ಅಂಬಾಸಡರ್. ಐ ಆಂ ಷ್ಯೂರ್. ಅದು ದೇವ್ ನಗರದ ಕಡೆಗೆ ಹೋಯಿತು. ಐ ಆಂ ಷ್ಯೂರ್." ಎಂದರು ನಟೇಶನ್.

"ದೇವ್ ನಗರ ವಿಸ್ತಾರವಾದ ಪ್ರದೇಶ..."

"ಅಂಬಾಸಿಡರ್ ಜಜ್ಜಿರುತ್ತೆ."

"ಈ ಘಟನೆ ನಡೆದು ಹದಿನೈದು ದಿನಗಳು ಕಳೆದಿವೆ. ಅಷ್ಟರಲ್ಲಿ ಒಂದು ಕಾರಿನಲ್ಲಿ ಎಷ್ಟೋ ಬದಲಾವಣೆಗಳನ್ನು ಮಾಡಬಹುದು. ಪೋಲೀಸರಿಗೂ ಸ್ವಲ್ಪ ಕ್ರೆಡಿಟ್ ಕೊಡಿ. ದೇವ್‌ನಗರದಲ್ಲಿ ಅವರು ಎಲ್ಲ ಮೆಕ್ಯಾನಿಕ್ ಷಾಪುಗಳಲ್ಲೂ ವಿಚಾರಿಸಿರುತ್ತಾರೆ."

"ಇದುವರೆಗೆ ಏನೂ ಗೊತ್ತಾಗಲಿಲ್ಲವಲ್ಲ."

"ತಾಳಿಕೊಳ್ಳಿ."

"ತಾಳಿಯೇ ತೀರುತ್ತೇನೆ, ಮಿಸ್ಟರ್ ಗಣೇಶ್, ನನ್ನ ಜೀವಮಾನಪರ್ಯಂತ ಕಾದಿರುತ್ತೇನೆ. ಕಾಲು ನೋಯುವಷ್ಟು ನಡೀತೇನೆ. ಮನೆ ಮನೆಗೆ ಹೋಗಿ ದೆಹಲಿಯಲ್ಲೆಲ್ಲ ವಿಚಾರಿಸುತ್ತೇನೆ. ಕೊನೆಗೆ ರಸ್ತೆಯಲ್ಲಿ ನಿಂತು ಹೋಗಿ ಬರುವ ಕಾರುಗಳನ್ನೆಲ್ಲ ನಿಲ್ಲಿಸಿ ಎಲ್ಲರಿಗೂ ಹೇಳುತ್ತೇನೆ. ಕಳೆದ ಏಪ್ರಿಲ್ ತಿಂಗಳು ಹದಿನೆಂಟನೇ ತಾರೀಖು ರಾತ್ರಿ ಕಾರಿನಲ್ಲಿ ಬಂದು ಸ್ಕೂಟರಿಗೆ ಡಿಕ್ಕಿ ಹೊಡೆದವನು ನೀನಾಗಿದ್ದರೆ ನೋಡು.! ...ಲುಕ್ ಅಟ್ ವಾಟ್ ಯೂ ಹ್ಯಾವ್ ಡನ್! ನನ್ನ ಹೆಂಡತಿ ಸತ್ತು ಹೋದಳು. ನನ್ನ ಕ್ರಿಯೆಗಳಲ್ಲಿ ಅರ್ಥ ಹೋಯಿತು. ನೋಡು... ನೋಡು..."

ಅವನು ಒಡೆದ ಮನಸ್ಸಿನಿಂದ ಅತ್ತ.

"ಟೇಕ್ ಇಟ್ ಈಸಿ...ನಾನು ಸಾಧ್ಯವಾದ ಮಟ್ಟಿಗೆ ನಿಮಗೆ ಸಹಾಯ ಮಾಡುತ್ತೇನೆ. ಮಿಸ್ಟರ್ ನಟೇಶನ್ ಬನ್ನಿ, ನನ್ನ ಜತೆಯಲ್ಲಿ. ಮೊದಲು ಆ ಸ್ಥಳವನ್ನು ನೋಡೋಣ." ಎಂದ ಗಣೇಶ್.

* * *

ರಸ್ತೆಯ ನಡುವೆ ಮೂವರೂ ನಿಂತಿದ್ದರು.

"ಅಕೋ ಆ ಕಡೆಯಿಂದ ಬಂತು."

"ಅಲ್ಲಿಂದ ಅಂದರೆ ಆ ಕಡೆ ಅನೇಕ ರಸ್ತೆಗಳು ಒಂದುಗೂಡುತ್ತವೆ. ಎಲ್ಲಿಂದ ಬಂತು?" ಎಂದ ಗಣೇಶ್.

"ನನಗೆ ಅದು ತಿಳಿಯದು. ನಾನು ಕಂಡುದು ಜೋರಾಗಿ ಬಂದ ಕಾರನ್ನು, ಡಿಕ್ಕಿ. ಮತ್ತೆ ಅದೇ ವೇಗದಲ್ಲಿ ಅಕೋ, ಆ ಕೊನೆಯ ವರೆಗೂ ಹೋಗಿ ಡಯಲ್ ಲೈಟ್ ಎಡಗಡೆಗೆ ತಿರುಗಿ ಕಣ್ಮರೆಯಾಗುವುದನ್ನು ಕಂಡೆ."

"ನಾಟ್ ಮಚ್ ಆಫ್ ಇನ್ಫರ್ಮೇಷನ್".

ಅವರು ಬದಿಯಲ್ಲಿ ನಿಂತರು.

"ವೇಗದಿಂದ ಬಂತು ಅಂತೀರಲ್ಲ. ಎಷ್ಟು ಜೋರಾಗಿ ಬಂತು?"

"ಅತ್ಯುದ್ವೇಗ."

"ಅತ್ಯುದ್ವೇಗ ಅಂದರೆ ಎಷ್ಟು? ೪೦ ಕಿಲೋಮೀಟರ್, ೫೦, ೬೦, ೭೦...?"

"ನನಗೆ ಹೇಳಲು ತಿಳಿಯುವುದಿಲ್ಲ"

ಆಗ ಒಂದು ಕಾರು ಭರ್ರನೆ ಬಂದು ಅವರನ್ನು ಹಾದು ಹೋಯಿತು."

"ಈ ಕಾರಿನ ವೇಗ ಇರಬಹುದೆ?"

"ಇನ್ನೂ ಜೋರಾಗಿ ...ಯೂ ಸೀ ನನ್ನ ಗಮನವನ್ನು ಸೆಳೆದುದೇ ಆ ಕಾರಿನ ವೇಗ"

ಗಣೇಶ ತನ್ನ ತಲೆಯನ್ನು ಬೆರಳುಗಳಿಂದ ಬಾಚಿಕೊಂಡ.

"ಎಲ್ಲಿಂದ ನೋಡಿದಿರಿ?"

ಅವರು ಮೇಲೆ ತೋರಿಸಿ, "ಮಹಡಿಯ ಬಿಸಿಲು ಮಚ್ಚಿನಿಂದ!" ಎಂದರು.

"ಬನ್ನಿ, ಅಲ್ಲಿಗೆ ಹೋಗೋಣ ವಿನಯ್, ನೀವು..."

"ನಾನೂ ಬರ್‍ತೀನಿ.!" ಅಂದ ವಿನಯ್.

ಮಹಡಿಯಲ್ಲಿ ಅವನ ತಲೆಗೂದಲು ಕೆದರಿತು. ಪಾರಾಪೆಟ್ ಗೋಡೆಯ ಮೇಲೆ ಕೈಯೂರಿಕೊಂಡು ಕೆಳಗೆ ಕಾಣಿಸಿದ ರಸ್ತೆಯ ಚಲನವಲನಗಳನ್ನು ಗಮನಿಸಿದ; ಎಡ ಭಾಗದಲ್ಲಿ ನೋಡಿದ.

"ಘಟನೆ ನಡೆದಾಗ ಸಮಯವೇನಿರಬಹುದು?"

"ರಾತ್ರಿ ೧೨–೩೦...೩೫..."

"ಯೂ ಆರ್ ಷ್ಯೂರ್."

"ಐ ಆಂ ಷ್ಯೂರ್" ಎಂದ ವಿನಯ್. "ನಾನು ಸತೀಶನ ಮನೆಯಿಂದ ಹೊರಟಾಗ ಗಂಟೆ ೧೨–೨೫. ಅಲ್ಲಿಂದ ಬಂದ ಹತ್ತು ನಿಮಿಷಗಳಲ್ಲಿ ಅಪಘಾತ ನಡೆಯಿತು."

"ಮಿಸ್ಟರ್ ನಟೇಶನ್. ಈ ವಿಭಾಗದ ಭೂಪಟವೊಂದು ನನಗೆ ಬೇಕು." ಎಂದ ಗಣೇಶ್.

"ಅಜಮಲ್ ಖಾನ್ ರೋಡಿನಲ್ಲಿ ಇರುವ ಕಾರ್ಪೊರೇಶನ್ ಆಫೀಸಿನವರ ಬಳಿ ಅಂಥ ಮ್ಯಾಪು ಇದೆ."

"ನನ್ನ ಉಪಯೋಗಕ್ಕೆ ಬೇಕು."

"ಬರ್ಮಾಷೆಲ್‌ನವರೇ ಅಂಥ ಭೂಪಟವನ್ನು ಮಾರ್‍ತಾರೆ" ಎಂದ ವಿನಯ್.

"ಬರ್ಮಾಷೆಲ್‌ಗೆ ಹೋಗೋಣ" ಎಂದ ಗಣೇಶ್.

* * *




ರಾತ್ರಿ ಗಂಟೆ ೮–೪೩.

"ನೀರಜಾ, ಐಡಿಯಲ್, ಕೇಸು ! ಯಾವ ಮಾಹಿತಿಯೂ ಇಲ್ಲ. ವೇಗವಾದ ಅಂಬಾಸಿಡರ್. ದೇವ್‌ನಗರದ ಕಡೆಗೆ ಹೋಯಿತು. ಕಾರಿನ ಚಾಲಕರು ಯಾರು?"

"ಈ ವಿನಯ್‌ನ ನೆನಸಿಕೊಂಡರೆ ನನಗೆ ಅಳು ಬರುತ್ತೆ."

"ಓ ಎಸ್. ಇಟ್ ಈಸ್ ಎ ಪಿಟಿ"

"ಪತ್ತೆ ಹಚ್ಚೀರಾ ಗಣೇಶ್ ?"

"ಪ್ರಯತ್ನ ಮಾಡ್ತೀನಿ ಅಷ್ಟೆ"

"ಇದುವರೆಗೆ ಏನು ಪತ್ತೆ ಮಾಡಿದೀರಿ?"

"ಏನೂ ಇಲ್ಲ. ಕೆಲವು ವಿಚಾರಗಳನ್ನು ಸ್ಪಷ್ಟಮಾಡಿಕೊಂಡಿದೀನಿ. ಕೇಳ್ತೀಯಾ?"

"ಕೇಳ್ತೀನಿ."

"ನನ್ನ ಮಟ್ಟಿಗೆ ಅಪಘಾತದ ಕೇಂದ್ರಬಿಂದು ಕಾರಿನ ವೇಗ. ಮುಂದಿನದು ಅಪಘಾತದ ವೇಳೆ. ರಾತ್ರಿ ೧೨–೩೦ ಇಷ್ಟರಲ್ಲೇ ಪತ್ತೆಗೆ ಏನಾದರೂ ಛಾನ್ಸ್ ಇರುತ್ತೆ. ನೀರಜಾ ! ನಾನು ಗಟ್ಟಿಯಾಗಿ ಹೇಳ್ತೀನಿ ಈ ಕ್ರಮದಲ್ಲಿ ಏನಾದರೂ ಪ್ರಯೋಜನವಿರುತ್ತೆ. ವೇಗ ರಾಕ್ಷಸ ವೇಗ. ಅದಕ್ಕೆ ಕಾರಣವೇನು ?"

"ಕಾರಿನಲ್ಲಿ ಹೋದವನ ತಾಯಿಗೆ ಸೀರಿಯಸ್ ಆಗಿರಬಹುದು. ಡಾಕ್ಟರಿಗೆ ಹೇಳಲು ಅಥವಾ ಡಾಕ್ಟರ ಬಳಿಗೆ ಹೋಗಲು..."

"ಒಬ್ಬ ಹೆಣ್ಣು ಹೇಳುವ ಕಾರಣವಿದು. ಆದರೆ ಇದರಲ್ಲಿ ಹೊಂದಿಕೆಯಾಗದಿರುವ ಒಂದು ಅಂಶವಿದೆ. ಒಂದು ಪ್ರಾಣವನ್ನು ಉಳಿಸಲು ಹೋಗುವವನು ರಸ್ತೆಯಲ್ಲಿ ಇನ್ನೊಂದು ಪ್ರಾಣವನ್ನು ಪರಿತಪಿಸಲು ಬಿಟ್ಟು ಹೋಗುವನೆ ಎಂಬುದು. ಅದರಿಂದ ಆ ಸಾಧ್ಯತೆ ಕಡಿಮೆಯಾಗುತ್ತೆ. ಬೇರೆ ಯಾವ ಕಾರಣವಿರಬಹುದು ವೇಗಕ್ಕೆ?"

"ತಾರುಣ್ಯ!"

"ಎಗ್ಸಾಟ್ಲಿ...ದೆಹಲಿಯಲ್ಲಿ ಬಿರುಸಿನಿಂದ ಹೋಗುವವರು ಎರಡು ಬಗೆ. ರಿಂಗ್ ರೋಡಿನಲ್ಲಿ ಲಾರಿಗಳನ್ನು ನಡೆಸುವ ಸರದಾರಜಿಗಳು. ಕಾರಿನಲ್ಲಿ ಹಾರಾಡುವ ತರುಣರು. ಈ ಫೋಟೊ ಹೊಂದಿಕೆಯಾಗುತ್ತೆ. ಯಾವ ಬಗೆಯಲ್ಲಿ ? ಸಾಮಾನ್ಯವಾಗಿ ಹೀಗೆ ಹೋಗುವ ತರುಣರ ಬಳಿ ಲೈಸನ್ಸ್ ಇರುವುದಿಲ್ಲ. ಲೈಸನ್ಸ್ ಪಡೆದುಕೊಳ್ಳಲು ಸಾಧ್ಯವಾಗುವ ಹದಿನೆಂಟು ವರ್ಷವನ್ನೂ ದಾಟಿರುವುದಿಲ್ಲ. ಶ್ರೀಮಂತ ತರುಣರು. ಅಪ್ಪಂದಿರನ್ನು ನಂಬಿ ಬದುಕುವ ತರುಣರು. ಅಪಘಾತ ನಡೆದರೆ ಇವರಿಗೆ ಮೊದಲನೆಯದು ಪೋಲೀಸ್ ಭಯ. ಲೈಸನ್ಸ್ ಇರುವುದಿಲ್ಲ."

"ಸಾಧ್ಯ!"

"ಎಂತಲೇ ಕಾರನ್ನು ನಡೆಸುತ್ತಿದ್ದವನು ಒಬ್ಬ ಶ್ರೀಮಂತರ ಮನೆಯ ಹುಡುಗ. ಮತ್ತೆ ಕಾರಿನ ವೇಗ ತಿಳಿಸುವ ಇನ್ನೊಂದು ವಿಚಾರವಿದೆ. ಆ ತರುಣ ಬಂದ ವೇಗ ನಟೇಶನ್ ಹೇಳುವಂತೆ ೯೦–೧೦೦ ಕಿಲೋ ಮೀಟರ್ ಇರಬಹುದು. ನೀರಜಾ, ಸ್ವಲ್ಪ ತಾಳು..."

ಗಣೇಶ ತನ್ನ ಬ್ರೀಫ್‌ಕೇಸನ್ನು ತೆರೆದು ಅಪಘಾತ ನಡೆದ ಸುತ್ತಮುತ್ತಲ ಪ್ರದೇಶದ ಭೂಪಟವನ್ನು ಹರಡಿದ. ಅದರಲ್ಲಿ ಘಟನೆ ನಡೆದ ಸ್ಥಳದಲ್ಲಿ × ಗುರುತು ಮಾಡಲಾಗಿತ್ತು. ಕಾರು ಬಂದ ದಿಕ್ಕು ಮತ್ತು ಸ್ಕೂಟರ್ ಬಂದ ದಿಕ್ಕುಗಳನ್ನು ಪೆನ್ಸಿಲ್‌ನಿಂದ ಗುರುತು ಮಾಡಲಾಗಿತ್ತು. ಕಾರಿನ ದಿಕ್ಕಿನಿಂದ ಅಪಘಾತ ನಡೆದ ಸ್ಥಳಕ್ಕೆ ಸ್ವಲ್ಪ ದೂರದಲ್ಲಿ W ಆಕಾರದಲ್ಲಿ ಮೂರು ರಸ್ತೆಗಳು ಸೇರುತ್ತವೆ. ಅಲ್ಲಿಗೂ ಅಪಘಾತ ನಡೆದ ಸ್ಥಳಕ್ಕೂ ಇರುವ ದೂರವನ್ನು ೨೦೦ ಅಡಿ ಎಂಬುದಾಗಿ ಪೆನ್ಸಿಲ್‌ನಲ್ಲಿ ಗುರುತಿಸಲಾಗಿತ್ತು. ಪೆನ್ಸಿಲ್‌ಅನ್ನು ಕಡಿಯುತ್ತ ಗಣೇಶ್ ಯೋಚಿಸಿದ.

"ಈ ಮೂರು ರಸ್ತೆಗಳಲ್ಲಿ ಯಾವ ರಸ್ತೆಯಿಂದ ಬಂದ ?"

ಅವನ ಬೆರಳುಗಳು ಅಪಘಾತ ನಡೆದ ಪೂರ್ವ ದಿಕ್ಕಿನಲ್ಲಿ ಒಂದು ವರ್ತುಲವನ್ನು ರೇಖಿಸಿತು.

"ಈ ಏರಿಯಾದಿಂದಲೇ ನಮ್ಮ ಕಥಾನಾಯಕ ಹೊರಟಿದ್ದಾನೆ" ಎಂದ. ಅವನ ಬೆರಳು ಬಲಭಾಗದಲ್ಲಿ ಪ್ರಯಾಣ ಮಾಡಿ ದೇವ್‌ನಗರದಲ್ಲಿ ನಿಂತಿತು.

"ಇಲ್ಲೆಲ್ಲೊ ಇದ್ದಾನೆ."

"ಎರಡೂ ವಿಶಾಲವಾದ ಪ್ರದೇಶ."

"ಹೌದು... ಆ..."

ಗಣೇಶ್ ಮಾತನ್ನು ನಿಲ್ಲಿಸಿದ; ಭೂಪಟವನ್ನು ನೋಡಿದ.

"ನೀರಜಾ... ನಾನು ಶುದ್ಧ ಮೂರ್ಖ!"

"ಯಾಕೆ?"

"ಕಾರು ಎಷ್ಟು ವೇಗವಾಗಿ ಬಂತು! ಅಪಘಾತ ನಡೆದ ಸ್ಥಳವನ್ನು ತಲುಪಿದಾಗ ಆ ವೇಗವನ್ನು ಮುಟ್ಟಲು ಕಾರು ಆ ಮೂರು ರಸ್ತೆಗಳಲ್ಲಿ ಒಂದು ರಸ್ತೆಯಿಂದ ಬಂದಿರಬೇಕು. ಯಾಕೆ ಅಂತ ಕೇಳ್ತೀಯಾ? ಜಾಣತನದ ಪ್ರಶ್ನೆ. ಮಿಕ್ಕ ಎರಡು ರಸ್ತೆಗಳಿಂದ ಬಂದ ಪಕ್ಷದಲ್ಲಿ ಅವನು ಆ ಕೂಟಿನಲ್ಲಿ ೯೦ ಡಿಗ್ರಿಯಷ್ಟು ತಿರುಗಿಸಬೇಕು. ಎಷ್ಟು ರಭಸದಿಂದ ಬಂದರೂ ಅವನು ೪೦–೫೦ ಕಿಲೋ ಮೀಟರ್ ವೇಗಕ್ಕೆ ಇಳಿಸಲೇಬೇಕು. ಕಡಿಮೆಯಾದ ಆ ವೇಗದಿಂದ ಅಪಘಾತ ನಡೆದ ಸ್ಥಳಕ್ಕೆ ಬಂದಾಗಿನ ವೇಗವನ್ನು ತಲುಪಲು ಅಷ್ಟು ಸ್ವಲ್ಪ ದೂರ ಸಾಕಾಗುವುದಿಲ್ಲ. ಇದು ನ್ಯೂಟನ್ ಸಿದ್ಧಾಂತ! ಆದ್ದರಿಂದ ನಮ್ಮ ಕಥಾನಾಯಕ ಮಧ್ಯದ ನೇರವಾದ ಹಾದಿಯಲ್ಲಿ ಬಂದಿದ್ದಾನೆ, ಎಂದು ನಂಬಲು

ಅಧಿಕವಾದ ಸಾಧ್ಯತೆಗಳಿವೆ. ಎಲ್ಲೂ ತಿರುಗದೆ ಮಧ್ಯೆಯಿರುವ ದಾರಿಯಲ್ಲೇ ಅಪಘಾತ ನಡೆದ ಸ್ಥಳಕ್ಕೆ ಬರಲು ಸಾಧ್ಯ..."

"ಅದರಲ್ಲಿ ಎಷ್ಟರ ಮಟ್ಟಿನ ಪ್ರಯೋಜನವಿದೆ ?" ಎಂದಳು ನೀರಜ.

"ಬಹಳವಿದೆ . ಹುಡುಗಿ... ಬಹಳ ವಿದೆ. ನನ್ನ ಅಲೆದಾಟದಲ್ಲಿ ಮೂರ ರಲ್ಲಿ ಎರಡು ಭಾಗ ಕಡಿಮೆಯಾಯಿ ತಲ್ಲ! ಲೆಟ್ ಅಸ್ ಸೀ..."

ಭೂಪಟದಲ್ಲಿ ಅವನ ತೋರು ಬೆರಳು ಮುಖ್ಯ ರಸ್ತೆಯಲ್ಲಿ ಸಾಗಿತು ಆ ರಸ್ತೆಯಲ್ಲಿದ್ದ ಮುಖ್ಯವಾದ ಸ್ಥಳ ಗಳನ್ನು ನೋಡುತ್ತ ಹೊರಟ. ಅವು ಗಳನ್ನು ಗುರುತು ಹಾಕಿಕೊಂಡ.

"ರಾಜೇಂದರ್ ಕಾಲೋನಿ ಈ ರಸ್ತೆಯಲ್ಲಿ ಬರುವ ಪ್ರಮುಖವಾದ ಸ್ಥಳ. ಬಳಿಕ ರಸ್ತೆ ಕಲ್ಲು ಬಂಡೆಗಳ ನಡುವೆ ಮುಂದುವರಿಯುತ್ತೆ ಅಪರ್ ರಿಡ್ಜ್ ರಸ್ತೆಯನ್ನು . ಮುಟ್ಟುತ್ತದೆ. ಅದಕ್ಕೆ ಮುಂಚೆ ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಆಪರೇಷನ್ ರಿಸರ್ಚ್ ಬರುತ್ತದೆ. ನೀರಜಾ, ಅವನು ರಾಜೇಂದರ್ ಕಾಲೋನಿಯಿಂದ ಬಂದಿರಬಹುದು. ಅಥವಾ ವಿವೇಕ್ ಚಿತ್ರ ಮಂದಿರದಲ್ಲಿ ಸಿನಿಮಾ ನೋಡಿ ಕೊಂಡು ಬಂದಿರಬಹುದು. ಇಲ್ಲ ದಿದ್ದರೆ ಆ ಇನ್‌ಸ್ಟಿಟ್ಯೂಟಿನಿಂದ ಬಂದಿರ ಬಹುದು."

"ಯಾಕೆ, ಅಪ್ಪರ್ ರಿಡ್ಜ್‌ನಲ್ಲಿ ಹೋಗಿ ರಸ್ತೆ ಮುಟ್ಟುತ್ತಲ್ಲ. ಅಲ್ಲಿಂದಾಚೆ ಯಿಂದಲೂ . ಬಂದಿರಬಹುದಲ್ಲ!"

"ಸಾಧ್ಯವಿಲ್ಲ. ಆ ರಿಡ್ಜ್ ರೋಡಿನ ಅಂಚಿನಿಂದ ಅಪಘಾತ ನಡೆದ ಸ್ಥಳಕ್ಕೆ ಬರಲು ಅದು ಬಳಸುದಾರಿ. ಶಂಕರ್ ರಸ್ತೆಯೇ ನೇರವಾದ ರಸ್ತೆ. ಅವನು ಬಂದ ವೇಗಕ್ಕೆ ಅದು ಸರಿಹೋಗದು."

'ಆದ್ದರಿಂದ...'

"ಆದ್ದರಿಂದ ರಿಡ್ಜ್ ರೋಡ್ ಕೂಟಿನಿಂದ ಈ ಕೂಟಿಗೆ ಬರುವ ನಡುವಿನ ಒಂದು ಭಾಗದಿಂದ ದೇವ್ ನಗರಕ್ಕೆ ಹೋಗಲು ಒಬ್ಬ ತರುಣ ಅಂದು ರಾತ್ರಿ ಬಂದಿದ್ದಾನೆ. ನನ್ನ ಮೊದಲ ಮತ ವಿವೇಕ್ ಥಿಯೇಟರ್‌ಗೆ ನೀರಜಾ! ಆ ಬೀರುವಿನಲ್ಲಿ ದಿನಪತ್ರಿಕೆ ಗಳಿವೆ. ಕಳೆದ ಹದಿನೇಳು, ಹದಿ ನೆಂಟರಂದು ವಿವೇಕ್ ಥಿಯೇಟರಿ ನಲ್ಲಿ ಯಾವ ಚಿತ್ರ ಅಂತ ನೋಡು!"

ಆ ದಿನಗಳ ದಿನಪತ್ರಿಕೆಗಳನ್ನು ಬಿಡಿಸಿ ನೋಡಿದ. 'ಗೆಸ್ ಹೂ ಈಸ್ ಕಮಿಂಗ್ ಫಾರ್ ಡಿನ್ನರ್' ಇಂಗ್ಲೀಷ್ ಚಿತ್ರ. ಇನ್ನೂ ಅದೇ ಚಿತ್ರ ನಡೆಯು ತ್ತಿದೆ...

ಗಣೇಶ್ ವಿವೇಕ್ ಥಿಯೇಟರಿಗೆ ಫೋನ್ ಮಾಡಿ ಎರಡನೇ ಆಟ ರಾತ್ರಿ ೧೧.೪೫ಕ್ಕೆ ಮುಗಿಯುವುದೆಂದು ತಿಳಿದುಕೊಂಡ.

"ವಿವೇಕ್ ಥಿಯೇಟರ್ ಈಸ್ ಔಟ್!"

"ಯಾಕೆ?"

"೧೧–೪೫ಕ್ಕೆ ಆಟ ಮುಗಿಯುತ್ತೆ ಅಲ್ಲಿಂದ ಇಲ್ಲಿಗೆ ಬರಲು ಖಂಡಿತ ೪೫ ನಿಮಿಷಗಳ ದೂರವಿಲ್ಲ."

"ಸಿನಿಮಾ ಬಿಟ್ಟ ಮೇಲೆ ಮಧ್ಯೆ ಎಲ್ಲಾದರೂ ನಿಂತಿದ್ದು ಬಂದಿರ ಬಹುದಲ್ಲ."

"ರಾತ್ರಿಯೆ? ಹಾಗೇ ಇರಲಿ. ನಾನು ಮೊದಲು ಗಮನಿಸುವುದು ಸಾಮಾನ್ಯವಾದ–ಸಹಜವಾದ ಕ್ರಿಯೆ. ಅಸಹಜವಾದ ಕ್ರಿಯೆ ಹಿಂದಿನಿಂದ ಬರುತ್ತದೆ. ಯಾವ ಯಾವ ಕ್ರಿಯೆ

ಗಳಿಗೆ ಮೊದಲ ಸ್ಥಾನ ಕೊಡಬಹುದೋ ಅವುಗಳನ್ನು ನೋಡೋಣ... ನಡುವೆ ಇರುವ ರಸ್ತೆಯಲ್ಲಿ ಬಂದಿರುವ ಸಾಧ್ಯತೆ ಇದೆ ಅದೇ ರಸ್ತೆಯಲ್ಲಿರುವ ಥಿಯೇಟರಿನಲ್ಲಿ ೧೧.೪೫ಕ್ಕೆ ಆಟ ಮುಗಿಯುತ್ತದೆ. ಅಪಘಾತ ನಡೆದ ಸ್ಥಳದಲ್ಲಿ ಆಗ ೧೨.೩೦. ಆದ್ದರಿಂದ ಥಿಯೇಟರಿನಿಂದ ಬಂದ ಎಂಬುದು ಸಾಧ್ಯತೆ ಕಡಿಮೆಯಾಗುತ್ತದೆ. ಹೀಗೇ ನಿರ್ಧರಿಸಬಹುದು... ಅಲ್ಲವೇ?"

"ಸರಿ."

"ಥಿಯೇಟರ್ ಇಲ್ಲ; ಉಳಿದಿರುವುದು ರಾಜೇಂದರ್ ಕಾಲೋನಿ ಆ ಇನ್ಸ್‌ಟಿಟ್ಯೂಟ್. ಈಗ ಹತ್ತಿರಕ್ಕೆ ಬರ್‍ತಿದ್ದೀವಿ. ಅಲ್ಲವೇ? ಹೋಗೋಣ." ಎಂದ

"ಎಲ್ಲಿಗೆ ?"

"ಆ ರಾಜೇಂದರ್ ಕಾಲೋನಿಯನ್ನು ನೋಡೋಣ".

"ನೋಡುವುದರಿಂದ ಏನಾದರೂ ಫಲವಿದೆಯೆ ?"

"ನಾನು ನಿರೀಕ್ಷಿಸಲಿಲ್ಲ. ಆದರೂ ನೋಡೋಣ. ೧೮ನೇ ತಾರೀಖಿನಂದು ಯಾವುದಾದರೂ ಸಮಾರಂಭ ವಿಜೃಂಭಣೆಯಿಂದ ನಡೆದಿದ್ದರೆ ಯಾರಿಗಾದರೂ ಗೊತ್ತಿರುತ್ತದೆ."

ರಾತ್ರಿ ೯.೩೬. ಗಣೇಶ್ ಕಾರಿನಲ್ಲಿ ಹೊರಟ. "ನೀರಜಾ, ನಾನು ಈ ಕೇಸನ್ನು ಕೈಗೆತ್ತಿಕೊಂಡುದು ನನ್ನ ಅಹಂಕಾರದಿಂದ. ನಾನು ಆ ಕಾರಿನ ಚಾಲಕ ಯಾರು ಎಂಬುದನ್ನು ಕಂಡು ಹಿಡಿದರೂ ಕಾನೂನಿನಂತೆ ಅವನನ್ನು ಶಿಕ್ಷಿಸಲು ಸಾಧ್ಯವಿಲ್ಲ. ಕೋರ್ಟಿನಲ್ಲಿ ಸಾಕ್ಷ್ಯಗಳಿರಬೇಕು. ಸಾಕ್ಷಿ ಒಬ್ಬರು ಮಾತ್ರ. ಅವರು ಕಂಡುದು ಕಾನೂನಿನ ದೃಷ್ಟಿಯಲ್ಲಿ ಸಾಕಾಗುವ ಅಂಶವಲ್ಲ. ಆದ್ದರಿಂದ ಅವನೇ ಎಂಬುದನ್ನು ಕಂಡು ಹಿಡಿದರೂ ಅವನನ್ನು ಏನೂ ಮಾಡಲು ಸಾಧ್ಯವಿಲ್ಲ."

"ನಾನೊಂದು ಪ್ರಶ್ನೆ ಕೇಳಲೆ?"

"ಕೇಳು."

"ಯಾರವನು ಎಂಬುದು ಗೊತ್ತಾದರೆ ಅವನಿಗೆ ಹೇಳ್ತೀರಾ ?"

"ಯಾರಿಗೆ?"

'ವಿನಯ್‌ಗೆ.'

'ಅದು ಪತ್ತೆ ಮಾಡಿದ ಮೇಲೆ ಯೋಚಿಸಬೇಕಾದ ಅಂಶ. ನಾನು ಕಾನೂನು ಪಂಡಿತ. ಕೆಲವು ಅಪರಾಧಗಳ ಬಗ್ಗೆ ವ್ಯವಹರಿಸಲು ಕಾಯಿದೆಗಳು ಸಾಲವು. ಅಂಥ ಅಪರಾಧಗಳ ಸಾಲಿನಲ್ಲಿ ಇದೂ ಒಂದು. ಅಂದಾಕ್ಷಣ ಅಂಥ ಒಂದು ಅರಣ್ಯದ ಕಾನೂನನ್ನು ಮಾಡಬಾರದು. ನ್ಯಾಯಾಲಯದ ಆಚೆ ಯಾವ ಶಿಕ್ಷೆಯನ್ನೂ ವಿಧಿಸಬಾರದು, ಎಂಬ ವಿಧಿಯನ್ನು ಮೀರಿದರೆ ಬಹಳ ಗೊಂದಲವಾಗುತ್ತದೆ ಅಲ್ಲವೆ?'

'ಅಂದ ಮೇಲೆ ಅವನನ್ನು ಪತ್ತೆ ಮಾಡಬೇಕು.'

'ಏಕೆ?'

'ಆತ್ಮ ತೃಪ್ತಿಗಾಗಿ. ಇದೊಂದು ಚೆಸ್ ಪ್ರಾಬ್ಲಂನಂತೆ ನನ್ನ ಮಿದುಳಿಗೆ ಆಹಾರ!"

ಅವರು ರಾಜೇಂದರ್ ಕಾಲೋನಿಗೆ ಬಂದರು.

ನಿಧಾನವಾಗಿ ಹೋದ ಕಾರಿನ ಬೆಳಕಿನಲ್ಲಿ ಕಂಡ ಕಡ್ಡಿ ಪೆಟ್ಟಿಗೆಯಂಥ ಮನೆಗಳು. ಹಾಲಿನ ಡಿಪೋ. ಉದ್ಯಾನವನ, ಮಾರ್ಕೆಟ್, ಮತ್ತೆ ಕಡ್ಡಿ ಪೆಟ್ಟಿಗೆಗಳು, ಹಾಲಿನ ಡಿಪೋ, ಇನ್ನೊಂದು ಮಾರ್ಕೆಟ್...'

'ಅಲ್ಲೆಲ್ಲಿ ಹುಡುಕುವುದು?

'ಎಲ್ಲವೂ ಮಧ್ಯಮ ತರಗತಿಯ ಇನ್ನೂ ಕೆಳವರ್ಗದ ಮನೆಗಳು.'

'ಹೇಗೆ ಹೇಳ್ತೀರಿ?'

'ನಮ್ಮ ಕರೋಲ್ ಬಾಗ್‌ನಲ್ಲಿ ರಸ್ತೆಯ ಬದಿಯಲ್ಲಿ ಪಾರ್ಕ್ ಮಾಡಿದ ಎಷ್ಟು ಕಾರುಗಳು ನಿಂತಿರುತ್ತವೆ?'

'ಇಲ್ಲಿ ನಿಂತಿಲ್ಲ. ಅಂದಾಕ್ಷಣಕ್ಕೆ ಇಲ್ಲಿಂದ ಬಂದಿಲ್ಲ ಅಂತೀರಾ?'

'ಹಾಗನ್ನಲಿಲ್ಲ. ಸಾಧ್ಯತೆ ಕಡಿಮೆ. ನನ್ನ ಚಿತ್ತದಲ್ಲಿ ಮೂಡಿರುವ ಚಿತ್ರದ ಪ್ರಕಾರ ಆ ಕಾರಿನ ಚಾಲಕ ಶ್ರೀಮಂತರ ಮನೆಯ ಹುಡುಗ. ಅವನ ದರ್ಜೆಯನ್ನು ಈ ಮನೆಗಳ ನಿವಾಸಿಗಳ ದರ್ಜೆಯೊಡನೆ ಸರಿಗಟ್ಟಲು ಸಾಧ್ಯವಾಗ್ತಿಲ್ಲ... ಮೈಂಡ್‌ಯೂ. ನನ್ನ ತರ್ಕ ಸಂಪೂರ್ಣವಾಗಿ ತಪ್ಪಾಗಿರಲೂಬಹುದು.'

'ಇನ್ನು ಉಳಿದಿರುವುದು ಆ ಇನ್ಸ್‌ಟಿಟೂಟ್ ಮಾತ್ರ'.

'ಬಾ, ಅಲ್ಲಿಗೆ ಹೋಗೋಣ.'

ರಸ್ತೆ ನೇರ ಹಾದಿಯಲ್ಲಿ ಸಾಗಿತು. ಕಲ್ಲು ಬಂಡೆಗಳನು ದಾಟಿದ ಕೂಡಲೇ ಥಟ್ಟನೆ ನಾಲ್ಕು ಮಹಡಿಯ ಕಾಂಕ್ರೀಟ್ ಗೋಡೆಯ ಆವರಣದ ನಡುವೆ ಕಂಡಿತು. ಬಾಗಿಲು ಹಾಕಿತ್ತು. ಒಬ್ಬ ಚೌಕಿದಾರ ಬೆಳಕಿನಲ್ಲಿ ನಿಂತು ಮಾತಾಡಿದ.

"ಏನು ಬೇಕು?'

'ಇದೇ ತಾನೆ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಆಪರೇಷನಲ್ ರಿಸರ್ಚ್?'

'ಹೌದು. ಆದರೆ ಆಫೀಸು ೪.೩೦ಕ್ಕೆ ಮುಚ್ಚಿ ಬಿಡುತ್ತೆ. ಒಳಗೆ ಯಾರೂ ಇಲ್ಲ.'



ಸಣ್ಣ ಸಣ್ಣ ಪಟಾಕಿಗಳಿಗೆಲ್ಲಾ ಹಣ ವ್ಯರ್ಥ ಮಾಡಬೇಡ ಅಂದಿದ್ರಲ್ಲ ಭಾವಾ, ಇಗೋ ನಿನಗಾಗಿ ದೊಡ್ಡ ಪಟಾಕಿ. ನನ್ನ ಹಣದಲ್ಲೇ ತಂದಿದ್ದೇನಿ...

'ಒಳಗೆ ಕ್ವಾರ್ಟರ್ಸ್, ಮನೆ ಏನೂ ಇಲ್ಲವೆ?'

'ಇಲ್ಲ.'

'ಕಳೆದ ೧೮ನೇ ತಾರೀಖು ರಾತ್ರಿ ಇಲ್ಲಿ ಯಾವುದಾದರೂ ಸಮಾರಂಭ ಇತ್ತೆ?'

'ಕಳೆದ ತಿಂಗಳಲ್ಲಿ ನಾನು ಹಗಲಿನ ಡ್ಯೂಟಿಯಲ್ಲಿದ್ದೆ.'

ಗಣೇಶ್ ಅರ್ಧ ನಿಮಿಷ ಮೌನವಾಗಿ ನಿಂತಿದ್ದ. ಮತ್ತೆ ವಾಪಸು ಬಂದು ಕುಳಿತು ಹೊರಟ. ಅವನು ಮಾತಾಡಲೆಂದು ನೀರಜಾ ಕಾದಿದ್ದಳು. ರಿಸರ್ಚ್‌ನಲ್ಲಿ ಬಂದು ಮತ್ತೆ ರಸ್ತೆಯಲ್ಲಿ ಹೊರಟ ನಂತರ ಗಣೇಶ್ ನುಡಿದ.

'ಕೇಸು ಅಷ್ಟು ಸುಲಭವಾಗಿಲ್ಲ. ಇದೊಂದು ಆಫೀಸು. ಸಂಜೆ ೪.೩೦ಕ್ಕೆ ಬಂದ್!... ಆದ್ದರಿಂದ ಈ ಮೂರು ಸ್ಥಳಗಳಲ್ಲೂ ಸಾಧ್ಯವಿಲ್ಲ. ಥಿಯೇಟರ್ ಇಲ್ಲ. ರಾಜೇಂದರ್ ಕಾಲೋನಿ ಇಲ್ಲ. ಇನ್ಸ್‌ಟಿಟ್ಯೂಟ್ ಇಲ್ಲ. ಈ ಕಾರಣಗಳಿಂದ ಈ ರಸ್ತೆಯೇ ಇಲ್ಲ ಅಲ್ಲವೆ?'

'ಓ ಮೈ ಗಾಡ್!' ಎಂದಳು.

'ಉಳಿದ ಎರಡು ರಸ್ತೆಗಳನ್ನೂ ಮುಟ್ಟಲು ಸಾಧ್ಯವಿಲ್ಲ... ಯಾಕೆಂದರೆ ವಿಶಾಲ ಪ್ರದೇಶವಾಗಿ ಬಿಡುತ್ತೆ. ಅಷ್ಟೆ; ಮೂರೂ ಡೆಡ್ ಎಂಡ್. ಕೇಸು ಇಲ್ಲಿಗೆ ಮುಗಿಯುತ್ತೆ. ಜೈಹಿಂದ್!' ಎಂದ ಗಣೇಶ್. ಅವನ ಮಾತಿನಲ್ಲಿ ಮೂಡಿದ್ದ ನಿರಾಸೆಯನ್ನು ಗುರುತಿಸಿದ ನೀರಜಾ, 'ಬೇಜಾರು ಮಾಡಿಕೋಬೇಡಿ. ಥಟ್ಟಂತ ಏನಾದರೂ ಹೊಳೆಯುತ್ತೆ.' ಎಂದಳು.

'ಯಾರಿಗೆ, ನಿನಗಾ?'

ಶುಕ್ರವಾರ ೧೦–೧೫. ಕೋರ್ಟಿಗೆ ಹೋಗುವ ಮುಂಚೆ ಟೇಬಲ್ಲಿನ ಮೇಲೆ ಹರಡಿಕೊಂಡಿದ್ದ ಕಾಗದಗಳನ್ನು ಗಣೇಶ್ ಜೋಡಿಸಿದ. ಹಿಂದಿನ ರಾತ್ರಿ ನೋಡಿದ್ದ ಹದಿನೆಂಟನೆ ದಿನಾಂಕದ ಪತ್ರಿಕೆಯೂ ಅಲ್ಲಿತ್ತು. ಅವುಗಳನ್ನು ಬೀರುವಿನಲ್ಲಿಡುವ

ಮುನ್ನ ವಿವೇಕ್ ಥಿಯೇಟರಿನಲ್ಲಿ ಚಿತ್ರದ ವೇಳೆಯನ್ನು ಇನ್ನೊಮ್ಮೆ ನೋಡಿದ. ಅದರಿಂದ ಏನಾದರೂ ಗೊತ್ತಾಗುವುದೆಂದು ಭಾವಿಸಿದನ?...

ಆದರೆ ಏನೂ ಗೊತ್ತಾಗಲಿಲ್ಲ. ಅದೇ ೩.೩೦,೬–೩೦ ಮತ್ತು ೯–೩೦. ಆದರೆ...

ಅದೇ ಪುಟದಲ್ಲಿ ಸ್ವಲ್ಪ ದೂರದಲ್ಲಿ ಕಂಡ 'ಇಂದಿನ ಕಾರ್ಯಕ್ರಮಗಳು' ಎಂಬ ಪಟ್ಟಿ ಅವನನ್ನು ನಿಗರಿ ನಿಲ್ಲುವಂತೆ ಮಾಡಿತು. ಆ ಪಟ್ಟಿಯಲ್ಲಿ ಕಾಣಿಸಿದ ಹಲವಾರು ಸಮಾರಂಭಗಳು, ಆಟ ಪಾಟಗಳಲ್ಲಿ ಒಂದು ಅವನಿಗೆ ರೋಮಾಂಚನವುಂಟು ಮಾಡಿತು. 'ನಿಜವಿರಬಹುದೆ?' ಎಂದು ಯೋಚಿಸುತ್ತಿದ್ದ.

ಅವನನ್ನು ಅಚ್ಚರಿಗೊಳ್ಳುವಂತೆ ಮಾಡಿದುದು ಈ ಸಣ್ಣ ವಾಕ್ಯ: 'ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಆಪರೇಷನಲ್ ರಿಸರ್ಚ್‌ನ ವಾರ್ಷಿಕ ಬ್ರಿಜ್ ಟೂರ್ನಮೆಂಟ್ ಕೊನೆಯ ದಿನ ರಾತ್ರಿ ೭–೩೦ಕ್ಕೆ ಪ್ರಾರಂಭ!'

ಬ್ರಿಜ್! ಗಂಟೆಗಟ್ಟಲೆ ಆಟವಾಡುವ ಇಸ್ಪೀಟು ಆಟ. ಗಂಟೆಗಟ್ಟಲೆ! ಏಳೂವರೆ ಗಂಟೆಯಿಂದ ಹನ್ನೆರಡರವರೆಗೆ... ಹನ್ನೆರಡೂವರೆಯವರೆಗೆ... ಬ್ರಿಜ್! ಏಪ್ರಿಲ್ ಹದಿನೆಂಟು... ಅದೇ ಇನ್ಸಿಟ್ಯೂಟ್...

ಗಣೇಶ್ ಟೆಲಿಫೋನ್ ಡೈರೆಕ್ಟರಿಯಲ್ಲಿ ಹುಡುಕಿ ಆ ನಂಬರನ್ನು ಕರೆದ.

'ಐ. ಓ... ಆರ್...' ಎಂದಿತು ಹೆಣ್ಣಿನ ಧ್ವನಿ.

"ಗುಡ್ ಮಾರ್ನಿಂಗ್. ನನ್ನ ಹೆಸರು ಗಣೇಶ್, ನಿಮ್ಮ ರಿಕ್ರಿಯೇಷನ್ ಕ್ಲಬ್‌ನ ಕಾರ್ಯದರ್ಶಿಯವರೊಡನೆ ನಾನು ಮಾತಾಡಬೇಕಾಗಿದೆ.'

'ಯೂ ವಾಂಟ್ ಟು ಸ್ಪೀಕ್ ಟು ಮಿಸ್ಟರ್ ಯಾದವ್?'

"ಹೌದು.'

'ಒನ್ ಮಿನಿಟ್ ಪ್ಲೀಸ್.'

ಗಣೇಶ್‌ನ ನಾಡಿ ಬಡಿತ ಜೋರಾಯಿತು.

'ಯಾದವ್ ಸ್ಪೀಕಿಂಗ್'

'ಗುಡ್ ಮಾರ್ನಿಂಗ್ ಮಿಸ್ಟರ್ ಯಾದವ್! ನನ್ನ ಹೆಸರು ಗಣೇಶ್. ನಾನು ಪತ್ರಿಕಾ ವರದಿಗಾರ'.ಎಂದ.

'ಗುಡ್ ಮಾರ್ನಿಂಗ್'

'ಗುಡ್ ಮಾರ್ನಿಂಗ್'.

'ಕಳೆದ ತಿಂಗಳು ನಿಮ್ಮ ಇನ್ಸ್ಟಿಟ್ಯೂಟ್‌ನಲ್ಲಿ ಟೂರ್ನಮೆಂಟ್ ನಡೀತಲ್ಲ. ಅದರ ಫೈನಲ್ಸ್‌ನಲ್ಲಿ ಯಾರು ಗೆದ್ದರು?'

'ಪೇಪರ್ನಲ್ಲಿ ಬಂದಿತ್ತಲ್ಲ!'

'ಅದಕ್ಕಲ್ಲ. ಆ ಆಟದ ಕೊನೆಯಲ್ಲಿ ಸ್ವಾರಸ್ಯವಾದ ಕೈ ಜೋರಾಯಿತು. ಆ ವಿಚಾರಾನ ವೀಕ್ಲಿ ರೆವ್ಯೂನಲ್ಲಿ ಬರೆಯಬೇಕು ಅಂತ ನಮ್ಮ ಸ್ಪೋರ್ಟ್ಸ್ ಎಡಿಟರ್ ಹೇಳಿದರು. ಅದಕ್ಕೆ.'

'ಮಾಸ್ಟರ್ ಬಾರ್ ತಾನೆ?'

'ಅದೇ ತಾನೆ ಅಂದು ನಡೆದುದು?'

'ಹೌದು; ರಾತ್ರಿ ೧೨.೧೫ರ ವರೆಗೆ ಹೋಯಿತು. ಟೆನ್ಸ್ ಗೇಮ್! ಸ್ವಲ್ಪ ತಡೀರಿ!'

ಗಣೇಶ್ ಪೆನ್ಸಿಲ್ ಕಚ್ಚಿದ. ಮುಖವನ್ನು ಒರೆಸಿಕೊಂಡ.

ರಾತ್ರಿ ೧೨–೧೫!

ಮತ್ತೆ ಧ್ವನಿ ಬಂತು. 'ಜಯಗಳಿಸಿದವರು ಡೇ ಮತ್ತು ಸೇನ್ ಗುಪ್ತ. ಕೈಲಾಶ್ ಕಾಲೋನಿಯಲ್ಲಿದ್ದಾರೆ.

'ಸೋತವರು?

'ದಾಸ್ ಮತ್ತು ಮಲ್ಹೋತ್ರ ದೇವ್‌ನಗರ್‌ನಲ್ಲಿದ್ದಾರೆ.'

'ದೇವ್‌ನಗರ್?'

'ಹೌದು.'

'ಮಲ್ಹೋತ್ರ ತರುಣರು ? ಹುಡುಗ?'

'ನೀವ್ ದಾಸ್‌ನ ; ಹೇಳ್ತಿದೀರಿ.'

'ಓ ಎಸ್... ನನಗೆ ದಾಸ್ ಗೊತ್ತು. ಒಳ್ಳೆಯ ಪ್ಲೇಯರ್.'

'ಹೌದು. ಆದರೆ ಅವತ್ತು ದಾಸ್ ಮಾಡಿದ ತಪ್ಪಿನಿಂದಲೇ ಗೇಮ್, ರಬ್ಬರ್, ಮ್ಯಾಚ್ ಎಲ್ಲ ಹೋಯಿತು. ಒಂದೇ ಒಂದು ತಪ್ಪು! ಓಲ್ಡ್ 'ಮ್ಯಾನ್ ಮಲ್ಹೋತ್ರಾ ವಾಸ್ ಮ್ಯಾಡ್.'

'ದಾಸ್ ಆಫೀಸಿನಲ್ಲಿದಾರಾ?'

'ಇಲ್ಲ, ಎರಡು ದಿನಗಳಿಂದ ಬಂದಿಲ್ಲ. ಅವನಿಗೇನು ಹುಡುಗ, ಬೇಕಾದಷ್ಟು ಹಣವಿದೆ.

'ಕಾರಿದೆ ಅಲ್ಲವೆ?'

'ಹೌದು… ಕಳೆದ ಹದಿನೈದು ದಿನಗಳಿಂದ ತರ್‍ಲ್ಲ…'

'ಅಂಬಾಸಿಡರ್…?'

'ಹೌದು.'

'ಕಪ್ಪು ಬಣ್ಣ?'

'ಇಲ್ಲ. ನೀಲಿ ಬಣ್ಣ; ಕಪ್ಪು ಮಿಶ್ರಿತ ನೀಲಿ ಬಣ್ಣ. ದಾಸ್ ನಿಮ್ಮ ಪರಿಚಿತರೆ?'

'ನನಗೆ ಅವರ ಮನೆಯ ವಿಳಾಸ ಬೇಕಲ್ಲ!'

'ಕೊಡ್ತೀನಿ'

'ಥ್ಯಾಂಕ್ಯೂ ಪ್ಲೀಸ್… ಬರುವ ಭಾನುವಾರ ಈ ವಿಚಾರವಾಗಿ ಬರೀತೀನಿ.'

ನಕ್ಷತ್ರದ ಬೆಳಕಿನಲ್ಲಿ ತಡವರಿಸುತ್ತ ಕಾಲು ದಾರಿಯಲ್ಲಿ ನಡೆಯುವಾಗ ಅಂಚನ್ನು ತಿರುಗಿದಾಗ ಥಟ್ಟನೆ ರತ್ನಖಚಿತ ಮಹಲನ್ನು ಕಂಡಂತೆ ಗಣೇಶ್‌ಗೆ ಆನಂದವಾಯಿತು. 'ನಿಜವೆ? ನಾನು ಪತ್ತೆ ಮಾಡಿಬಿಟ್ಟೆನೆ? ಅಥವಾ ಮುಗ್ಗರಿಸಿ ಬಿದ್ದು ಬಿಟ್ಟೆನೆ?…'

ಅವನೇ? ಅದೇ ದಾಸ್? ಅವನೇ ನಿಜ. ಸಂಪೂರ್ಣವಾಗಿ ಹೊಂದಾಣಿಕೆಯಾಗುತ್ತೆ. ರಾತ್ರಿ ೧೨-೧೫ರ ವರೆಗೆ ಇಸ್ಪೀಟು ಆಟ ನಡೆದಿದೆ. ಆಟದಲ್ಲಿ ಸೋಲಾಗಿದೆ. ಸೋಲಿಗೆ ದಾಸ್ ಮಾಡಿದ ತಪ್ಪೇ ಕಾರಣ. ಅವನು ದೇವ್‌ನಗರದವನು. ಕಾರು ಅಂಬಾಸಡರ್. ಕಪ್ಪು ಮಿಶ್ರ ನೀಲಿ ಬಣ್ಣ. ಕಾರಿನ ವೇಗಕ್ಕೆ ಕಾರಣವಿದೆ. ತಾರುಣ್ಯ; ಸೋಲು. ಸಮಯ ಹೊಂದುತ್ತೆ. ಅವನೇ ದಾಸ್!

'ಹಲೋ ವಿನಯ್?'

'ಹೌದು'

'ಗಣೇಶ್ ಹಿಯರ್. ನಿಮ್ಮ ಗೆಳೆಯನನ್ನು ಪತ್ತೆ ಮಾಡಿಬಿಟ್ಟೆ!'

'ನನ್ನ ಗೆಳೆಯ… ಯೂ ಮೀನ್ ಕಾರನ್ನು ನಡೆಸುತ್ತಿದ್ದ ವ್ಯಕ್ತಿ?'

'ಹೌದು'

'ಓ ಮೈ ಗಾಡ್! ಗಣೇಶ್, ಯೂ ಆರ್ ಗ್ರೇಟ್… ಯಾರವನು? ಯಾವುದು ಅವನ ವಿಳಾಸ? ಯಾರು. ಯಾರವನು?'

'ಯಾರವನು ಎಂದು ನಾನು ತಿಳಿಸುವುದಕ್ಕೆ ಮುಂಚೆ ಒಂದು ನಿಬಂಧನೆ!'

'ನೀವು ಏನು ಹೇಳ್ತೀರಿ ಅಂತ ನನಗೆ ಗೊತ್ತು. ನೋ ವಯಲೆನ್ಸ್… ಅಷ್ಟೆ ತಾನೆ?'

'ನೇರವಾಗಿ ನಿಮ್ಮ ಮನೆಗೆ ಬನ್ನಿ ನಾನೀಗ ನಿಮಗೆ ತಿಳಿಸುವುದಿಲ್ಲ. ನಾವು ಅವನ ಮನೆಗೆ ಹೋಗ್ತೀವಿ.



ನೀವು ಅಲ್ಲಿ ಕೈಕಟ್ಟಿಕೊಂಡು ಸುಮ್ಮನಿರಬೇಕು. ಐ ಡೂ ದಿ ಟಾಕಿಂಗ್! ಏನು? ಈ ನಿಬಂಧನೆಗೆ ಒಪ್ಪುವುದಾದರೆ ಬನ್ನಿ!'

'ಆಗಬಹುದು… ಆಗಬಹುದು!'

'ಬನ್ನಿ…'

೧೧.೪೭.

ಆ ದೇವ್‌ನಗರದ ವಿಳಾಸವನ್ನು ನೋಡುತ್ತ ಕಾರು ಹೋಗುತ್ತಿತ್ತು.

'ಹೇಗೆ ಪತ್ತೆ ಮಾಡಿದಿರಿ?'

'ಅವನು ಚೆಲ್ಲಿ ಹೋದ ಎಗ್ಸಾಸ್ಟ್ ಹೊಗೆಯಿಂದ…'

'ಡೋಂಟ್ ಟೆಲ್ ಮಿ.'

'ಅದೇನಿಲ್ಲ'ಎಂದ. ಈಗಲೂ ನಂಬಲು ಸಾಧ್ಯವಾಗುವುದಿಲ್ಲ. ಅನಾಮಧೇಯ ವೆನಿಸಿದ್ದ ಕೇಸು ಥಟ್ಟನೆ ಫೋಕಸಿಗೆ ಬಂದು ಬಿಡ್ತು! ಅದರಲ್ಲಿ ತನ್ನ ಪ್ರಯತ್ನವೆಷ್ಟು, ಆಕಸ್ಮಿಕವೆಷ್ಟು? ಮೂರು ರಸ್ತೆಗಳಲ್ಲಿ ಒಂದು ರಸ್ತೆ ಎಂಬುದನ್ನು ಕಂಡು ಹಿಡಿದ. ಪತ್ರಿಕೆಯನ್ನು ನೋಡಿದ. ಪತ್ರಿಕೆಯನ್ನು ನೋಡುವ ಮಿದುಳು ಅವನದು. ಅದರಲ್ಲಿ ಅಂದಿನ ಕಾರ್ಯಕ್ರಮಗಳನ್ನು ನೋಡಿಸಿದ್ದಂ?…

'ಆಕಸ್ಮಿಕವಲ್ಲ. ಪರವಶಾತ್, ಹೌದು ಪರಮಾತ್ಮನೇ ವಿನಯನನ್ನೂ ಕರೆದುಕೊಂಡು ಬಂದು ಬಿಟ್ಟ! ಅವನು ಥಟ್ಟನೆ ಭಾವನಾಪರವಶನಾಗಿ ಏನಾದರೂ ಮಾಡಿ ಬಿಟ್ಟರೆ?…

'ಗಣೇಶ್, ಯಾಕೆ ಮಾತಾಡದೆ ಇದೀರಲ್ಲ?'

'ಯೋಚನೆ.

'ನನ್ನ ವಿಚಾರವಾಗಿಯೆ? ಚಿಂತೆ ಬೇಡ. ನನಗೆ ಅವನನ್ನು ಕಾಣಬೇಕು. ಹೇಗಿದಾನೆ, ಅಂತ ನೋಡಬೇಕು. ನೋಡಿ…'

'ಅವನನ್ನು ಸಹಜ ರೀತಿಯಲ್ಲಿ ಮೊದಲು ಸಂಧಿಸೋಣ. ಸಂಧಿಸಿ ಬ್ರಿಜ್ ಆಟದ ಬಗ್ಗೆ ಪ್ರಸ್ತಾಪಿಸೋಣ. ಆಮೇಲೆ ಮೆಲ್ಲನೆ ವಿಷಯಕ್ಕೆ ಬರೋಣ. ನನಗೆ ಯೋಗ್ಯತೆಯಿದ್ದರೆ, ಅವನನ್ನು ಒಪ್ಪಿಕೊಳ್ಳುವಂತೆ ಮಾಡಬಲ್ಲೆ!.'

'ಮೊದಲು ನಾನು ಹೋಗುತ್ತೇನೆ. ನೀವು ಕಾರಿನಲ್ಲಿ ಇರಬೇಕು. ಕರೆದಾಗ ಬರಬೇಕು.'

'ನೀವೇನು ಹೇಳಿದರೂ ಸರಿ ಮಿಸ್ಟರ್"

"ಇದರಲ್ಲಿ ಪತ್ತೇದಾರಿ ಕೆಲಸವೇ ನಿಲ್ಲ. ಅಕಸ್ಮಾತ್ತಾಗಿ ಪತ್ತೆ ಮಾಡಿದೆ. ಸ್ಕೋರ್ ಆಮೇಲೆ ಹೇಳ್ತೀನಿ.'

೧೪೫, ಕಿಷನ್ ಗಂಜ್, ದೇವ್ ನಗರ್. ಅದೇ ಆ ವಿಳಾಸ. ಕಿಷನ್ ಗಂಜ್ ಖಾಲ್ಸಾ ಕಾಲೇಜನ್ನು ದಾಟುತ್ತಲೇ ಬರುತ್ತದೆಂಬುದು ಅವನಿಗೆ ಗೊತ್ತು…

ಬಸ್‌ಸ್ಟ್ಯಾಂಡ್ ದಾಟಿ, ಕಾಲೇಜನ್ನು ದಾಟಿ, ಮೈದಾನವನ್ನು ಹಾಯ್ದು ಹೊಸ ಹೊಸ ಮನೆಗಳಿರುವ ಆ ಕಾಲೋನಿಯಲ್ಲಿ ೧೪೫ನ್ನು ಕಾರು ಮೆಲ್ಲನೆ ತಲುಪಿತು.

ಕಾಂಕ್ರೀಟ್ ಬಾಣಗಳು ೯೦-೧೫೦ ಎಂದು ಸೂಚಿಸಿದ ಎರಡನೇ ಸಂದಿಯಲ್ಲಿ ತಿರುಗಿಸಿದ. ಅವನ ಹೃದಯ ಸ್ಟೀರಿಂಗ್ ಹಿಡಿದಿದ್ದ ಕೈವರೆಗೆ ಬಂದು ಬಿಡ್ತು.

ಎಡಭಾಗದಲ್ಲಿ ಮೊದಲ ಮನೆ ೧೫೦.

ಮುಂದಿನದು ೧೪೯, ಅದರ ಮುಂದಿನದು ೧೪೮. ಮುಂದಿನದು, ಮುಂದಿನದು…

'ಏನಿದು, ಪೋಲೀಸ್ ವ್ಯಾನು ನಿಂತಿದೆಯಲ್ಲ?' ಎಂದ ವಿನಯ್.

'ಏನಿದು, ನನಗೆ ಅರ್ಥವಾಗ್ತಿಲ್ಲ. ಪೋಲೀಸರು ನನಗಿಂತ ಮುಂಚೆ ಹೇಗೆ ಬಂದರು? ಹೇಗೆ ಪತ್ತೆ ಮಾಡಿದರು?

ಮನೆಯೇನೋ ದೊಡ್ಡದು. ಲಾನ್ ಹಸಿರು ಬಣ್ಣ. ಗ್ಯಾರೇಜಿನ ಬಳಿಯ ಕೆಲವರು ನಿಂತು ಕುತೂಹಲದಿಂದ ಒಳಗೆ ನೋಡುತ್ತಿದ್ದರು.

'ಇರು' ಎಂದವನು ಕಾರನ್ನು ನಿಲ್ಲಿಸಿದ. ಇಳಿದ. ಮನೆಯನ್ನು ತಲುಪಿದ.

ಹೊರಗೆ ಸಿಗರೇಟು ಸೇದುತ್ತನಿಂತಿದ್ದ ತರುಣನನ್ನು ಕಂಡು ಕೇಳಿದ

'ಇದೇ ತಾನೆ ದಾಸ್ ಮನೆ?

'ಹೌದು.'

'ಏನಾಯಿತು? ಪೋಲೀಸು ಯಾಕೆ ಬಂದಿದೆ?

'ಒಂದು ಆಕ್ಸಿಡೆಂಟ್…'

'ಟ್ರಾಫಿಕ್ ಆಕ್ಸಿಡೆಂಟ್?

'ಹೌದು…'

'ಹೋದ ತಿಂಗಳು ನಡೀತಲ್ಲ?

'ಹೋದ ತಿಂಗಳೇ?…

'ಮತ್ತೆ?

'ಇವತ್ತು ಬೆಳಗ್ಗೆ ನಡೆಯಿತು. ಈ ಹುಡುಗ ದಾಸ್ ಯಾವಾಗಲೂ ಸ್ಪೀಡಾಗಿ ಹೋಗ್ತಾನೆ. ಹೋದ ತಿಂಗಳೂ ಎಲ್ಲೋ ಹಾಯ್ದಿದಾನೆ. ಕಾರು ಮನೆಯಲ್ಲೆ ಬಿದ್ದಿತ್ತು. ಇವತ್ತು ಇನ್ನಾರ ಕಾರನ್ನೊ ತೊಗೊಂಡು ಹೋಗಿದಾನೆ. ಒಂದು ಕ್ರಾಸಿನಲ್ಲಿ ಡಿ.ಟಿ.ಯು. ಬಸ್ಸಿಗೆ ಡಿಕ್ಕಿ…

'ಡಿಕ್ಕಿ ಹೊಡೆದು?'

'ದಾಸ್ ಸತ್ತು ಹೋದ!'

೧೨.೦೫

ಗಣೇಶ್ ಯೋಚಿಸಲಾಗದಂತೆ, ಅಹಂಕಾರ ಪಡಲಾಗದಂತೆ ಹರ್ಷ ಪಡಲಾಗದಂತೆ ಮೆಲ್ಲನೆ ಆ ಸ್ಥಳವನ್ನು ಬಿಟ್ಟು, ಹೊರಟು ಕಾದಿದ್ದ ವಿನಯ್‌ಗೆ ವಿಷಯವನ್ನು ತಿಳಿಸಲು ಸಾಗಿದ.

● ●




ಒಂದು ಫೋಟೋ. ಫೋಟೋವಿನ ಕೆಳಗೆ ಅಬ್ದುಲ್ ಎಂಬ ಈ ಕಳ್ಳಸಾಗಾಣಿಕೆದಾರನನ್ನು ಹಿಡಿದುಕೊಟ್ಟವರಿಗೆ ಒಂದು ಲಕ್ಷ ರೂಪಾಯಿ ಬಹುಮಾನ ಎಂಬ ಜಾಹೀರಾತು. ಇದರೊಂದಿಗೆ ನಲವತ್ತೊಂದನೆಯ ವಯಸ್ಸಿನಲ್ಲಿ ಅಪಾರ ಧನ ಲಭಿಸುತ್ತದೆಂಬ ರಾಯರು ಜಾತಕದಲ್ಲಿನ ಭವಿಷ್ಯವಾಣಿಯನ್ನು ಕೂಡಿಸಿ ತಾಳೆ ಹಾಕಿ.ಆಗ ನಿಮಗೆ ರಾಯರು ಈ ಕಳ್ಳ ಸಾಗಾಣಿಕೆದಾರನನ್ನು ಹಿಡಿಯಲೇಬೇಕೆಂಬ ದೃಢ ನಿರ್ಧಾರ ಏಕೆ ಕೈಗೊಂಡರು ಎಂಬುದು ಅರ್ಥವಾಗುತ್ತದೆ. ಮನಸ್ಸಿನಲ್ಲಿ ಏನಾದರೂ ಮೂಡಿದರೆ ಅದನ್ನು ಕಾರ್ಯರೂಪಕ್ಕೆ ತಕ್ಷಣ ಇಳಿಸುವುದು ರಾಯರ ಜಾಯಮಾನ. ಅದೂ ಅಲ್ಲದೆ ಒಂದು ಲಕ್ಷ ರೂಪಾಯಿಗಳ ಬೆಲೆಯ ಅಬ್ದುಲ್ಲನನ್ನು ಹಿಡಿಯಲು ಅದೆಷ್ಟು ಸ್ಪರ್ಧಿಗಳಿದ್ದಾರೋ? ತಡಮಾಡಿದಷ್ಟೂ ಮೂರ್ಖತನ.

ಈ ಅಬ್ದುಲ್ಲ ಹೊರಗೆಲ್ಲೂ ತಪ್ಪಿಸಿಕೊಂಡು ಹೋಗುವುದು ಸಾಧ್ಯವಿರದ ಮಾತು. ಹಾಗೆ ಹೋದರೆ ಎಲ್ಲೆಲ್ಲೂ ಕಣ್ಣಿಟ್ಟಿರುವ ಪೋಲೀಸರ ಕೈಗೆ ಸಿಕ್ಕಿಬೀಳುವುದು ಖಂಡಿತ. ದೀಪದ ಕೆಳಗೇ ಕತ್ತಲೆ ಇರುವ ಹಾಗೆ ಈ ಊರಿನ ಹತ್ತಿರದ ಹಳ್ಳಿಗಳಲ್ಲಿ ತಲೆ ತಪ್ಪಿಸಿಕೊಂಡಿರುತ್ತಾನೆ ಕೊರಮ ಎಂದು ಲೆಕ್ಕಾಚಾರ ಹಾಕಿ ರಾಯರು ತಮ್ಮ ಜಾಣತನಕ್ಕೆ ತಾವೇ ಬೆನ್ನು ಚಪ್ಪರಿಸಿಕೊಂಡರು. ಉಳಿದ ಸ್ಪರ್ಧಿಗಳಿಗೆ ಇಷ್ಟೆಲ್ಲ ತಲೆ ಓಡುವುದು ಸಾಧ್ಯವೆ?

ಆದ್ದರಿಂದಲೇ ಭಾನುವಾರ ಮನೆಯಲ್ಲಿ ಮಧ್ಯಾಹ್ನದ ಊಟದ ನಂತರ ಗೊರಕೆ ಹೊಡೆಯುತ್ತ ಮಲಗುವುದರ ಬದಲು ರಾಯರು ಮಟಮಟ ಮಧ್ಯಾಹ್ನ ಮಂಗನಹಳ್ಳಿ ರಸ್ತೆಯಲ್ಲಿ ಸಾಗುತ್ತಿದ್ದುದು. ಅಬ್ದುಲ್ಲನ ಜಮೀನು ಮತ್ತಿತರ ಆಸ್ತಿಗಳೆಲ್ಲ ಈ ಕಡೆಗೆ ಇದ್ದುವೆಂಬುದೇ ರಾಯರ ಸವಾರಿ ಇತ್ತ ಚಿತ್ತೈಸಿದುದಕ್ಕೆ ಕಾರಣ. ದಾರಿಯಲ್ಲಿ ಎದುರಿನಿಂದ ಬರುತ್ತಿದ್ದ ಒಬ್ಬ ಮುದುಕನನ್ನು ರಾಯರು ನಿಲ್ಲಿಸಿದರು. ಜೇಬಿನಿಂದ ಪತ್ರಿಕೆಯಲ್ಲಿದ್ದ ಫೋಟೋವನ್ನು ತೆಗೆದು ಅವನ ಕೈಗಿತ್ತು "ಇಂಥೋನ್ನ ನೋಡಿದೀಯಾ?" ಎಂದರು.

ಮುದುಕ ಕಣ್ಣು ಕಿರಿದು ಮಾಡಿ ಕಣ್ಣಿನ ಹತ್ತಿರ ಫೋಟೋ ಹಿಡಿದುಕೊಂಡು ನೋಡಿತು. "ನೋಡ್ದೆ ಏನು? ಒಂದು ನಿಮಿಷದಲ್ಲಿ ಹೇಳ್ತೀನಿ. ಹೆಸ್ರೇನೆಂದ್ರಿ?"

ರಾಯರಿಗೆ ಅಪನಂಬಿಕೆ. ಫೋಟೋ ನೋಡಿರುವ ಮುದುಕನೇ ಹೆಸರು ಗೊತ್ತಿದ್ದರೆ ಹೇಳಲಿ ಎಂಬ ಲೆಕ್ಕಾಚಾರದಿಂದ "ಹೆಸರು ಗೊತ್ತಿಲ್ಲ. ನೀವು ನೋಡಿದೀರಿ ಅಂದ್ಮೇಲೆ ಗೊತ್ತಿರ್ಬೇಕಲ್ಲ!" ಎಂದರು.

"ಯಾರಾದ್ರೂ ಹೆಸ್ರು ಹೇಳಿದ್ರೆ ಅವ್ರೆ ಹೌದೋ ಅಲ್ಲವೋ ಅಂತ ಗೊತ್ತಾಗುತ್ತೆ. ನಾಲ್ಗೆ ತುದಿಗೇ ಇದೆ ಸ್ವಾಮಿ. ಹೊರಗೆ ಬರ್ತಿಲ್ಲ. ಹ್ಞಾಂ! ಈಗ ಗೊತ್ತಾಯ್ತು!"

ಮುದುಕ ಬೊಚ್ಚುಬಾಯಿ ಕಿಸಿದು ಮುಂದುವರೆಸಿದ. "ಈಗೀಗ ಸ್ವಲ್ಪ ಮರೆವು. ಮುಂಚಿನಿಂದ ನಂಗೆ ಬಹಳ ಜ್ಞಾಪಕಶಕ್ತಿ ಅಂತ ನಮ್ಮಪ್ಪ ಹೇಳ್ತಿದ್ದ. ಅವನಷ್ಟೇ ನಂಗೂ ಜ್ಞಾಪಕ ಶಕ್ತಿ ಅಂತೆ. ನಮ್ಮಪ್ಪ ೮೫ ವರ್ಷ ಬದುಕಿದ್ದ. ನೋಡಿದ್ರ ಹೇಗಿದೆ ನನ್ನ ಜ್ಞಾಪಕ ಶಕ್ತಿ! ನಮ್ಮಜ್ಜ ಹೇಳ್ತಿದ್ದ..."

ರಾಮ ರಾಮ ಎಂದರು ರಾಯರು "ನಿನ್ನದು ಅದ್ಭುತ ಜ್ಞಾಪಕ ಶಕ್ತಿ ಕಣಪ್ಪ. ಒಪ್ಕೊಂಡೆ. ಈತನ್ನ ನೋಡೀದೀನಿ ಅಂದ್ಯಲ್ಲ ಹೆಸರ್ಹೇಳು ನೋಡೋಣ"

ಮುದುಕ ಒಂದು ಕ್ಷಣ ಗಂಭೀರನಾದ. ಅನಂತರ ಥತ್ ಎಂದು ಕ್ಯಾಕರಿಸಿ ಉಗುಳಿದ. "ಥತ್! ನಿಮ್ಜೊತೆ ಮಾತ್ನಾಡ್ತಿದ್ದ ಹಾಗೆ ಹೆಸ್ರು ಮರ್ತುಹೋಯ್ತಲ್ರಿ! ಒಂದೇ ಒಂದ್ ನಿಮಿಷ ತಾಳಿ. ನಂಗೆ ನೆನಪು ಬಂದ್ಬಿಡುತ್ತೆ. ಏಕೆಂದ್ರೆ ನಂಗೆ ಅದ್ಭುತ ಜ್ಞಾಪಕ ಶಕ್ತಿ. ನಮ್ಮಜ್ಜ ಹೇಳ್ತಿದ್ದ..."

ನಿಮ್ಮಜ್ಜ ನಾಲ್ಗೆ ಸೇದಿ ಹೋಗ ಎಂದು ರಾಯರು ಮನದಲ್ಲೇ ಶಪಿಸಿದರು ರಾಯರು. ಮುದುಕನ ಅದ್ಭುತ ಜ್ಞಾಪಕಶಕ್ತಿಯ ಪ್ರತಿಕ್ರಿಯೆಗಾಗಿ ಒಂದು ನಿಮಿಷವಲ್ಲ ಹತ್ತು ನಿಮಿಷ ಅಲ್ಲಾಡದೆ ಕಲ್ಲಿನಂತೆ ನಿಂತರು. ಮುದುಕ ಆಗಾಗ ಕ್ಯಾಕರಿಸಿ ಉಗಿಯುತ್ತಿದ್ದ. ಕ್ಯಾಕರಿಸದಿದ್ದಾಗ ತಲೆ ಕೆರೆಯುತ್ತ ಆಕಾಶ ನೋಡುತ್ತಿದ್ದ. ರಾಯರು ಅವನು ಉಗುಳಿದಾಗ ಉಗುಳನ್ನು ನೋಡುವುದು. ತಲೆ ಎತ್ತಿ ಆಕಾಶ ನೋಡಿದರೆ ಇವರೂ ತಲೆ ಎತ್ತಿ ಆಕಾಶ ನೋಡುವುದು. ಆಗಾಗ್ಗೆ ತಪ್ಪದೆ ಕ್ಯಾಕರಿಸಿ ಥೂ ಎಂದು ಉಗಿಯುವುದರ ಬಗ್ಗೆ ಈ ಮುದುಕನಿಗೆ ಜ್ಞಾಪಕ ಶಕ್ತಿ ಚೆನ್ನಾಗಿದೆ, ಎನ್ನಿಸಿತು ಕೊನೆಗೆ ರಾಯರೇ ಸೋತರು.

"ಅಬ್ದುಲ್ಲ ಅಲ್ಲ ತಾನೆ?" ಎಂದರು.

"ಛೆ ಛೆ ಸ್ವಲ್ಪ ತಾಳಿ. ನೆನಪು ಬಂದ್ಬಿಡುತ್ತೆ..." ಎಂದ ಮುದುಕ "ಯಾವಾಗ?" ಎಂದರು ರಾಯರು. "ಜ್ಞಾಪಕ ಶಕ್ತಿ ತುಂಬ ವಿಚಿತ್ರವಾದುದು ಸ್ವಾಮಿ. ಈಗಿಂದಿಗ್ಲೆ ನೆನಪಾಗ್ಬಹುದು. ಒಂದೊಂದ್ಸಾರಿ ಒಂದು ವರ್ಷದ ಮೇಲೂ ನೆನಪಾಗ್ಬಹುದು. ಸೃಷ್ಟಿಯ ವೈಚಿತ್ರ್ಯ ಇದು. ಎಲ್ಲ ಅವನ ಲೀಲೆ"

ಮುದುಕ ಆಕಾಶದ ಕಡೆಗೆ ನೋಡಿ ನಿಟ್ಟುಸಿರು ಬಿಟ್ಟ.

"ನಂಗೆ ಬೇರೆ ಕೆಲಸ ಇರದಿದ್ರೆ ಒಂದು ವರ್ಷ ಇಲ್ಲೇ ಹೀಗೇ ನಿನ್ಜತೆ ಕಾಯ್ಬಹುದಿತ್ತು. ಬೇಗ್ನೆ ನೆನಪಾಗೋದಿದ್ರೆ ಹೇಳಪ್ಪ. ಇಲ್ದಿದ್ರೆ ನನ್ನ ದಾರಿ ಹಿಡೀತೀನಿ" ಎಂದರು ರಾಯರು.

"ಈ ಫೋಟೋದೊಳಗಿನ ಆಸಾಮಿ ನಿಮ್ಗೆ ಬೇಕಾಗಿದೆ ಗೊತ್ತು ಸ್ವಾಮಿ. ನೆನಪಾಗ್ಬೇಕಾದ್ರೆ ಸ್ಫೂರ್ತಿ ಬರಬೇಕು" ಎಂದು ಒಂದು ರೀತಿ ಅರ್ಥಗರ್ಭಿತವಾಗಿ ನಕ್ಕ ಮುದುಕ.

ರಾಯರಿಗೆ ತಕ್ಷಣ ಅರ್ಥವಾಯಿತು. ಆತನ ಕೈಗೆ ಐದು ರೂಪಾಯಿ ಇಟ್ಟು "ಬೇಗ್ನೆ ಸ್ಫೂರ್ತಿ ಬಂದ್ರೆ ಉತ್ತಮ. ಇಲ್ದಿದ್ರೆ ಈ ಐದ್ರೂಪಾಯಿ ವಾಪಸ್ಸು ತಗೊಂಡು ಹೋಗ್ತೀನಿ" ಎಂದರು ಖಾರವಾಗಿ

"ಪುಟ್ಟಾಚಾರಿ ಅಂತ ಹೆಸರು. ಈಚಲಹಳ್ಳೀಲಿದಾನೆ. ಇಲ್ಲಿಂದ ಎರಡೇ ಮೈಲಿ" ಎಂದವನೇ ಮುದುಕ ನಿಲ್ಲದೆ ಹೊರಟೇ ಬಿಟ್ಟ!

ನಡೆಯುತ್ತ ನಡೆಯುತ್ತ ರಾಯರ ಕಾಲು ಸೋತು ಸತ್ತಿತು. ಈಚಲ ಹಳ್ಳಿ ಎರಡಲ್ಲ ಎರಡರ ನಾಲ್ಕರಷ್ಟು ದೂರ ಇರಬೇಕು. ಈಗಾಗಲೇ ಐದು ಮೈಲಿ ನಡೆದು ಬಂದಾಯಿತು. ಮುದಿಯನ ಜ್ಞಾಪಕ ಶಕ್ತಿ ಮತ್ತೆ ಕೈಕೊಟ್ಟಿರಬೇಕು. ಇನ್ನೊಂದೆರಡು ರೂಪಾಯಿಗಳನ್ನು ಕೈಗಿತ್ತಿದ್ದರೆ ಸರಿಯಾದ ದೂರ ಹೇಳುತ್ತಿದ್ದನೇನೋ.

ಅಷ್ಟರಲ್ಲಿ ಸಣ್ಣ ಹಳ್ಳಿಯೊಂದು ಸಿಕ್ಕಿತು. "ಕೈಲಾಸ ಬ್ರಾಂಮಣರ ಕಾಫಿ ಟೀ ಹಾಟೆಲ"ಎಂಬ ಬೋರ್ಡು ರಾಯರನ್ನು ಸ್ವಾಗತಿಸಿತು. ನೊಣಗಳು ಜುಂಯ್ ಎಂದು ಹಾರಾಡಿ ರಾಯರನ್ನು ಸ್ವಾಗತಿಸಿದವು. ಒಳಗೆ ಕೊಳಕು ಬೆಂಚುಗಳು, ಮುರುಕು ಕುರ್ಚಿಗಳು. ಅಲ್ಲಲ್ಲಿ ಕುಳಿತು ನೀರು ಕಾಫಿ ಕುಡಿಯುತ್ತ ಬೀಡಿ ಸೇದುತ್ತ ಸ್ವರ್ಗಸುಖವನ್ನು ಅನುಭವಿಸುತ್ತಿದ್ದ ಹಳ್ಳಿಗರು. ರಾಯರ ಡ್ರೆಸ್, ಠೀವಿ ಎಲ್ಲರ ಗಮನ ಸೆಳೆಯಿತು. ರಾಯರು ಮುರುಕು ಕುರ್ಚಿಯೊಂದನ್ನು ಅಲಂಕರಿಸಿದರು. ಕ್ಲೀನರ್ ಕಮ್ ಸರ್ವರ್ ಕಮ್ ಪ್ರೊಪ್ರೈಟರ್ ಆಗಿದ್ದ ಹೋಟಲಿನವ ರಾಯರ ಆರ್ಡರ್ ತೆಗೆದುಕೊಂಡು ಹೋಗಲು ಬಂದ. 'ಕಾಫಿ' ಎಂದು ರಾಯರು ಹೇಳಿದರು. ಅವನು ಜಾಗ ಬಿಟ್ಟು ಕದಲಲಿಲ್ಲ. "ಯಾಕ್ಸಾರ್ ಈಟಾಕಿಂದೂರ ಬಂದೀರಿ? ನೀವು ಆಪೀಸ್ರು?" ಎಂದು ರಾಯರು ತಮ್ಮ ಗುಟ್ಟು ಬಿಟ್ಟುಕೊಡದೆ ರಹಸ್ಯನಗೆಯೊಂದನ್ನು ಹೊರಹಾಕಿದರು. "ಸುಮ್ನೆ ಬಂದೀರಾ?" ಎಂದ ಮತ್ತೆ ಹೋಟಲಿನವ. ಉತ್ತರವಾಗಿ ರಾಯರು ಮನಃ ತಮ್ಮ ರಹಸ್ಯನಗೆಯನ್ನು ಹೊರಹಾಕಿದರು. "ಸುಮ್ಕಿರಲೆ. ಸುಮ್ನೆ ಯಾರಾದ್ರೂ ಬತ್ತಾರ? ಸಾಯೇಬ್ರುಗಳು ಕೆಲ್ಸ ಇಲ್ದಿದ್ರೆ ನಮ್ಮ ಹಳ್ಳಿ ತಾವ ಎಂದು ಬಂದಿದ್ರು? ಅಲ್ಲೇನ್ಸುದ್ದಿ?" ಎಂದ ಅಲ್ಲೇ ಕಾಫಿ ಕುಡಿಯುತ್ತಿದ್ದ ಹಳ್ಳಿಗನೊಬ್ಬ.

"ಇಂದು ತುರ್ತು ಕೆಲಸವಿತ್ತು" ಎಂದು ತುಂಬ ತೂಕವಾದ ಧ್ವನಿಯಲ್ಲಿ ಬಲು ಮುಖ್ಯವಾದ ವಿಷಯವೊಂದನ್ನು ತಿಳಿಸುವವರಂತೆ ರಾಯರು ಹೇಳಿದರು. "ಎಲ್ಲಿಗೆ ಹೊಂಟೀರ್ರಿ ?" ಎಂದ ಹೋಟೆಲಿನವ. "ಕಾಫಿ ತಾರಪ" ಎಂದರು ರಾಯರು. "ಈಗ ತಂದ್ಬಿಡ್ತೀನ್ರಿ. ಎಲ್ಗೆ ಹೊಂಟೀರ್ರಿ?" ಎಂದ ಅವನು. ಹೇಳದಿದ್ದರೆ ಇವನು ಕದಲುವ ಹಾಗೆ ಕಾಣೆ. ನಾನು ಕಾಫಿ ಕಂಡ ಹಾಗೇ ಎಂದುಕೊಂಡರು ರಾಯರು. "ಈಚಲಹಳ್ಳಿ ಇಲ್ಲಿಂದ ಎಷ್ಟು ದೂರ?" ಎಂದರು, "ಇನ್ನೂ ಎರಡು ಮೈಲಿ ಐತೆ. ಅಲ್ಯಾರದಾರ್ರಿ?" ರಾಯರು ಪುನಃ ರಹಸ್ಯವಾಗಿ ನಕ್ಕರು. "ಒಬ್ರನ್ನ ನೋಡ್ಬೇಕು. ಕಾಫಿ ತಾರಪ್ಪ" ರಾಯರು ಗೋಗರಿದರೆಂದರೂ ತಪ್ಪಿಲ್ಲ. "ಅದೆಷ್ಟೊತ್ತ್ಸ; ಈಗ ತರ್ತೇನಿ. ಯಾರ್ನ ನೋಡ್ಬೇಕ್ರಿ?" ಎಂದ ಅವನು ಕದಲದೆ! ರಾಯರು ಸೋತೇಹೋದರು "ಮುಟ್ಟಾಚಾರಿ" ಎಂದರು. "ನಂಗನ್ನಿತ್ರಿ. ಅವ್ನು ಒಂಥರ ಗುಮ್ಮನಗುಸುಕಸ. ಯಾವಂಜತೀನೂ ಸೇರಂಗಿಲ್ಲ" ಎಂದ ಹೋಟಲಿನವ. ರಾಯರಿಗೆ ಖುಷಿಯಾಯಿತು. ಹಾಗಾದರೆ ಈ ಮುಟ್ಟಾಚಾರಿಯೇ ಖಂಡಿತ ಅಬ್ದುಲ್ಲ. ಯಾರ ಜೊತೆಗೋ ಹೊಂದಿಕೊಳ್ಳದೆ ಒಂಟಿ ಬಾಳು ನಡೆಸುತ್ತಿದ್ದಾನೆ.

"ಅವನೇ ಬೇಕಾಗಿರೋದು. ಅವನ ಆಟ ನನ್ನ ಹತ್ತಿರ ನಡೆಯೋಲ್ಲ. ರಾಯರು ಮೀಸೆ ಮೇಲೆ ಕೈ ಆಡಿಸಿದರು. ಹೋಟಲಿನವ ಆಶ್ಚರ್ಯ ಮೆಚ್ಚುಗೆಗಳಿಂದ ರಾಯರನ್ನು ವೀಕ್ಷಿಸಿದ. "ಸಾ. ನೀವು ಸಿ.ಐ.ಡಿ. ಏನ್ರಿ?" ಎಂದ. ರಾಯರು ಪುನಃ ರಹಸ್ಯವಾಗಿ ನಕ್ಕರು. ರಾಯರ ಕಡೆಗೆ ಹೋಟಲಿನವನೊಂದಿಗೆ ಹಳ್ಳಿಗರೆಲ್ಲ ಗೌರವಯುಕ್ತ ನೋಟ ಬೀರಿದರು. ಹೋಟಲಿನವ ತನ್ನ ಸ್ವಹಸ್ತದಿಂದ ಸ್ಪೆಶಲ್ ಕಾಫಿ ಮಾಡಿ ಗೌರವದಿಂದ ರಾಯರ ಮುಂದಿಟ್ಟ. ಕಾಫಿ ಕೊಟ್ಟು ಅಲ್ಲೇ ನಿಂತು ತನ್ನನ್ನು ಏನೇನೋ ಪ್ರಶ್ನಿಸುತ್ತಿದ್ದ ಹೋಟಲಿನವನಿಗೆ ತೇಲಿಸಿ ಉತ್ತರವಿತ್ತರು. ಜನರ ದೃಷ್ಟಿಯೆಲ್ಲ ತಮ್ಮ ಕಡೆಗೇ! ಸಿನಿಮಾ ಹೀರೋವಿನಂತೆ ರಾಯರು ಬೀಗಿದರು. ಗತ್ತಿನಿಂದ ಎದ್ದರು. ಹೋಟಲಿನವ ಗೌರವದಿಂದ "ದುಡ್ಡು ಬೇಡ್ರಿ. ಬರ್ತಾ ಹಿಂಗೇ ಬನ್ನಿಸ" ಎಂದ. ರಾಜಠೀವಿಯಿಂದ ರಾಯರು ಹೊರ ನಡೆದರು.

"ನೋಡ್ರಿ. ಹೆಂಗೆ ಹೋಗ್ತವ್ರೆ. ಪಾತಾಳ ರಹಸ್ಯ ಸಿನಿಮಾದಾಗೆ ಇದ್ನಲ್ಲ ಆ ಪತ್ತೇದಾರನಷ್ಟೇ ಚುರುಕದಾರೆ" ಎಂದ ಹೋಟಲಿನವ. ಹಳ್ಳಿಗರೆಲ್ಲ ತಲೆದೂಗಿದರು. ಪಾತಾಳ ರಹಸ್ಯ ಅವರೂಪಕ್ಕೆ ಆ ಹಳ್ಳಿಗೆ ಬಂದು ಎರಡು ದಿನವಿದ್ದ ಟೆಂಟಿನಲ್ಲಿ ನಡೆದ ಏಕೈಕ ಸಿನಿಮಾ! "ಅವ್ರು ಹೋಟಲಾಗೆ ಕಾಲಿಟ್ಟಾಗ್ಲೆ ನಂಗೆ ಅವ್ರು ಸಿ.ಐ.ಡಿ. ಅಂತ ಗೊತ್ತಿತ್ತು. ಮುಟ್ಟಾಚಾರಿ ಸೊಕ್ಕು ಮುರೀತದೆ" ಎಂದು ಹೋಟಲಿನವ ಕೊಚ್ಚಿಕೊಂಡ.

ರಾಯರು ಈಚಲಹಳ್ಳಿ ಸೇರಿದಾಗ ರಾತ್ರಿಯಾಗಿ ಹೋಗಿತ್ತು. ಹೋಟಲಿನವನಿಂದ ಪಡೆದ ಮಾಹಿತಿಯ ಆಧಾರದ ಮೇಲೆ ಮುಟ್ಟಾಚಾರಿಯ ಮನೆಯ ಗುರುತು ಹಿಡಿದರು. ದೊಡ್ಡ ಮನೆ.

ಎಲ್ಲರೂ ಮಲಗಿದ್ದಾರೆ. ಇವನನ್ನೇ ಎಬ್ಬಿಸುವುದು. ಅವನೇ ಕಳ್ಳ ಸಾಗಾಣಿಕೆದಾರ ಆಗಿದ್ದರೆ ಏನೂ ವಿಷಯ ಬಿಟ್ಟು ಕೊಡದೆ ಮುಗುಮ್ಮಾಗಿ ಬಂದ ದಾರಿ ಹಿಡಿದು ಪೋಲೀಸರಿಗೆ ತಿಳಿಸಿ ಒಂದು ಲಕ್ಷ ರೂಪಾಯಿಗಳನ್ನು ಜೇಬಿಗಿಳಿಸಿಬಿಡುವುದು.

ಅಮಾವಾಸ್ಯೆ ಕತ್ತಲು. ಮರದ ಗೇಟನ್ನು ತೆರೆದು ರಾಯರು ಮೆಲ್ಲನೆ ಕಾಲಿಟ್ಟರು. ಕತ್ತಲಲ್ಲಿ ಎಡವುತ್ತ ತಡವುತ್ತ ಹೋದಾಗ ಸಿಕ್ಕಿದ್ದು ಬಾಗಿಲು. ದೂಡಿದಾಕ್ಷಣ ತೆರೆದುಕೊಂಡೇ ಬಿಡುವುದೆ! ರಾಯರು ಒಳಗೆ ಕಾಲಿಟ್ಟು ಹಾಗೆಯೇ ಮುಂದುವರೆದರು. ಏನನ್ನೋ ಎಡವಿ ರಾಯರು ಧೊಪ್ ಎಂದು ಬಿದ್ದರು. ಇದ್ದಕ್ಕಿದ್ದಂತೆ ಮೇಕೆಗಳ ಕಿರುಚಾಟ! ರಾಯರಿಗೆ ಏಳುವುದಕ್ಕೂ ಬಿಡದೆ ಅವರನ್ನು ತುಳಿದು ಹಾಕುತ್ತಿದ್ದವು. ರಾಯರು ಕಷ್ಟಪಟ್ಟು ಎದ್ದರು. ಎದ್ದು ಇನ್ನೇನು ಹೆಜ್ಜೆ ಇಡಬೇಕು. ಅಷ್ಟರಲ್ಲಿ ಒರಟಾಗಿ ಯಾರೋ ರಾಯರನ್ನು ಅಪ್ಪಿಕೊಂಡೇ ಬಿಟ್ಟರು. ಕೂಗ ಹೋದರೆ ರಾಯರ ದನಿ ಹೊರಬೀಳಲೇ ಇಲ್ಲ! ಒಳ್ಳೆ ಕರಡಿ ಹಿಡಿತ! ರಾಯರಿಗೆ ಉಸಿರಾಡುವುದೂ ಕಷ್ಟವೆನಿಸಿತು.

ಕರಡಿ ಆಸಾಮಿ ರಾಯರ ಮುಸುಡಿಗೆ ಏಟು ಹಾಕಿದ. ಇನ್ನೊಂದು



ಮತ್ತೊಂದು ಏಟು ಬಿದ್ದಾಕ್ಷಣ ರಾಯರು ನೋವಿನಿಂದ ಅಸಾಧ್ಯವಾಗಿ ಕಿರುಚಿದರು. ಇವನು ಜೀವ ತೆಗೆಯಲು ನಿರ್ಧರಿಸಿ ಬಿಟ್ಟಿದ್ದಾನೆ. ಒಂದು ಲಕ್ಷಕ್ಕಿಂತ ಜೀವ ಅಮೂಲ್ಯವಾದದ್ದು ಎಂಬ ನಿರ್ಧಾರವನ್ನು ಕೈಗೊಂಡವರೇ ರಾಯರು ಕರಡಿಗೆ ಎಲ್ಲೆಂದರಲ್ಲೇ ಏಟು ಹಾಕಿದರು.

ಹೀಗೆ ಮಾಡಬಾರದಿತ್ತು ಎಂದು ಮರುಕ್ಷಣವೇ ರಾಯರಿಗನ್ನಿಸಿತು. ಏಕೆಂದರೆ ಇನ್ನೂ ಜೋರಾಗಿ ಕರಡಿ ಏಟು ಹಾಕಿತು. ರಾಯರಿಗೆ ಕಿರುಚಲಾರದಷ್ಟು ನೋವಾಯಿತು. ಅವರನ್ನು ಕೆಳಗೆ ಬೀಳಿಸಿ ಕರಡಿ ಅವರ ಹೊಟ್ಟೆಯ ಮೇಲೆ ಕೂತೇ ಬಿಟ್ಟಿತು.

"ಕಾಳ, ಬಾರಲ, ಬಿರ್‌ಬಿರ್ನೆ ದೀಪ ತತ್ತಾರಲ. ಕಳ್ಳ ಸಿಕ್‌ಬಿದ್ದವ್ನೆ." ಎಂದು ಕರಡಿ ಕೂಗಿತು. ಯಾರು ಎಲ್ಲಿ ಎಂಬ ಕೂಗಾಟ. ಕೊಂಚ ಹೊತ್ತಿನಲ್ಲೇ ಲಾಟೀನು ಬೆಳಕು.

"ಎಲಾ ಇವ್ನ! ಪ್ಯಾಂಟು ಏರಿಸವ್ನೆ! ಆಫೀಸ್ರು ಇದ್ದಂಗವ್ನಲ್ಲ ಮಾವ!" ಎಂದ ಲಾಟೀನು ಹಿಡಿದು ಕೊಂಡು ಬಂದ ಕಾಳ.

"ಪಾಟಿ ಕಳ್ಳಲೆ. ಹಳ್ಳೀಮಂದಿ ಮ್ಯಾಕ ಬೇಕ ಪಾಲಿಸ್ತಾರ? ಇಲ್ಲಿ ಎಲ್ರತಾವ ಮ್ಯಾಕಿ ಆದಾವೆ ಯಾವನೊ ಊರ ಹೊರಗೋನ್ನು ಕಸುಬಿದು ಅಂತ ಹೇಳಿರ್ಲಿಲ್ವ ನಿಂಗೆ? ನೋಡ್ತಾನ ಇದ್ನ. ಬಾಗಿಲು ತೆಗೆದ್ನ ಒಳಾಕೆ ಬಂದ್ನ. ಗಪ್ಪಂತ ಹಿಡಿದೇ ಬಿಟ್ಟೆ ನೋಡು" ಕರಡಿ ತನ್ನ ಶೌರ್ಯ ಕೊಚ್ಚಿ ಕೊಂಡಿತು.

"ಬಾಗಿಲು ತೆರೆದೆ. ಮೇಕೆಗಳು ಆಲ್ಲಿರೋದು ನಂಗೆ ಗೊತ್ತಿಲ್ಲ" ರಾಯರು ನರಳುತ್ತಲೇ ತೊದಲಿದರು.

ಕಾಳ ಹೇಳಿದ "ನಮಗ್ಯಾಕಣ ? ಪೋಲಿಸ್ನೋರದಾರೆ. ಅವ್ರಿಗೆ ಒಪ್ಸಿದ್ರಾತು. ಒಂದು ಏಟೂ ಹಾಕಾದು ಬ್ಯಾಡ."

"ಇನ್ನೇನೂ ಉಳಿದಿಲ್ಲಪ್ಪ ಎಲ್ಲಾ ಏಟುಗಳೂ ತಿಂದಿದ್ದಾಗಿದೆ" ರಾಯರು ನರಳಿದರು, ಕರಡಿ ರಾಯರ ಕೈಕಾಲುಗಳನ್ನು ಕಟ್ಟಿ ಹಾಕೇ ಬಿಟ್ಟ. "ಲೇ, ಇವತ್ತು ನಿನ್ನ ಕೊಂದು ಹಾಕ್ತಿದ್ದೆ. ಬಿಟ್ಟಿದೀನಿ" ಎಂದ.

ರಾಯರು "ನನ್ನ ಹೊಟ್ಟೆ ಬಿಟ್ಬಿಟ್ಟು ನೀನು ಮೇಲೇಳದಿದ್ರೆ ನಾನು ಸಾಯೋದ ಗ್ಯಾರಂಟಿ" ಎಂದರು. "ಸೊಕ್ಕು ನೋಡಲೆ ಇವಂದು" ಕರಡಿ ಏಳುವ ಮುಂಚೆ ಒಂದು ಬಲವಾದ ಗುದ್ದು ಹಾಕಿ ತೃಪ್ತಿ ಪಟ್ಟಿತು.

ಒಳಗಿನಿಂದ ಬಂದು ಇದುವರೆಗೂ ನಡೆದದ್ದನ್ನೆಲ್ಲ ಮೌನವಾಗಿ ವೀಕ್ಷಿಸುತ್ತಿದ್ದ ಹಣ್ಣು ಹಣ್ಣು ಮುದುಕಿಯೊಂದು ಹೇಳಿತು.

"ಆ ಕಳ್ಳಂಗೆ ಅಲ್ಲೇ ಕಂಬಕ್ಕೆ ಕಟ್ಟಿ ಬಾ ಪುಟ್ಟಚಾರಿ. ಮುಂಜಾನೆ ನೋಡ್ಕಂಡ್ರಾತು"

ರಾಯರು ಬಿಟ್ಟಬಾಯಿ ಬಿಟ್ಟಂತೆ ಕರಡಿಯನ್ನು ನೋಡಿದರು. ಇವನಾ ಪುಟ್ಟಾಚಾರಿ?! ಸ್ಮಗ್ಲರ್‌ಗೂ ಇವನಿಗೂ ಅಪ್ಪಿತಪ್ಪಿಯೂ ಹೋಲಿಕೆ ಇಲ್ಲವಲ್ಲ! ದಾರಿಯಲ್ಲಿ ಸಿಕ್ಕಿದ್ದ ಆ ಮುದುಕನಿಗೆ ಜ್ಞಾಪಕ ಶಕ್ತಿಯ ಜೊತೆಗೆ ದೃಷ್ಟಿ ಶಕ್ತಿಯೂ ಕಳೆದಿರಬೇಕು !

ರಾಯರ ಕಣ್ಣ ಮುಂದೆ ಪೋಲೀಸ್ ಸ್ಟೇಶನ್‌ನಲ್ಲಿನ ತಮ್ಮ ಮಾನಭಂಗದ ದಿವ್ಯ ದೃಶ್ಯ ಸುಳಿಯಿತು. ಮೇಕೆ ಕಳ್ಳ ಎಂಬ ಹೀಪಿನ್ಕೆಯೊಂದಿಗೆ ತಮ್ಮ ಫೋಟೋ ಇರುವ ಪೇಪರ ಕಣ್ಣ ಮುಂದೆ ಕಾಣಿಸಿತು.

ಪುಟ್ಟಾಚಾರಿಗೆ ತಮ್ಮ ಕತೆಯನ್ನು ಹೇಳಿ ನಂಬಿಸಿ ರಾಯರು ತಮ್ಮ ಸ್ವಾತಂತ್ರ್ಯವನ್ನು ಗಳಿಸಿಕೊಳ್ಳಲು ಒಂದು ಮೇಕೆಯ ಬೆಲೆಯನ್ನು ಬಡ್ಡಿ ಸಮೇತ ತೆರಬೇಕಾಯಿತು. ರಾಯರ ಮಾನದ ಬೆಲೆ ಮೇಕೆಯ ಬೆಲೆಯಷ್ಟು ಇರಲಾರದಿರುತ್ತದೆಯೇ!

ಎಲ್ಲ ವಿಷಯ ತಿಳಿದನಂತರ ಪುಟ್ಟಾಚಾರಿಯೇ ತಾನು ಮಾಡಿದ ರಾಯರ ಗಾಯಗಳಿಗೆ ತಾನೇ ಮುಲಾಮು ಹಚ್ಚಿ ತಿಕ್ಕಿದ.

ಮರುದಿನ ಊರಿಗೆ ಮರಳಿಹೋಗುವಾಗ "ಕೈಲಾಸ ಬ್ರಾಹ್ಮಣರ ಕಾಫಿ ಟೀ ಹಾಟೆಲ" ಇದ್ದ ಹಾದಿಯಲ್ಲಿ ಹೋಗದೆ ಬೇರೊಂದು ಹಾದಿ ತುಳಿದು ಊರು ಸೇರಿದರೆನ್ನುವುದನ್ನು ಬಿಡಿಸಿ ಹೇಳಬೇಕೆ?






ಹೀಗೇ ಸರಿ ಎಂದರೆ ಹೇಗೆ ನಡೆದೀತು ಹೇಳು ?
ದುಸಲಾ ನೀನು ಹೇಳಿದರೂ, ತಿಳಿಯುಬಹುದೇ
ನನಗೆ ನಿನ್ನ ಬಿಚ್ಚುಮಾತಿನ ಅಂತರಾರ್ಥ ?
ಮುಟ್ಟಬಲ್ಲೆನೆ ನಾನು
ನಿನ್ನ ಕಣ್ಣಪಾಪೆಯ ಮೇಲೆ ಸುಳಿವ, ಕೈಕಾಲ
ಕುಣಿಸುವ, ನೆತ್ತರಲಿ ಹರಿದು, ತಲೆಯೊಳಗೆ ಶಿಲೆಗಟ್ಟುವ
ಗುಟ್ಟುಗಳ ಮೂಲ ?

ಹೀಗೇ ಸರಿ ಎಂದರೆ ಸಂಗತವ ಹೇಳು ?
ನನ್ನ ಆಕಾಶ ನಿನಗೆ ಬಾನು,
ನನ್ನ ನೆಲ ನಿನ್ನ ಪಾಲಿಗೆ ಮಣ್ಣು,
ನನ್ನ ದೃಶ್ಯ ನಿನ್ನೆದುರೇ ಇದ್ದೂ ಅಗೋಚರ,
ನನ್ನ ಮಟ್ಟಿಗೆ ಹಗಲಿನ ಹಾಗೆ ಹಗುರಾಗಿ ಪಾರದರ್ಶಕವಾದದ್ದು
ನಿನಗೆ ಅಗಾಧ ಅಂಧಕಾರದ ಭಾರ;
ಹೆಸರಷ್ಟೇ ಅಲ್ಲ, ಹೂರಣವೂ ನಮ್ಮಿಬ್ಬರಿಗೆ ಬೇರೆ ಬೇರೆ:
ನಿನಗೆ ಕಾಣುವ ಹಸಿರು ನನಗೂ
ಅದೇ ಹಸಿರೇ? ನನ್ನ ರಕ್ತದ ಬಣ್ಣ ನಿನ್ನ ಕಣ್ಣಿಗೂ ಕಡುಗೆಂಪೇ ?
ನನಗೆ ಹಿತವಾದ ನಾತವಿಶೇಷಗಳಿಗೆ ನಿನ್ನ ಮೂಗರಳಬಹುದೇ ?
ಅಥವ, ಕಪ್ಪು–ಬಿಳುಪೆಂದರೆ, ಸ್ಪೃಶ್ಯ–ಅಸ್ಪೃಶ್ಯವೆಂದರೆ,
ಉಪ್ಪು–ಹುಳಿ–ಖಾರವೆಂದರೆ, ಸ್ಪಲನದ ತಾಪ–ತಣಿವೆಂದರೆ
ನಮ್ಮಿಬ್ಬರಿಗೂ ಲಭ್ಯವೇ ಹೇಳು
ಒಂದೆ ಹದಕ್ಕೆ ಭಟ್ಟಿ ಇಳಿದಂಥ ಕವಳ ?
ಹೇಳು ಕಸುವಿದ್ದಲ್ಲಿ ನಿನ್ನ ನಿಜವನ್ನ ಪಣವಿಟ್ಟು,
ನಾವು ಕಂಡದ್ದು ಒಂದಾದರೂ ಕಾಣ್ಕೆ ಒಂದೇ ?

ನನ್ನ ಹಾಗೇ ನಿನಗುಂಟು ಕಣ್ಣೆರಡು, ಕಿವಿ–
ಯೆರಡು, ಮೂಗಿಗೆರಡು ಹೊಳ್ಳೆ, ಅಲ್ಲಿ
ಶ್ವಾಸೋಚ್ಛ್ವಾಸಕ್ಕೆ ನಿನ್ನ ಮನಸ್ಸಿನದೇ ಏರಿಳಿತ;
ಒಂದೆ ಬಾಯಿ, ಅದರೊಳಗೆ ಪಂಕ್ತಿ ಕುಳಿತ
ಹಲ್ಲು, ನುಡಿವ ನಾಲಗೆ ಇಬ್ಬರಿಗೂ ತಲಾ ಒಂದು.
ನನಗಿರುವ ಹಾಗೇ ನಿನಗೂ ನಡೆವ ಕಾಲೆರಡು, ಹಿಡಿವ
ಕೈಯೆರಡು, ಒಂದೊಂದೆ ಶಿಶ್ನಕ್ಕೆ ಎರಡೆರಡು ಜೋತ
ವೃಷಣಗಳ ಖಾಸ ಗುರುತಿನ ಚಿಹ್ನೆ;
ಯಥಾಪ್ರಕಾರ ಅಂಗಾಂಗವಾಗಿ ಮೂಡಲರಿಯದವು
ಇಬ್ಬರಲ್ಲೂ ಆಗಿ ಬರುತ್ತವೆ ಅದೇ ಬಣ್ಣದ ಉದುರುಗೂದಲು;
ನೆಗಡಿಯಾದಾಗೊಮ್ಮೆ ನಮ್ಮ ಗಂಟಲಿಂದ ಒಂದೆ ಶ್ರುತಿ
ಹೊರಡುವುದೇನು ಸುಳ್ಳಲ್ಲ.
ಇಷ್ಟು ಮಾತ್ರಕ್ಕೆ, ನೀನು ಸರಿಯೆಂಬುದನ್ನೇ ನಾನು ಒಪ್ಪಲೇ?
ತಪ್ಪಿದರೆ, ನಿನ್ನ ಮೇಲ್ಪಂಕ್ತಿಯನುಸರಿಸಿ, ನನ್ನದೇ ಸರಿ–
ಯೆಂದು ಪ್ರತಿಸವಾಲು ಹಾಕಲೇ ?

ಹುಟ್ಟುತ್ತ ಸರಿದೊರೆಯಾಗಿ, ಅಕ್ಕಪಕ್ಕವೆ
ಬೆಳೆಯುತ್ತ ಅವಳಿಗಳಾದರೂ, ಈಗ ಅಗಲಿಸಿದ
ನಮ್ಮ ಕಣ್ಣವಚಿಕೊಂಡ ವಿಶ್ವ
ಕೋಶಕ್ಕೆ ಸಮಾನ ಪಾತ್ರವುಂಟೇ ಹೇಳು,

ನಿನ್ನ ಹೆಂಡತಿ ನನಗೆ ಸ್ತ್ರೀಲಿಂಗದೊಂದು ಹೆಸರು ಮಾತ್ರ
ನಿನ ಮಕ್ಕಳಿಗೆ ನಾನು ಮಾಮಂದಿರಲ್ಲಿ ಒಬ್ಬ.
ನನ್ನ ಹೆಣ್ಣಿನ ಮೈಗಾವು ನನಗೊಮ್ಮೆ ನರಕ. ಮತ್ತೊಮ್ಮೆ ಸ್ವರ್ಗ
ನಿನ್ನ ಪಾಲಿಗದು ಉಗುರುಬೆಚ್ಚಗಿನ ಸ್ನೇಹ.
ನೀನು ನಂಬದಿದ್ದರೂ ಅಷ್ಟೇ,
ನಮ್ಮ ಸಮಾಂತರ ಗೆರೆಗಳ ಗೊತ್ತುಗುರಿ ಒಂದೆ ಅಲ್ಲ.

ನಂಬಲಾರೆಯ ? ಕೇಳು, ಸಮಾಂತರ
ಗೆರೆಗಳೊಂದಂದಕ್ಕೂ ತುದಿಯೆರಡು, ಆಚೀಚೆ
ದಿಕ್ಕೆರಡು, ಇಲ್ಲವೇ, ಮೇಲೊಂದು ಗುರಿ, ಕೆಳಗೆ ಬೇರೊಂದು;
ನಾವು ಬೆಳೆದಂತೆ ನಮ್ಮ ಮಧ್ಯೆ ಒಕ್ಕರಿಸಿಲ್ಲವೇ ಈಗ
ಭೂಮಂಡಳದ ಭಾರ.
ಹಿಗ್ಗಲಿಲ್ಲವೇ ಹೇಳು, ವ್ಯೋಮ ವಿಸ್ತಾರ,
ಬೆಳೆಯಲಿಲ್ಲವೆ ಬೆಳಕಿನುದ್ದಗಲ, ಕತ್ತಲೆಯಾಳ ?
ನಕ್ಷತ್ರವಾಗಿ ದೂರ ಮಿನುಗುತ್ತಿದೆ ಅಗೋ, ನಮ್ಮ ಏಕಮೂಲ.

ಹೀಗೇ ಸರಿ ಎಂದರೆ ನೀನು,
ನಿನ್ನ ನಿಜದ ಮುಖವಷ್ಟೆ ಸರ್ವವ್ಯಾಪಿಯೆಂದೊಪ್ಪಲೇ,
ನನೆದುರೆ ಹರಡಿಕೊಂಡಿದೆ ಅದರ ಬೆನ್ನು.
ಬೆನ್ನಲ್ಲಿ ಸುಳಿವಾಡಿರುವ ಇನ್ನೊಂದು ಮುಖವ ಉಳಿ
ಹಿಡಿದು ಕೆತ್ತಿ ನಿಲ್ಲಿಸಲೆ,
ಇಲ್ಲವೇ, ನಿನ್ನ ಘನ ಸಾಕ್ಷಾತ್ಕಾರಕ್ಕೆ ಶರಣೆಂದು ತಲೆಯೊಪ್ಪಿಸಲೇ ?
ನೀನು ಬಲ್ಲಂತೆಯೇ, ನಿನ್ನ ಹಿಲಾಲಿನ ಹಿಂದೆ ಬಿದ್ದಿದೆ ನನ್ನನೆರಳು,
ನನ್ನ ಬೆಳಕಿನೆದುರೇ ಹಾದುಬಂದಿದೆ ನಿನ್ನ ಕಗ್ಗತ್ತಲು,
ಹೀಗೇ ಸರಿ ಎಂದರೆ ಹೇಗೆ ಹೌದೆನ್ನಲಿ, ಹೇಳು ?
ಬಲ್ಲೆಯ ನೀನು ? ಎಲ್ಲಕ್ಕು ಮಿಗಿಲಾಗಿ
ನಮ್ಮನ್ನಾವರಿಸಿ, ಅನಾವರಣಗೊಂಡಿರುವ ಅಂತರಿಕ್ಷಕ್ಕೆ
ಪರಿಧಿಗೆರೆ ಎಳೆಯಬಹುದಂತೆ ಎಲ್ಲಿ ಬೇಕಾದರೂ.
ಅದರ ಮಧ್ಯಬಿಂದುವಿಗಷ್ಟೇ ಸೊನ್ನೆಯಂತೆ ಯಾವಾಗಲೂ
ನಾನು ತಕ್ಕಮಟ್ಟಿಗೆ ಕೇಳಿ ಬಲ್ಲೆ.

ಜಯಸುದರ್ಶನ

ಮಹಾತ್ಮಾ ಗಾಂಧಿ ಯವರ ಅಹಿಂಸಾ ಸೂತ್ರದಲ್ಲಿ
ನಿನಗೆ ಭಾಳ ನಂಬಿಕೆ ಇದೆ- ಅಲ್ಲೇನಪ್ಪಾ.. ?



ಸಿನಿಮಾಗಳಿಂದ ಮಕ್ಕಳಿಗೆ ಹಾನಿ ಇಲ್ಲ ಅಂತಿದ್ರಲ್ಲ
ಈಗ ನೋಡಿ ಪರಿಣಾಮ- ರಾತ್ರಿ 'ದಾನಶೂರ ಕರ್ಣ'
ಸಿನಿಮಾಗೆ ಹೋಗಿ ಬಂದ ಮೇಲೆ-

# ಪ್ರತ್ಯಕ್ಷ- ಬಾಂಬು ಬಿಡಕ್ಷ

ಕನ್ನಡ 'ಪಿಕ್ಚರ್ ಇದೆ. ಇಂಗ್ಲೀಷ್ ಪಿಕ್ಚರ್ ಇದೆ. ಹಿಂದಿ ಇದೆ
ಮ್ಯಾಥ್ ಮ್ಯಾಟಿಕ್ಸ್ ಯಾಕಿಲ್ಲಾ ??-



'ವಸ್ತುಗಳು ನಿಮ್ನ ಮಸೂರದಲ್ಲಿ ದಪ್ಪ ಕಾಣುತ್ತವೆ'
ಅಂದಿದ್ರು ನಮ್ಮ ಸೈನ್ಸ್ ಮೇಷ್ಟ್ರು. ನೀನಿಟ್ಟಿರೋ ಸ್ವೀಟ್
ಕಾಣ್ತಾನೇ ಇಲ್ವಲ್ಲಮ್ಮಾ — ?? —





* ಎಂ. ವಿಶ್ವನಾಥ್

ಮದುವೆಯ ಸಮಯದಲ್ಲಿ ತೆಗೆದ ಒಂದೇ ಒಂದು
ಫೋಟೋದಲ್ಲಾದ್ರೂ ತಾನಿಲ್ವಲ್ಲ ಅಂತ ಕೋಪ
ಮಾಡ್ಕೊಂಡಿದ್ದಾನೆ —






ನಿಜವಾಗಿಯೂ ನೀನು ಪರೀಕ್ಷೆಯಲ್ಲಿ ಬರೆಯೋಕೆ
ತಾನೇ ಆ ಪೆನ್ ತಗೊಂಡು ಹೋಗ್ತಿರೋದು ?

# ಕ್ರೀಂ ಆಫ್ ದಿ ಸೊಸೈಟಿ

## ವಿಜಯ ಸಾಸನೂರ

ಅಂದು ನನ್ನ ಇಂಟರ್‌ವ್ಯೂ ಮಧ್ಯಾಹ್ನ ವ... ...ಟೆಗೆ.

ಗಡಿಯಾರದ ಸೆಕೆಂಡಿನ ಮುಳ್ಳನ್ನೇ ದಿಟ್ಟಿಸಿ ನೋಡುತ್ತಿದ್ದೇನೆ. ಅದೇ ಗತಿಯಲ್ಲಿ ನನ್ನ ಎದೆಯೂ ಡಬಡಬನೆ ಬಡಿದುಕೊಳ್ಳುತ್ತಿದೆ.

ಇಂಟರ್‌ವ್ಯೂಗೆ ಹೆದರಿಯೇ?

ಅಲ್ಲಲ್ಲ, ನನ್ನ ಬಾಳಿನ ಅನಿಶ್ಚಿತ ಗತಿ, ಭವಿಷ್ಯತ್ತಿನ ಅರಿಯದ ಸ್ಥಿತಿಗಳನ್ನು ನೆನೆಸಿಕೊಂಡು. ನನ್ನ ಜೀವನವೇ ಒಂದು ಜೋಕಾಲಿಯಿದ್ದಂತೆ.

ಒಂದು ಎತ್ತರದಿಂದ ಜೀಕಿದೆ. ಕೆಳಕ್ಕಿಳಿದಿದ್ದೇನೆ. ಮೇಲೆ ಯಾವಾಗ ಏರುತ್ತೇನೋ?

ಜೋಕಾಲಿಯ ಹಗ್ಗ ಭದ್ರವಾಗಿದೆಯೋ...ನನ್ನ ಜೀಕುವ ರಭಸದ ತೀವ್ರತೆ ಸಾಕಷ್ಟಿದೆಯೋ?...ಕಾದು ನೋಡಬೇಕು.

* * *

ನಾನು ಹುಟ್ಟಿದ್ದು ಶ್ರೀಮಂತ ಕುಟುಂಬದಲ್ಲಿ. ತಂದೆಯ ಮುದ್ದು ನನ್ನನ್ನು ಕೆಡಿಸಿತ್ತು. ನನ್ನ ಅಣ್ಣಂದಿರಲ್ಲಿ ಒಬ್ಬ ಡಾಕ್ಟರಾಗಿ ಅಮೇರಿಕೆಯಲ್ಲಿ ನೆಲೆಸಿದ. ಒಬ್ಬ ಇಂಜನೀಯರಾಗಿ ಜರ್ಮನಿಗೆ ಹೋದ. ಮತ್ತೊಬ್ಬ ವ್ಯಾಪಾರಿಯಾಗಿ ಸಿಂಗಪುರಕ್ಕೆ ಹೋದ. ಉಳಿದವ ನಾನೊಬನೇ. ಅಣ್ಣಂದಿರಷ್ಟು ಜೀವನವನ್ನು ಗಂಭೀರವಾಗಿ ತೆಗೆದುಕೊಳ್ಳುವ ಪ್ರಸಂಗ ಬರಲಿಲ್ಲ. ಅಂಥ ಅವಕಾಶವನ್ನು ಅಪ್ಪನೂ ಕೊಡಲಿಲ್ಲ.

ತಂದೆ ನನ್ನನ್ನು ಉನ್ನತ ವ್ಯಾಸಂಗಕ್ಕಾಗಿ ಇಂಗ್ಲಂಡಿಗೆ ಕಳುಹಿದರು. ಬ್ಯಾರಿಸ್ಟರ್ ಆಗಿ ಬರಬೇಕೆಂದು ಅವರ ಇಚ್ಛೆ.

ಕಾನೂನು ನನಗೆ ಬರಡಾಗಿ, ಅರ್ಥವಿಲ್ಲದ ತರ್ಕವಾಗಿ ತೋರಿತು.

ತಂದೆಗೆ ಮೋಸ ಮಾಡಿದೆ.

ಬ್ಯಾರಿಸ್ಟರ್ ಆಗಿ ಬರಬೇಕಾದ ಮಗ ಕೇಟರಿಂಗ್ ಟೆಕ್ನಾಲಜಿಯಲ್ಲಿ ಡಿಗ್ರಿ ಪಡೆದ ಎಂದ್ರ ತಂದೆಗೆ ನೋವಾಯಿತು.

"ಕೇಟರಿಂಗ್ ಟೆಕ್ನಾಲಜಿ ಕಲಿಯಲು ಇಂಗ್ಲಂಡಿಗೇಕೆ ಹೋಗಬೇಕಿತ್ತು. ನಮ್ಮ ಬಟ್ಲರ್ ಭಾಸ್ಕರ್ ಇರಲಿಲ್ಲವೇ? ನರಸಜ್ಜ ಇರಲಿಲ್ಲವೇ?" ಎಂದು ಕೊಂಕು ನುಡಿದರು.

ಮನೆ ಬಿಟ್ಟು ಹೊರಗೆ ಹಾಕಿದರು.

I. T. D. C. (Indian Tourism Development Corporation)ದಲ್ಲಿ ಕೆಲಸ ಸಿಕ್ಕಿತು. ಜೀವನದ ರಭಸದ ಗತಿಯಲ್ಲಿ ಎಲ್ಲಿಂದ ಎಲ್ಲಿಗೋ ಹೋದೆ.

ಬೆಂಗಳೂರಿನಲ್ಲಿದ್ದಾಗ ಶಾಲಿನಿಯೊಡನೆ ಮದುವೆಯಾಯಿತು. ಅಲ್ಲಿಂದ ಮಹಾಬಲಿಪುರ, ದೆಹಲಿ, ಖಜುರಾಹೋ......

ಜೂಜು...ಕುಡಿತ...ರೇಸು....

ತಂದೆ ತೀರಿಕೊಂಡರಂತೆ. ನನಗಾಗಿ ಎರಡು ಲಕ್ಷ ರೂಪಾಯಿ, ಮೆರಿನಾ ಬೀಚಿನ ಮನೆ, ಬೆಂಜ಼್ ಕಾರು ಬಿಟ್ಟು ಹೋಗಿದ್ದಾರೆಂದು ಒಬ್ಬ ವಕೀಲರಿಂದ ಪತ್ರ ಬಂದಿತು. ಎರಡು ತಿಂಗಳ ರಜೆ ತೆಗೆದುಕೊಂಡೆ.

ಮದ್ರಾಸಿಗೆ ಹೋಗುವಷ್ಟರಲ್ಲಿಯೇ ಅಣ್ಣಂದಿರೆಲ್ಲರೂ ಬಂದು ತಮ್ಮ ಪಾಲು ತೆಗೆದುಕೊಂಡು ಹೋಗಿದ್ದರಂತೆ. ತಂದೆಯನ್ನು ಸಮಾಧಿ ಮಾಡಿದಲ್ಲಿ ಹೋಗಿ ಅತ್ತೆ. ಅಂದು ನಿಜವಾಗಿಯೂ ಅನಾಥನಾದಂತೆ ತೋರಿತು.

ಖಜುರಾಹೋಗೆ ಹೋಗಬೇಕೆಂದಾಗ ಬೆಂಗಳೂರು ಸಮ್ಮರ್ ರೇಸ್ ಪ್ರಾರಂಭವಾದವು. ಎರಡು ಲಕ್ಷ ತೆಗೆದುಕೊಂಡು ಬೆಂಜ಼್ ಕಾರಿನಲ್ಲಿ ಹೋದವನು ರೇಸ್ ಮುಗಿದಾಗ ಮದ್ರಾಸ್ ಮೇಲ್‌ನಲ್ಲಿ ಮೂರನೆಯ ದರ್ಜೆಯಲ್ಲಿ ನುಗ್ಗಿ ಬರಬೇಕಾಯಿತು. ಮೆರಿನಾ ಬೀಚಿನ ಮನೆಯನ್ನೂ ಮಾರಿದೆ.

ಮೀನಂಬಾಕಂನಲ್ಲಿ ಸೈನ್ಯಾಧಿಕಾರಿ ಮೇಜರ್ ಪ್ರತಾಪ್‌ಸಿಂಗ್‌ನ ವಿಧವೆ ಪತ್ನಿ ಅಮೃತಾಳೊಡನೆ ಪರಿಚಯವಾಯಿತು. ಮದ್ರಾಸ್‌ನಿಂದ ದೆಹಲಿಯ ಆ ವಿಮಾನ ಪ್ರಯಾಣದಲ್ಲಿ ಆದ ಪರಿಚಯ, ಗೆಳೆತನ, ಮುಂದೆ ಮದುವೆಯಲ್ಲಿಯೇ ಕೊನೆಗೊಂಡಿತು.

ಹೌದು, ಹಿಂದೂ ಲಾ ಪ್ರಕಾರ ನಾನು ಎರಡು ಮದುವೆಯಾಗಿದ್ದೆ. ಶಾಲಿನಿಯ ಇರವು ಅಮೃತಾಳಿಗೆ ಗೊತ್ತಿಲ್ಲ. ಅಮೃತಾಳ ಅಸ್ತಿತ್ವ ಶಾಲಿನಿಗೆ ತಿಳಿಯದು.

ಖಜುರಾಹೋದಿಂದ ದೆಹಲಿಗೆ ವರ್ಗವಾಯಿತು. ದೆಹಲಿ ಬಹಳ ದೊಡ್ಡ ಊರು.

ಒಂದು ಮೂಲೆಯಲ್ಲಿ ಅಮೃತಾಳನ್ನಿಟ್ಟೆ. ಇನ್ನೊಂದರಲ್ಲಿ ಶಾಲಿನಿಯನ್ನಿಟ್ಟೆ.

ಅಮೃತಾ ನನಗೆ ಭಾರವಾಗಲಿಲ್ಲ. ಕಾರಣ, ಪ್ರತಾಪಸಿಂಗ್‌ನ ಜೀವವಿಮೆಯ ಹಣ ಅವಳ ಹೆಸರಿನಲ್ಲಿ ಫಿಕ್ಸೆಡ್ ಡಿಪಾಜಿಟ್ ಆಗಿತ್ತು.

ದೆಹಲಿಯಿಂದ ಒಮ್ಮೆಲೆ ಹಾಸನಕ್ಕೆ ವರ್ಗವಾದಾಗ ಆಘಾತವಾಗಿತ್ತು.

ಬೋರ್ಡ್‌ನವರೊಡನೆ ಗುದ್ದಾಡಿದೆ. ಕೇಳಲಿಲ್ಲ. ರಾಜೀನಾಮೆ ಕೊಟ್ಟೆ.

ಇದು ಯಾರಿಗೂ ಗೊತ್ತಿಲ್ಲ.

ತುರ್ತು ಕೆಲಸದ ಮೇರೆಗೆ ಹೋಗುತ್ತಿದ್ದೇನೆಂದು ದೆಹಲಿ ಬಿಟ್ಟೆ.

* *

"ಕ್ರೀಮ್ ಆಫ್ ದಿ ಸೊಸೈಟಿ" ರಾಜಧಾನಿಯಲ್ಲಿಯೇ ದೊಡ್ಡ ಕ್ಲಬ್ಬು. ಅಲ್ಲಿ ಇಂದು ಇಂಟರ್‌ವ್ಯೂ.

ಕ್ರೀಮ್ ಬಹಳ ಭವ್ಯವಾದ ಕಟ್ಟಡ. ಐವತ್ತು ಎಕರೆಗೂ ಮಿಕ್ಕಿ ಇರುವ ಪ್ರದೇಶದ ನಡುವೆ ನಿಂತಿದೆ. ಸುತ್ತಲೂ ಗೋಲ್ಫ, ಕುದುರೆ ಸವಾರಿ, ಈಜುಗೊಳ, ಟೆನಿಸ್, ಬ್ಯಾಡ್‌ಮಿಂಟನ್ ಎಲ್ಲ ಇದೆ. ಕ್ಲಬ್ಬಿನಲ್ಲಿ ಬಿಲಿಯರ್ಡ್ಸ್, ಕಾರ್ಡ್ಸ್, ಡ್ರಿಂಕ್ಸ್.

"ಗುಡ್ ಆಫ್ಟರ್‌ನೂನ್ ಜಂಟಲ್‌ಮನ್"

ನನ್ನ ಇಂಗ್ಲಂಡ್ ಡಿಗ್ರಿ I.T.D.C.ಯ ಅನುಭವ ಮೇಲಾಗಿ ನನ್ನ ವ್ಯಕ್ತಿತ್ವ ಎಲ್ಲ ಈಗ ಉಪಯೋಗಕ್ಕೆ ಬಂದಿದ್ದಿತು.

"I.T.D.C.ಏಕೆ ಬಿಟ್ಟುಬಂದಿರಿ ಮಿ॥ ಸುಂದರ್‌ರಾಜ್" ಪೈಪ್ ಬಾಯಲ್ಲಿ ಇದ್ದಂತೆಯೇ ಹಿರಿಯರೊಬ್ಬರು ಕೇಳಿದರು.

"ಅಲ್ಲಿ ಉತ್ತರ–ದಕ್ಷಿಣದವರ ಬಹಳ ದೊಡ್ಡ ರಾಜಕೀಯವೇ ಇದೆ ಸರ್" ಎಂದೆ.

"ಮದ್ರಾಸಿನಲ್ಲಿಯೇ ನೆಲೆಸಬಹುದಿತ್ತಲ್ಲಾ" ತಮಿಳಿನಲ್ಲಿ ಕೇಳಿದರು ಇನ್ನೊಬ್ಬರು.

"ನಿಮ್ಮ ರಾಜಧಾನಿಯಷ್ಟು Cosmopolitan ದೇಶದಲ್ಲಾವುದೂ ಇಲ್ಲ. ಅದಕ್ಕಾಗಿಯೇ ತಮ್ಮ ಆಸರೆ ಕೇಳಿ ಬಂದಿರುವೆ."

ಅವರ ಮುಖ ಅರಳಿದ ಕುಂಬಳಕಾಯಿಯಂತಾಯಿತು.

"ಕ್ರೀಮ್ ಆಫ್ ದಿ ಸೊಸೈಟಿ"ಯ ಮ್ಯಾನೇಜರ್ ನಾನೇ ಆದೆನೆನ್ನುವುದನ್ನು ಬಿಡಿಸಿ ಹೇಳಬೇಕಿಲ್ಲವಷ್ಟೇ?

* *

ಈ Cosmopolitan ರಾಜಧಾನಿಯಲ್ಲೂ ನನ್ನ ಸಂಸಾರಗಳ ಚಕ್ರಗಳು ಸುರಳಿತವಾಗಿ ಮುನ್ನಡೆದವು.

* *

"ಕ್ರೀಮ್ ಆಫ್ ದಿ ಸೊಸೈಟಿ"ಯಲ್ಲಿಯ ಜನ ಕೆಲವರು born rich. ಇನ್ನು ಕೆಲವರು became rich ಇವರೆಲ್ಲಾ ಪಡೆದು ಬಂದ, ಬೇಡಿ ಬಂದ ಭಾಗ್ಯವಂತರೋ ಅಥವಾ ಎಲ್ಲ ಇದ್ದೂ ದುಃಖಿಸುವ ದುರ್ದೈವಿಗಳೋ ಈಗಲೇ ಹೇಳಲಾರೆ.

* *

"ಕ್ರೀಮ್..." ಈಗೀಗ ಅರಿಯುತ್ತಿದ್ದೇನೆ.

ಮೊದಲು I.T.D.C.ಯಲ್ಲಿ ಅನ್ಯಾಯವಾದಾಗ, ಅಪಮಾನವಾದಾಗ ಪ್ರತಿಭಟಿಸುತ್ತಿದ್ದೆ. ಅದು ಹುಚ್ಚುತನವಾಯಿತು. ಇಲ್ಲದಿದ್ದರೆ ಅಲ್ಲಿಯ ಕೆಲಸ ಬಿಡುವ ಪ್ರಸಂಗ ಒದಗುತ್ತಿರಲಿಲ್ಲ. ಇಲ್ಲಿ ಎಲ್ಲವನ್ನೂ ನುಂಗುತ್ತಿದ್ದೇನೆ. ಬಾಳಿನ ಜವಾಬ್ದಾರಿ ವೈಯಕ್ತಿಕ ಅಹಂಗಿಂತಲೂ ದೊಡ್ಡದು, ಗುರುತರವಾದದ್ದು ಎಂದು ಜೀವನ ವ್ಯಾವಹಾರಿಕ ಜ್ಞಾನವನ್ನು ಕಲಿಸಿದೆ. ಕ್ರೀಮ್ ಬಿಟ್ಟರೆ ಸ್ಮಶಾನವೇ ಗತಿ.

* *

ಕುಡಿಯುವವರನ್ನು ಕಂಡರೆ ನನಗೆ ಇಷ್ಟ. ಕುಡುಕರು ಎಂದು ಯಾರಾದರೂ ಕರೆದರೆ ನನಗೆ ಸೇರುವುದಿಲ್ಲ.

"ಕ್ರಿಮ್"ನಲ್ಲಿ ನನಗೆ ಅತಿ ಹೆಚ್ಚಾಗಿ ಸೇರುವವರು ಅಪ್ಪಾ ರಾವ್. ಅಪ್ಪಾ ರಾವ್ ಬಗೆಗೆ ಹೇಳುವುದಾದರೆ Eats like a Pig and drinks like a fish. ಅದು ಬಿಟ್ಟು ಬೇರೊಂದು ಮಾಡುವದು ಬಹುಶಃ ಅವರ ಜೀವನದಲ್ಲಿಲ್ಲವೆಂದು ತೋರುತ್ತದೆ.

ಅಂದು ರಾತ್ರಿ ಒಂದು ಗಂಟೆಗೂ ಮೀರಿದ ಸಮಯ. ಅಪ್ಪಾ ರಾವ್ ಅವರ ಕುಡಿತ ಇನ್ನೂ ಮುಗಿದಿಲ್ಲ. ಕ್ಲಬ್ಬಿನ ಸದಸ್ಯರು, ಬೇರರ್‌ಗಳು ಎಲ್ಲರೂ ಹೊರಟು ಹೋಗಿದ್ದಾರೆ. ಬಾರಿನ ಎರಡೂವರೆಯಾದಾಗ ನನಗೂ ಏಟು ಶುರುವಾಗುತ್ತದೆ. ಅಪ್ಪಾ ರಾವ್‌ರವರ ಮನೆಯ ಆಳು ಬರುತ್ತಾನೆ.

"ಮಿ॥ ಅಪ್ಪಾರಾವ್, ಇನ್ನು ಸಾಕು" ಎಂದು ಎಬ್ಬಿಸಲೆತ್ನಿಸುತ್ತಾನೆ.

ಆಳು ಮಗನೂ ಸಹಾಯಕ್ಕಾಗಿ ಬರುತ್ತಾನೆ.

"ಮಗನೇ, ನಿಮ್ಮಪ್ಪನ ಗಂಟು ಕುಡಿಯುತ್ತಿದ್ದೇನೇನು? ನನ್ನ ರಟ್ಟೆ ಹಿಡಿದು ಎಬ್ಬಿಸುವಷ್ಟು ನಿನಗೆಷ್ಟು ಧೈರ್ಯ? " ನನ್ನ ಕಪೋಲಕ್ಕೆ ಧಡ್ ಎಂದು ಒಂದು ಏಟು.

ನಾನು ನನ್ನ ಜನ್ಮದಲ್ಲಿಯೇ ನನ್ನ ತಂದೆಯಿಂದಲೇ ಏಟು ತಿನ್ನದಂತಹವನು. ಇಂದು ಒಬ್ಬ ಕುಡುಕನಿಂದ ಏಟು ತಿನ್ನಬೇಕಾಯಿತೇ?

ಏಟಿಗೆ ಯಾವ ಪ್ರತಿಕ್ರಿಯೆಯನ್ನೂ ತೋರುವುದಿಲ್ಲ.

ಅಪ್ಪಾ ರಾವ್‌ರವರ ಆಳಿನ ಮುಖದಲ್ಲಿ ಕ್ಷಮೆಯೇ ಪುರುಷಾವತಾರವಾಗಿ ತೋರುತ್ತಿದೆ. ಹಿಂದಿನ ಸೀಟನಲ್ಲಿ ಅಪ್ಪಾ ರಾವ್‌ರವರನ್ನು ಹಿಡಿದುಕೊಂಡು ಆಳು ಕುಳಿತಿದ್ದಾನೆ. ನಾನೇ ಅವರ ಕಾರು ಡ್ರೈವ್ ಮಾಡಿಕೊಂಡು ಅವರನ್ನು ಮನೆಗೆ ಮುಟ್ಟಿಸಿದ್ದೇನೆ.

"ಸಾಹೇಬ ಈ ರಾತ್ರಿ ಮತ್ತೆಲ್ಲಿ ಹೋಗುವಿರಿ? ದಯವಿಟ್ಟು ಇಲ್ಲಿಯೇ ಮಲಗಿಕೊಳ್ಳಿ "

ಆಳು ವಿನಮ್ರವಾಗಿ ವಿನಂತಿಸಿಕೊಳ್ಳುತ್ತಾನೆ.

ಅಪ್ಪಾ ರಾವ್ ...ಕುಡಿತ... ಕುಡುಕ ...ಏಟು...ಆಳು...ರಾತ್ರಿ... ಗೆಸ್ಟ್ ಬೆಡ್‌ರೂಮ್ ಸಿದ್ಧವಾಗಿಯೇ ಇದೆ. ನಿದ್ದೆ ಬರುತ್ತಿಲ್ಲ. ಸಿಗರೇಟು ಹಚ್ಚಿ ಇಡೀ ಮನೆ ತಿರುಗಾಡುತ್ತೇನೆ.

ಅಪ್ಪಾ ರಾವ್ ಮತ್ತು ಆಳಿನ ಹೊರತು ಮನೆಯಲ್ಲಿ ಯಾರ ಸುಳಿವು, ಉಳಿವು ಇಲ್ಲ. ಮನೆಯ ತುಂಬ ಫೋಟೋಗಳು. ಎಲ್ಲ ಫೋಟೋಗಳಲ್ಲಿ ಒಂದೇ ಹುಡುಗಿ.

ಫೋಟೋಗಳ ಮೂಲೆಯಲ್ಲಿ ಚಿಕ್ಕದಾಗಿ ಹೆಸರು......ರೂಪಾ.

* *

ಎಚ್ಚತ್ತಾಗ ಅಪ್ಪಾ ರಾವ್ ಸಿಗರೇಟು ಸೇದುತ್ತ ನನ್ನ ಮುಂದೆಯೇ ಕುಳಿತಿರುತ್ತಾರೆ. ಅವರ ಹಿಂದಿನ ಗೋಡೆಯ ಮೇಲಿನ ಗಡಿಯಾರ ಒಂಬತ್ತು ಗಂಟೆ ತೋರಿಸುತ್ತಿರುತ್ತದೆ.

"ಓಹ್ ಎಷ್ಟೊತ್ತು ಮಲಗಿಬಿಟ್ಟೆ." ಎಂದು ತಲೆ ಹಿಡಿದುಕೊಂಡು




ಏಳುತ್ತೇನೆ.

"ಮಿ॥ ಸುಂದರರಾಜ್, ನನ್ನನ್ನು ಕ್ಷಮಿಸಿ" ಅಪ್ಪಾ ರಾವ್ ನನ್ನ ಕೈಗಳನ್ನು ಅದುಮಿ ಹೇಳುತ್ತಿದ್ದಾರೆ.

ಬೀಗದ ಕೈ ನಾನೇ ಇಟ್ಟುಕೊಂಡಿದ್ದೇನೆ. ಅಪ್ಪಾ ರಾವ್‌ಗೆ serve ಮಾಡುವದು ನನಗೂ ಒಂದು ಖುಶಿ. ಕುಡಿದರೆ ಹೀಗೆ ಕುಡಿಯಬೇಕು.

ಏಟು ತಿನುವಾಗ ನೂತ್ರ ಹೊಡೆದಂಥವನ ಸಾಧುವಾಗಿಬಿಟ್ಟನೇ ಎಂದು ಗೊಂದಲಕ್ಕೆ ಬೀಳುತ್ತೇನೆ.

"ಯಾವುದಕ್ಕಾಗಿ?"

ಅಪ್ಪಾರಾವ್ ಮಾತಾಡುವುದಿಲ್ಲ. "ಓಹ್, ನಿನ್ನೆಯ ಘಟನೆಯೇ? ಅದನ್ನು ನಾನು ಮರೆತಿದ್ದೆ. ನೀವೇ ನೆನಪಿಸಿದಿರಿ." ಎಂದು ಅಕ್ಷೇಪಿಸಿಸುವ ರೀತಿಯಲ್ಲಿ ಮಾತನಾಡುತ್ತೇನೆ.

"ಕ್ಷಮಿಸಿದೆ ಎಂದು ಹೇಳುವದಿಲ್ಲವೇ?

"ಹೇಳಲೇಬೇಕೇ ?" ತುಂಟ ನಗೆಯೊಡನೆ ಕೇಳುತ್ತೇನೆ.

Oh, Come on, you are my favourite drunkard. I am your fan" ಎಂದು ಅವರನ್ನು ಎಬ್ಬಿಸುತ್ತೇನೆ.

ಇಬ್ಬರೂ ಉಪಹಾರ ಮಾಡುವಾಗ "ಒಂದು ಮಾತು ಕೇಳಲೇ?" ಅನುಮಾನಿಸುತ್ತಲೇ ಕೇಳುತ್ತೇನೆ. ಏನು ಎಂಬಂತೆ ನೋಡುತ್ತಾರೆ ಅಪ್ಪಾ ರಾವ್.

"ರೂಪಾ ಯಾರು? ಈ ಮನೆಯಲ್ಲಿ ನಿಮ್ಮನ್ನು ಬಿಟ್ಟು ಮತ್ತಾರೂ ಕಾಣುವದಿಲ್ಲ"

ಅಪ್ಪಾ ರಾವ್‌ರ ಮುಖದಲ್ಲಿ ಒಮ್ಮೆಲೇ ಬದಲಾವಣೆ: ಹಣೆಯಲ್ಲಿ ಯಾವುದೋ ಚಿಂತೆಯ ನಾಲ್ಕಾರು ಗೆರೆಗಳು.

"ಕ್ಷಮಿಸಿ, ನಾನು ತಮ್ಮ privacy ಅತಿಕ್ರಮಿಸಿಲ್ಲವಷ್ಟೇ?"

"ಓಹ್, ಹಾಗೇನಿಲ್ಲ. ಹೃದಯದ ಅಳಲು ತೋಡಿಕೊಂಡಷ್ಟೂ ಅದು ನಮ್ಮವರ ಮುಂದೆ ಹೇಳಿಕೊಂಡಷ್ಟೂ ಹಗುರಾಗುವದು. ಮೊದಲು ಉಪಹಾರ ಮುಗಿಸಿ" ಎಂದರು.

* *

"ನಾನು ಹುಟ್ಟಿನಿಂದಲೇ born with a Silver Spoonನನಗೆ ಜೀವನದಲ್ಲಿ ಯಾವ ರೀತಿಯ ಕೊರತೆಯೂ ಇರಲಿಲ್ಲ. ತಂದೆ ದೊಡ್ಡ ವ್ಯಾಪಾರಿ ಒಬ್ಬನೇ ಮಗ. ಮುದ್ದಿನ ಮಗನಾಗಿ ಬೆಳೆದೆ. ಮುಂಬಯಿಯ ಅತ್ಯುತ್ತಮ ಸ್ಕೂಲು, ಕಾಲೇಜುಗಳಲ್ಲಿ ಶಿಕ್ಷಣ ಪಡೆದೆ. ಮುಂಬಯಿಯಲ್ಲಿ ಇಂಜನಿಯರಿಂಗ್ ದಲ್ಲಿ ಪದವಿ ಪಡೆದ ನನ್ನನ್ನು ಹೆಚ್ಚಿನ ಶಿಕ್ಷಣಕ್ಕಾಗಿ ತಂದೆ ಜರ್ಮನಿಗೆ ಕಳುಹಿಸಿದರು. ಆಟೋಮೊಬಾಯಿಲ್ಸ್ ದಲ್ಲಿ ವಿಶೇಷ ಪರಿಣತಿಗಾಗಿ. ಮರೆತೆ, ಮುಂಬಯಿಯಲ್ಲಿ ಪದವಿಪೂರ್ವ ಶಿಕ್ಷಣ ಪಡೆಯುವಾಗ ಪರಿಚಯವಾದವಳು ರೂಪಾ. ರೂಪಾ ಹೆಸರಿಗೆ ತಕ್ಕಂತೆ ರೂಪ, ಸೌಂದರ್ಯಗಳೇ ಮೈ ತಳೆದು ಬಂದಂತೆ. ಬ್ರಹ್ಮ ಅಪಾರ ಆಸಕ್ತಿ ಶ್ರದ್ಧೆ ವಹಿಸಿ ತನ್ನ ಕೌಶಲ್ಯವನ್ನೆಲ್ಲ ಕೇಂದ್ರೀಕೃತಗೊಳಿಸಿ ಎರಕ ಹೊಯ್ದ ಮೂರ್ತಿ. ಇಂಥ ರೂಪಳ ಸ್ನೇಹ, ಪರಿಚಯ ನನಗೊಂದು ಭಾಗ್ಯವಿದ್ದಂತೆ. ಅವಳಿಗೂ ಸಂಪತ್ತಿಗೆ ಕೊರತೆಯಿಲ್ಲ. ನಾವು ಪ್ರೇಮಿಸಿದೆವು. ಕೂಡ. ಜರ್ಮನಿಯಿಂದ ಬಂದ ಮೇಲೆ ಮದುವೆಯಾಗುವ ಯೋಜನೆಯಿತ್ತು. ಆದರೆ ಜೀವನದಲ್ಲಿ ಬಯಸಿದುದೆಲ್ಲ ಸಿಕ್ಕರೆ ವಿಧಿ ಏಕೆ ಇರಬೇಕು ಅಲ್ಲವೆ? ಒಂದು ದಿನ ನನಗೆ ಬಂದ ಕೇಬಲ್ ಪ್ರಕಾರ ತಂದೆಯ ವ್ಯಾಪಾರ ಕುಸಿದಿದ್ದಿತು. ತಂದೆ ದಿವಾಳಿಯಾಗಿದ್ದರು. ಮಾನ, ವೈಭವ, ಗೌರವದಿಂದ ಬಾಳಿದ ತಂದೆ ಆತ್ಮಹತ್ಯೆ ಮಾಡಿಕೊಂಡಿದ್ದರು. ಮುಂಬಯಿಗೆ ಬಂದಾಗ ಅನಾಥೆಯಾದ ತಾಯಿಯ ಹೊರತಾಗಿ ನನಗೆ ಯಾರೂ ಇರಲಿಲ್ಲ. ರೂಪಾ ಸಹ ಮುಖ ತಿರುಗಿಸಿಕೊಂಡು ಹೋಗಿದ್ದಳು. ಹೌದು, ನನ್ನ ಮತ್ತು ಉಳಿದವರ ಸಂಬಂಧವನ್ನು ಹಣ ನಿರ್ಧರಿಸಿದ್ದಿತು. ತಾಯಿ ತಾನು ಹಾಕಿಕೊಂಡಿದ್ದ ಒಡವೆಗಳನ್ನು ಮಾರಿ ಕೊಟ್ಟಳು. ನಾನು ನನ್ನ ಶಿಕ್ಷಣ ಮುಗಿಸಿಯೇ ಬರಬೇಕೆಂಬ ಛಲ ಅವಳಲ್ಲಿದ್ದಿತು. ಒಲ್ಲದ ಮನಸ್ಸಿನಿಂದ ವಾಪಸು ಜರ್ಮನಿಗೆ ಮರಳಿದೆ. ಬ್ಯಾಂಕಿನಲ್ಲಿಯ ಹಣ ನೋಡಿದೆ. ಸದ್ಯ, ಜರ್ಮನ್ ಕರೆನ್ಸಿಯಲ್ಲಿ ಸುಮಾರು ಹದಿನೈದು ಸಾವಿರ ರೂಪಾಯಿಗಳಿಗೂ ಮಿಕ್ಕಿ ಹಣವಿತ್ತು. ಪರೀಕ್ಷೆ ಮುಗಿಸಿದೆ. ನಾನು ಮುಂಬಯಿಯಲ್ಲಿದ್ದಾಗಲೇ ಜೂಜಾಡುವುದನ್ನು ಕಲಿತಿದ್ದೆ. ನಾನೊಬ್ಬ ಅದೃಷ್ಟವಂತ ಜೂಜುಗಾರ. ಬರಿ ಮುಂಬಯಿಯಲ್ಲಷ್ಟೇ ಅಲ್ಲ, ಜರ್ಮನಿಯಲ್ಲೂ ಅದೃಷ್ಟ ನನ್ನ ಕೈ ಬಿಟ್ಟಿರಲಿಲ್ಲ. ಪರೀಕ್ಷೆ ಮುಗಿದ ನಂತರ ಇದೇ ಅದೃಷ್ಟವನ್ನು ನೆಚ್ಚಿಕೊಂಡು ಹುಚ್ಚು ಧೈರ್ಯದಿಂದ ನನ್ನ ಇದ್ದ ಬಂಡವಲವನ್ನು ತೆಗೆದುಕೊಂಡು ಮೊನ್ಯಾಕೋವನ್ನೊಳಗೊಂಡೂ ಯುರೋಪದ ಕುಖ್ಯಾತ ಜೂಜು ಕೇಂದ್ರಗಳನ್ನು ಸುತ್ತಿದೆ. ಮುಂಬಯಿಗೆ ಬಂದಾಗ ನಾನು ಜರ್ಮನಿಯಿಂದ, ಅದೂ ಜೂಜಿನಲ್ಲಿ ಗೆದ್ದ ಹಣವನ್ನು ಭಾರತೀಯ ಬ್ಯಾಂಕಿನಲ್ಲಿ ವರ್ಗಾಯಿಸಿದಾಗ ಪಾಸ್ ಬುಕ್‌ನಲ್ಲಿ ಅದು ಐವತ್ತು ಲಕ್ಷಕ್ಕೂ ಮಿಕ್ಕಿದ್ದನ್ನು ನೋಡಿ ತಾಯಿಗೆ ಬವಳಿ ಬಂದಿತು. ಅವಳ ತೂಕದ ಒಡವೆಗಳನ್ನು ಮಾಡಿ ಹಾಕಿಸಿದೆ. ತಂದೆಯ ಇಚ್ಛೆಯಂತೆ ನನ್ನದೇ ಆದ ಆಧುನಿಕ ವರ್ಕ್‌ಶಾಪ್ ತೆರೆದೆ. ಅದು ಈಗ ಒಂದು ಕೋಟಿಗೂ ಮಿಕ್ಕಿ ಬೆಲೆ ಬಾಳುವಂಥದು. ನಾನು ಭಾರತಕ್ಕೆ ವಾಪಸ್ಸು ಬಂದಾಗ ಮತ್ತೆ ಸಂಪತ್ತಿಗಾಗಿ ಮುತ್ತಲೆತ್ನಿಸಿದ ಬಂಧು–ಬಳಗ, ಸ್ನೇಹಿತರನ್ನು ಒದ್ದು ಓಡಿಸಿದೆ. ರೂಪಾ ಯಾರೋ ಒಬ್ಬ ಶ್ರೀಮಂತನನ್ನು ಮದುವೆಯಾಗಿ ದೆಹಲಿಗೆ ಹೋಗಿದ್ದಳು. ಅಂಥ ಹತ್ತು ಶ್ರೀಮಂತರನ್ನು ಅವರ ಸಕಲ ಚರ ಸ್ಥಿರಾಸ್ತಿಗಳೊಡನೆ ಖರೀದಿಸುವ ಶಕ್ತಿ ನನಗೆ ಬಂದಿತ್ತು. ಆದರೆ ಅಂತಹ ದುರಹಂಕಾರಕ್ಕೆ ದೇವರೂ ಮೆಚ್ಚ, ಆತ್ಮವೂ ಮೆಚ್ಚದು. ರೂಪಾ ಅಷ್ಟೇ ಅಲ್ಲ, ಯಾರ ಮೇಲೂ ಸೇಡು ತೀರಿಸಿಕೊಳ್ಳುವ ಇಚ್ಛೆಯಿರಲಿಲ್ಲ. ರೂಪಾಳನ್ನು ಪ್ರೀತಿಸಿದ ಹೃದಯದಲ್ಲಿ ಬೇರೆ ಯಾರಿಗೂ ಸ್ಥಾನವಿರಲಿಲ್ಲ. ತಾಯಿ ಇದೇ ಕೊರಗಿನಲ್ಲಿ ನನ್ನನ್ನು ಅಗಲಿದಳು. ನಾನು ಒಬ್ಬಂಟಿಗನಾದೆ. ದೇಹದ ಕಾಮನೆ ತೀರಿಸಲು ಕ್ಷಣಿಕ ಸುಖಕ್ಕಾಗಿ ದುಡ್ಡು ಒಂದು ರಾತ್ರಿಯ ಸುಂದರಿಯಂತೆ ಎಷ್ಟೋ ಸುಂದರಿಯರನ್ನು ಖರೀದಿಸಿತು. ಅದು ಕೇವಲ ಮೃಗೀಯ ಕಾಮನೆ. ಆದರೆ ಹೃದಯದ ದಾಹ ದಾಹವಾಗಿಯೇ ಉಳಿಯಿತು. ಎಂಥ ವಿಚಿತ್ರ ನನ್ನ ವ್ಯಕ್ತಿತ್ವ! ದೇಹ, ಮನಸ್ಸುಗಳಲ್ಲಿ ತಾಳಮೇಳವಿಲ್ಲ.

"ಮುಂಬಯಿ ಬೇಜಾರಾಯಿತು. ಎಲ್ಲವನ್ನೂ ಮಾರಿದೆ.ಇಲ್ಲಿ ಬಂದೆ.ಬಂದ ಹಣದ ಫಿಕ್ಸೆಡ್ ಡಿಪಾಜಿಟ್‌ನ ಬಡ್ಡಿಯೇ ತಿಂಗಳಿಗೆ ಒಂದು ಲಕ್ಷದಷ್ಟಾಗುವುದು. ಇನ್‌ಕಮ್‌ಟಾಕ್ಸ್ ಕೊಟ್ಟು ಸುಟ್ಟರೂ ಸುಡಲಾರದಷ್ಟು ಹಣವಿದೆ. ಹಣ, ಹಣ, ಹಣ ಆದರೆ ನಾನೊಬ್ಬ ಜೀವಂತ ಹೆಣದಂತೆ. ಯಾರ ಸಲುವಾಗಿ ಬದುಕಲಿ. ಸುಂದರರಾಜ್. ಕುಡಿಯುತ್ತೇನೆ. ಆದರೆ ಅಮಲೇರುವದಿಲ್ಲ. ಜೂಜಾಡುತ್ತೇನೆ. ಆದರೆ ಸೋಲುವುದಿಲ್ಲ. ಸುಂದರಿಯರ ತೋಳತೆಕ್ಕೆಯಲ್ಲಿ ಹೊರಳಾಡುತ್ತೇನೆ. ಆದರೆ ಸುಖ ಪಡುವುದಿಲ್ಲ. ರೂಪಾಳನ್ನು ಮರೆಯಲಾಗುವುದಿಲ್ಲ"

ಅಪ್ಪಾ ರಾವ್ ತಮ್ಮ ಹಳೆಯ ನೆನಪುಗಳನ್ನು ಮೆಲುಕು ಹಾಕಿದಾಗ ರೂಪಾಳ ಫೋಟೋದಲ್ಲಿ ಅವರ ಕಣ್ಣಂಚಿನಿಂದುರುಳುವ ಹನಿಗಳ ಪ್ರತಿಬಿಂಬ ಕಾಣುತ್ತೇನೆ. ಇಂಥ ದುರ್ದೈವಿಯನ್ನು ಏನೆಂದು ಸಂತೈಸಲಿ? ಅವರ ಬೆನ್ನನ್ನು ಸಹಾನುಭೂತಿಯ ನನ್ನ ಕೈ ತಟ್ಟುತ್ತದೆ.

* *

ಅಂದು ಮಧ್ಯಾಹ್ನ ಡರ್ಬಿ ಆದ್ದರಿಂದ ಕ್ರೀಮ್‌ಗೆ ಯಾರೂ ಬಂದಿರಲಿಲ್ಲ.ಹಿಂದಿನ ದಿನಗಳ ನೆನಪು ಮರುಕಳಿಸುತ್ತಿತ್ತು. ಎರಡು ಲಕ್ಷ ರೂಪಾಯಿ, ಬೆಂಝ್ ಕಾರು, ಡರ್ಬಿ, ಮದ್ರಾಸ್ ಮೇಲ್, ಮೂರನೆಯ ದರ್ಜೆ...ನೆನಪು ನನ್ನ ಮೆದುಳನ್ನು ಸುಡುತ್ತಿದ್ದಂತೆ ನಾನು ಸಿಗರೇಟು ಸುಡುತ್ತಿದ್ದೆ.

ಕಿರ್‌ರ್‌ರ್...ಕಾರಿನ ಶಬ್ದವಾಯಿತು. ತಕ್ಷಣ ಸಿಗರೇಟು ಆರಿಸಿದೆ. ಹೌದು, ಕ್ಲಬ್ಬಿನಲ್ಲಿ ಡ್ಯೂಟಿಯ ಮೇಲಿದ್ದಾಗ ಸದಸ್ಯರ ಮುಂದೆ ಸಿಗರೇಟು ಸೇದುವದು ಒಬ್ಬ ನೌಕರನ ಅಸಭ್ಯತನ.

ಭಾರತಿ ಬಂದರು. ತಮ್ಮ ಮೂಲೆಯ ಪೇಟಂಟ್ ಟೇಬಲ್ ಮುಂದೆ ಕುಳಿತರು. ಹೊಸ ಇಸ್ಪೀಟು ಎಲೆಗಳನ್ನು ಗಾಳಿಯಲ್ಲಿ ಹಿಡಿದಂತೆಯೇ ಮಿಕ್ಸ್ ಮಾಡಿದರು. ಇದು ನೋಡಲು ಬಹಳ ಅಂದ. ಒಬ್ಬ ಅಂದಗಾರ್ತಿ, ಜಿನ್ನಾಣಗಿತ್ತಿ ಎಕ್ಕಾದಿಂದ ಹಿಡಿದು ರಾಜನ ವರೆಗೆ ಮೋಹಕವಾಗಿ , ಮಾದಕವಾಗಿ ಕೂಡಿಸುವ, ಹಂಚುವ ರೀತಿ ನೋಡಿದರೆ ಯಾರಾದರೂ ಆಟವನ್ನು ಮರೆತು, ಆಟಗಾರ್ತಿಯನ್ನೇ ನೋಡುತ್ತ ಕೂಡಬೇಕಷ್ಟೇ. ನಾನೂ ದೂರದಿಂದಲೇ ಭಾರತಿ ಒಬ್ಬರೇ ಟೇಬಲ್ ಮೇಲೆ ಎಲೆಗಳನ್ನು ಇಡುವದನ್ನು ನೋಡುತ್ತಿದ್ದೆ.

"ಮಿ॥ ಸುಂದರರಾಜ"

"ಎಸ್. ಮ್ಯಾಡಮ್"

"ಇವತ್ತು ಯಾಕೆ ಯಾರೂ ಕಾಣೋದಿಲ್ಲವಲ್ಲ?"

"ಮ್ಯಾಡಮ್, ಇವತ್ತು ಡರ್ಬಿ ಅಲ್ಲವೇ?"

"ಮೈ ಗಾಡ್, ನಮ್ಮಲ್ಲಿ ನನ್ನನ್ನು ಹೊರತು ಎಲ್ಲರೂ ರೇಸ್ ಪ್ರಿಯರೇ" ಎಂದು ತಲೆ ಮೇಲೆ ಕೈಯಿಟ್ಟುಕೊಂಡು ಘುತ್ತೆ ವಾಚ್ ನೋಡಿ "ಹಾಗಾದರೆ ಇವತ್ತು ರಾತ್ರಿ ಎಂಟು ಗಂಟೆಗೆ ಮುನ್ನ ಯಾರೂ ಬರುವದಿಲ್ಲವೆನ್ನಿ" ಎಂದರು.

ಹೌದೆಂದು ತಲೆಯಾಡಿಸಿದೆ.

"ಹಾಗಾದರೆ ನನ್ನ ಗತಿಯೇನು?" ಭಾರತಿ ಸ್ವಗತವಾಗಿ ಮಾತಾಡಿಕೊಂಡರೂ ಅದು ನನಗೆ ಕೇಳಿಸಿದ್ದಿತು.

"ತಾವು ಡರ್ಬಿಗೆ..." ನನ್ನ ಮಾತನ್ನು ಅರ್ಧದಲ್ಲಿಯೇ ತಡೆಯುತ್ತ, "ಥೂ, ಕುದುರೆಗಳು ಓಡುತ್ತವೆ, ಕತ್ತೆಗಳು ನೋಡುತ್ತವೆ, ಅರಚುತ್ತವೆ" ಎಂದರು.

ನಾನು ಪೆಚ್ಚಾದೆ. ಹೌದು ನಾನು ಕತ್ತೆ ಆಗಿಯೇ "ಕ್ರೀಮ್"ಗೆ ಮ್ಯಾನೇಜರಾದೆ. ಇಲ್ಲದೆ ಹೋದರೆ ಅಣ್ಣಂದಿರಂತೆ ನಾನೂ ಡಾಕ್ಟರೋ, ಇಂಜನೀಯರೋ ಆಗುತ್ತಿದ್ದೆ.

"ಮಿ॥ ಸುಂದರರಾಜ್, ಹಾಗಾದರೆ ನಾನೇನು ಮಾಡಬೇಕು?"

"ಲೌಂಜಿಗೆ ಬಂದರೆ ಒಳ್ಳೆಯ ರಿಕಾರ್ಡ್ಸ್ ಕೇಳಬಹುದು."

"ಉಹುಂ"

ಕೊಂಚ ಕ್ಷಣ ಮೌನ.

"ಮಿ॥ ಸುಂದರರಾಜ್, ತಾವು ಇಂದು ನನ್ನ ಜತೆ ಕಂಪನಿ ಕೊಡ್ತೀರಾ?"

"ಮಾಯ್ ಗಾಡ್, ಮ್ಯಾಡಮ್ ನನಗೆ ಸಿಗುವದೇ ತಿಂಗಳಿಗೆ ಸಾವಿರ ರೂಪಾಯಿ ಸಂಬಳ. ತಮ್ಮಂಥ ಚಾಂಪಿಯನ್ ಜತೆ ಆಡಿದರೆ ಎರಡು ನಿಮಿಷ

ದಲ್ಲಿ ಪಾಪರ್ ಆಗಿ ನಿಮ್ಮ ಮನೆ ಯಲ್ಲಿಯೇ ತಿಂಗಳು ಗಟ್ಟಲೆ ದಿನಗಳನ್ನು ಕಳೆಯಬೇಕಾಗುತ್ತದೆ.!"

"ಓ. ನೋ... ನೋಡಿ, ನಾನು ನಿಮಗೆ ಕೊಂಚ ಟೋಕನ್ಸ್ ಸಾಲವಾಗಿ ಕೊಡ್ತೇನೆ. ಅಕಸ್ಮಾತ್ ನೀವು ಸೋತರೆ ನಿಮಗೆ ಆದಾಗ ವಾಪಸು ಕೊಡಿ."

"ಆದಾಯಿತು ಮ್ಯಾಡಮ್, ಆದರೆ ಮ್ಯಾನೇಜರ್, ಸದಸ್ಯರ ಜೊತೆ ಆಡು ವುದು ..." ತಲೆ ಕೆರೆಯುತ್ತ ನುಡಿದೆ.

"ಹಾಗಾದರೆ ಒಂದು ಕಾಟೇಜ್ ನನಗಾಗಿ ರಿಸರ್ವ್ ಮಾಡಿ. ಯಾರಾ ದರೂ ಬಂದರೆ ನಿಮ್ಮ ಅಸಿಸ್ಟಂಟ್ಸ್ ಮ್ಯಾನೇಜ್ ಮಾಡ್ತಾರೆ."

ಬಿಟ್ಟೇನೆಂದರೆ ಬಿಡದೀ ಮಾಯೆ ಎಂಬಂತಾಗಿತ್ತು. ಯಾರ ಮುಖ ನೋಡಿ ಬೆಳಿಗ್ಗೆ ಎದ್ದಿದ್ದೆನೋ ಏನೋ?"

* *

ಭಾರತಿ ಕೌಂಟರಿನಲ್ಲಿ ನನ್ನಿಂದಲೇ ಸಾವಿರ ರೂಪಾಯಿಗೆ ಟೋಕನ್ಸ್ ತೆಗೆದುಕೊಂಡರು. ನನಗೆ ಎಷ್ಟು ಟೋಕನ್ಸ್ ಕೊಟ್ಟರೋ ಗೊತ್ತಿಲ್ಲ. ನಾನು ನೋಡುತ್ತಿದ್ದುದು ಆ ಮೋಹಕ ಮುಖವನ್ನು, ಆ ತುಂಟ ನಗೆಯನ್ನು, ಆ ಕೈ ಚಳಕದ ಮಿಕ್ಸಿಂಗ್ ಮತ್ತು ಹಂಚುವಿಕೆಯನ್ನು ನಾನು ಮದ್ರಾಸ್ ಮೇಲ್‌ದ ಮೂರನೆಯ ದರ್ಜೆಗೆ ಇಳಿಯುವ ಮೊದಲು ಜೂಜು ಆಡಿ ದ್ದೇನೋ ನಿಜ, ಆದರೆ ಹೆಂಗಸರ ಜತೆ ಎಂದೂ ಆಡಿರಲಿಲ್ಲ. ಒಂದನೆಯ ರಮ್ಮಿಯಲ್ಲಿ ನೂರು ರೂಪಾಯಿಯ ಆಟ ಸೋತಾಗ ಎದೆ ಧಸ್ ಎಂದಿತು. ಭಾರತಿಯನ್ನು ಮರೆತೆ, ಎಲೆಗಳ ಮೇಲೆಯೇ ಕೇಂದ್ರೀಕರಿಸಿದೆ ನನ್ನ ದೃಷ್ಟಿ ಯನ್ನು; ಬುದ್ಧಿಯನ್ನು.

ಕೆಲವೇ ಆಟಗಳಲ್ಲಿ ಎಲ್ಲ ಟೋಕನ್ ಗಳೂ ನನ್ನ ಬಳಿ ಬಂದಿದ್ದವು. ಭಾರ ತಿಯ ಮುಖ ಈಗ ನೋಡಿದೆ. ಕೆಂಪಾ ಗಿತ್ತು. ಸೋಲಿನ ಅವಮಾನದ ಸಿಟ್ಟಿ ನಿಂದ ಕೆಂಪಾಗಿತ್ತು. ತುಂಟ ನಗು ಮಾಯವಾಗಿತ್ತು. ಅಧರಗಳು ಅದುರುತ್ತಿದ್ದವು. ಎದೆ ಏರಿಳಿಯು ತ್ತಿತ್ತು, ಕೈಗಳು ನಡುಗುತ್ತಿದ್ದವು.

"ಮಿ॥ ಸುಂದರರಾಜ್, ಇನ್ನೂ ಎರಡು ಸಾವಿರಕ್ಕೆ ಟೋಕನ್ ತೆಗೆದು ಕೊಂಡು ಬನ್ನಿ"

"ಮ್ಯಾಡಂ ಯಾರಾದರೂ ಬಂದರೆ ನನ್ನ ಸರ್ವೀಸ್..."

"ನೋ. Today you are meant for me ಬೇಕಾದರೆ ರಜ ಹಾಕಿ.

ಆದರೆ ಆಟ ಸಾಗಲೇ ಬೇಕು."

ಹಿಂದೆ ಭಾರತಿ ಎಂದೂ ಸೋತವರಲ್ಲ. ಎಂದೂ ಗೆಲ್ಲದ ನನ್ನನ್ನು ಅದೃಷ್ಟ ಹೇಗೆ ಬೆಂಬಲಿಸಿತೋ ಏನೋ ! ಯಾರ ಮುಖ ನೋಡಿದ್ದನೆನ್ನುವುದು ಮತ್ತೆ ಜ್ಞಾಪಿಸಿಕೊಳ್ಳಬೇಕಾಯಿತು. ನೆನ ಪಾಗಲಿಲ್ಲ.

ಎರಡು ಸಾವಿರದ ಟೋಕನ್ ಭಾರ ತಿಯ ಮುಂದೆ ಸುರಿದೆ.

ಭಾರತಿ ಆ ಸಂಜೆ ನನ್ನನು ಬಿಡಲಿಲ್ಲ. ಬೆಂಬತ್ತಿದ ಅದೃಷ್ಟವೂ ನನ್ನನ್ನು ಬಿಡ ಲಿಲ್ಲ.

ಭಾರತಿ ಮತ್ತೆ ಮತ್ತೆ ಖರೀದಿಸಿದ ಟೋಕನ್‌ಗಳೆಲ್ಲವೂ ನನ್ನ ಬಳಿ ಬಂದಿ ದ್ದವು. ಭಾರತಿ ತಮ್ಮ ಕೊರಳಲ್ಲಿಯ ಹಾರಕ್ಕೆ ಕೈ ಹಾಕಿದರು. ನಾನು ತಡೆದೆ.

"ಏಕೆ ಸೋಲುತ್ತೇನೆಂಬ ಭಯವೇ?" ಇಂಥ ಸೋಲಿನಲ್ಲೂ ಭಾರತಿಯ ಕೆಣ ಕುವ ಕೆಚ್ಚನ್ನು ಶ್ಲಾಘಿಸಬೇಕು.

"ಈ ಪರಿಸ್ಥಿತಿಯಲ್ಲಿ ಭಯವಿಲ್ಲ ಮ್ಯಾಡಮ್. ಆದರೆ ಕ್ಲಬ್ಬಿನಲ್ಲಿ ಈ barter exchange ಒಪ್ಪಿಗೆಯಿಲ್ಲ."

ಭಾರತಿ ಈಗ ಪೂರ್ತಿ ಸೋತಿದ್ದರು. ಸೋಲು ಅಳುವಿನಲ್ಲಿ ಪರ್ಯವಸಾನ ವಾಗಿದ್ದಿತ್ತು. ಆ ಪರಿಸ್ಥಿತಿಯಲ್ಲಿ ಶ್ರೇಯಸ್ಕರವಾಗಿತ್ತು. ನಾನು ಟೋ ಕನ್ನುಗಳನ್ನು ಎಣಿಸುತ್ತ ಕುಳಿತೆ.

ಹತ್ತು ಸಾವಿರವಾಗಿದ್ದಿತು. ಆದರೆ ಮನಸ್ಸು ಅರಳಲಿಲ್ಲ.

"ಮ್ಯಾಡಮ್, ನೀವು ದಯವಿಟ್ಟು ತಪ್ಪು ತಿಳಿಯುವುದಿಲ್ಲವಾದರೆ ಇವೆಲ್ಲ ನಿಮ್ಮದೇ" ಎಂದು ಎಲ್ಲ ಟೋಕನ್ನು ಗಳನ್ನು ಅವರ ಮುಂದೆ ಹಾಕಿದೆ. "ನಾನು ತಮ್ಮ ಜತೆ ಕಂಪನಿ ಕೊಡ ಬೇಕೆಂದು ಆಡಿದನೇ ವಿನಾ ಗೆದ್ದು ನಿಮ್ಮ ಹಣ ಸೂರೆಗೈಯ್ಯಬೇಕೆಂದಲ್ಲ"ಭಾರತಿಯ ಅಳು ನಿಂತು ಕೋಪ ಪ್ರಜ್ವಲಿಸಿತು.

"ಮಿ॥ ಸುಂದರರಾಜ್, ನಾನು ಅತ್ತಿದ್ದು ಹಣ ಕಳೆದುಕೊಂಡದ್ದಕ್ಕಲ್ಲ ಸೋತದ್ದಕ್ಕೆ. ನನ್ನನ್ನು ಸೋಲಿಸಿದ ಪ್ರಥಮ ಗಂಡಸು ನೀವೇ. ನನಗೆ ಔದಾರ್ಯ, ಅನುಕಂಪ ಸಹಿಸದು ಅದು ನಿಮ್ಮ ಹಣ"

"ಮ್ಯಾಡಮ್, ತಮ್ಮನ್ನು ಸೋಲಿಸಿದ ಪ್ರಥಮ ಗಂಡಸು ನಾನಲ್ಲ, ತಮ್ಮ ಪತಿ" ತುಂಟ ನಗೆಯೊಡನೆ ಹೇಳಿದೆ.

"ಹುಂ, ಪತಿ" ಎಂದು ನೀರಸವಾದ ವ್ಯಂಗ್ಯ ನಗೆ ತಂದುಕೊಂಡು ಹೇಳಿ ದರು ಭಾರತಿ.

"ನನಗೊಂದು ರಾಯಲ್ ಸೆಲ್ಯೂಟ್ ತಂದು ಕೊಡುವಿರಾ ?"

ರಾಯಲ್ ಸೆಲ್ಯೂಟ್ ತಂದು ಒಂದು ಗ್ಲಾಸಿನೊಡನೆ ಮುಂದಿಟ್ಟೆ.

"ಇನ್ನೊಂದು ಗ್ಲಾಸು."

"ಮ್ಯಾಡಮ್..." ತಲೆ ಕೆರೆದು ಕೊಳ್ಳಲಾರಂಭಿಸಿದೆ.

"No. ಅದೆಲ್ಲಾ ಆಗೋದಿಲ್ಲ. ನಾನು ಆಗಲೇ ಹೇಳಿದ್ದೇನೆ. Today you are meant for me ಎಂದು. ಹೋಗಿ. ಇನ್ನೊಂದು ಗ್ಲಾಸು ತೆಗೆದುಕೊಂಡು ಬನ್ನಿ"

"ಓಹ್, ಇನ್ನೂ ನನಗೆ ಬಿಡುಗಡೆ ಯಿಲ್ಲ."

ನಾನು ಗೆದ್ದ ಟೋಕನ್‌ಗಳು ಅನಾಥ ವಾಗಿ ನಮ್ಮಿಬ್ಬರ ನಡುವೆ ಬಿದ್ದಿದ್ದವು.

* *

ರಾಯಲ್ ಸೆಲ್ಯೂಟ್ ನಿಧಾನವಾಗಿ ಕರಗುತ್ತಿತ್ತು. ಕುಡಿತ ನನ್ನ ಮೇಲೆ ಯಾವ ಪ್ರಭಾವವನ್ನೂ ಬೀರದಷ್ಟು ದಪ್ಪಚರ್ಮದವನಾಗಿದ್ದೇನೆ.

'ಮ್ಯಾಡಮ್'

ಮ್ಯಾಡಮ್ ಅನ್ನಬೇಡಿ. ಭಾರತಿ ಎನ್ನಿ ಕುಡಿದವರ ವಿರುದ್ಧ ಎಂದೂ ನಡೆಯಬಾರದು.

ಮ್ಯಾಡಮ್. ಸಾರಿ. ಭಾರತಿಯವರ ತಮ್ಮನ್ನೊಂದು ಮಾತು ಕೇಳಲೇ?

'ಒಂದೇಕೆ. ನೂರು ಕೇಳಿ'

'ಪತಿಯ ಹೆಸರು ತೆಗೆದಾಕ್ಷಣ ತಾವು ಮುಖ ಸಿಂಡರಿಸಿಕೊಂಡಿರಲ್ಲಾ ಏಕೆ?,



ಭಾರತಿ ಗಂಭೀರರಾದರು:

'ನನ್ನ ಪತಿಯೇ ನನ್ನನ್ನ ಈ ದೆಸೆಗೆ ಇಳಿಸಿದರೆಂದರೆ ನೀವು ನಂಬುವಿರಾ?'

'ನೀವು "ಸಾಹಿಬ್ ಬೀಬೀ ಔರ ಗುಲಾಮ್" ನೋಡಿದ್ದೀರಲ್ಲವೇ?' ಹೌದೆಂದು ತಲೆಯಾಡಿಸಿದೆ.

'ಕುಡಿದು ಹಾಳಾದ ಮೀನಾಕುಮಾರಿಯ ಬಗ್ಗೆ ಏನನ್ನಿಸುವದು?'

'ಪಾಪ,' ಲೊಚಗುಟ್ಟಿದೆ.

'ಇದಕ್ಕೂ ಹೆಚ್ಚಾಗಿ ಲೊಚಗುಟ್ಟಬೇಕು ಮಿ॥ ಸುಂದರರಾಜ್ ನನ್ನ ಬಗ್ಗೆ'

ನನಗೆ ಈ ಒಗಟುಗಳ ಹೋಲಿಕೆ ತಿಳಿಯಲಿಲ್ಲ. ಭಾರತಿಯನ್ನೇ ಅರ್ಥಹೀನ ದೃಷ್ಟಿಯಿಂದ ಪಿಳಿಪಿಳಿ ನೋಡಲಾರಂಭಿಸಿದೆ.

'ನನ್ನ ಪತಿ ಈ ಊರಿನಲ್ಲಿಯೇ ಐ.ಬಿ.ಪಿ.ಯ ಏಕೈಕ ಡೀಲರು. ದಿನಕ್ಕೊಂದು ಊರಿನಲ್ಲಿ ಸುತ್ತಾಟ. ಲಕ್ಷಾಂತರ ರೂಪಾಯಿಗಳ ವಹಿವಾಟು. ಇಂಥ ಮನೆಯಲ್ಲಿ ಮಜವಾಗಿ ಇರಬಹುದೆಂಬ ಭಾವನೆ ಮೃಗಜಲವಾಯಿತು. ಬಹುಶಃ ಅವರಿಗೆ ವ್ಯಾಪಾರದಲ್ಲಿ ಬಹಳ ಶ್ರದ್ಧೆಯಿದೆ ಎಂದು ಭಾವಿಸಿದ್ದೆ. ಅದು ಭಾಗಶಃ ನಿಜ. ಆದರೆಅದಕ್ಕೆ ಇನ್ನೊಂದು ಕಾರಣವೂ ಇದೆಯೆಂದು ತಿಳಿದದ್ದು ನಂತರ. ದಾಂಪತ್ಯ ಜೀವನದಲ್ಲಿ ನನಗೆ ತೃಪ್ತಿಕೊಡುವ ಶಕ್ತಿ ಅವರಲ್ಲಿರಲಿಲ್ಲ. ಅದರರ್ಥ ನಾನು ಅತಿ ಕಾಮಿಯಲ್ಲ ಪದ್ಮಿನಿಯಂತೆ. ಅವರಲ್ಲಿ ಪುರುಷತ್ವವಿರಲಿಲ್ಲ. ಉಪ್ಪುಂಡ ಈ ಜೀವ ಚಡಪಡಿಸಲಾರಂಭಿಸಿತು. ಮನೆಯಲ್ಲಿ ಕೈಗೊಬ್ಬ ಆಳು, ಕಾಲಿಗೊಬ್ಬ ಆಳು ಅವರೋ ಮನೆಯಿಂದ ಸದಾ ಹೊರಗೆ. ವೇಳೆ ಕಳೆಯಲು ಈ ಕ್ಲಬ್ಬಿಗೆ ಕಳುಹಿಸಿದರು. ಮೊದಲು ಇಸ್ಪೀಟು ನಂತರ ಕುಡಿತ, ನಂತರ...' ಭಾರತಿ ಮತ್ತೆ ಗ್ಲಾಸು ತುಂಬಿಕೊಂಡರು.

'ನಂತರ...'ದ ಮಾತು ಪೂರ್ತಿಯಾಗಲಿಲ್ಲ. ನಾನೂ ಕೇಳಬಯಸಲಿಲ್ಲ.

"ಮಿ॥ ಸುಂದರರಾಜ್, ನನ್ನನ್ನು ನೋಡಿದರೆ ನಿಮಗೇನನ್ನಿಸುವದು?" ಈಗ ಭಾರತಿ ಆ 'ನಂತರ...'ದ ಘಟ್ಟಕ್ಕೆ ತಲುಪಿದ್ದರು.

'ಮಿಸೆಸ್ ಭಾರತಿ' ಈ ರೀತಿಯ ಸಂಬೋಧನೆ ಅರಿವಿಲ್ಲದೆಯೇ ಹೊರಬಂದಿದ್ದಿತು. 'ಸಾಹಿಬ್‌ನನ್ನು ಬಿಟ್ಟ ಬೀಬಿ ಗುಲಾಮರ ಕೈಗಳಲ್ಲಿ ಒದ್ದಾಡುತ್ತಿದ್ದಾಳೆ. ಅವಳಿಗಾಗಿ ಪಾಪ ಎನ್ನಿಸುವದು. ನಾನು ಈ ಕ್ಲಬ್ಬಿನ ನೌಕರನೇ ಹೊರತು ನಿಮ್ಮ ಗುಲಾಮನಲ್ಲ'. ಎಂದು ನಾನು ಗೆದ್ದ ಟೋಕನ್‌ಗಳನ್ನು ಕ್ಯಾಶ್ ಮಾಡಿಸಿ ಅದನ್ನು ಭಾರತೀಯ ಬ್ಯಾಗ್‌ನಲ್ಲಿಯೇ ಇಟ್ಟು ಕಾಟೇಜ್ ನಿಂದ ಹೊರಬಂದೆ.

ಸದ್ಯ, ರಾಯಲ್ ಸೆಲ್ಯೂಟ್ ನನ್ನ ಶಾಲಿನಿ, ಅಮೃತಾರನ್ನು ಮರೆಸಿರಲಿಲ್ಲ. ನನ್ನ ನಿಯತ್ತನ್ನು ಮರೆಸಿರಲಿಲ್ಲ.

× × ×

'ಅರೆ ಸಿದ್ಧಾರ್ಥ, ನೀನಿನ್ನೂ ಇಲ್ಲಿಯೇ ಇದ್ದೀಯಾ? ಸ್ಕೂಲೂ?"

ಸಿದ್ಧಾರ್ಥ ಮೂಲೆಯಲ್ಲಿಯ ಟೇಬಲ್ ಮೇಲೆ ಸಪ್ಪಗೆ ಮುಖ ಮಾಡಿ ಕುಳಿತಿದ್ದ. 'ನೋಡಿ ಅಂಕಲ್, ನಾನು ಬಂದಿದ್ದು ಒಂದು ಗಂಟೆಗೆ. ನನಗೆ ಈಗ ಪ್ಲೇಟ ತಂದುಕೊಟ್ಟರು. ಅದೂ ಇಂಥಾ ಪ್ಲೇಟು.'

ವೇಳೆ ನೋಡಿದೆ. ಎರಡೂವರೆ ಗಂಟೆಯಾಗಿತ್ತು.

ತಟ್ಟೆ ನೋಡಿದೆ. ಚಿಕನ್ ಎನ್ನುವ ಪ್ಲೇಟಿನಲ್ಲಿ ಬರಿ ರಸ ಇತ್ತೇ ವಿನಹ ಪೀಸುಗಳೇ ಇರಲಿಲ್ಲ.

ಸಿದ್ಧಾರ್ಥನ ಮುಖ ಬಾಡಿಹೋಗಿತ್ತು. ಕಣ್ಣುಗಳಲ್ಲಿ ನೀರು ತುಂಬಿನಿಂತಿತ್ತು. ನನ್ನ ಕರುಳು ಕಿವುಚಿದಂತಾಯಿತು.

ಸಿದ್ಧಾರ್ಥನಿಗೆ ಎಲ್ಲ ಇದ್ದರೂ ಏನೂ ಇಲ್ಲದಂತಿದೆ. ಶ್ರೀಮಂತ ಮನೆಯ ಹುಡುಗ. ಒಬ್ಬನೇ ಮಗ. ತಂದೆ ವ್ಯಾಪಾರಕ್ಕೆಂದು ಹೋಗುವವನು ತಿಂಗಳಿಗೆ ಇಪ್ಪತ್ತೊಂಬತ್ತು ದಿನ ಮನೆಯ ಹೊರಗಡೆ. ತಾಯಿಗೆ ಕೆಲಸವಿಲ್ಲ. ಇದೇ ಕ್ಲಬ್ಬಿನಲ್ಲಿ ಬ್ರಿಜ್ ಆಡುತ್ತ ಕೂಡುವಳು. ಇದ್ದ ಒಬ್ಬನೇ ಮಗ ಪರದೇಶಿಯಂತೆ ಎಷ್ಟೊಂದು ಮುದ್ದಾಗಿದ್ದಾನೆ ಸಿದ್ಧಾರ್ಥ. ಆರು ವರ್ಷದ ಎಳೆಯ ಹಸುಳೆ. ಈಗ ಕ್ಲಬ್ಬಿನ ಪಕ್ಕದಲ್ಲಿಯೇ ಇರುವ ಕಾನ್ವೆಂಟಿಗೆ ಹೋಗುತ್ತಾನೆ. ಇವರ ಮನೆಯಲ್ಲಿ ಬಹುಶಃ ಅಡಿಗೆ ಮನೆಯೇ ಇರಲಿಕ್ಕಿಲ್ಲ. ಏಕೆಂದರೆ ತಾಯಿ, ಮಗ ಇಬ್ಬರೂ ಕ್ಲಬ್ಬಿನಲ್ಲಿಯೇ ಊಟ ಮಾಡುವರು. ಆದರೆ ತಾಯಿಯ ಟೈಮೇ ಬೇರೆ ಮಗನ ಟೈಮೇ ಬೇರೆ ಇಬ್ಬರೂ ಪರದೇಶಿಗಳೇ.

ನಾನೂ ದುರ್ದೈವಿ ಅಮೃತಾ, ಶಾಲಿನಿ ಯಾರೂ ನನಗೆ ಮಕ್ಕಳನ್ನು ಕೊಡಲಿಲ್ಲ. ಸಿದ್ಧಾರ್ಥನನ್ನು ಮಗನಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದೇನೆ. ಅವನು ಸ್ಕೂಲಿನಿಂದ ಬಂದಾಗ ನಾನೇ ನನ್ನ ಕೈಯಾರೆ ಪ್ಲೇಟುಗಳನ್ನು ಟ್ರೇಯಲ್ಲಿ ವ್ಯವಸ್ಥಿತವಾಗಿರಿಸಿಕೊಂಡು ಹೋಗಿ ಅವನಿಗೆ ಉಣಿಸುತ್ತೇನೆ. ಅವನು ಊಟಮಾಡಿ ಶಾಲೆಗೆ ಹೋಗುವವರೆಗೂ ನಾನು ಅವನ ಅಟೆಂಡೆಂಟು ಅವನು ನನ್ನ ಸ್ವತ್ತು.

'ಅಂಕಲ್, ನೀವು ಎಲ್ಲಿ ಹೋಗಿದ್ರಿ, ನನ್ನ ಟೈಮಿನಲ್ಲಿ?' ಸಿದ್ಧಾರ್ಥ ಆಕ್ಷೇಪಿಸುವವರಂತೆ ಕೇಳಿದ.

ನಾನು ಅವನನ್ನು ಸಂತೈಸಿದೆ' ಕ್ಲಬ್ಬಿನ ಅಡಿಗೆ ಮನೆಗೆ ಹೋದೆ. ಬಟ್ಲರ್‌ಗಳು, ಅಡಿಗೆಯವರು ಚಕ್ಕಂದವಾಡುತ್ತ ಕೋಳಿಯ ಕಾಲುಗಳನ್ನು ಜಗಿಯುತ್ತಿದ್ದರು. ನನ್ನ ಮುಖವನ್ನು ಕಂಡು ಕಾಲು ಕೈಯಲ್ಲಿಯೇ ಉಳಿಯಿತು. ಬಾಯಿ ತೆರೆದಂತೆಯೇ ಇತ್ತು.

ಮುಂದೇನಾಯಿತೋ ನನಗೆ ತಿಳಿಯದು.

ನನಗೆ ಪ್ರಜ್ಞೆ ಬಂದಾಗ ಬಟ್ಲರ್‌ಗಳ, ಅಡಿಗೆಯವರ ಮೈಮೇಲೆ ಬಾರು ಮೂಡಿದಂತಹ ಬಾಸುಂಡೆಗಳು. ಅವರ ಬಟ್ಟೆ ಹರಿದಿವೆ. ಅವರ ತಟ್ಟೆಗಳು ಚೆಲ್ಲಾಪಿಲ್ಲಿಯಾಗಿವೆ. ನನ್ನ ಲೆದರ್ ಬೆಲ್ಟು ಮೂಲೆಯೊಂದರಲ್ಲಿ ಬಿದ್ದಿದೆ. ಏಟು ತಿಂದವರು ಅರಚುತ್ತಿದ್ದಾರೆ. ಅಸಿಸ್ಟೆಂಟ್ ಮ್ಯಾನೇಜರ್ ಮತ್ತು ಕೆಲವು ಕ್ಲಬ್ಬಿನ ಮೆಂಬರುಗಳು ನನ್ನನ್ನು ಹಿಡಿದುಕೊಂಡಿದ್ದಾರೆ. ಅವರ ಕೈ ಕೊಡವಿದೆ. ಫ್ರಿಡ್ಜಿನ ಬಾಗಿಲು ತೆಗೆದು ಬ್ರೆಡ್, ಬಟರ್ ಜಾಮ್, ಸಾಸ್, ಮೊಟ್ಟೆ ತೆಗೆದೆ.

ಸಿದ್ಧಾರ್ಥನಿಗೆ ಉಣಿಸಿದೆ.

'ಅಂಕಲ್, ನನ್ನ ಶಾಲೆ ತಪ್ಪಿ ಹೋಯಿತು'

'ಮರಿ, ಇಂದು ನನ್ನ ನೌಕರಿ ತಪ್ಪಿ ಹೋಯಿತು.'

ಸಿದ್ಧಾರ್ಥನಿಗೆ ತಿಳಿಯಲಿಲ್ಲ.

'ಬಾ, ಹಾಗೆಯೇ ಒಂದು ರೌಂಡ್ ಹೋಗಿ ಬರೋಣ' ಎಂದು ಒಂದು ಟ್ಯಾಕ್ಸಿ ತೆಗೆದುಕೊಂಡು ಇಡೀ ಊರು ಸುತ್ತಾಡಿಸಿದೆ. ಐಸ್‌ಕ್ರೀಮ್ ತಿನ್ನಿಸಿದೆ. ಜೂನಲ್ಲಿಯ ಆನೆಯ ಮೇಲೆ ಕೂಡಿಸಿದೆ. ಸಾಯಂಕಾಲ ವಾಪಸು ಕ್ಲಬ್ಬಿಗೆ ಬಂದಾಗ ಬೋರ್ಡ್ ಆಫ್ ಡೈರೆಕ್ಟರ್ಸ್ ರೂಮಿಗೆ ಕರೆಬಂತು.

ಒಳಗೆ ಹೋದಾಗ ಡೈರೆಕ್ಟರ್ಸ್‌ಗೂ, ಅಪ್ಪಾರಾವ್ ಭಾರತಿ ಮತ್ತು ಸಿದ್ಧಾರ್ಥನ ತಾಯಿಗೂ ಜಗಳ ನಡೆದಿತ್ತು.

'ಸುಂದರರಾಜನನ್ನು ತೆಗೆದರೆ ನಾನೂ ಈ ಕ್ಲಬ್ ಬಿಡಬೇಕಾಗುತ್ತದೆ. ನಾನು ಬಿಟ್ಟರೆ ನನ್ನ ಹಿಂದೆ ಎಷ್ಟು ಜನ ಇದ್ದಾರೆ ನಿಮಗೆ ಗೊತ್ತು. ನಾವೇ ಒಂದು ಹೊಸ ಕ್ಲಬ್ ಪ್ರಾರಂಭಿಸಬೇಕಾಗಬಹುದು. ಮುಂದೆ ನಿಮ್ಮ ಕ್ರೀಮ್ ಆಫ್ ದಿ ಸೊಸೈಟಿ ಸ್ಕ್ರಿಮ್ ಮಾಡ ಬೇಕಾಗುವದು. ಅಷ್ಟೇ ಅಲ್ಲ. ಇಷ್ಟು ದಿನ ಪೋಷಿಸಿದ ಕ್ಲಬ್ಬನ್ನು ಹಾಳುಗೆಡಹುವ ದಾರಿಯೂ ಗೊತ್ತು ನನಗೆ'

ಭಾರತಿ, ಸಿದ್ಧಾರ್ಥನ ತಾಯಿ ಅಪ್ಪಾರಾವ್‌ರವರನ್ನು ಅನುಮೋದಿಸಿದರು. ಕೊಡಬೇಕೆಂದಿದ್ದ ರಾಜೀನಾಮೆ ನನ್ನ ಜೋಬಿನಲ್ಲಿಯೇ ಉಳಿದ್ದಿತು. **You take what ever decision you want.** ಎಂದು ಅಪ್ಪಾರಾವ್ ನನ್ನನ್ನೂ ಎಳೆದುಕೊಂಡು ಹೊರಗೆ ಬಂದರು. ಭಾರತಿ, ಸಿದ್ಧಾರ್ಥನ ತಾಯಿಯೂ ಹಿಂಬಾಲಿಸಿದರು.

* * *

ಬೋರ್ಡಿನ ನಿರ್ಣಯ ಹೊರಬಿದ್ದಿತು.

ನಾನು ಬಟ್ಲರ್ಸ್ ಮತ್ತು ಅಡಿಗೆಯವರಿಗೆ ಹೊಡೆದ ಕಾರಣ ಸಕಾರಣವಾಗಿತ್ತೆಂಬ ತೀರ್ಮಾನಕ್ಕೆ ಬಂದ ಅವರು ನನ್ನನ್ನು ಕೆಲಸದಿಂದ ತೆಗೆಯುವ ಬದಲಾಗಿ ಬಟ್ಲರ್ಸ್ ಮತ್ತು ಅಡಿಗೆಯವರನ್ನೇ ಮೂರು ತಿಂಗಳ ಸಂಬಳ ಕೊಟ್ಟು ತೆಗೆದುಬಿಡುವ ನಿರ್ಣಯ ಮಾಡಿದ್ದರು.

* * *

ಹೊಡೆಯಿಸಿಕೊಂಡವರು ಪೋಲೀಸ್ ಕಂಪ್ಲೇಂಟು ಕೊಟ್ಟರೆ ಅದರಿಂದ ರಕ್ಷಿಸುವ ಭಾರವನ್ನೂ ಕ್ಲಬ್ಬಿನವರು ಹೊತ್ತಿದ್ದರು.

* * *

ಬಟ್ಲರ್ಸ್ ಮತ್ತು ಅಡಿಗೆಯವರು ನನ್ನ ಕಾಲ ಮೇಲೆ ಬಿದ್ದರು. ನಾನು ಒಪ್ಪಲಿಲ್ಲ.

ಸಿದ್ಧಾರ್ಥನ ಕಾಲ ಮೇಲೆ ಹೊರಳಾಡಿ ನಂತರ ನನ್ನ ಕ್ಷಮೆ ಕೇಳಿದಾಗಲೇ ನಾನು ಕ್ಲಬ್ಬಿನ ನಿರ್ಣಯದ ವಿರುದ್ಧ ಮತ್ತೆ ಅವರ ಬಗ್ಗೆ ಶಿಫಾರಸು ಮಾಡಿದ್ದು.

* * *

ಕ್ರೀಂ ಆಫ್ ದಿ ಸೊಸೈಟಿ.

ಎಂಥ ಹೆಸರು! ಇದರ ಸ್ವರೂಪ ನಿಜಕ್ಕೂ ಕೆಲಿಡಿಯೋಸ್ಕೋಪದಂತೆ ಈ ಸಮಾಜದ ಕೆನೆಯು ಕೆಳಗೆ ಬರಿ ಕೆಸರೇ ಇದೆ ಎಂದು ತಿಳಿದಿದ್ದ. ಅದರೆ...

ಈ ಕೆಸರಿನಲ್ಲೂ ಅಪ್ಪಾರಾವ್, ಭಾರತಿಯಂತಹ ಕಮಲಗಳೂ ಇವೆ. ಕ್ರೀಂ ನನಗೇನು ಕೊಟ್ಟಿದೆ?

ಬರಿ ಜೀವನದ ಆಧಾರವನ್ನಲ್ಲ. ಅಪ್ಪಾರಾವ್, ಭಾರತಿಯಂತಹ ಜೀವಕ್ಕೂ ಮಿಗಿಲಾಗಿ ಸ್ನೇಹಿತರನ್ನು ಸಿದ್ಧಾರ್ಥ ಮುಟ್ಟ ಸಂಗಾತಿಯನ್ನು.



★ ಅನಂತ ಕಲ್ಲೋಳ

# ಗುಂಡನಿಗೆ ಮಾರುತಿ ಪ್ರಸನ್ನನಾದ

ಅವಳು ಹಾವಿನಂತೆ ಬಳುಕಿ ಕುಣಿಯುತ್ತಿದ್ದಳು. ಹಿನ್ನೆಲೆಯ ವಾದ್ಯ ಮೇಳ ಮಾದಕ ಸಂಗೀತವನ್ನು ಪೂರೈಸುತ್ತಿತ್ತು. ಸುತ್ತಲು ಮಸುಕು ಮಸುಕು ಕತ್ತಲೆ. ಅವಳ ಅಂಗಾಂಗಗಳ ಮೇಲೆ ಬೆಳಕಿನ ಹೊಳೆ ಕೇಂದ್ರೀಕೃತವಾಗಿ ಹರಿಸಲ್ಪಡುತ್ತಿತ್ತು. ಅವಳ ಚಲನವಲನವನ್ನು ಬೆಳಗಿಸಲೆಂದು ಬಣ್ಣಬಣ್ಣದ ಪ್ರಕಾಶ ಧಾರೆಯನ್ನು ಎರೆಯುವಂತೆ ವಿದ್ಯುತ್ ಗುಂಡಿಗಳನ್ನು ನಿಯಂತ್ರಿಸಲಾಗುತ್ತಿತ್ತು. ಮಾದಕತೆಯೇ ಮೂರ್ತಿವೆತ್ತಂತೆ ಆ ನರ್ತಕಿ ತನ್ನ ಹಾವ ಭಾವಗಳಿಂದ ಪ್ರೇಕ್ಷಕರ ಮನಸ್ಸನ್ನು ಸೆರೆಹಿಡಿದಿದ್ದಳು; ಮತ್ತು ಗುಂಡ ಕೈಯಲ್ಲಿ ಸೆರೆಯ ಲೋಟಾ ಹಿಡಿದಿದ್ದನು. ಬಿಟ್ಟ ಬಾಯಿ ನಟ್ಟ ಕಣ್ಣುಗಳಿಂದ ನರ್ತಕಿಯನ್ನು ನುಂಗುವಂತೆ ನೋಡುತ್ತಿದ್ದ ಗುಂಡ. ನಡುನಡುವೆ ಪಾನೀಯವನ್ನು ಗುಟುಕರಿಸಿ ಮುಂದಿದ್ದ ತಟ್ಟೆಯಲ್ಲಿಯ ಪದಾರ್ಥವನ್ನು ಆಗಾಗ ಸೇವಿಸುತ್ತಿದ್ದ. ಗುಂಡ ಕ್ಯಾಬರೆ ನೋಡಲು ಬಂದಿದ್ದನು.

"ಕಣ್ಣು, ಕಿವಿ, ಕಾಲ್ಗಳು ನೆಟ್ಟಗಿದ್ದಾಗಲೇ ಎಲ್ಲ ಅನುಭವಗಳನ್ನು ಪಡೆಯ ಬೇಕು. ಅದಕ್ಕ ಕ್ಯಾಬರೆ ನೋಡಬೇಕಂತಮಾಡೀನಿ. ಇಂದ ಕರ್ಕೊಂಡ್ ಹೋಗ್ರಿ ಏನೋ ಪಾಟೀಲ" ಗುಂಡ ಮಧ್ಯಾಹ್ನ ಕಛೇರಿಯಲ್ಲಿ ತನ್ನ ಸಹೋದ್ಯೋಗಿಗೆ ದುಂಬಾಲು ಬಿದ್ದಿದ್ದ.

"ನಾನೇನೋ ನಿನ್ನ ಕರ್ಕೊಂಡು ಹೋಗಬಹುದೋ ಆದ್ರ ಸತ್ಯ ಭಾಮಾ ವೈನಿಗೆ ಇದು ಗೊತ್ತಾತು ಅಂದ್ರ ನನ್ನ ಕುಲಕೋಟಿ ಉದ್ಧಾರ ಆದಾವು" ಪಾಟೀಲ ಶಂಕಿಸಿದ್ದ.

"ನನ್ನ ಸತ್ಯಭಾಮಾ ತವರಿಗೆ ಹೋಗ್ಯಾಳ ಬಿಡೋ, ನಾಲ್ಕು ದಿವಸ ಆತು ಇನ್ನೂ ತಿರುಗಿ ಬರಲಿಕ್ಕ ೧೦-೧೫ ದಿನಗಳು ಬೇಕು. ಅದಕ್ಕ......"

"ಆದಕ್ಕೆ ಕ್ಯಾಬರೆ ನೋಡಬೇಕೆಂದು ಬಯಕೆ ಹತ್ತೇದೇನೋ ಹ ಹsss ಪರವಾ ಇಲ್ಲಾ ನಾನೇನು ಕರ್ಕೊಂಡು ಹೋಗುದದ ಕ್ಯಾಬರೇಕ್ಕೆ ನೀನೇ ಹೋಗಿ ಬಾ ಯಾವುದಾದ್ರು ಕ್ಯಾಬರೆ ಹೋಟೆಲ್ಲಿಗೆ."

"ಹೋಗಬಹುದೋ; ಆದ್ರ ಒಬ್ಬನ ಹೋಗಲಿಕ್ಕೆ ಹ್ಯಾಂಗ ಹ್ಯಾಂಗೋ ಆಗ್ತದೋ. ಯಾಕಂದ್ರ ಇದ್ಕ ಮೊದಲನೆ ಸರತಿ ನೋಡು ನಾ ಹೋಗೋದು. ನಾ ಎಂದೂ ಹೋಗಿಲ್ಲ ಇಲ್ಲೀತನಕ ನಾ ಹೋಗಿಲ್ಲ, ನಮ್ಮಪ್ಪ ಹೋಗಿಲ್ಲ, ನಮ್ಮಜ್ಜ ಹೋಗಿಲ್ಲ......"

"ಅಂದ್ರ ಎಲ್ಲಾರೂ ಬರಾಪರೇನು ಮತ್ತ ಈ ಹೊತ್ತು?" ಪಾಟೀಲನ ಶಂಕೆ ಇನ್ನೊಂದು ಮರಿ ಹಾಕಿತು.

"ಛೀ ನಿನ ಮಂಜ್ಯಾಳ ಹೋಗ್ರಾ ಅವರ್ನೆಲ್ಲಾ ಯಾಕ ಕರಕೊಂಡು ಬರಲ್ಯೊ ಆದೇನು ಕಾಶಿಯಾತ್ರ ಏನು; ಹಿರಿಯರ್ನೆಲ್ಲ ಕರಕೊಂಡು ಬರಲಿಕ್ಕೆ? ನಾ...... ನಾನು ಮಾತ್ರ ಬರಬೇಕು ಅಂತಾ ಮಾಡೇನಪ್ಪಾ ನೀನು ಇಂಥ ಬಾಬಿನಲ್ಲಿ ಅನುಭವಸ್ತ, ತಿಳುವಳಿಕೆ ಇದ್ದಾಂವ. ಯೋಗ್ಯ ಮಾರ್ಗದರ್ಶನ ಮಾಡುವಂಥಾತ ಅಂತ ತಿಳ್ಕೊಂಡು ಕೇಳಿದ್ರ ನೀ ತಮಾಶಿ ಮಾಡ್ಲಿಕತ್ತಿಯಲ್ಲೋ ಮಾರಾಯ"

"ತಮಾಶಿ ಮಾತ ಅಲ್ಲೋ ಗುಂಡಾ ಆದ್ರ ಎಂದಿಲ್ಲದ ನೀನು ಇಂದ ಇಂಥ ಮಾತು ತೆಗೆದದ್ದ ನೋಡಿದ್ರ ನೀನು ನನ್ನ ತಮಾಶಿ ಮಾಡ್ತಿ ಏನೋ ಅಂತ ಸಂಶಯ ಬಂತಪ್ಪಾ ನನಗ".

"ಅಂದ್ರ ಹಿಂಗ ಅದ ಪಾಟೀಲ; ನನ್ನ ಹೆಂಡತಿ ಸತ್ಯಭಾಮಾ ಊರಿಗೆ ಹೋಗಿ ನಾಲ್ಕು ದಿವಸಾತು. ಮನ್ಯಾಗ ಕುಳಿತ ಬ್ಯಾಸರ........."

ಗುಂಡ ತನ್ನ ಅಳಲನ್ನು ತೋಡಿಕೊಳ್ಳುತ್ತಿದ್ದಂತೆ "ಮೂರು ದಿನದಿಂದ ಉಪವಾಸ ಇದ್ದೀನಿ; ಏನಾದರೊಂದಿಷ್ಟು ಭಿಕ್ಷಾ ನೀಡ್ರೀssss" ಎಂದು ದೈನ್ಯದಿಂದ ಬಾಯಿ ಬಿಡುವ ಭಿಕಾರಿಯ ಮುಖಭಾವ ಪಾಟೀಲನ ಕಣ್ಮುಂದೆ ಮೂಡಿ ಬಂದಂತಾಗಿ,

"ಹೂಂ, ಹೂಂ, ಸರಿ, ಬಿಡೋ. ಇಂದ ಕ್ಯಾಬರೆ ನೋಡಲಿಕ್ಕೆ ಹೋಗೋಣಂತ. ಅದಕ್ಯಾಕ ಇಷ್ಟ ದೈನ್ಯಾಸ ಪಡತಿ" ಎಂದು ಭರವಸೆ ನೀಡಿದ.

ಪಾಟೀಲನ ಭರವಸೆಯಿಂದ ಗುಂಡಣ್ಣ ಸಮಾಧಾನ ತಾಳಿದ. ಆತ ಈ ದಿನ ಸಾಯಂಕಾಲ ಲಗುಬಗೆಯಿಂದ ತಯಾರಾಗಿ ಮನೆಯಿಂದ ಹೊರ ಬೀಳಬೇಕು ಎನ್ನುವಾಗ,

"ಯಾಕೋ ಗುಂಡ, ಎಲ್ಲಿಯೋ ಹೊಂಟೆಯಲ್ಲಾ. ಇಂದ ಶನಿವಾರ. ಮಾರುತಿ, ಭಜನಿ, ಆರತಿ ಎಲ್ಲಾ ನೀನ ಮಾಡಬೇಕು ಅಂತ ಹೇಳ್ಯಾರ ನೋಡು" ಗುಂಡಣ್ಣನ ತಾಯಿ ಕೂಗಿ ಹೇಳಿದಳು.

"ಕೇಳಿದಿ ಏನ ಎಲ್ಲಿಗೆ ಹೊಂಟೇನಿ ಅಂತ ? ಆಧಾಂಗಾತು ನನ್ನ ಕೆಲ್ಸ ಇನ್ನ ಭಜನಿ, ಆರತಿಯ ಕೆಲಸಾನೂ ನನ್ನ ಪಾಲಿಗೆ ಏನ ಈ ದಿನ? ಎಲ್ಲಾನೂ ಕೂಡಿಯೇ ಬರ್ತಾವ..." ವಟಗುಡುತ್ತ ಗುಂಡಣ್ಣ ಹಿಂದಡಿ ಇಟ್ಟ.

"ಏನ್ ಎಲ್ಲಾನ ಕೂಡಿ ಬಂದಾ ವೋ ಗುಂಡ? ಯಾಕ ತ್ರಾಸ ಮಾಡ್ಕೋತಿಯೋ ಇಷ್ಟು?"

"ಇಂದ ಕಛೇರಿಗೆ ಹೋಗಬೇಕಾಗೇದ ಒಂದು ವರ್ಷದ ಲೆಕ್ಕಪತ್ರ ತಾಳೆ ಹಚ್ಚಿ ನಾಳಿನ ದಿವಸ ವರದಿ ಕಳಿಸ ಬೇಕಾಗೇದ ಮುಂಖ್ಯ ಕಛೇರಿಗೆ. ನಿಮಗೇನು, ಮನ್ಯಾಗ ಇರ್ತೀರಿ; ಭಜನಿ, ಪೂಜಿ, ಆರತಿ, ನೆನಪಾಗ್ತಾವ."

"ಹಾಂಗ ಅನಬಾರದೋ, ದೇವರ ಕೆಲಸಕ್ಕ. ಇಂದ ಶನಿವಾರ ಅದಪಾ, ಮುಖ್ಯಪ್ರಾಣನ ಭಜನಿ, ಆರತಿ, ಆಗಬೇಕಪಾ ಬಾಳಾ. ನಿಂದು ಏನಾರೆ ಜರೂರೀ ಕೆಲಸಾ ಇದ್ರ ಸಂಕ್ಷೇಪವಾಗಿ ಮುಗಿಸಿ ಬಿಡು. ಭಜನಿ ಕಾರ್ಯಾನ ಪೂರಾ ಬಿಡೋದರಕ್ಕಿಂತ ಸ್ವಲ್ಪದ್ರಾಗ ಮಾಡೋದು ಕೆಟ್ಟೇನಲ್ಲಾ" ತಾಯಿ ಹೇಳಿದ್ದಳು

ಗುಂಡ ಲಳಗೀ ಚೊಣ್ಣ ಕಳಚಿ ಮತ್ತ ಕೈ ಕಾಲು ತೊಳಕೊಂಡು ಮಡಿ ಉಟಕೊಂಡು ದೇವರ ಮನೆ ಸೇರಿ ಮಾರುತಿಯ ಭಜನೆ ಕಾರ್ಯಕ್ರಮ ಸಾಂಗಗೊಳಿಸಿದ. ಆರತಿ ಮುಗಿಸಿ ಗಡಿಬಿಡಿಯಿಂದ ಎಲ್ಲರಿಗೂ ಪನಿಯಾರ ಹಂಚಿದ. ಪ್ರಸಾದ ತೆಗೊಳ್ಳುವಾಗ ತಾಯಿ ಅಂದಳು.

"ಹೂಂ, ಗೆದ್ದಾಂಗಾತು ಬಿಡು ಹೀಂಗ ತಪ್ಪದ ಪೂಜಿ, ಪುನಸ್ಕಾರ ಮಾಡಿದ್ರ ನಿನಗೆಲ್ಲ ಛಲೋ ಆಗ್ತದ. ಮಾರುತಿ ರಾಯ ಪ್ರಸನ್ನನಾಗ್ತಾನ. ನಿನ್ಗ್ಯಾವ ತೊಂದ್ರಿ ಬರೂದಿಲ್ಲ."

"ಆಯ್ತು ಬಿಡು. ಆಗೋ ತೊಂದ್ರಿ ಎಲ್ಲಾ ಈಗಾಗಲೇ ಆಗಿ ಬಿಟ್ಟಾವ. ಈಗ ಸಾಕಷ್ಟು ತಡಾ ಆತು. ನಾನು ಕಛೇರಿಗೆ ಹೋಗಬೇಕು. ತುರ್ತು ಕೆಲಸ ಅದ.

"ರಾತ್ರಿ ಹೊತ್ತಿನಾಗ ಎಂಥಾದ್ದೋ ತುರ್ತು ಕೆಲಸ ಕಛೇರಿಯಾಗ? ಯಾಕ

ಷ್ಟು ಅವಸರಾ ಮಾಡ್ತೀ? ಒಂದ್ ತುತ್ತು ಅನ್ನ ಊಟ ಮಾಡಿಕೊಂಡು ಹೋಗು...

"ತಗದಿ ಏನು ಮತ್ತ ನಿನ್ನ ರಗಳೀನ? ಊಟ ಬ್ಯಾಡ, ಗೀಟ ಬ್ಯಾಡ. ಅಲ್ಲೇ ಎಲ್ಲ್ಯರ ಮಾಡ್ತೀನಿ ಹಸಿವ್ಯಾತಂದ್ರ. ಸುಮ್ಮ ಸುಮ್ಮನ ತಡೀ ಬ್ಯಾಡ ನನ್ನ ಗಡಿಬಿಡಿ ವ್ಯಾಳ್ಯಾದಾಗ."

"ಹೂಂ, ಹೋಗಿ ಬಾಪ್ಪಾ ಹಂಗಾರ; ನಾನ್ಯಾಕ ತಡೀಲಿ ನಿನ್ನ ಜರೂರೀ ಕೆಲಸದಾಗ? ಹೀಂಗs ನೋಡ್ರಿ ನಮ್ಮವ್ವ. ಸತ್ಯಭಾಮಾ ಊರಿಗೆ ಹೋದಾಗಿನಿಂದ ಗುಂಡನ ಸಿಡಿಪಿಡಿತನ ಭಾಳಾಗೇದ..." ತಾಯಿಯ ವಟ ವಟ ನಡೆದೇ ಇತ್ತು. ಅತ್ತ ಗಮನ ಕೊಡದೇ ಗುಂಡ ಹೊರ ನಡೆದೇಬಿಟ್ಟ.

ಗುಂಡ ಗಡಿಬಿಡಿಯಿಂದ ಓಡೋಡಿ ಬಂದರೂ ಪಾಟೀಲ ಧನಿ ಏರಿಸಿ ಕೇಳಿಯೇ ಬಿಟ್ಟ,

"ಅಲ್ಲೋ ಗುಂಡ ಇಷ್ಟ ತಡಾ ಮಾಡಿ ಬಂದ್ರ ಹ್ಯಾಂಗಪ್ಪಾ? ಎಂಟೂವರೀ ಆತೀಗ. ಈವ್ನಿಂಗ್ ಸೆಷನ್ ಶುರು ಆಗಿ ಒಂದೂವರಿ ತಾಸಾತೀಗ, ಇನ್ನು ಹೋಗಿ ಏನು ಪ್ರಯೋಜನ. ಸುಮ್ಮನ ದುಡ್ಡು ಹಾಳು."

ಒಮ್ಮೆಲೆ ನಿರಾಶೆಯ ಆಳ ಭಾವಿಯಲ್ಲಿ ಜಾರಿ ಬಿದ್ಹಾಂಗಾತು ಗುಂಡಣ್ಣನಿಗೆ.

"ಭಾಳ ಆಸೇದಲೆ ಬಂದೀನೋ ಪಾಟೀಲ. ಹಾಳು ಹಣಮಂತದೇವರ ವಾರ ಅಂತ ಭಜನಿ, ಆರತಿ ಒಂದು ನಡಕೀ ಬಂತು. ಅದ್ಕ ತಡಾ ಆತು ಮಾರಾಯ." ಅಳು ಮುಖಕ್ಕೆ ಬಂದ ಗುಂಡಣ್ಣ.

"ಆದ್ರ ಆತು ಬಿಡು" ಈವ್ನಿಂಗ್ ಸೆಷನ್ ತಪ್ಪಿದರ ತಪ್ಪಲಿ, ರಾತ್ರಿ ಹತ್ತಕ್ಕ ಶುರು ಆಗ್ತದಲ್ಲ, ಕೊನೇ ಸೆಷನ್ನು ಅದಕ್ಕ ಹೋಗೋಣಂತ. ಹನ್ನೆರಡರ ತನಕ ನಡೀತದ ಪ್ರೋಗ್ರಾಂ. ನೋಡೋದು ನೋಡಿ ಪೂರ್ತಿ - ನೋಡೋದು ಒಳ್ಳೇದಲ್ಲ?"

"ಹೌದೌದು; ಪೂರ್ತಿ ಅಂದ್ರ, ಆಗದೀ ಪೂರ್ತಿ ನೋಡೋದು ನೋಡಪಾ. ಆದ್ರ ಏನೋ; ಹತ್ತು ಗಂಟೇಕ್ಕ ಶುರು ಆಗ್ತದ. ಅಂದ್ರ ಇನ್ನೂ ಒಂದೂವರಿ ತಾಸು ವ್ಯಾಳ್ಯಾ ಕಳೀಬೇಕಲ್ಲೋ?"

"ಇಷ್ಟ್ಯಾಕ ಗಡಿ ಬಿಡಿ ಮಾಡತಿಯೋ, ಹಾಂ ಹಾಂ ಅನ್ನೂದರಾಗ ಒಂದೂವರಿ ತಾಸು ವ್ಯಾಳ್ಯಾ ಸರಿತದ. ಅದಕ್ಯಾಕ ಇಷ್ಟು ಚಿಂತೀ ಮಾಡತಿ ?"

ಪಾಟೀಲ ಅಂಧಾಂಗ "ಹಾಂ ಹಾಂ ಅನ್ನೂದರಾಗ ವೇಳೆ ಕಳೆಯಿತು. ಈ ಅವಧಿಯಲ್ಲಿ ಪಾಟೀಲ ಹೇಳಿದ್ದಕ್ಕ ಗುಂಡ ಹೂಂ ಹೂಂ ಅಂತ ಹೂಂಕರಿಸುತ್ತಿದ್ದ.

ಪಾಟೀಲನೊಡನೆ 'ನಿಪೋಲಿ' ಹೊಟೇಲಿನಲ್ಲಿ ಪ್ರವೇಶಿಸುತ್ತಲೇ ಗುಂಡನಿಗೆ ಸ್ವರ್ಗದಲ್ಲಿ ಅಡಿ ಇಟ್ಟಂತೆ ಆನಂದವಾಯಿತು. ಒಂದು ಮೂಲೆಯ ಆಸನದಲ್ಲಿ ಕುಳಿತುಕೊಂಡು ಎದುರಿಗೆ ಬಂದ ಪಾನೀಯ ಸ್ವೀಕರಿಸುತ್ತಿದ್ದಂತೇ ಗುಂಡ ಕೇಳಿದ.

ಯಾಕೋ ಭಾಳ ಮಸಕ ಮಸಕ ಅದ ಅಲ್ಲೋ; ಶೋ ಸರಿಯಾಗಿ ಕಾಣ್ತದೋ ಇಲ್ಲೋ.

"ಶುರು ಆದ ಮ್ಯಾಲ ನಿನಗ ಗೊತ್ತಾಗ್ತದ ಸುಮ್ಮನ ಕುಡಿಯೋ"

"ಹೌದು, ಆದ್ರ ಇಷ್ಟ ಕತ್ತಲೀ ಯಾಕ?" ಸಣ್ಣ ಬಲ್ಬ ಹಾಕ್ಯಾರೋ ಏನು ಲೋ ವೋಲ್ಟೇಜೋ."

"ಛೇ, ನೀನು ಭಾಳ ಚೌಕಾಶಿ ಮಾಡಾಂವಪ್ಪಾ.ಎಂಥದ್ದರೆ ಹಾಕಲಿ. ಅದರಿಂದ ನಿನ್ನ ಫಾಯದೆ ಲುಕ್ಸಾನು ಏನು?

"ಮುಂದ ತಂದಿಟ್ಟ ಪದಾರ್ಥದೊಳಗ ಹುಳಗಿಳಾ, ಕೂದಲಗೀದಲಾ ಬಿದ್ದಾವೇನು ಅಂತ. ಏನೂ ಕಾಣಾಂಗಿಲ್ಲ ಈ ಮಸಕು ಮಸಕಿನ ಬೆಳಕಿನಾಗ."

"ಛೀ ನಿನ ಮಂಜಾಳ ಹುಗಿಲಿ. ಎಂಥಾ ಹೊತ್ತಿನಾಗ ಎಂಥಾ ಮಾತು ತಗೀತಿ? ಹುಳಾ ಗಿಳಾ ಮರೆ ಮಾಚಲಿಕ್ಕ ಮಾಡ್ಯಾರ ಅಂತ ತಿಳಿದಿ ಏನು ಈ ಮಸಕು ಕತ್ತಲಿ? ಇಲ್ಲಿ ಬಂದ ನಿನ್ನಂಥ ಮಹಾನುಭಾವರ ಮುಖಗಳು ಮಸಕು ಮಸಕು ಕತ್ತಲಿಯೊಳಗ ಮರೆಯಾಗಿ ಮರ್ಯಾದಿ ಉಳಿಯಲಿ ಅಂತ ಮಾಡ್ಯಾರ ಈ ವ್ಯವಸ್ಥೆ. ಸುಮ್ಮನ ಕುಡಿ ಮಾತಾಡದ."

ಗುಂಡ ಮುಂದೆ ಮಾತನಾಡದೆ ಎದುರಿಗಿನ ಪಾನೀಯವನ್ನು ಗುಟುಕರಿಸ ತೊಡಗಿದ. ಶೋ ಆರಂಭವಾಯಿತು. ಆತನ ಕಣ್ಮುಂದೆ ಕ್ಯಾಬರೆ ನರ್ತಕಿಯ ನರ್ತನದ ನೋಟ ಮಾತ್ರ ಸ್ಥಿರವಾಯಿತು.

ಅವಳು ಹಾವಿನಂತೆ ಬಳುಕಿ ಕುಣಿಯುತ್ತಿದ್ದಳು. ಹಿನ್ನೆಲೆಯ ವಾದ್ಯಮೇಳ ಮಾದಕ ಸಂಗೀತವನ್ನು ಪೂರೈಸುತ್ತಿತ್ತು. ಸುತ್ತಲೂ ಮಸಕು ಮಸಕು ಕತ್ತಲೆ. ಅವಳ ಅಂಗಾಂಗಗಳ ಮೇಲೆ ಬೆಳಕಿನ ಹೊಳೆ ಕೇಂದ್ರೀಕೃತವಾಗಿ ಹರಿಸಲ್ಪಡುತ್ತಿತ್ತು. ಅವಳ ಚಾಕಚಕ್ಯತೆಯ ಮತ್ತು ವಿದ್ಯುತ್ ಸಮ ಚಾಪಲ್ಯದ ಚಲನವಲನಗಳನ್ನು ಬೆಳಗಿಸಲೆಂದು ಬಣ್ಣ ಬಣ್ಣದ ಪ್ರಕಾಶಧಾರೆಯನ್ನು ಎರೆಯುವಂತೆ ವಿವಿಧ ಬಣ್ಣದ ಬೆಳಕನ್ನು ಹೂರಿಸಲಾಡುತ್ತಿತ್ತು. ಮಾದಕತೆಯೇ ಮೈವೆತ್ತಂತೆ ಆ ನರ್ತಕಿ ತನ್ನ ಹಾವ ಭಾವಗಳಿಂದ ಪ್ರೇಕ್ಷಕರ ಮನಸ್ಸನ್ನು ಸೆರೆ ಹಿಡಿದಿದ್ದಳು. ಗುಂಡ ಕೈಯಲ್ಲಿ ಸೆರೆಯ (ವ್ಹಿಸ್ಕಿಯ) ಲೋಟಾ ಹಿಡಿದು ಬಿಟ್ಟ ಬಾಯಿ ನಟ್ಟ ಕಣ್ಣುಗಳಿಂದ ನರ್ತಕಿಯನ್ನು ನುಂಗುವಂತೆ ನೋಡುತ್ತಿದ್ದ.

ಪಾಪ, ಕುಣಿಯುವಾಗ ಅಡಚಣೆ ಆಯಿತೋ ಏನೋ ನರ್ತಕಿ ತನ್ನ ಮೇಲ್ ಬಟ್ಟೆಗಳನ್ನು ಒಂದೊಂದಾಗಿ ಕಳಚಿದಳು. ಈಗ ಕೇವಲ ಸೊಂಟ ಪಟ್ಟಿ ಮತ್ತು ಎದೆಪಟ್ಟಿಯಿಂದ



ಆವೃತ್ತವಾದ ದೇಹ ಮಣಿಯುತ್ತಿತ್ತು. ಕುಣಿಯುತ್ತಿತ್ತು. ಮತ್ತು ಗುಂಡನಂತೆ ಕುಡಿದು ಮತ್ತರಾದ ಪ್ರೇಕ್ಷಕ ವರ್ಗ ಆನಂದದಿಂದ ತಣಿಯುತ್ತಿತ್ತು. ಕೇಕೆ ನಗು, ಸಿಳ್ಳು, ಎಲ್ಲೆಡೆಗೆ ಅಖಂಡ ಮಾದಕತೆಯ ಸಾಮ್ರಾಜ್ಯ!

"ಶೋ"ದ ಕೊನೆಯ ಘಟ್ಟ ಮುಟ್ಟಿದಂತೇ ಪ್ರೇಕ್ಷಕ ವರ್ಗದಲ್ಲಿ ಭಾವೋದ್ವೇಗದ, ಉದ್ರೇಕದ ಚರಮಸೀಮೆ ಮುಟ್ಟಿದಂತಿತ್ತು. ಹೊಟ್ಟೆಯೊಳಗಣ ಪಾನೀಯವೂ ಈ ಹುಚ್ಚು ಉದ್ರೇಕಕ್ಕೆ ಪೆಟ್ರೋಲ್ ಆಗಿತ್ತು. ನರ್ತಕಿ ನರ್ತನದ ಕೊನೆಯ ಭಾಗವೆಂದು ಕುಣಿಯುತ್ತ, ಕುಣಿಯುತ್ತ ಪ್ರತಿ ಮೇಜಿನ ಹತ್ತಿರ ಹೋಗಿ ಅಲ್ಲಿ ಕುಂಡಿಸಿದ ಪ್ರತಿಯೊಬ್ಬ ಪ್ರೇಕ್ಷಕನಿಗೂ ಸಾಮೀಪ್ಯದ ಸಹಾನುಭವ ನೀಡಿ ಮರಳುತ್ತಿದ್ದಳು. ಗುಂಡನ ಮೇಜಿನ ಸರತಿ ಬಂದಿತು. ಗುಂಡಣ್ಣ ಬಾಯ್ದೆರೆದು ಕುಳಿತಿದ್ದ. ಮೈ ಎಲ್ಲ ಕಣ್ಣಾಗಿ ನರ್ತಕಿಯು ಬರುವುದನ್ನು ನಿರೀಕ್ಷಿಸುತ್ತಿದ್ದ. ಅವಳು ಕುಣಿಯುತ್ತ ಕುಣಿಯುತ್ತ ಅವನೆಡೆಗೆ ಬರತೊಡಗಿದಳು, ಬಂದಳು ಅದೋ ಬಂದೇ ಬಿಟ್ಟಾಳು. ಗುಂಡ ಕಾಲ ಪ್ರಜ್ಞೆಯನ್ನು ಮರೆತು ಅವಾಕ್ಕಾಗಿ ಕುಳಿತಿದ್ದ. ನರ್ತಕಿ ಬಂದವಳೇ ಬಲಗಣ್ಣು ಮಿಟುಕಿಸಿ ಗುಂಡನ ಮುಖದ ಹತ್ತಿರ ಹತ್ತಿರ..."

ಗುಂಡನ ಗಲ್ಲದ ಮೇಲೆ ರೇಷ್ಮೆ ವಸ್ತ್ರ ಹಗುರಾಗಿ ಸವರಿದ ಭಾಸವಾಯಿತು. ನೋಡ ನೋಡುತ್ತಿದ್ದಂತೆ ಆತನ ಬಾಯಲ್ಲಿಯ ಸಿಗರೇಟು ಸೆಳೆದುಕೊಂಡು ನರ್ತಕಿ ಅದನ್ನು ಸೇದಿ ಅವನೆಡೆಗೆ ಹೊಗೆ ಊದಿ ಹೋಗಿಯೇ ಬಿಟ್ಟಳು,

"ಪಾಟೀಲಾ, ಸತ್ತೆ ಪೋ ನಾ ಸತ್ತೆ. ಕೊಂದಬಿಟ್ಟಳು ಮಾರಾಯ್ರು. ಏನು ಕಣ್ಣು, ಏನು ಸ್ಪರ್ಶ, ಏನು ಬಳುಕು, ಏನು ಥಳಕು!.." ಗುಂಡ ಬಡ ಬಡಿ ಸುತ್ತಿದ್ದ.

ಶೋ ಮುಗಿಯಿತು. ಎಲ್ಲರೂ ಹೊರ ಬಿದ್ದರು. ಪಾಟೀಲನಿಗೆ ಗುಂಡ ನನ್ನು ಸಾವಧಾನದಿಂದ ಕೋಣೆಗೆ ಕರೆದು ತರುವುದೇ ದೊಡ್ಡ ಸಾಹಸವಾಯಿತು.

"ಗುಂಡಾ ಈಗ ಮನೆಗೆ ಹೋಗ ಬ್ಯಾಡಾ. ನನ್ನ ಖೋಲಿಯೊಳಗ ಮಲಗಿ ಕೋ. ನಾಳೆ ಹೋದಿ ಅಂತ ಮನೆಗೆ."

"ಹೂಂ ಪಾಟೀಲಾ, ಹಾಂಗ ಮಾಡ್ತೇನಿ. ನಾಳೆ ಹೋಗ್ತೇನಿ ಮನೆಗೆ. ಇಂದ ಇಲ್ಲೇ ಮಲಗ್ತೇನಿ. ಮನೀಗೆ ಹೋದ್ರ, ಮಾರುತಿ ಪೂಜೀ ಮಾಡ್ಲಿಕ್ಕೆ ಹಚ್ಚ್ಯಾಳ ಅವ್ವ. ಮಾರುತಿ ಪ್ರಸನ್ನ ಆಗ್ತಾನ. ಭಜನಿ ಮಾಡು, ಆರತಿ ಮಾಡು ಅಂತಾಳ. ಆಕಿ ಮಾತು ಕೇಳಿ ಸುಮ್ನ ತಡಾ ಮಾಡಿ ಬಂದೆ. ಇಲ್ಲಾದರ ಮೊದಲಿನ ಶೋನೂ ನೋಡ್ತಿದ್ನಿ. ವಾ ವಂಸ್ತ ಮಜಾ ಆತಪಾ. ಏನು ಕುಣಿತ, ಏನ್ ಮಣಿತ! ಏನು ದೇಹ, ಎಂಥಾ ರೂಪಾ! ಪಾಟೀಲ ಕಡೀಕ ನನ್ನ ಹತ್ರ ಬಂದು ಕಣ್ಣು ಹೊಡೆದ್ಲೋ ಮಾರಾಯ್ರು; ಆಯುಷ್ಯದೊಳಗ ಇಲ್ಲೀತನಕ ಯಾವ ಹೆಣ್ಣೂ ನನಗ ಕಣ್ಣ ಹೊಡೆ ದಿರಲಿಲ್ಲೋ. ವ್ಯರ್ಥ ಆಗಿತ್ತು ನನ್ನ ಬದುಕು. ಇಷ್ಟ ದಿನಾ. ಅಷ್ಟ ಅಲ್ಲ, ನನ್ನ ಗಲ್ಲಕ್ಕ ಗುಮಾನ ತುಟಿ ಸವರಿದಳಲ್ಲೋ ಹಾ ಹಾ ಏನ್ ಥ್ರಿಲ್ಲು. ಏನ ಮಾತು! ನನ್ನ ಬಾಯಾ ಗಿನ ಸಿಗರೇಟು ಕಸಕೊಂಡು ಅದನ್ನ ಸೇದಿ ಉಫ್ ಅಂತ ನನ್ನ ಮಾರಿಮ್ಯಾಗ ಹೊಗಿ ಬಿಟ್ಟಳಲ್ಲೋ ಹಾ ಹಾ ..." ಗುಂಡ ಬಡ ಬಡಿಸುತ್ತಲೇ ಇದ್ದ.

ಪಾಟೀಲನ ಕೋಣೆ ಬಂದಿತು. ಗುಂಡ ನಿಗೆ ಪಾಟೀಲ ಹಾಸಿ ಕೊಟ್ಟ.

"ಇನ್ನ ವಟಗುಡುತ್ತ ಕೂಡ್ರಬ್ಯಾಡ. ಮಲಗಿಕೋ ಸ್ವಲ್ಪ. ನಿದ್ದಿ ಆತು ಅಂದ್ರ ಆರಾಮ ಆಗ್ತದ" ಪಾಟೀಲ ಹೇಳಿದ.

"ಆರಾಮ ಆಗ್ತದ, ಆಗ್ತದ. ನಾಳೆ ಮತ್ತ ನೋಡಲಿಕ್ಕೆ ಹೋಗೋಣು. ಆ ಡ್ಯಾನ್ಸು. ಅವಳ ಕಣ್ಣು ಹೊಡೆತ, ಆ ಸ್ಪರ್ಶ..." ಗುಂಡ ಬಡ ಬಡಿಸುತ್ತಿರು ವಾಗಲೇ ಪಾಟೀಲ ವಿದ್ಯುತ್‌ಗುಂಡಿ ಒತ್ತಿ ಮುಸುಕೆಳೆದು ಮಲಗಿಬಿಟ್ಟ.

ಬೆಳಗಾಯಿತು. ಬೆಳಕು ಹರಿ ಯಿತು. ಕಿಟಕಿಯಿಂದ ತೂರಿ ಬಂದ ದಿನಪತ್ರಿಕೆ ನೇರವಾಗಿ ಗುಂಡನ ಮುಖದ ಮೇಲೆ ಬಿದ್ದಿತು. ಆಗಷ್ಟೇ ಕಣ್ಣುಬಿಟ್ಟ ಗುಂಡ ಪತ್ರಿಕೆಯ ಮೇಲೆ ಕಣ್ಣು ಹಾಯಿಸಿದ. ಓದುತ್ತ ಓದುತ್ತಿದ್ದಂತೇ ಸಟಕ ನೇ ಎದ್ದು ಚೀರಿದ.

"ನೋಡೋ ಪಾಟೀಲ, ಈ ಸುದ್ದಿ ಕೇಳು. ಕ್ಯಾಬರೆ ನರ್ತಕಿ ಹುಡುಗಿಯಲ್ಲ ಹುಡುಗನಂತೆ."

ಪಾಟೀಲ ಪತ್ರಿಕೆ ಕೈಗೆತ್ತಿ ನೋಡಿದ ಗುಂಡ ಬೆರಳಿಟ್ಟ "ಕೊನೆಯಚ್ಚು" ಕಾಲಮ್ಮಿನ ಅಡಿಯಲ್ಲಿ ಪ್ರಕಟವಾದ ಸುದ್ದಿ ಓದಿದ.

"ನಿನ್ನೆ ರಾತ್ರಿಯ ನಂತರ ನಗರದ "ನಿಪೋಲಿ" ಹೊಟೆಲ್ಲಿನ ಕ್ಯಾಬರೆ ನರ್ತಕಿಯ ಕೋಣೆಯನ್ನು ಅಕ್ರಮವಾಗಿ ಪ್ರವೇಶಿಸಿದ ಯುವಕರಿಬ್ಬರಿಗೆ ಆಶ್ಚರ್ಯ ಕಾರಕ ನಿರಾಶೆ ಕಾದಿತ್ತು. ಕ್ಯಾಬರೆ ನರ್ತಕಿಯ ಮಿರಮಿರನೆ ಮಿಂಚುವ ಉದ್ದನ ಕೂದಲಿನ ವಿಗ್ ಮತ್ತು ಎದೆ ಹಾಗು ನಿತಂಬಗಳ ರಬ್ಬರ್ ಪ್ಯಾಡಿಂಗ್ ಪ್ರಸಾಧನ ಮೇಜಿನ ಮೇಲೆ ಬಿದ್ದಿದ್ದವು. ನರ್ತಕಿ ಇರಬೇಕಾದ ಮಂಚದ ಮೇಲೆ ೧೬-೧೭ ವರ್ಷ ಪ್ರಾಯದ ಎಳೆ ಯುವಕ ಪವಡಿಸಿದ್ದ. ಕ್ಯಾಬರೆ ನರ್ತನ ಮಾಡಿದವರು ಹೆಂಗ ಸಾಗಿರದೇ ಗಂಡಸು ಎಂಬುದು ಅರಿವಾಗುತ್ತಲೇ ಆ ಯುವಕರು ಹೊಟೆಲ್ಲಿನ ಮಾಲೀಕರೊಡನೆ ತಕ್ರಾರು ನಡೆಸಿ, ಹೆದರಿಸಿ, ಬೆದರಿಸಿ ರೊಕ್ಕ ಸುಲಿಯಬೇಕೆಂದಿದ್ದಾಗ ಹೊಟೇಲಿನ ಮಾಲೀಕರು ದೂರವಾಣಿಯ ಮುಖಾಂತರ ದೂರು ಸಲ್ಲಿಸಿ ಪೋಲೀಸ್‌ರನ್ನು ಕರೆಸಿ ಕೊಂಡರು. ಅಕ್ರಮ ಪ್ರವೇಶದ ಅಪರಾಧಕ್ಕಾಗಿ ಆ ಇಬ್ಬರು ಯುವಕ ರನ್ನು ಬಂಧಿಸಲಾಗಿದೆ. ಕ್ಯಾಬರೆ ನರ್ತ ಕಿಯ ವೇಷದಿಂದ ನರ್ತಿಸುತ್ತಿದ್ದ ಮಾರುತಿ ಎಂಬ ಹೆಸರಿನ ಆ ಕಿಶೋರನನ್ನು ಸುರಕ್ಷತತೆಯ ಕ್ರಮವಾಗಿ ಪೋಲೀಸರು ತಮ್ಮ ವಶಕ್ಕೆ ತೆಗೆದುಕೊಂಡಿದ್ದಾರೆ ಎಂದು ತಿಳಿದಿದೆ."

ಸುದ್ದಿ ಓದಿ ಗಹ ಗಹಿಸಿ ನಗುತ್ತ ಪಾಟೀಲನೆಂದ,

"ಅಂತೂ ಗುಂಡಾ ನಿನಗೆ ಮಾರುತಿ ಪ್ರಸನ್ನನಾದ. ಬಿಡು ಹ ಹ್ಹ ಹ್ಹsss

# ಅಧಿನಾಯಕ

ಅಲ್ಲಿ–ದಪ್ಪಂಗಿ, ದೊಡ್ಡಪಟಕ
ಕೈಯಲ್ಲಿ ಕೋಲು–ಹಿಡಿದು ನಿಂತವನು
ನಮ್ಮ ಜನಗಣಮನದ ಅಧಿನಾಯಕನವನು.
ಓದುಬರೆದವನಲ್ಲ, ಎಲ್ಲ ಬಲ್ಲವನಲ್ಲ
ಸೀದಾ ಸಾದಾ ಪ್ರಾಣಿ.
ಸಿದ್ಧಾಂತ ರಿದ್ಧಾಂತಗಳ ಗೊಡವೆಗ್ಹೋದವನಲ್ಲ
ಸರಳ ರೇಖೆಯು ಹಾಗೇ ಸರಳ ಮನುಷ್ಯ.
ಘಟಿಂಗ ಪಂಚರಲ್ಲಿಯೂ ಪರಮಾತ್ಮನಿರುವನೆಂದು ನಂಬಿದವನು
ಗೌಡ, ಗುಮಾಸ್ತೆ, ಶಾನಭಾಗ–
ತಳವಾರ ತಾಲೂಕದಾರನ ಮುಂದೆ ತಲೆಬಾಗಿದವನು
ತೋರಿಸಿದ ಟೀನು ಡಬ್ಬಿಯು ಒಳಗೆ
ಓಟು ಹಾಕಿದವನು.
ತಂತ್ರಕ್ಕೆ, ಮಂತ್ರಕ್ಕೆ ಸುಳ್ಳು ಸುಡುಗಾಡಗಳಿಗೆಲ್ಲ
ಬಲಿಯಾದವನು.
ಜೈ ಅಂದವನು, ಜಿಂದಾಬಾದ–
ಅಂದವನು.
ಪ್ರಸಂಗೋಪ್ಪತ್ತಿಗೆ ಛೀ, ಥೂ, ಮುರ್ದಾಬಾದ ಎಂದವನು
ಬೆರಳು ತೋರಿಸಿದ ಕಡೆಗೆ ನೇರ ನಡೆದವನು

ಸಂತೃಪ್ತ, ಬೇರೊಬ್ಬರಿಗಿಂತ ನಿರ್ಲಿಪ್ತ,
ಸಹಜಾಸಹಜ ಹುಟ್ಟಿಬೆಳೆದವನು.
ಪ್ರಶ್ನೆ ಕೇಳಿದವನಲ್ಲ, ಉತ್ತರ ಹೇಳಿದವನಲ್ಲ,
ಬಾಲ ತಿರುವಿದ ಕಡೆಗೆ ಹೊರಟು ನಿಲ್ಲುವ ಸಾಪ–
ಪ್ರಾಣಿ ಇವನು.



ಹಿತಬಯಸುವವರಿಂದ
ಪರೋಹಿತರಿಂದ, ದೇವರಿಂದ
ದೈತ್ಯ ದೆವ್ವಗಳಿಂದ
ಅವರಿವರಿಂದ ಕ್ಷಣಕ್ಷಣಕ್ಕೂ ಪ್ರಪೀಡಿತನಾದವನು.
ಸಾಂದವನಲ್ಲ, ಕೂಗಿದವನಲ್ಲ, ದೂರಿದವನಲ್ಲ,
ಕಾಡಿ ಬೇಡಿದವನಲ್ಲ, ಇದ್ದೂ ಇಲ್ಲದಂತೇ ಇದ್ದ ಮುಗ್ಧಜೀವ
ಈ ನೆಲದ ಮುಗ್ಧ ಮಣ್ಣಿನ ಹಾಗೆ ನಮ್ಮ ಜೀವ,
ಕ್ರಾಂತಿದ್ರೋಹಿಗೆ ತೀರ ಅಪರಿಚಿತನಿವನು
ಇವನು ಮಾಡಿದ್ದಾನೆ "ಕ್ರಾಂತಿ" ಈ ನೆಲದಲ್ಲಿ
ಕತ್ತಲೆಯ, ಗಹನಗುಹೆಯಲ್ಲಿ ಬಿದ್ದು
ಬಿಕ್ಕುತ್ತ, ನರಳುತ್ತ, ಸಾಯುತ್ತಿದ್ದ
ಮಣ್ಣು ಭೂಮಿಯನ್ನು ಗಾಳಿಬಿಸಲಿಗೆ ತಂದು
ನಿಲ್ಲಿಸಿದ್ದಾನೆ.
ಈಗ–ಪೂರ್ವದಿಕ್ಕಿನ ಕಡೆಗೆ ದೃಷ್ಟಿಹೊರಳಿಸಿ ನಿಂತು
'ಸೂರ್ಯ ಮೂಡುವ ದಿಕ್ಕು ಈ ಕಡೆಗೆಯೇ?' ಎಂದು
ಮೂಕ ಪ್ರಶ್ನೆಯನೊಂದು ಕೇಳಿ ನಿಂತಿದ್ದಾನೆ,

ಚಂದ್ರಕಾಂತ ಕುಸನೂರ



ತೆಲುಗು ಮೂಲ: ಕೊಂಪೆಲ್ಲ ವಿಶ್ವಂ
ಕನ್ನಡಕ್ಕೆ: ಜೆ. ಎನ್. ಶ್ರೀಕಂಠಮೂರ್ತಿ

ಅಂದು ಸ್ವಾತಂತ್ರ್ಯ ದಿನೋತ್ಸವ. ಮುಂಜಾನೆ ಧ್ವಜಾರೋಹಣವಾದ ನಂತರ ಎಲ್ಲರೂ ಚಪ್ಪಾಳೆ ತಟ್ಟಿದರು. ಆಮೇಲೆ ವಂದೇ ಮಾತರಂ ಗೀತೆ. ಭಾಷಣ. ಎಲ್ಲ ಅದ್ದೂರಿಯಾಗಿ ನಡೆದವು.

ಅಲ್ಪ ಸ್ವಲ್ಪ ಬದಲಾವಣೆಯಿಂದ ಇಂಥವೇ ಕಾರ್ಯಕ್ರಮಗಳು ಹಲವಾರು ಕಡೆ ನಡೆದವು.

ಕಿಂಡರ್‌ಗಾರ್ಟನ್, ಪ್ರಾಥಮಿಕಶಾಲೆ, ಹೈಸ್ಕೂಲು, ಕಾಲೇಜು, ಆಸ್ಪತ್ರೆ, ಕಛೇರಿ, ಬ್ಯಾಂಕು ಇತ್ಯಾದಿ ಇತ್ಯಾದಿ...

ಬ್ರಾಹ್ಮಣ ಅಗ್ರಹಾರ, ನಾಯಿಡು ಪೇಟೆ, ಹರಿಜನ ಬೀದಿ, ಕುಂಬಾರ ಪೇಟೆ, ಸೆಟ್ಟಿ ಬಣಜಿಗರ ಕೇರಿ– ಹೀಗೆ ಪೇಟೆಗಳು, ಬೀದಿಗಳು, ಕೇರಿಗಳು ಕುಲಗಳನ್ನು ಸೂಚಿಸಿದರೂ ಧ್ವಜಾರೋಹಣ ಕಾರ್ಯಕ್ರಮ ಮಾತ್ರ ಯಾವ ಕುಲ ಮತಭೇದವಿಲ್ಲದೆ ಸಾಂಗವಾಗಿ ನೆರವೇರಿತು.

ಭಾಷಣ ಮುಗಿದ ನಂತರ ಸಿಹಿ ಹಂಚಿದರು. ಆಮೇಲೆ ನೆರೆದಿದ್ದ ಜನರೆಲ್ಲ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಸಂಜೆ ಬಹಳ ಕಡೆ ವಿನೋದ ಕಾರ್ಯಕ್ರಮಗಳಿದ್ದವು.

ಕಿಂಡರ್‌ಗಾರ್ಟನ್ ಉಪಾಧ್ಯಾಯಿನಿ ಸಂಜೆ ನಾಲ್ಕು ಗಂಟೆಗೆ ಶಾಲೆಗೆ ಬಂದು ವಿನೋದ ಕಾರ್ಯಕ್ರಮ ನಡೆಯುವ ವೇದಿಕೆಯನ್ನು ಅಲಂಕರಿಸುತ್ತ ಒಂದು ಬಾರಿ ಕತ್ತೆತ್ತಿ ಮೇಲೆ ನೋಡಿದಳು ಅಷ್ಟೆ. ಹಾಗೆಯೇ ಅವಾಕ್ಕಾಗಿ ನಿಂತುಬಿಟ್ಟಳು.

ಪ್ರಾಥಮಿಕಶಾಲೆ ಉಪಾಧ್ಯಾಯರು ತಮ್ಮ ಶಾಲೆಗೆ ಬಂದು ಮೇಜು ಕುರ್ಚಿಗಳನ್ನು ಅತ್ತಿತ್ತ ಸರಿಸುತ್ತ ಒಂದು ಬಾರಿ ಮೇಲೆ ನೋಡಿದರು. ಅವರೂ ಆಶ್ಚರ್ಯದಿಂದ ಹಾಗೆಯೇ ನಿಂತುಬಿಟ್ಟರು.

ಹೈಸ್ಕೂಲ್ ಹೆಡ್ಮಾಸ್ಟರರೂ, ಕಾಲೇಜು ಪ್ರಿನ್ಸಿಪಾಲರೂ ಅಷ್ಟೆ! ಅವರು ಮೇಲಕ್ಕೆ ನೋಡಿದ ಕೂಡಲೆ ಆಶ್ಚರ್ಯದಿಂದ ಹಾಗೇ ನಿಂತುಬಿಟ್ಟರು.

ಇವರೆಲ್ಲರ ಆಶ್ಚರ್ಯಕ್ಕೆ ಕಾರಣ–ಅವರು ಬೆಳಗ್ಗೆ ಹಾರಿಸಿದ್ದ ತ್ರಿವರ್ಣ ಧ್ವಜಗಳು ಮಾಯವಾಗಿದ್ದುದೇ! ಬರೀ ಕೋಲುಗಳು ಮಾತ್ರ ಅವರಿಗೆ ಕಾಣಿಸಿದ್ದವು.

ಆಸ್ಪತ್ರೆಯಲ್ಲಿ, ಬ್ಯಾಂಕಿನಲ್ಲಿ, ಕಛೇರಿಯಲ್ಲಿ–ಎಲ್ಲ ಕಡೆಯಲ್ಲೂ ತ್ರಿವರ್ಣ ಧ್ವಜಗಳು ಮಾಯವಾಗಿದ್ದವು. ಅಷ್ಟೇ ಅಲ್ಲ. ಮಾನ್ಯ ಮಂತ್ರಿಗಳು ಜಿಲ್ಲಾ ಪರಿಷತ್ ಕಛೇರಿಯಲ್ಲಿ ಹಾರಿಸಿದ್ದ ಸಿಲ್ಕ್ ತ್ರಿವರ್ಣ ಧ್ವಜ ಕೂಡಾ ಮಾಯವಾಗಿತ್ತು.

ಛೇರ್‌ಮನ್‌ರಿಗೂ, ಕಾರ್ಯದರ್ಶಿಯವರಿಗೂ ಮುಂದೆ ಏನು ಮಾಡಬೇಕೆಂದೇ ತೋಚಲಿಲ್ಲ. "ಮಂತ್ರಿಗಳು ಊರಲ್ಲೇ ಇದ್ದಾರೆ. ಅವರಿಗೆ ತಿಳಿದರೆ ಹ್ಯಾಗೆ?" ಎಂದು ಅವರು ಹೆದರಿದರು. ಈ ವಿಷಯ ಹೇಗೋ ಮಂತ್ರಿಗಳ ಕಿವಿಗೂ ಬಿತ್ತು. ಅವರಿಗೇನು, ಹೆಚ್ಚು ಕಡಿಮೆ ಊರಿನ ಜನಕ್ಕೆಲ್ಲ ತಿಳಿದು ಹೋಯಿತು.

ಪೋಲೀಸಿನವರಿಗೂ ವಾರ್ತೆ ಮುಟ್ಟಿತು.

"ಇದು ದೇಶದ್ರೋಹಿಗಳ ಕಾರ್ಯ" ಎಂದರು ಛೇರ್‌ಮನ್ನರು.



"ಹೌದು, ಅವರೇ ಮಾಡಿದ್ದು" ಎಂದು ದನಿಗೂಡಿಸಿದರು ಕಾರ್ಯದರ್ಶಿ.

"ಅಲ್ಲ, ಇದು ನಕ್ಸಲೈಟರ್ ಕೆಲಸ. ನನ್ನ ಚುನಾವಣಾ ಕ್ಷೇತ್ರದಲ್ಲೇ ಇವರ ಕಾಟ ಜಾಸ್ತಿಯಾಗಿಬಿಟ್ಟಿದೆ. ಏನ್ಮಾಡ್ಬೇಕೂಂತ ನಂಗೆ ಅರ್ಥವೇ ಆಗ್ತಿಲ್ಲ" ಎಂದರು ಮಂತ್ರಿಗಳು ದುಃಖದಿಂದ.

"ಇಂಥ ಕಾರ್ಯ ನಡೆದದ್ದು ಚರಿತ್ರೇಲೇ ಇಲ್ಲ. ದೇಶಕ್ಕೆ ಸ್ವಾತಂತ್ರ್ಯ ಬಂದ ದಿನ ತ್ರಿವರ್ಣ ಧ್ವಜಗಳು ಮಾಯವಾಗಿರೋದು ನಮ್ಮ ಪಟ್ಟಣಕ್ಕೇ ಅಲ್ಲ, ನಮ್ಮ ಭಾರತ ದೇಶಕ್ಕೇ ಅವಮಾನ." ಎಂದರು ಅಸೆಂಬ್ಲಿಗೆ ನಿಂತು ಠೇವಣಿ ಕಳೆದುಕೊಂಡಿದ್ದ ಹುರಿಯಾಳೊಬ್ಬರು.

ಹೀಗೆ ಅವರವರಿಗೆ ತೋಚಿದಂತೆ ಅವರವರು ಅಭಿಪ್ರಾಯ ವ್ಯಕ್ತಪಡಿಸಿದ ಮೇಲೆ– ಪೋಲೀಸ್ ಸ್ಟೇಷನ್‌ನಿಂದ ಫೋನ್ ಬಂತು–'ಕೇಡಿಗ ಸಿಕ್ಕಿದ' ಅಂತ.

ಎಲ್ಲರೂ ಪೋಲೀಸ್ ಸ್ಟೇಷನ್ನಿಗೆ ಧಾವಿಸಿದರು. "ಎಲ್ಲಿ ಆ ದೇಶದ್ರೋಹಿ? ತೋರಿಸಿ, ಅವನನ್ನು ಸಿಗಿದು ತೋರಣ ಹಾಕ್ಬೇಕು" ಎಂದರು ಯಾರೋ ಸಿಟ್ಟಿನಿಂದ. ಪೋಲೀಸ್ ಸಬ್ ಇನ್‌ಸ್ಪೆಕ್ಟರ್‌ರು ತೋರಿಸಿದರು. ಅವನನ್ನು ಎಲ್ಲರೂ ನೋಡಿದರು.

"ಇವನೇನಾ ಆ ಕೆಲಸ ಮಾಡಿದ್ದು? ಇವನೇನಾ ದೇಶದ್ರೋಹಿ?" ಎಂದರು ಎಲ್ಲರೂ ಒಂದೇ ಸಲ.

ಅವನೊಬ್ಬ ಹುಡುಗ. ವಯಸ್ಸು ಹತ್ತು–ಹನ್ನೆರಡರ ಮಧ್ಯೆ ಇರಬಹುದು. ಮೈಮೇಲೆ ಲಂಗೋಟಿಯೊಂದು ಬಿಟ್ಟು ಬೇರೆ ಬಟ್ಟೆಯೇ ಇರಲಿಲ್ಲ. ಅವನ ಪಕ್ಕದಲ್ಲೇ ಒಂದು ಮೂಟೆಯಿತ್ತು. ಅದರೊಳಗೆ ತ್ರಿವರ್ಣ ಧ್ವಜಗಳಿದ್ದವು.

'ಇವನೊಬ್ಬನೇ ಅಲ್ಲ. ಇವನೊಂದಿಗೆ ದೊಡ್ಡ ತಂಡಾನೇ ಇರ್ಬೇಕು" ಎಂದರು ಯಾರೋ ಅನುಮಾನಿಸುತ್ತ.

"ಇಲ್ಲದಿದ್ರೆ ಇವನಿಗಿಷ್ಟು ಧೈರ್ಯ ಎಲ್ಲಿಂದ ಬರ್ಬೇಕು?" ಮತ್ತಾರೋ ಅಂದರು.

"ಲೋ, ನೀನಿರೋದು ಎಲ್ಲೋ?" ಎಂದು ಯಾರೋ ಕೇಳಿದರು.

"ಪೋಲಮ್ಮನ ಕೆರೆ ಅತ್ರ ಬುದ್ದೀ..." ಎಂದ ಆ ಹುಡುಗ.

"ನಿಮ್ಮ ಮನೆ ತೋರಿಸ್ತೀಯಾ?"

"ತೋರಿಸ್ತೀನಿ"

ಚೇರ್‌ಮನ್‌ರು ಮಂತ್ರಿಗಳಿಗೆ ಫೋನ್ ಮಾಡಿದರು. ಪೋಲೀಸ್ ಸೂಪರಿಂಟೆಂಡೆಂಟರೂ ಮಾಡಿದರು. ಇಬ್ಬರಿಗೂ ಒಂದೇ ಉತ್ತರ ಬಂತು.

"ಹುಷಾರು. ಸಣ್ಣ ಹುಡುಗನಂತ ಅವನ ಹಿಂದೆ ಹೊರಟರೆ ಅಲ್ಲಿ ದೊಡ್ಡ ಕೇಡಿಗಳ ತಂಡಾನೇ



ಇರ್ತಹುದು. ಅವರು ಯಾತಕ್ಕೂ ಹೇಸುವುದಿಲ್ಲ. ಪೋಲೀಸ್ ಸಿಬ್ಬಂಧೀನ ಕರಕೊಂಡು ಹೋಗಿ ಇಲ್ದಿದ್ರೆ ಮಾನ ಹೋಗ್ತಹುದು."

ಆ ಹುಡುಗನನ್ನು ಕರೆದುಕೊಂಡು ಅವನು ಹೇಳಿದ ಗುರ್ತಿನಾ ಪ್ರಕಾರ ಎಲ್ಲರೂ ಜೀಪಿನಲ್ಲಿ ಹೊರಟರು. ಹಾಗೆ ಹೋಗುತ್ತಿದ್ದರೆ "ಪೋಲೀಸಿನೋರು ಚೇರ್‌ಮನ್‌ರನ್ನು, ಕಾರ್ಯದರ್ಶಿಯವರನ್ನು ಕರೆದೊಯ್ತಿದಾರೆ" ಎಂದು ಊರಿನಲ್ಲಿ ಆಗದವರು ಆಡಿಕೊಂಡರಾಗಲಿ, ನಿಜವಾಗಿಯೂ ಪೋಲೀಸಿನವರು ಕರೆದೊಯ್ದುದ್ದು ಆ ಹುಡುಗನನ್ನೇ.

"ನಿನ್ನ ಹೆಸರೇನೋ?" ಎಂದು ಒಬ್ಬ ಕಾನ್‌ಸ್ಟೇಬಲ್ ಕೇಳಿದ.

"ಸೀತಾರಾಮುಲು ಬುದ್ದೀ..." ಎಂದ ಹುಡುಗ."

ತನ್ನ ಹೆಸರನ್ನೇ ಅವನೂ ಇಟ್ಟುಕೊಂಡಿದ್ದಕ್ಕೆ ಆ ಕಾನ್‌ಸ್ಟೇಬಲ್‌ಗೆ ಸಿಟ್ಟು ಬಂತು. "ಬಾಯಿ ಮುಚ್ಚು" ಎಂದು ಘರ್ಜಿಸಿದ.

ಶ್ರೀರಾಮುಲು ಮನೆ ಮುಂದೆ ಪೋಲೀಸ್ ಜೀಪ್ ನಿಂತಿತು.

ಮನೆಯೊಳಕ್ಕೆ ಹೋದ ಮೇಲೆ–

ಗೋಣಿಚೀಲದ ಮೇಲೆ ಒಬ್ಬಳು ಹೆಂಗಸು ಕುಳಿತಿದ್ದಳು. ಒಂದು ದೊಡ್ಡ ಧ್ವಜದ ಮೇಲೆ ಒಬ್ಬ ಆಸಾಮಿ ಕುಳಿತಿದ್ದ. ಅವರಿಬ್ಬರ ನಡುವೆ ಧ್ವಜಗಳು–ಚಿಕ್ಕವು. ದೊಡ್ಡವು–ರಾಸಿಯಾಗಿ ಬಿದ್ದಿದ್ದವು.

ಪೋಲೀಸರನ್ನು ನೋಡಿ ಗಾಬರಿಯಾಗಿ ಹೆಂಗಸು ಎದ್ದು ನಿಂತಳು. ಆಸಾಮಿ ಗಾಬರಿಗೊಂಡರೂ ಎದ್ದು ನಿಲ್ಲಲಿಲ್ಲ.

ಎದ್ದುನಿಲ್ಲದ ಆಸಾಮಿಯೇ ಶ್ರೀರಾಮುಲು ತಂದೆ. ಎದ್ದು ನಿಂತ ಹೆಂಗಸೇ ಅವನ ತಾಯಿ.

"ಏನೋ ಯಾರು ಬಂದಿದಾರೆ ಅಂದ್ಕೊಂಡೆ?" ಎಂದು ಘರ್ಜಿಸಿದ ಕಾನ್‌ಸ್ಟೇಬಲ್.

ಎದ್ದು ನಿಲ್ಲಬೇಕೆಂದು ಪ್ರಯತ್ನಿಸಿದ ಶ್ರೀರಾಮುಲು ತಂದೆ.

"ಯಾರು ಬಂದ್ರೂ ಸರಿ, ಅವನು ಏಳಾರ ಸೋಮೀ...ಅವನು ಕುಂಟ" ಎಂದಳು ಶ್ರೀರಾಮುಲು ತಾಯಿ.

"ಕುಂಟನಾದರೇನು, ನಮ್ಮ ಕಣ್ಣು ತಪ್ಪಿಸಿ ಇಷ್ಟೊಂದು ಧ್ವಜಗಳನ್ನು ಕದೀತಾನೆಯೇ?" ಎಂದರು ಪೋಲೀಸ್ ಸಬ್‌ಇನ್‌ಸ್ಪೆಕ್ಟರರು.



ಕೋಲಿನ ಸಹಾಯದಿಂದ ಅತಿ ಪ್ರಯಾಸ ಪಟ್ಟು ಎದ್ದು ನಿಂತುಕೊಂಡ ಶ್ರೀರಾಮುಲು ತಂದೆ.

ಎಲ್ಲರೂ ಧ್ವಜಗಳನ್ನು ಪರಿಶೀಲಿಸಿದರು. ಎಳೆಂಟು ದೊಡ್ಡ ಧ್ವಜಗಳನ್ನು ಒಂದಕ್ಕೊಂದು ಸೇರಿಸಿ ದಟ್ಟ ಪಂಚೆಯಾಗಿ ಹೊಲಿದಿದ್ದರು. ಇನ್ನೂ ಮೂರು ಧ್ವಜಗಳನ್ನು ಒಂದು ಹರಿದ ಸೀರೆಗೆ ತೇಪೆ ಹಾಕಿದ್ದರು. ಉಳಿದವುಗಳು ಚಡ್ಡಿಯಾಗಿಯೂ ಜುಬ್ಬಾ ಆಗಿಯೂ ರೂಪ ತಳೆಯುತ್ತಿದ್ದವು.

ಧ್ವಜಗಳನ್ನು ಪರಿಶೀಲಿಸುವ ಮೊದಲು ಶ್ರೀರಾಮುಲು ತಂದೆ, ತಾಯಿಯನ್ನು ಪರಿಶೀಲಿಸುಬೇಕಾಗಿತ್ತು ಪೋಲೀಸರು.

ಶ್ರೀರಾಮುಲು ತಾಯಿ ಉಟ್ಟ ಸೀರೆ ಮೈಯನು ಮುಚ್ಚಿದ್ದ ಭಾಗ ಹರಿದಿದ್ದ ಭಾಗವೇ ಹೆಚ್ಚಾಗಿತ್ತು.



ಶ್ರೀರಾಮುಲು ತಂದೆ ಹೆಸರಿಗೆ ಮಾತ್ರ ಬಟ್ಟೆ ತೊಟ್ಟಿದ್ದ ಅಷ್ಟೆ. ಹರಿಕಿಲ್ಲದ ಜಾಗವೇ ಇರಲಿಲ್ಲ. ಆ ಬಟ್ಟೆಯಲ್ಲಿ.

ದೇಶದ ಗೌರವವನ್ನು ಗಾಳಿಗೆ ತೂರಿದ್ದಕ್ಕೆ ಅಲ್ಲಿದ್ದವರಿಗೆಲ್ಲ ಸಿಟ್ಟು ಬಂದಿತ್ತು. ಎಲ್ಲರಿಗಿಂತ ಹೆಚ್ಚಾಗಿ ಚೇರ್‌ಮನ್‌ರಿಗೆ ಬಂದಿತ್ತು.

"ನಿಮ್ಗೆ ಹಾಕ್ಕೊಳ್ಳೋಕೆ ಬಟ್ಟೆಗಳಿಲ್ದಿದ್ರೆ ನನ್ನನ್ನಾಗಲೀ, ಅಥವಾ ಇನ್ಯಾರನ್ನಾಗಲೀ ಕೇಳ್ಬೇಕೇ ಹೊರತು ಹೀಗೆ ತ್ರಿವರ್ಣ ಧ್ವಜಗಳನ್ನು ಕದ್ದು ನಮ್ಮ ದೇಶದ ಗೌರವಾನ ಹಾಳ್ ಮಾಡ್ತೀರಾ?" ಎಂದು ಸಿಟ್ಟಿನಿಂದ ನುಡಿದರು ಚೇರ್‌ಮನ್ನರು.

ಒಂದು ತಿಂಗಳ ಹಿಂದೆ ಒಬ್ಬ ಕುಂಟ ನಡೆಯಲಾರದೆ ನಡೆಯುತ್ತ ಬಂದು ತಮ್ಮನ್ನು "ಒಂದು ಅಳೀ ಪಂಚೆ ಇದ್ರೆ ಕೊಡಿ ಸೋಮೀ..." ಎಂದು ಅಂಗಲಾಚಿದ್ದು ಮಸುಕು ಮಸುಕಾಗಿ ನೆನಪಿನಲ್ಲಿ ಉಳಿದಿದ್ದರೂ ಆ ವಿಷಯವನ್ನು ಅಲ್ಲಿ ಹೊರಗೆಡಹಲು ಇಚ್ಛಿಸಲಿಲ್ಲ. ಅವರ ಮನಸ್ಸು.

"ಇನ್ನು ನಿಮ್ ಕಡೆಯೋರು ಯಾರ್‍ಯಾರಿದಾರೋ ಎಂದು ಸಬ್ ಇನ್‌ಸ್ಪೆಕ್ಟರ್ ಘರ್ಜಿಸಿದರು.

"ಏನೋ ತಮಾಷೆಗಾಗಿ ಗಾಳಿ ಪಟಾನ ಹಾರಿಸ್ತೀವಲ್ಲ, ಅಂಗೆ ಇದೂನೂ ಹಾರಿಸಿದೀರೀ ಅಂತ ಆ ಬಟ್ಟೆಗಳ್ನ ತಗೊಂಡು ಬಂದ್ವಿ ಸೋಮೀ...ನಾವು ಈ



ಊರಿಗೆ ಮೊನ್ನೇನೇ ಬಂದ್ವಿ. ಅದ್ಕ್ ಮೊದ್ಲು ಒಂದು ಸಣ್ಣ ಅಳ್ಳೀಲಿ ಇದ್ವಿ. ಹೊಲಗಳಲ್ಲಿ ಕೂಲಿ ಕೆಲ್ಸ ಮಾಡ್ತಿದ್ವಿ. ಒಂದ್ ವರ್ಷದಿಂದ ಮಳೆ ಬಾರದೆ ಹೊಲಗಳ್ನ ಬಿತ್ತೇ ಇಲ್ಲ ಸೋಮೀ...ಇನ್ನ ನಮ್ಗೆ ಕೆಲ್ಸ ಎಂಗೆ ಸಿಗ್ತದೆ ಬುದ್ದೀ...ನೀವೇ ಯೋಳಿ. ನಾನೇನೋ ಕುಂಟ. ಇವಳೂ ಉಡುಗ್ನೂ ಕೂಲಿ ಕೆಲ್ಸ ಮಾಡ್ತಿದ್ರು. ಈಗ ಅಲ್ಲಿ ಕೆಲ್ಸ ಸಿಗ್ತಿಲ್ಲ ಬುದ್ದೀ... ಆ ಅಳ್ಳೀಲಿ ಇಂಗೆ ಬಣ್ಣದ್ ಬಟ್ಟೆಗಳ್ನ ಮ್ಯಾಕೆ ಹಾರಿಸ್ತಿರ್ಲಿಲ್ಲ...ಅದಕ್ಕೇ ನಮುಗ್ಗೊತ್ತಿಲ್ಲ. ಅವ್ರ ತಗೋಬಾರದಂತ. ತಗೊಂಡ್ರೆ ನೀವು ಬಂದು ಗಲಾಟೆ ಮಾಡ್ತೀರಂತ." ಎಂದು ಕ್ಷೀಣವಾಗಿ ನುಡಿದ ಶ್ರೀರಾಮುಲು ತಂದೆ.

"ಮೈಮೇಲೆ ಬಟ್ಟೆಯಿಲ್ದೆ ನಾಕು ಜನದ್ ಮುಂದೆ ತಿರಗಾಡಲಾರ್ದೆ ನಾಚ್ಕೆ ಪಟ್ಕೋತಿದ್ದ ನಮ್ಮುಡುಗ ಈ ಕೆಲ್ಸ ಮಾಡಿದ ಬುದ್ದೀ...ಏನೋ ಅರೀದ ಉಡುಗ ಓಗ್ಲೀಂತ ಸುಮ್ಕಿದ್ವಿ. ಅಷ್ಟೇ ಹೊರ್ತು ಇನ್ನೇನೂ ತಿಳೀದು ಸೋಮೀ..." ಎಂದು ಬೇಡಿಕೊಂಡಳು ಶ್ರೀರಾಮುಲು ತಾಯಿ.

"ಅಂದ್ರೆ ನೀವಿಬ್ರೇ ಈ ಕೆಲಸ ಮಾಡಿದ್ದೀರಿ ಅಂತ ಅರ್ಥವಾಯ್ತು. ನೀವಲ್ಲದೆ ನಿಮ್ಮ ಕಡೆಯೋರು ಯಾರೂ ಇಲ್ಲ ಅನ್ನು ಹಂಗಾದ್ರೆ" ಎಂದರು ಸಬ್‌ಇನ್ಸ್‌ಪೆಕ್ಟರ್.

"ನಾವಿಬ್ರಲ್ಲಿ ಬುದ್ದೀ...ನಾನೊಬ್ನೇ ತಂದಿದ್ದು. ನಮ್ಮಪ್ಪಂಗೆ ನಡೆಯೋಕೆ ಕೈಲಾಗೋಲ್ಲ" ಅಂದ ಶ್ರೀರಾಮುಲು."

"ಸಾಕು ಬಾಯಿ ಮುಚ್ಚು" ಎಂದು ಘರ್ಜಿಸಿದರು ಸಬ್‌ಇನ್ಸ್‌ಪೆಕ್ಟರ್.

• • •

ಕೆಲ ದಿನಗಳ ನಂತರ ಶ್ರೀರಾಮುಲನನ್ನೂ. ಅವನ ತಂದೆಯನ್ನೂ ಕೋರ್ಟಿನಲ್ಲಿ ನಿಲ್ಲಿಸಿದರು. ಶ್ರೀರಾಮುಲು ತಾಯಿ ಜನರ ನಡುವೆ ಕುಳಿತಿದ್ದಳು. ಶ್ರೀರಾಮುಲು "ಅದು ತಾನು ಅರಿಯದೆ ಮಾಡಿದ ತಪ್ಪೆಂದು" ಹೇಳಿಕೊಂಡ. ಸಣ್ಣ ಹುಡುಗನನ್ನು ಕನಿಕರಿಸಿ ಬಿಟ್ಟುಬಿಡಬೇಕೆಂದು ಅವನ ತಂದೆ ಅಂಗಲಾಚಿದ. ತಾವು ಹೇಳಿಕೊಳ್ಳುವ ವಿಷಯಗಳೆಲ್ಲ ಅವರು ಹೇಳಿ ಮುಗಿಸಿದರು. ಎಲ್ಲವನ್ನೂ ಸಾವಧಾನ ಚಿತ್ತದಿಂದ ಆಲಿಸಿದ ಮ್ಯಾಜಿಸ್ಟ್ರೇಟರು "ಇಂಡಿಯನ್ ಪಿನಲ್ ಕೋಡ್"



**ಮೀಸಲು ಪುರುಷ!**

ಕೊನೆಗೊಮ್ಮೆ ಬಂದೆಯಲ್ಲ ಸಖಿ।
ಹೋದ ಜೀವ ಬಂತು ಎನಗೆ।
ಇನ್ನೆಂದೂ ನನ್ನ ಬಿಟ್ಟು ಹೋಗದಿರು
ನಾನೋ ನಿನ್ನ ಮೀಸಲು ಪುರುಷ।

* ಪಂಚಾಕ್ಷರಿ ಹಿರೇಮಠ

ಎಂದು ಆರಂಭಿಸಿ ಇನ್ನೂ ಏನೇನೋ ಹೆಸರುಗಳನ್ನು ಹೇಳಿ ಶ್ರೀರಾಮುಲುವಿಗೂ, ಅವನ ತಂದೆಗೂ ಮಾತ್ರ ವಲ್ಲದೆ ಅಲ್ಲಿದ್ದ ಬಹಳ ಜನಕ್ಕೆ ಅರ್ಥವಾಗದ ಯಾವುದೋ ಸೆಕ್ಷನ್‌ಗಳನ್ನು ಹೇಳಿ ಕಡೆಗೆ ಗಂಭೀರ ಸ್ವರದಿಂದ ಹೀಗೆ ತೀರ್ಪಿತ್ತರು–

"ತಿಳಿದು ಮಾಡಿದರೂ ತಿಳಿಯದೆ ಮಾಡಿದರೂ ಅಪರಾಧ ಅಪರಾಧವೇ. ಶ್ರೀರಾಮುಲು ತಂದೆ ನರ ಸಿಂಹಲುಗೆ ಸಹ ಇದರಲ್ಲಿ ಪಾಲಿದೆಯೆಂದು ಸಾಬೀತಾಗಿದೆ. ಆದ್ದರಿಂದ ರಾಷ್ಟ್ರ ಧ್ವಜವನ್ನು ಮನ ಬಂದಂತೆ ಉಪಯೋಗಿಸಿದ ತಪ್ಪಿಗೆ ರಾಷ್ಟ್ರದ ಗೌರವಕ್ಕೆ ಧಕ್ಕೆಯುಂಟುಮಾಡಿದ ಅಪರಾಧಕ್ಕೆ ಎರಡು ವರ್ಷ ಜೈಲು ಶಿಕ್ಷೆಯನ್ನು ವಿಧಿಸಲಾಗಿದೆ. ಶ್ರೀರಾಮುಲು ಸಣ್ಣ ಹುಡುಗನಾದ್ದರಿಂದ ಅವನನ್ನು ಜೂವೆನೈಲ್ ಸ್ಕೂಲಿಗೆ ಕಳುಹಿಸತಕ್ಕದ್ದು."

ಜೈಲು ಎಂಬ ಪದ ಕಿವಿಗೆ ಬಿದ್ದೊಡನೆ ಜನಗಳ ನಡುವೆಯಿಂದ ಎದ್ದು ಓಡಿ ಬಂದ ಶ್ರೀರಾಮುಲು ತಾಯಿ "ಸೋಮಿಯೋರೇ ...ಅಂಗೆ ನನ್ನ ಕೂಡಾ ಜೈಲಿಗೆ ಕಳ್ಸಿ ಬಿಡಿ" ಎಂದು ಅಂಗಲಾಚಿದಳು.

"ಹ್ಯಾಗೆ ನಿನ್ನ ಜೈಲಿಗೆ ಕಳಿಸ್ತಾರೆ?" ಎನ್ನುತ್ತ ಇಬ್ಬರು ಕಾನ್ಸ್‌ಟೇಬಲ್‌ಗಳು ಬಂದು ಅವಳ ಎರಡು ಕೈಗಳನ್ನು ಹಿಡಿದುಕೊಂಡರು.

"ಅವರಿಬ್ರೂ ಒಂಟೋದ್ರೆ ನಂಗೆ ಹೊಟ್ಟೆ ಪಾಡೆಂಗೆ ಬುದ್ದೀ...?ಜೈಲ್ನಲ್ಲಾದ್ರೆ ನಂಗೂ ಈಟು ಮುದ್ದೆ ಆಕ್ತಾರೆ" ಎಂದು ಅವಳು ಜೋರಾಗಿ ಅಳ ಲಾರಂಭಿಸಿದಳು. ಪೋಲೀಸರು ಅವಳನ್ನು ಹೊರಕ್ಕೆ ಎಳೆದುಕೊಂಡು ಹೋದರು.

ಇನ್ನೊಂದು ಕೇಸನ್ನು ಓದಲು ಸಿದ್ಧವಾಗುತ್ತಿರು ವಾಗ ಕೋರ್ಟ್ ಗುಮಾಸ್ತೆಗೆ ಒಂದು ಸಂದೇಹ ಬಂತು. ಕೋರ್ಟಿನಲ್ಲಿ ಹಾಗೆ ಕಿರುಚಿ, ಕೋರ್ಟ್ ಮರ್ಯಾದೆಯನ್ನು ಉಲ್ಲಂಘಿಸಿದ್ದಕ್ಕೆ "ಕಂಟೆಪ್ಟ್ ಆಫ್ ಕೋರ್ಟ್‌ಗೆ ಒಳಪಟ್ಟು ಅವಳನ್ನು ಬಂಧಿಸ ಬಹುದೇನೋ" ಎಂಬ ಸಂದೇಹ ಬಂತು. ಆದರೆ ಮ್ಯಾಜಿಸ್ಟ್ರೇಟರು ಏನು ಹೇಳುವರೋ ಎಂದು ಹೆದರಿ ಮಾತನಾಡದೆ ಸುಮ್ಮನಾಗಿಬಿಟ್ಟ.

"ಅವರಿಗೆ ತಿನ್ನಲು ಒಂದಿಷ್ಟು ಅನ್ನ. ಉಡಲು ಒಂದಿಷ್ಟು ಬಟ್ಟೆ ಕೊಡಲಾರದ ಸಮಾಜ, ದೇಶದ ಗೌರವ ಹಾಳು ಮಾಡಿದರೆಂದು ಹೇಳಿ ಅವರಿಗೆ ಶಿಕ್ಷೆ ವಿಧಿಸುವದು ಅನ್ಯಾಯವಲ್ಲವೆ?" ಎಂದು ಆಗಷ್ಟೇ ವಕೀಲ ವೃತ್ತಿಯನ್ನು ಆರಂಭಿಸಿದ್ದ ಒಬ್ಬ ಜೂನಿಯರ್ ವಕೀಲನು ತನ್ನ ಸೀನಿಯರ್ ವಕೀಲನಿಗೆ ಹೇಳಿದ ನಾದರೂ ಆತ ಕಣ್ಣು ಕೆಕ್ಕರಿಸಿ ನೋಡಿದ ಕೂಡಲೇ ಬಾಯಿ ಮುಚ್ಚಿ ಕೊಂಡು ಸುಮ್ಮನಾದ.

●

# ವರ್ಷ ಭವಿಷ್ಯ

ಗಾಯತ್ರಿದೇವಿ ರಾಮನ್ ಬಿ. ಎಸ್‌ಸಿ. ಎಲ್. ಎಲ್. ಬಿ

ವಿಕ್ರಮ ಸಂವತ್ಸರದ ೨೦೩೪ ರ ಭವಿಷ್ಯ ಅರ್ಥಾತ್ ಶ್ರೀಮನ್ನೃಪ ಶಾಲಿವಾಹನ ಶಕೆ ೧೮೯೯ ನೆಯ ಪಿಂಗಲ ಸಂವತ್ಸರದ ಕಾರ್ತಿಕ ಶುದ್ಧ ಪ್ರತಿಪದೆಯಿಂದ ೧೯೦೦ ನೆಯ ಕಾಲಯುಕ್ತಿ ಸಂವತ್ಸರದ ಅಶ್ವೀನ ಬಹುಳ ಅಮಾವಾಸ್ಯೆಯವರೆಗೆ, ಅರ್ಥಾತ್ ಈ ದೀಪಾವಳಿಯಿಂದ ಮುಂದಿನ ದೀಪಾವಳಿಯವರೆಗಿನ ವರ್ಷ ಭವಿಷ್ಯ.




ಈ ರಾಶಿಯವರಿಗೆ ವರ್ಷದ ಬಹು ಭಾಗ ರವಿ, ಬುಧ ಮತ್ತು ಶುಕ್ರರ ಬಲವಿದೆ. ಒಂದೂವರೆ ತಿಂಗಳಿನ ಅಲ್ಪಾವಧಿಯನ್ನುಳಿದು ವರ್ಷಪೂರ್ತಿ ಕುಜನಿಂದ ಕಿರಿಕಿರಿ. ಗುರು ಮತ್ತು ಶನಿ ವರ್ಷವಿಡೀ ನಿಮ್ಮ ಬೆಂಬಲಕ್ಕೆ ಬಾರರು.

ಧನಾಧಿಪತಿಯಾದ ಗುರು ಅಷ್ಟೇನೂ ಸಹಾಯಕಾರಿಯಲ್ಲದಿದ್ದರೂ ದ್ವಿತೀಯ ಸ್ಥಾನದಲ್ಲಿ ಬರುವ ಶುಕ್ರ ಮಾತ್ರ ಹಣಕಾಸಿನ ವಿಷಯದಲ್ಲಿ ಬಲ ನೀಡುತ್ತಾನೆ. ಹಣಕಾಸಿನ ಬಗ್ಗೆ ಹೆಚ್ಚಿನ ಜಾಗ್ರತೆ ಅವಶ್ಯ. ಯಾಕೆಂದರೆ ಮೋಸ ವಂಚನೆಗಳ ಜಾಲಕ್ಕೆ ಸಿಲುಕಿ ನೀವು ಹಣ ಕಳೆದುಕೊಳ್ಳುವ ಸಂಭವಗಳುಂಟು. ಅಲ್ಲದೇ ಹಣದ ಮುಗ್ಗಟ್ಟೂ ಹೆಚ್ಚುವುದು. ನಿಮ್ಮ ನಿಷ್ಕಾಳಜಿ ಮತ್ತು ದುಂದುವೆಚ್ಚಗಳಿಂದಾಗಿ ಕಿಸೆ ಖಾಲಿಯಾಗುವುದು. ಎಚ್ಚರಿಕೆ! ಈ ಸಮಯದಲ್ಲಿ ನಿಮ್ಮಿಂದ ಸಾಲ ಪಡೆದವರಾರೂ ನಿಮ್ಮ ಆಪದ್ಬಾಂಧವರಾಗುವುದಿಲ್ಲ. ಐದನೆಯ ಸ್ಥಾನದಲ್ಲಿರುವ ರವಿ ಪ್ರತಿಕೂಲಿಯಾಗಿರುವುದರಿಂದ ನೀವು ಯೋಜಿಸಿದ ಯಾವ ಯೋಜನೆಗಳಿಂದಲೂ ನಿಮ್ಮ ಆರ್ಥಿಕ ಸ್ಥಿತಿ ಸುಧಾರಿಸದು. ದುಂದುವೆಚ್ಚದಿಂದ ದೂರವಿರುವುದೇ ಇದಕ್ಕೆ ತಾರಕೋಪಾಯ.

ಉದ್ಯೋಗಸ್ಥರಿಗೆ ಅವರ ಇನ್‌ಕ್ರಿಮೆಂಟ್ ಮತ್ತು ಬಡ್ತಿಯ ವಿಷಯದಲ್ಲಿ ಬಹಳ ತೊಂದರೆ ಎದುರಿಸಬೇಕಾಗಿ ಬರುವುದು. ಕಾರಖಾನೆ ಮತ್ತು ಕಾರ್ಯಾಗಾರಗಳಲ್ಲಿ ಮೇಲ್ವಿಚಾರಕರಾದವರು ಆವೇಗ ಮತ್ತು ಆಯಾಸದ ದಿನಗಳನ್ನೆದುರಿಸಬೇಕಾಗುವುದು. ಕಾರ್ಮಿಕರೊಂದಿಗೆ ಜಾಣತನದಿಂದ ವರ್ತಿಸಿ. ಇಲ್ಲದಿದ್ದರೆ ತೊಂದರೆಯಾದೀತು. ವ್ಯಾಪಾರೋದ್ಯಮಿಗಳು ವ್ಯವಹಾರದ ಮಂದಿಯಿಂದಾಗಿ ಬಹು ಕಷ್ಟ ಎದುರಿಸಬೇಕಾಗುವುದು. ಹೊಸ ವಸ್ತು ಖರೀದಿ, ಮಾರಾಟ ಇಲ್ಲವೇ ಹೊಸ ಮನೆಯ ಪ್ರವೇಶ ಮುಂತಾದವುಗಳನ್ನು ಮುಂದಿನ ವರ್ಷಕ್ಕೆ ಮುಂದೂಡುವುದೇ ಹಿತಕರ. ಎಲ್ಲಾ ಭೂಮಿ-ಮನೆ ಮುಂತಾದವುಗಳ ವ್ಯವಹಾರ ಕಾರಕಗ್ರಹವಾದ ಕುಜ ನಿಮಗೆ ಈ ದಿಕ್ಕಿನಲ್ಲಿ ಅಸಹಾಯಕನಾಗಿರುವುದರಿಂದ ಮೇಲಿನ ವ್ಯವಹಾರಗಳಲ್ಲಿ ನಿಮಗೆ ಲಾಭ ಸಿಗುವುದಿರಲಿ, ಸಮಾಧಾನವೂ ದೊರೆಯದು.

ಆರೋಗ್ಯದೆಡೆ ಹೆಚ್ಚಿನ ಲಕ್ಷ್ಯ ಹರಿಸಿ. ವ್ಯಾಯಾಮ, ಸತ್ವಾಹಾರ ಸೇವನೆ, ಸಾಕಷ್ಟು ಶುದ್ಧ ಹವೆಯ ಸೇವನೆಯಿಂದ ಜಾಡ್ಯದ ಕಿರಿಕಿರಿಯಿಂದ ದೂರವಿರಬಹುದು. ಬಹು ದಿನಗಳ ಜಾಡ್ಯದಿಂದ ಬಳಲುತ್ತಿರುವವರಾದರೆ ಈ ವರ್ಷಾಂತ್ಯದ ತಿಂಗಳುಗಳಲ್ಲಿ ಅಂದರೆ ೧೯೭೮ರ ಸಪ್ಟೆಂಬರ್‌ನಿಂದ ನವಂಬರ್ ತಿಂಗಳಿನವಧಿಯಲ್ಲಿ ಹೆಚ್ಚಿನ ದೈಹಿಕ ಶ್ರಮ ಮತ್ತು ಆವೇಗದಿಂದ ಸ್ಥಿತಿ ಇನ್ನಷ್ಟು ಉಲ್ಬಣಿಸೀತು.

ದೀಪಾವಳಿಯ ನಂತರದ ದಿನಗಳಿಂದ ಮೇ ತಿಂಗಳಿನ ಅಂತ್ಯದ ವರೆಗೆ ಈ ರಾಶಿಯವರಿಗೆ ನಾಲ್ಕನೆಯ ಸ್ಥಾನದಲ್ಲಿ ಕುಜನಿರುವುದರಿಂದ ಗಂಡ ಹೆಂಡಿರಲ್ಲಿ ಜಗಳ ಮನಸ್ತಾಪ ಮತ್ತು ಬಿಕ್ಕಟ್ಟಿನ ಪ್ರಸಂಗಗಳುಂಟು. ಈ ಬಗ್ಗೆ ಸ್ವಲ್ಪ ಎಚ್ಚರಿಕೆ ಅವಶ್ಯ. ಯುಕ್ತಾಯುಕ್ತ ಪರಿಜ್ಞಾನದೊಂದಿಗೆ ಮಾತು ಕೃತಿಗಳೆರಡರಲ್ಲೂ ಸಂಯಮದಿಂದಿರಿ. ಇಲ್ಲದಿದ್ದರೆ ಮನೆಯಲ್ಲಿ ನಿತ್ಯ ಕದನವೇರ್ಪಟ್ಟೀತು. ಅವಿವಾಹಿತರಿಗೆ ತಪ್ಪು ಕಲ್ಪನೆಗಳು, ಭಾವಪರವಶತೆಗಳಿಂದ ತೊಂದರೆ. ಮಾನಸಿಕ ಹೊಯ್ದಾಟ. ಮದುವೆಯ ಯೋಚನೆಯಲ್ಲಿರುವವರು ಜೂನ್ ತಿಂಗಳ ವರೆಗೆ ಕಾದು ನಂತರ ಕಾರ್ಯಗತರಾದರೆ ಲೇಸು.

ವಿದ್ಯಾರ್ಥಿಗಳಿಗೆ ಈ ವರ್ಷ ತುಂಬಾ ಶ್ರಮದಾಯಕ. ಅನಿರೀಕ್ಷಿತಗಳು ಮತ್ತು ಆಕಸ್ಮಿಕಗಳಿಂದಾಗಿ ವಿದ್ಯಾಭ್ಯಾಸಕ್ಕೆ ಅಡ್ಡಿಯಾಗಬಹುದು. ಆದರೂ "ಧೈರ್ಯಂ ಸರ್ವತ್ರ ಸಾಧನಂ". ಕ್ರೀಡಾಸಕ್ತರು ಆಟವಾಡುವಾಗ ಎಚ್ಚರಿಕೆ ವಹಿಸಿ. ಇಲ್ಲದಿದ್ದರೆ ಅಪಘಾತಗಳಾಗುವ ಸಂಭವವುಂಟು.

ಅಶ್ವಿನಿ, ಭರಣಿ, ಕೃತ್ತಿಕಾ, ನಕ್ಷತ್ರದಲ್ಲಿ ಜನಿಸಿದವರ ಪೈಕಿ ಅಶ್ವಿನಿ ನಕ್ಷತ್ರದಲ್ಲಿ ಜನಿಸಿದವರು ಈ ವರ್ಷ ತುಂಬಾ ಅದೃಷ್ಟಶಾಲಿಗಳು.




ವರ್ಷಾರಂಭದಿಂದ ಜೂನ್ ವರೆಗಿನ ಅವಧಿಯಲ್ಲಿ ನಿಮಗೆ ಮೂರನೆಯ ಸ್ಥಾನದಲ್ಲಿ ಇರುವ ಕುಜನು ತುಂಬಾ ಸಹಕಾರಿಯಾಗಿರುವನು. ಗುರುವು ಕೂಡಾ ನಿಮ್ಮ ಮೇಲೆ ಆಗಸ್ಟ್ ವರೆಗೆ ಕೃಪಾದೃಷ್ಟಿ ಬೀರುವನು, ಶುಕ್ರನಿಂದ ಶುಕ್ರದೆಸೆ. ಕೋಪಿಷ್ಟನಾಗಬೇಕಾದ ಶನಿ ಕೂಡ ನಿಮ್ಮ ಮೇಲೆ ಕರುಣೆಯಿಂದಿರುವನು.

ಆರ್ಥಿಕವಾಗಿ ತುಂಬಾ ಒಳ್ಳೆಯ ವರ್ಷವಿದಾದುದರಿಂದ ಹೊಸ ಯೋಜನೆಗಳೆಲ್ಲ ಯಶಸ್ವಿಯಾಗುವವು. ಫೆಬ್ರುವರಿಯಿಂದ ಎಪ್ರಿಲ್ ವರೆಗಿನ ದಿನಗಳು ತುಂಬಾ ಲಾಭದಾಯಕ. ಪ್ರೋತ್ಸಾಹದಾಯಕವಾದ್ದರಿಂದ ಬಂಡವಾಳ ತೊಡಗಿಸಿ ವ್ಯವಹಾರದಲ್ಲಿ ಪಾಲ್ಗೊಳ್ಳಲಡ್ಡಿಯಿಲ್ಲ. ಧನಕಾರಕ ಗುರು ಮತ್ತು ಶುಕ್ರರ ಬಲವಿದ್ದು ಎಲ್ಲದರಲ್ಲೂ ನಿಮಗೆ ಲಾಭವುಂಟು.

ಹೊಸ ಆಸ್ತಿಯನ್ನು ಹೊಂದುವ ಅಥವಾ ಹೊಸ ಪರಿಸರಕ್ಕೆ ಹೋಗುವ ಸಂಭವಗಳುಂಟು. ಸ್ಥಾವರ ಆಸ್ತಿಗೆ ಸಂಬಂಧಿಸಿದ ವಿಷಯದಲ್ಲಿ ಮತ್ತು ವ್ಯವಹಾರಗಳಲ್ಲಿ ಅತ್ಯುತ್ತಮ ಫಲಿತಾಂಶವಿದ್ದು, ಹೇರಳ ಲಾಭವೂ ದೊರೆಯುವುದು. ಬಹಳ ದಿನಗಳಿಂದ ಬರಬೇಕಿದ್ದ ಬಾಕಿಗಳು ತೀರಿ, ಭೂಮಿ-ಕಟ್ಟಡಗಳಿಂದ ಬರುವ ಆದಾಯವೂ ಹೆಚ್ಚಾಗುವದು.

ಉದ್ಯೋಗಸ್ಥರಿಗೆ ಈ ವರ್ಷವಿಡೀ ಒಳ್ಳೆಯ ದಿನಗಳು. ಬಹು ದಿನಗಳಿಂದ ನೀವು ನಿರೀಕ್ಷಿಸುತ್ತಿದ್ದ ಬಡ್ತಿ ಮತ್ತು ಇನ್‌ಕ್ರಿಮೆಂಟ್‌ಗಳು ಈ ವರ್ಷ ಲಭಿಸುವವು. ವ್ಯಾಪಾರೋದ್ಯಮಿಗಳಿಗೆ ಹೆಚ್ಚು ಲಾಭದಿಂದಾಗಿ ಪ್ರಗತಿ ಸಾಧಿಸಲು ಸಾಧ್ಯ. ಸ್ವತಂತ್ರ ಉದ್ಯೋಗಿಗಳು ಹೊಸ ಭರವಸೆ ಪಡೆದು, ಪ್ರೋತ್ಸಾಹಿತರಾಗಿ ಪ್ರಸಿದ್ಧಿ ಪಡೆಯುವರು.

ಆರೋಗ್ಯದ ದೃಷ್ಟಿಯಿಂದಲಂತೂ ಈ ವರ್ಷ ನಿಮ್ಮ ಪಾಲಿಗೆ ಹಿಂದಿನದಿಗಿಂತಲೂ ಉತ್ತಮ, ಚೇತನ ದಾಯಕ. ಹಳೆಯ ಜಾಡ್ಯಗಳು ಈ ವರ್ಷ ತೊಂದರೆ ಕೊಡಲಾರವು. ಇಂಥವುಗಳಿಗೆ ಚಿಕಿತ್ಸೆ ಪಡೆಯಲು ನೀವು ಹಿಂದು ಮುಂದು ಮಾಡುತ್ತಿದ್ದರೆ ಇನ್ನು ಮುಂದೆ ಚಿಕಿತ್ಸೆ ಪಡೆಯುವುದು ಸೂಕ್ತ. ಜುಲೈ ತಿಂಗಳ ನಂತರ ಪಿತ್ತ ಮೂಲದ ಆಯಾಸದಿಂದಾಗಿ ಆರೋಗ್ಯದಲ್ಲಿ ಸ್ವಲ್ಪ ಬದಲಾವಣೆ ಕಾಣಬಹುದು.

ಮನೆ ನಿಮಗೆ ಸ್ವರ್ಗ ಸುಖ ಕೊಡುವುದು. ಶಾಂತಿ ಸಂತೋಷ ಲಭಿಸುವುದು. ಮಕ್ಕಳು ತಮ್ಮ ಶಾಲಾ ಚಟುವಟಿಕೆಗಳಲ್ಲಿ ಸರ್ವ ಪ್ರಥಮರಾಗುವುದರಿಂದ ನಿಮ್ಮ ಸಂತೋಷಕ್ಕೆ ಕಾರಣರಾಗುವರು. ಅವಿವಾಹಿತರಿಗೆ ಸಾಮಾಜಿಕ ಜೀವನದಲ್ಲಿ ಹೊಸ ಬಗೆಯ ಸಂತೋಷ. ಯುವಜನರ ಪಾರ್ಟಿ, ಸಂತೋಷಕೂಟ ಮುಂತಾದವುಗಳಿಗೆ ನೀವು ಆಮಂತ್ರಿತರಾಗುತ್ತೀರಿ. ಇಂಥ ಸಂತೋಷ ಕೂಟವೊಂದರಲ್ಲಿಯೇ ನಿಮ್ಮ ಜೀವನ ಸಂಗಾತಿಯನ್ನು ಭೇಟಿಯಾಗುವ ಪ್ರಸಂಗವುಂಟು. ಪ್ರಣಯ ವ್ಯವಹಾರಗಳಲ್ಲಿ ಪ್ರಗತಿ.

ವಿದ್ಯಾರ್ಥಿಗಳ ಪಾಲಿಗಿದೊಂದು ಅತ್ಯುತ್ತಮ ವರ್ಷ. ತಾಂತ್ರಿಕ ಶಿಕ್ಷಣ ಪಡೆಯುತ್ತಿರುವವರಿಗೆ ಉತ್ತಮೋತ್ತಮ ಅವಕಾಶಗಳು ದೊರೆಯುವುದರ ಜೊತೆಗೆ ತಜ್ಞರೊಂದಿಗೆ ಸಂಪರ್ಕ ಹೊಂದುವ ಪ್ರಸಂಗಗಳು ಹಲವು. ಪ್ರತಿಭಾವಂತ ಕಲಾವಿದರು, ಲೇಖಕರು ತಮ್ಮ ಕೃತಿಗಳ ಪ್ರದರ್ಶನ, ಮತ್ತು ಪ್ರಕಟಣೆಗಳಿಂದ ಪ್ರಸಿದ್ಧಿ ಸಿಗುವದು.

ಕೃತ್ತಿಕಾ ಮತ್ತು ಮೃಗಶಿರಾ ನಕ್ಷತ್ರದವರಿಗಿಂತ ರೋಹಿಣಿ ನಕ್ಷತ್ರದವರಿಗೆ ಹೆಚ್ಚು ಒಳ್ಳೆಯ ವರ್ಷವಿದು.




ಎರಡನೆಯ ಗುರುವಿನಿಂದಾಗಿ ನಿಮಗೆ ಈ ವರ್ಷ ಭಾರೀ ಬಲ. ಶುಕ್ರ ಲಾಭಕಾರಿಯೂ ಅಲ್ಲ, ಹಾನಿಕಾರಕನೂ ಅಲ್ಲ. ಆತನಿಂದ ಮಿಶ್ರ ಫಲವುಂಟು. ಶನಿಯಿಂದ ಸಾಕಷ್ಟು ಒಳ್ಳೆಯ ಫಲ.

ಆರ್ಥಿಕವಾಗಿ ಈ ವರ್ಷ ಒಳ್ಳೆಯ ದಿನಗಳಿವೆ. ವರ್ಷದ ಮೊದಲರ್ಧ ದಿನಗಳಲ್ಲಿ ನೀವು ಕೈಗೊಂಡ ಯೋಜನೆಗಳಿಂದ ಅಸಮಾಧಾನ. ಅದರಲ್ಲೂ ಪಾಲುಗಾರಿಕೆಯ ವ್ಯವಹಾರ ನಡೆಯುವುದು ಕಠಿಣ. ಪಾಲುದಾರರ ನಡುವೆ ಭಿನ್ನಾಭಿಪ್ರಾಯದಿಂದಾಗಿ ವ್ಯವಹಾರ ಹದಗೆಡುತ್ತದೆ. ವರ್ಷದ ದ್ವಿತೀಯಾರ್ಧದ ದಿನಗಳಲ್ಲಿ ಒಳ್ಳೆಯ ಕಾಲವಿದ್ದು ವ್ಯವಹಾರಕ್ಕೆ ಹೊಸ ರೂಪ. ಹೊಸ ಯೋಜನೆಗಳೂ ಕೈಗೂಡುವವು. ಜುಲೈನಿಂದ ನವಂಬರ್ ವರೆಗಿನ ದಿನಗಳಲ್ಲಿ ಸಟ್ಟಾ ವ್ಯಾಪಾರಗಳಲ್ಲಿ ತುಂಬಾ ಲಾಭವುಂಟು. ಶೇರು ಭಂಡವಲುಗಳಿಂದ ಅನಿರೀಕ್ಷಿತ ಆದಾಯವುಂಟು.

ಉದ್ಯೋಗ ವ್ಯವಹಾರ ಮತ್ತು ವೃತ್ತಿಗಳಿಗೆ ಈ ವರ್ಷ ತುಂಬಾ ಪ್ರೋತ್ಸಾಹದಾಯಕ. ನಿಷ್ಠೆ ಪ್ರಾಮಾಣಿಕತೆಗಳಿಂದ ಬಡ್ತಿಗಳುಂಟು. ಅಧಿಕಾರಿಗಳಿಂದ ಶಿಫಾರಸು, ಸಹಾಯ ದೊರೆಯುವುದು. ವರ್ಷದ ಮೊದಲರ್ಧ ಆಸ್ತಿ ಸಂಬಂಧದ ವಿಷಯಗಳಿಗೆ ತುಂಬಾ ಒಳ್ಳೆಯದು. ಆಸ್ತಿ ಮಾರಾಟ, ಕೊಳ್ಳುವಿಕೆಗಳು ಸುಲಭ ಸಾಧ್ಯವಾಗುವದು. ನಿಮ್ಮ ನೆರೆಹೊರೆಯಿಂದ ಈ ದಿನಗಳಲ್ಲಿ ತುಂಬಾ ಸಹಕಾರವುಂಟು.

ವರ್ಷದ ಬಹು ಭಾಗ ನೀವು ಸದೃಢ ಆರೋಗ್ಯದಿಂದಿರುವಿರಿ. ಆದರೆ ಕೆಲ ಸಂದರ್ಭಗಳಲ್ಲಿ ಅಂದರೆ ಅಡುಗೆ ಮಾಡುವಾಗ, ದೈನಂದಿನ ಕೆಲಸಗಳಲ್ಲಿ ತೊಡಗಿರುವಾಗ ಚಿಕ್ಕ ಪುಟ್ಟ ಗಾಯಗಳಾಗುವ ಸಂಭವ ಉಂಟು. ಎಚ್ಚರಿಕೆ ವಹಿಸುವುದು ಸೂಕ್ತ.

ಕೌಟುಂಬಿಕವಾಗಿ ನೆಮ್ಮದಿಯ ದಿನಗಳು. ನಿಮ್ಮ ಬಗೆಗೆ ಕುಟುಂಬದ ಇತರರು ಹೇಗೆ ಪ್ರೀತಿ ವ್ಯಕ್ತಪಡಿಸುತ್ತಾರೆಂಬ ಬಗ್ಗೆ ಹಲವಾರು ನಿದರ್ಶನಗಳು ದೊರೆಯುವವು. ವಿವಾಹಿತರಿಗೆ ಜೀವನ ಸಂಗಾತಿಯಿಂದ ಸಹಕಾರ ದೊರೆಯುವುದು. ತರುಣ–ತರುಣಿಯರಿಗೆ ಇದೊಂದು ಉತ್ತಮ ವರ್ಷ. ಅನೇಕ ಜನ ಹೊಸ ಮಿತ್ರರು ನಿಮ್ಮ ಜೀವನದಲ್ಲಿ ಪ್ರವೇಶಿಸುವರು. ಅವಿವಾಹಿತರಿಗೆ ಪರಿಚಿತರಲ್ಲೇ ಒಬ್ಬರು ಜೀವನ ಸಂಗಾತಿಯಾಗಿ ಬರುವ ಸಾಧ್ಯತೆಗಳುಂಟು. ಇಂಥ ಮದುವೆಗಳಿಗೆ ಸಕಲ ಗ್ರಹ ಬಲವುಂಟು.

ಸಂಶೋಧಕರಿಗೆ ಎಲ್ಲ ರೀತಿಯ ಸದವಕಾಶಗಳೂ ಅನುಕೂಲಗಳೂ ದೊರೆತು ಅವರ ಕೆಲಸದಲ್ಲಿ ಯಶಸ್ಸು ದೊರೆಯುವುದು. ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಪ್ರವಾಸಕ್ಕೆ ಹೋಗುವ ಅವಕಾಶ. ಶಿಷ್ಯವೇತನಗಳಿಗಾಗಿ ಪ್ರಯತ್ನಿಸುತ್ತಿದ್ದೀರಾದರೆ ಈ ವರ್ಷ ಅದು ಸಿದ್ಧಿಸುವದು.

ಮೃಗಶಿರಾ ನಕ್ಷತ್ರದವರಿಗೆ ಈ ವರ್ಷ ಅತ್ಯುತ್ತಮ.




ಕುಜನಿಂದ ವರ್ಷವಿಡೀ ಅನುಕೂಲ, ಶುಕ್ರ ಅಷ್ಟೇನೂ ಸಹಕಾರಿಯಲ್ಲ. ಶನಿಯಿಂದ ನಾಲ್ಕು ತಿಂಗಳು ಕಾಲ ವಿರೋಧವೇನಿಲ್ಲ.

ಆರ್ಥಿಕ ಸ್ಥಿತಿ ಹದಗೆಡುತ್ತದೆ. ಸಾಲಗಳಿಗೆ ಕೈ ಚಾಚುವ ಪ್ರಸಂಗದ ಜತೆಗೆ ಖರ್ಚು ವಿಪರೀತವಾಗುತ್ತದೆ. ಇದನ್ನು ಅಲಕ್ಷಿಸುವುದರಿಂದ ಪರಿಸ್ಥಿತಿ ಇನ್ನಷ್ಟು ವಿಕೋಪಕ್ಕೆ ಹೋಗಬಹುದು. ಹಣಕಾಸಿನ ವಿಷಯದಲ್ಲಿ ಹಿಡಿತವಿರಲಿ. ಚೆಕ್ ಬುಕ್‌ಗಳು ಮತ್ತು ಇತರ ಬೆಲೆಯುಳ್ಳ ವಸ್ತುಗಳನ್ನು ಭದ್ರವಾಗಿಡಿ. ನೀವಿರಿಸುವ ಪ್ರತಿ ಹೆಜ್ಜೆಯ ಬಗೆಗೂ ಯೋಚಿಸಿ. ಇಲ್ಲದೇ ಹೋದರೆ ಸಿಕ್ಕಾಪಟ್ಟೆ ಹಣ ವೆಚ್ಚ ಮಾಡಬೇಕಾದ ಪ್ರಸಂಗವಿರುತ್ತದೆ. ವರ್ಷವಿಡೀ ಹಣಕಾಸಿನ ವಿಷಯದ ಬಗ್ಗೆ ಜಾಗರೂಕರಾಗಿರಿ. ವಂಚನೆಯ ಜಾಲಕ್ಕೆ ಸಿಕ್ಕಿ ಬೀಳದ ಹಾಗೆ ನಿಮ್ಮನ್ನು ನೀವೇ ಸುಧಾರಿಸಿಕೊಳ್ಳಿ.

ಸ್ಥಾವರ ಆಸ್ತಿಯ ವಿಷಯದಲ್ಲಿ ಒಳ್ಳೆಯ ಪರಿಣಾಮ ಕಂಡು ಬರುತ್ತದೆ. ಕೋರ್ಟ್ ವಿವಾದಗಳು ತುಂಬಾ ತೊಂದರೆದಾಯಕವಾಗಬಹುದಾದ್ದರಿಂದ ಇಂಥ ವಿಷಯಗಳ ಇತ್ಯರ್ಥಕ್ಕೆ ಕೋರ್ಟು ಕಟ್ಟೆ ಏರ

ದಿರುವುದೇ ಒಳಿತು. ಉದ್ಯೋಗದಲ್ಲಿ ಅಷ್ಟೇನೂ ಪ್ರಗತಿ ಇರುವುದಿಲ್ಲ. ಬಡ್ತಿ ಸಿಗುವ ಸಂಭವವೂ ಹೆಚ್ಚಾಗಿ ಕಾಣದು. ವ್ಯವಹಾರ ಮಂದಗತಿಯಿಂದ ಸಾಗುವದು. ಮಾನಸಿಕವಾಗಿ ತೊಂದರೆ ಎದುರಿಸಬೇಕಾಗುವದು. ಇದು ಕ್ಷಣಿಕವಾದುದು.

ಆರೋಗ್ಯದೆಡೆ ಗಮನ ಹರಿಸಬೇಕಾದ್ದು ಅವಶ್ಯ. ನಿಃಶಕ್ತಿ, ದಣಿವು ಮುಂತಾದವುಗಳು ತಲೆದೋರುವವು. ವಿಶ್ರಾಂತಿ. ವ್ಯಾಯಾಮಗಳಿಂದ ಇವುಗಳನ್ನು ನಿವಾರಿಸಬಹುದು. ಹಳೆಯ ಜಾಡ್ಯಗಳಿದ್ದರೆ ವಿಶೇಷ ಚಿಕಿತ್ಸೆ ಪಡೆಯಿರಿ. ಪಚನಾಂಗದ ಕೆಳ ಭಾಗದ ತೊಂದರೆ ಮತ್ತು ಮಲಬದ್ಧತೆಗಳ ಪೀಡೆಗಳು ಬಾಧಿಸುವವು. ವೈದ್ಯಕೀಯ ಸಲಹೆಗಳು, ಮತ್ತು ಸರಿಯಾದ ಆಹಾರ ಕ್ರಮಗಳಿಂದ ಇವುಗಳನ್ನು ನಿವಾರಿಸಬಹುದು.

ಕೌಟುಂಬಿಕ ಜೀವನ ಶಾಂತಮಯ ಮತ್ತು ನೆಮ್ಮದಿಯದು. ಮಕ್ಕಳ ಆರೋಗ್ಯ ಕೆಟ್ಟು ಸ್ವಲ್ಪ ಕಿರಿಕಿರಿ ಎನಿಸಬಹುದು. ಅವರಿಗೆ ಸಕಾಲಿಕ ವೈದ್ಯಕೀಯ ಚಿಕಿತ್ಸೆ ಅತ್ಯವಶ್ಯ. ಸಾಮಾಜಿಕ ಜೀವನದಲ್ಲಿ ನಿರಾಶೆ. ಅವಿವಾಹಿತರಿಗೆ ಏಕಾಕಿ ಜೀವನದಿಂದ ಬಲು ಬೇಜಾರು. ಪ್ರಣಯದ ವಿಚಾರ ಬಿಟ್ಟು ಜೀವನದ ಬಗೆಗೆ ಹೆಚ್ಚು ಆಳವಾಗಿ ಯೋಚಿಸಲಾರಂಭಿಸಿ. ಇಲ್ಲದಿದ್ದರೆ ಭಾವನಾ ಪರವಶತೆಯಿಂದ ಭಾರೀ ಏರುಪೇರಾಗುವ ಸಂಭವಗಳುಂಟು.

ವಿದ್ಯಾಭ್ಯಾಸದಲ್ಲಿ ಏಕಾಗ್ರತೆ ಉಳಿಯದೇ ವಿದ್ಯಾರ್ಥಿಗಳಿಗೆ ತೊಂದರೆಯಾಗುವದು. ಕ್ಷುಲ್ಲಕ ಕಾರಣಗಳಿಂದಾಗಿ ಶೈಕ್ಷಣಿಕ ಪ್ರಗತಿಗೆ ಅಡ್ಡಿಯಾಗುವದು.

ಪುನರ್ವಸು ಮತ್ತು ಆಶ್ಲೇಷಾ ನಕ್ಷತ್ರದಲ್ಲಿ ಜನಿಸಿದವರಿಗಿಂತ ಪುಷ್ಯ ನಕ್ಷತ್ರದವರಿಗಿದು ಒಳ್ಳೆಯ ವರ್ಷವೆನಿಸುವದು.

## ಸಿಂಹ

ಹನ್ನೊಂದನೆ ಸ್ಥಾನದಲ್ಲಿರುವ ಗುರುವಿನಿಂದಾಗಿ ಆಗಸ್ಟ ವರೆಗಿನ ದಿನಗಳು ಒಳ್ಳೆಯದಾಗಿಯೇ ತೋರುವವು. ನಂತರ ಜನ್ಮ ರಾಶಿಯಲ್ಲಿ ಪ್ರವೇಶಿಸುವ ಶನಿಯಿಂದಾಗಿ ತೊಂದರೆ ಆರಂಭ. ಗುರುವಿನ ಪ್ರಭಾವ ಕಡಿಮೆಯಾಗುತ್ತದೆ.

ಆರ್ಥಿಕ ವಿಷಯವಾಗಿ ಭಾರೀ ಬಲಶಾಲಿಗಳಾಗುವಿರಿ. ಆದಾಯದ ಹೊಸ ದಾರಿಗಳು ತೆರೆದುಕೊಂಡು ಒಮ್ಮಿಂದೊಮ್ಮೆಲೇ ಸಾಕಷ್ಟು ಹಣ ದೊರೆಯುವದರಿಂದ ಅಚ್ಚರಿಗೀಡಾಗುವಿರಿ. ಆದರೆ ಇದು ವರ್ಷದ ಪ್ರಥಮಾರ್ಧದಲ್ಲಿ ಮಾತ್ರ, ನಂತರದ ಆರು ತಿಂಗಳು ಕಾಲ ಖರ್ಚು ಹೆಚ್ಚು. ಮಿತವ್ಯಯವನ್ನು ರೂಢಿಸಿಕೊಳ್ಳಿ. ಅಂದರೆ ಮಾತ್ರ ಪರಿಸ್ಥಿತಿಗೆ ಹೊಂದಿಕೊಂಡು ನಡೆಯುವದು ಸಾಧ್ಯ. ಜೂಜು, ಸಟ್ಟಾಗಳಿಂದ ದೂರವಿರುವುದೇ ಲೇಸು.

ಸ್ಥಾವರ ಆಸ್ತಿಯ ವಿಷಯದಲ್ಲಿ ಏರುಪೇರೇನಿಲ್ಲ, ಆದರೆ ದುರಸ್ತಿ ಕಾರ್ಯಗಳಿಗಾಗಿ ಸ್ವಲ್ಪ ಹಣ ಖರ್ಚು ಮಾಡಬೇಕಾಗುವದು. ಮನೆ ಕಟ್ಟುವ ಯೋಜನೆ ಕಾರ್ಯಗತವಾಗಿ ಕಾರ್ಯ ಭರದಿಂದ ಸಾಗುವದು. ಉದ್ಯೋಗಸ್ಥರಿಗೆ ಮೇಲಧಿಕಾರಿಯ ಪ್ರಶಂಸೆಯ ಜತೆಗೆ ಹೊಸ ಜವಾಬ್ದಾರಿಯ ಕೆಲಸವೂ ದೊರೆಯುತ್ತದೆ. ಇನ್ನೂ ಒಳ್ಳೆಯ ಹುದ್ದೆಗಾಗಿ ನೀವು ಪ್ರಯತ್ನಿಸುತ್ತಿದ್ದೀರಾದರೆ ವರ್ಷದ ಮೊದಲರ್ಧದಲ್ಲೇ ಪ್ರಯತ್ನಕ್ಕೆ ಫಲ ದೊರೆಯಲಿದೆ. ವ್ಯವಹಾರದ ಯತ್ನಗಳಲ್ಲಿ ಜಯ. ವೃತ್ತಿಯವಲಂಬಿತರಿಗೆ ಹೆಚ್ಚು ಆದಾಯ.

ಆರೋಗ್ಯದ ದೃಷ್ಟಿಯಿಂದ ಉತ್ತಮ ದಿನಗಳು. ಹಳೆಯ ಜಾಡ್ಯದಿಂದ ಬಳಲುವವರಿಗೆ ಸ್ವಲ್ಪ ತೊಂದರೆ. ವರ್ಷಾರಂಭದಿಂದಲೇ ಅವುಗಳೆಡೆ ಗಮನ ಹರಿಸಿ ಚಿಕಿತ್ಸೆ ಪಡೆಯುವುದುತ್ತಮ.

ಕೌಟುಂಬಿಕವಾಗಿ ಸಂತೋಷ ಹೆಚ್ಚುವುದು. ಮನೆಯಲ್ಲಿ ಹೊಸ ಸದಸ್ಯನ ಆಗಮನ,ಧಾರ್ಮಿಕ ಮತ್ತು ಇತರ ಸಮಾರಂಭ ಜರುಗುವಿಕೆಯಿಂದ ಸಂತೋಷದ ವಾತಾವರಣ. ಪ್ರಣಯ ವ್ಯವಹಾರಗಳಲ್ಲಿ ತರುಣ–ತರುಣಿಯರಿಗೆ ಜಯ. ಜತೆಗೆ ಮನೆಮಂದಿಯ ಪ್ರೀತಿ ವಿಶ್ವಾಸಕ್ಕೆ ಪಾತ್ರರಾಗುವರು. ಮಹತ್ವದ ನಿರ್ಧಾರ ಕೈಗೊಳ್ಳುವುದನ್ನು ವರ್ಷಾಂತ್ಯಕ್ಕೆ ಮುಂದೂಡುವುದೇ ಹಿತಕರ.

ಆರ್ಥಿಕ ಕಾರಣಗಳು, ಪ್ರವಾಸ ಮುಂತಾದವುಗಳಿಂದ ವಿದ್ಯಾಭ್ಯಾಸಕ್ಕೆ ತೊಂದರೆ. ಆದರೆ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಮಾತ್ರ ಶ್ರಮಕ್ಕೆ ತಕ್ಕ ಯಶಸ್ಸು ದೊರೆಯುವದು. ಸಂಶೋಧನಾ ವಿದ್ಯಾರ್ಥಿಗಳ ಶ್ರಮ, ಬುದ್ಧಿಮತ್ತೆಗಳಿಂದಾಗಿ ಅವರ ಸಂಶೋಧನೆಗಳು ಶೈಕ್ಷಣಿಕ ರಂಗದಲ್ಲಿ ಹೊಸ ಭರವಸೆಯುಂಟು ಮಾಡಬಹುದು.

ಪೂರ್ವಾಫಾಲ್ಗುಣ ಮತ್ತು ಉತ್ತರಫಾಲ್ಗುಣಕ್ಕಿಂತ ಮಘಾ ನಕ್ಷತ್ರದವರಿಗೆ ಒಳ್ಳೆಯ ವರ್ಷವಿದು.



"...ನನ್ನ ಭವಿಷ್ಯದಲ್ಲಿ ಆಸ್ಪತ್ರೆಗೆ ಅಲೆತ ಎಂದಿದೆ ಮರೀ... ಅದ್ರಿಂದ ಹಬ್ಬದ ಸಿಹಿ ತಿಂದಿ ಹೆಚ್ಚು ಕೊಡೋಕಾಗೊಲ್ಲ..."

## ಕನ್ಯಾ

ವರ್ಷದ ದ್ವಿತೀಯಾರ್ಧದಲ್ಲಿ ಗುರು ಉಪ ಛಾಯೆಯಲ್ಲಿದ್ದುಕೊಂಡು ನಿಮ್ಮ ಕ್ಷೇಮಕ್ಕೆ ಕಾರಣನಾದರೆ ಪ್ರಥಮಾರ್ಧದಲ್ಲಿ ಕುಜ ನಿಮಗೆ ಅನುಕೂಲಿಯಾಗಿರುವನು, ಶನಿ ದೃಷ್ಟಿ ತೀವ್ರವಾಗಿದ್ದರೂ ಕುಜ ಮತ್ತು ಗುರುವಿನ ಪ್ರಭಾವವಿರುವುದರಿಂದ ತೊಂದರೆ ಕೊಡುವುದಿಲ್ಲ.

ಆರ್ಥಿಕವಾಗಿ ನೀವು ಈ ವರ್ಷ ಸುದೈವಿಗಳು. ಆದಾಯ ಹೆಚ್ಚುವುದಲ್ಲದೇ ಖರ್ಚಿನ ಪ್ರಸಂಗಗಳು ಕಡಿಮೆಯಾಗುವವು. ಎಲ್ಲೆಡೆಗೂ ನಿಮಗೆ ಒಳ್ಳೆಯ ಕಾಲ. ಅಲ್ಲದೇ ಅವಕಾಶಗಳನ್ನು ಸರಿಯಾಗಿ ಬಳಸಿಕೊಳ್ಳುವುದರಿಂದಲೂ ಹೆಚ್ಚು ಆದಾಯವಿದೆ.

ಬಹು ದಿನಗಳಿಂದ ಹೊಂದಬೇಕೆಂದಿದ್ದ ವಾಹನ ಅಥವಾ ಆಸ್ತಿ ವ್ಯವಹಾರ ಈ ವರ್ಷ ಲಾಭಕಾರಿಯಾಗುವದು. ಉದ್ಯೋಗಸ್ಥರಿಗೆ ಅವರ ಹೆಚ್ಚುತ್ತಿರುವ ಕೀರ್ತಿ, ಕೆಲಸದಲ್ಲಿ ಬಡ್ತಿ ಮುಂತಾದವುಗಳಿಂದಾಗಿ ಸಹೋದ್ಯೋಗಿಗಳ ಕಿರಿ ಕಿರಿ ಮತ್ತು ವೈರ ಮಾಯವಾಗುತ್ತದೆ. ದ್ವಿತೀಯಾರ್ಧದಲ್ಲಿ ಬಡ್ತಿ ದೊರೆತು ಹೆಚ್ಚು ಅಧಿಕಾರ ದೊರೆಯುವದು. ವೃತ್ತಿ ಮತ್ತು ವ್ಯವಹಾರಗಳಲ್ಲಿ ತೇಜಿ ಕಂಡು, ಬಹು ದಿನಗಳಿಂದ ನಡೆದಿದ್ದ ವ್ಯಾಜ್ಯಗಳಲ್ಲಿ ನಿಮ್ಮ ಪರವಾಗಿ ತೀರ್ಪು ದೊರೆಯುವದು. ನಿಮ್ಮ ಮೇಲೆ ಕೆಲವು ಅಪರಾಧದ ಆಪಾದನೆಗಳನ್ನು ಹೊರೆಸುವ ಪ್ರಯತ್ನಗಳು ನಡೆದರೂ ಗ್ರಹಬಲದಿಂದಾಗಿ ಅವೆಲ್ಲ ನಿಷ್ಪ್ರಯೋಜಕವೆನಿಸುವವು.

ನಿಮ್ಮ ಆರೋಗ್ಯ ಎಂದಿಗಿಂತ ಸುಧಾರಿಸುವುದಾದರೂ ನಿಮ್ಮ ಜೀವನ ಸಂಗಾತಿಯ ಆರೋಗ್ಯ ಏಪ್ರಿಲ್, ಮೇ ತಿಂಗಳ ಸುಮಾರಿಗೆ ಕೆಡಬಹುದು. ಹಳೆಯ ಜಾಡ್ಯಗಳಿಂದ ಬಳಲುವವರಿಗೆ ಈ ವರ್ಷ ಅದರ ಬಾಧೆ ಇಲ್ಲ.

ಕೌಟುಂಬಿಕ ಜೀವನ ಸುಗಮವಾಗಿರುವದು. ಪ್ರಣಯದ ಸ್ನೇಹ ಮದುವೆಯಲ್ಲಿ ಪರ್ಯವಸಾನಗೊಳ್ಳುವದು. ತಮ್ಮ ಭಾವೀ ಜೀವನ ಸಂಗಾತಿಗಳೊಂದಿಗೆ ಪ್ರೇಮ ಜಾಲದಲ್ಲಿ ಸಿಲುಕಿ ಬೀಳುವ ಪ್ರಸಂಗಗಳು ಹೆಚ್ಚು. ಈ ವರ್ಷ ತುಂಬಾ ಸಂತಸಮಯ. ಭಾವ ಪರವಶತೆಯ ವಿಷಯದಲ್ಲಿ ನಿಮಗೆ ಸಮಾಧಾನ.

ವಿದ್ಯಾರ್ಥಿಗಳಿಗೆ ಯಶೋದಾಯಕ ವರ್ಷವಿದು; ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಜಯ ನಿಶ್ಚಿತ.

ಹಸ್ತಾ ನಕ್ಷತ್ರದವರಿಗೆ ಚಿತ್ತಾ ಮತ್ತು ಉತ್ತರ ಫಾಲ್ಗುಣ ನಕ್ಷತ್ರದವರಿಗಿಂತ ಹೆಚ್ಚು ಲಾಭ.



## ತುಲಾ

ಗುರು ಮತ್ತು ಶನಿ ಇಬ್ಬರ ಬಲದಿಂದಾಗಿ ಈ ವರ್ಷ ನಿಮಗೆ ಸಂಪತ್ತು, ಜಯ, ಪ್ರಸಿದ್ಧಿ ಮತ್ತು ಮನಶ್ಶಾಂತಿಗಳ ಆಗರ.

ಹೊಸ ಯೋಜನೆಗಳನ್ನಾರಂಭಿಸಿ ಅದರಲ್ಲಿ ಜಯ ಪಡೆಯುವುದರ ಜತೆಗೆ ಉತ್ತಮ ಆದಾಯವನ್ನೂ ಕಾಣುವಿರಿ. ಸಟ್ಟಾ ವ್ಯವಹಾರಗಳಿಂದಲೂ ಸಾಕಷ್ಟು ಆದಾಯವುಂಟು. ಈ ಮುಂಚೆ ಪ್ರಾರಂಭಿಸಿ ಕೈ ಸುಟ್ಟು ಕೊಂಡ ಯೋಜನೆಗಳನ್ನು ಪುನರಾರಂಭಿಸಬಹುದು ನಿಮಗೆ ಅದರಿಂದ ಸಾಕಷ್ಟು ಉಪಯೋಗವಾಗು ವದು.

ನಿಮ್ಮ ಆಸ್ತಿಯ ಹೆಚ್ಚಳದ ಜತೆಗೆ ಹೊಸ ಆಸ್ತಿ ಗಳನ್ನೂ ಹೊಂದುವಿರಿ. ಸ್ಥಾವರ ಎಸ್ಟೇಟು ವ್ಯವ ಹಾರಗಳಲ್ಲಿ ಸಾಕಷ್ಟು ಈ ಉತ್ತಮ ಫಲವುಂಟು. ಕಾರ್ಮಿಕ ಸಮಸ್ಯೆಗಳು ಪರಿಹಾರಗೊಂಡು ಉತ್ಪಾ ದನೆ ಹೆಚ್ಚುವದು. ಉದ್ಯೋಗದಲ್ಲಿ ಮಹತ್ವಾಕಾಂಕ್ಷಿ ಗಳಿಗೆ ಅವಕಾಶ ಈಡೇರುವುದರ ಜತೆಗೇ ಬಹಳ ದಿನಗಳಿಂದ ವರ್ಗಾವರ್ಗಿಗಾಗಿ ಯತ್ನಿಸುತ್ತಿದ್ದರೆ ಅದು ಈ ವರ್ಷ ಕೈಗೂಡುವುದು. ವ್ಯವಹಾರದ ವಿಷಯ ದಲ್ಲಿ ಈ ವರ್ಷ ಅತ್ಯುತ್ತಮ ಫಲಿತಾಂಶ.

ಆರೋಗ್ಯದ ದೃಷ್ಟಿಯಿಂದ ಎಲ್ಲವೂ ಸುಗಮ. ಕೋಟಗಾರಿಕೆ ಮತ್ತು ಹೊರಾಂಗಣ ಕ್ರೀಡೆಗಳನ್ನು ರೂಢಿಸಿಕೊಳ್ಳಿ. ಬಹು ದಿನಗಳಿಂದ ಜಾಡ್ಯದಿಂದ ನರಳುತ್ತಿರುವವರಿಗೆ ಕೂಡ ಈ ವರ್ಷ ಸುಧಾರಣೆ ಕಂಡು ಬರುವದು.

ಮಕ್ಕಳು ತಮ್ಮ ತಮ್ಮ ಕ್ಷೇತ್ರದಲ್ಲಿ ಪ್ರಗತಿ ಸಾಧಿ ಸುವುದರಿಂದ ನಿಮಗೆ ಸಂತೋಷ. ಜೀವನ ಸಂಗಾತಿ ನಿಮಗೆ ಒಳ್ಳೆಯ ರೀತಿಯ ಸಹಕಾರಿಯಾಗುವನು/ಳು. ಅವಿವಾಹಿತರಿಗೆ ಜಾತಕಗಳ ಸುರಿಮಳೆ. ಅಲ್ಲದೇ ಬೇರೆ ಬೇರೆ ಕಡೆಯಿಂದ ಪಾರ್ಟಿ, ಸಮಾರಂಭಗಳಿಗೆ ಆಮಂತ್ರಣ ದೊರೆಯುವದು. ಅನೇಕ ಕಡೆಗಳಿಂದ ನಿಮಗೆ ಜತೆ ನೀಡುವ ಕರೆಗಳು. ಒಂದಕ್ಕಿಂತ ಒಂದು ಒಳ್ಳೆಯ ಅವಕಾಶ ಎನಿಸುವದು. ಆದರೂ ನಿರೀಕ್ಷೆಗೂ ಮೀರಿ ಒಳ್ಳೆಯ ಜೀವನ ಸಂಗಾತಿಯನ್ನು ಪಡೆಯುವಿರಿ.

ವಿದ್ಯಾರ್ಥಿಗಳ ಪಾಲಿಗೆ ಇದೊಂದು ವಿಜಯದ ವರ್ಷ. ಪ್ರತಿಭಾವಂತರ ಸಂಪರ್ಕದಿಂದ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಹೊಸ ಜ್ಞಾನ.

ಚಿತ್ತಾ ಮತ್ತು ವಿಶಾಖಾ ನಕ್ಷತ್ರದವರಿಗಿಂತ ಸ್ವಾತಿ ನಕ್ಷತ್ರದವರಿಗೆ ಹೆಚ್ಚು ಒಳ್ಳೆಯ ಕಾಲ.



## ವೃಶ್ಚಿಕ

ದಶಮ ಸ್ಥಾನದಲ್ಲಿರುವ ಶನಿ ಅಷ್ಟೇನೂ ಉಪಕಾರಿಯಲ್ಲದಿದ್ದರೂ ಕುಜ ಮತ್ತು ಗುರು ವಿನ ಬಲದಿಂದಾಗಿ ಶನಿಯ ತೊಂದರೆ ಬಹಳ ಕಡಿಮೆ.

ಆರ್ಥಿಕವಾಗಿ ಯಾವ ಏರಿಳಿತಗಳೂ ಇಲ್ಲವಾದರೂ ಖರ್ಚು ಹೆಚ್ಚು. ಆದರೂ ಮಿತವಾಗಿ ಹಣದ ವ್ಯವಹಾರ ನಡೆಸುವುದರಿಂದ ವರ್ಷವಿಡೀ ಯಾವ ತೊಂದರೆಯೂ ಬಾರದು. ಆಗಸ್ಟ ನಿಂದ ನವಂಬರ್ ನಡುವಿನ ದಿನಗಳನ್ನುಳಿದರೆ ಬೇರೆ ಯಾವ ದಿನ ಗಳಲ್ಲಿಯೂ ಲಾಟರಿ ಸಟ್ಟಾಗಳಲ್ಲಿ ನಿಮಗೆ ಲಾಭವಾ ಗದು. ಗುರುವಿನ ಸ್ಥಾನಾಂತರದಿಂದಾಗಿ ಮೊದಲು ಕಾಣಿಸಿದ ಆರ್ಥಿಕ ಅಸ್ಥಿರತೆ ಈಗ ಸರಿ ಹೋಗು ವದು.

ಬಹು ದಿನಗಳಿಂದ ನಡೆದ ವ್ಯಾಜ್ಯಗಳು ನಿಮಗೆ ಯಾವ ತಾಪತ್ರಯವೂ ಇಲ್ಲದೇ ಕೊನೆಗೊಳ್ಳುವವು. ಎಸ್ಟೇಟು ವ್ಯವಹಾರಗಳಲ್ಲಿ ಮಾಧ್ಯಮ ಫಲಿತಾಂಶ. ಉದ್ಯೋಗಸ್ಥರಿಗೆ ಈ ವರ್ಷ ಹುದ್ದೆಯಲ್ಲಿ ಯಾವ ಏರಿಳಿತವೂ ಇಲ್ಲ. ವೃತ್ತಿ ಮತ್ತು ವ್ಯವಹಾರಗಳಲ್ಲೂ ಅಷ್ಟೇ. ಹೊಸ ಯೋಜನೆಗಳನ್ನು ಕಾರ್ಯಗತ ಗೊಳಿಸಲು ಇದು ಒಳ್ಳೆಯ ವರ್ಷವೇನಲ್ಲ. ಆದ್ದರಿಂದ ವರ್ಷಾಂತ್ಯದ ವೇಳೆಯ ವರೆಗೂ ಅವುಗಳನ್ನು ಮುಂದೂಡುವುದೇ ಹಿತಕರ.

ಆರೋಗ್ಯದ ದೃಷ್ಟಿಯಿಂದ ಇದು ಸಮಸ್ಯಾತ್ಮಕ ವರ್ಷ. ರಕ್ತದೊತ್ತಡ, ಪಿತ್ತವಿಕಾರ, ಶಕ್ತಿಹ್ರಾಸ ದಿಂದ ಚಿಂತಾಕ್ರಾಂತರಾಗುವಿರಿ. ಆದರೆ ಇದರಿಂದ ತಲೆ ಕೆಡಿಸಿಕೊಳ್ಳುವುದಕ್ಕಿಂತ ಅವಶ್ಯ ಪರಿಹಾರ ಉಪಾಯಗಳನ್ನು ಕೈಕೊಳ್ಳಿ. ಬಿಟ್ಟೂ ಬಿಡದೇ ಪ್ರವಾಸ ಮಾಡುವುದರಿಂದಲೂ ಈ ಜಾಡ್ಯಗಳು ಕಾಣಿಸಿಕೊಳ್ಳಬಹುದು. ಆದ್ದರಿಂದ ಜೀವನಕ್ರಮ ದಲ್ಲೊಂದು ನಿಯಮಿತತನ ಹಾಕಿಕೊಳ್ಳಿ.

ನಿಮ್ಮ ಯಶೋಭಿವೃದ್ಧಿಗೆ ಕಾರಣರಾದ ಹಿರಿಯ ರೊಬ್ಬರಿಗೆ ಹಠಾತ್ತನೆ ಗಂಡಾಂತರವೊದಗಬಹುದು. ಇದರಿಂದ ಮಂಕು ಕವಿದ ವಾತಾವರಣ ನಿಮ್ಮ ಕುಟುಂಬ ದಲ್ಲಿ ಜನಿಸುವ ಮಗುವಿನಿಂದಾಗಿ ಮತ್ತೆ ತಿಳಿಗೊಳ್ಳ ಬಹುದು. ಗೃಹ ಜೀವನದಲ್ಲಿ ಅಷ್ಟೇನೂ ತೊಂದರೆ ಗಳಿಲ್ಲದಿದ್ದಾಗ್ಯೂ ಸೌಹಾರ್ದಭಾವ ಮಾಯವಾಗು ವದು. ಭಿನ್ನಾಭಿಪ್ರಾಯಗಳಿಂದಾಗಿ ಪತಿ ಪತ್ನಿಯರಲ್ಲಿ ವಿರಸ ಕಂಡು ಬರುವದು. ಜಾಣತನದಿಂದ ವರ್ತಿಸಿ ಈ ಪ್ರಸಂಗವನ್ನು ತಪ್ಪಿಸಬಹುದು. ಸಾಮಾಜಿಕವಾಗಿ ಸಾಕಷ್ಟು ಸಂತೋಷ ಸಮಾಧಾನ ದೊರೆತರೂ, ಅವಿ ವಾಹಿತರಿಗೆ ಒಂಟಿ ಜೀವನ ಬೇಸರ ತರಿಸುವದು. ವಾಚಾಳಿತನದಿಂದಾಗಿ ಗೆಳೆತನ ಮುರಿಯುವ ಸಂಭವ ಉಂಟು. ಇದಾಗದಂತೆ ಎಚ್ಚರಿಕೆ ವಹಿಸಿ.

ವಿದ್ಯಾರ್ಥಿ ವಿದ್ಯಾರ್ಥಿನಿಯರು ಅಭ್ಯಾಸದಲ್ಲಿ ಆಸಕ್ತಿ ಕಳೆದುಕೊಳ್ಳುವರು. ನಿದ್ರಾರಹಿತ ರಾತ್ರಿ ಗಳು ಮತ್ತು ಕೆಟ್ಟ ವಿಚಾರಗಳಿಂದ ತೊಂದರೆ ಅನು ಭವಿಸುವರು. ಏಕಾಗ್ರತೆ ತಂದುಕೊಂಡು ಅಭ್ಯಾಸ ಮುಂದುವರಿಸದಿದ್ದರೆ ಪರೀಕ್ಷೆಗಳಲ್ಲಿ ಅನುತ್ತೀರ್ಣರಾಗ ಬಹುದು. ಅಪಘಾತಗಳು ಸಂಭವನೀಯವಾದ್ದರಿಂದ ಎಚ್ಚರದಿಂದಿರುವುದು ಒಳ್ಳೆಯದು.





## ಧನು

ಜುಲೈನಿಂದ ಅಕ್ಟೋಬರ್‌ವರೆಗಿನ ಮೂರು ತಿಂಗಳು ಕಾಲ ಕುಜ ಅನುಕೂಲಿ ಯಾಗಿರುವವನಲ್ಲದೇ ಶುಕ್ರ ಕೂಡ ಸಹಕಾರಿ ಯಾಗಿರುವನು. ಆಗಸ್ಟ ವರೆಗೆ ಗುರು ಕೂಡ ನಿಮ್ಮ ಬೆಂಬಲಕ್ಕಿದ್ದು, ನಂತರ ಆತ




# ಮಹತ್ವದ ಬದಲಾವಣೆಗಳು

ವರ್ಷಾರಂಭದಲ್ಲಿ ಅಂದರೆ ೧೯೭೭ರ ದೀಪಾವಳಿಯ ವೇಳೆಗೆ ತುಲಾ ರಾಶಿಯಲ್ಲಿರುವ ರವಿಯು ನವೆಂಬರ್ ೧೫ಕ್ಕೆ ವೃಶ್ಚಿಕ ರಾಶಿಯನ್ನು ಪ್ರವೇಶಿಸಿ, ಡಿಸೆಂಬರ್ ೧೫ರಂದು ಧನು ರಾಶಿಗೆ ಪ್ರವೇಶ ಮಾಡುವನು. ೧೯೭೮ ರ ಜನವರಿ ೧೨ರಂದು ಆತ ಮಕರ ರಾಶಿಯತ್ತ ಸರಿದು ಫೆಬ್ರುವರಿ ೧೧ಕ್ಕೆ ಕುಂಭ ರಾಶಿಯನ್ನು, ಮಾರ್ಚ್ ೧೩ರಂದು ಮೀನ ರಾಶಿಯನ್ನೂ, ಏಪ್ರಿಲ್ ೧೨ರಂದು ಮೇಷ ರಾಶಿಯನ್ನೂ, ಮೇ ೧೩ರಂದು ವೃಷಭ ರಾಶಿಯನ್ನೂ ಜೂನ್ ೧೩ರಂದು ಮಿಥುನ ರಾಶಿಯನ್ನೂ, ಜುಲೈ ೧೫ ರಂದು ಕರ್ಕ ರಾಶಿಯನ್ನೂ, ಆಗಸ್ಟ್ ೧೫ರಂದು ಸಿಂಹ. ಸಪ್ಟೆಂಬರ್ ೧೫ರಂದು ಕನ್ಯಾ, ಅಕ್ಟೋಬರ್ ೧೬ರಂದು ತುಲಾ ರಾಶಿ ಪ್ರವೇಶಿಸಿ ನವೆಂಬರ್ ೧೫ರಂದು ಮತ್ತೆ ವೃಶ್ಚಿಕ ರಾಶಿಗೆ ಸರಿಯುವನು.

**ಬುಧ :**

೧೯೭೭ರ ದೀಪಾವಳಿಯ ವೇಳೆಗೆ ಬುಧ ಗ್ರಹವು ವೃಶ್ಚಿಕ ರಾಶಿಯಲ್ಲಿರುವದು. ನವೆಂಬರ್ ೨೪ರಂದು ಧನು ರಾಶಿಗೆ ಪ್ರವೇಶ. ಅಲ್ಲಿ ವಕ್ರವಾಗಿ ತಿರುಗಿ ಡಿಸೆಂಬರ್ ೨೮ರಂದು ವೃಶ್ಚಿಕ ರಾಶಿಗೆ ಪ್ರವೇಶಿಸುವನು. ೧೯೭೮ರ ಜನವರಿ ೨ರಂದು ನೇರವಾಗಿ ತಿರುಗಿ ಮತ್ತೆ ಜನವರಿ ೪ರಂದು ಧನು ರಾಶಿಯನ್ನು ಪ್ರವೇಶಿಸುವನು. ಜನವರಿ ೩೦ರಂದು ಮಕರ ರಾಶಿಗೆ ಪ್ರವೇಶಿಸಿ ಫೆಬ್ರುವರಿ ೧೮ರಂದು ಕುಂಭ, ಮಾರ್ಚ್ ೬ರಂದು ಮೀನ, ಮಾರ್ಚ್ ೨೫ರಂದು ಮೇಷ ರಾಶಿಯನ್ನು ಪ್ರವೇಶಿಸಿ ಏಪ್ರಿಲ್ ೩ರಂದು ವಕ್ರವಾಗುವದು. ಏಪ್ರಿಲ್ ೧೦ರಂದು ಮೀನ ರಾಶಿಯನ್ನು ಪುನರ್‌ಪ್ರವೇಶಿಸಿ, ಏಪ್ರಿಲ್ ೨೬ರಂದು ನೇರವಾಗಿ ತಿರುಗುತ್ತ ಮೇ ೯ರಂದು ಮೇಷ ರಾಶಿಯನ್ನು ಪುನರ್‌ಪ್ರವೇಶಿಸುವದು. ವೃಷಭ ರಾಶಿಯನ್ನು ಮೇ ೨೫ರಂದು, ಮಿಥುನವನ್ನು ಜೂನ್ ೧೪ರಂದು. ಕರ್ಕವನ್ನು ಜೂನ್ ೨೫ ರಂದು, ಸಿಂಹವನ್ನು ಜುಲೈ ೧೮ರಂದು ಪ್ರವೇಶಿಸಿ ಆಗಸ್ಟ್ ೬ರಂದು ವಕ್ರವಾಗಿ ತಿರುಗತೊಡಗುವದು. ಆಗಸ್ಟ್ ೨೩ರಂದು ಕರ್ಕಕ್ಕೆ ಮತ್ತೆ ಮರಳಿ, ಆಗಸ್ಟ್ ೨೯ರಂದು ನೇರವಾಗಿ ತಿರುಗಿ ಸಪ್ಟೆಂಬರ್ ೨ರಂದು ಸಿಂಹರಾಶಿಗೆ ಪುನರ್‌ಪ್ರವೇಶಗೈಯುವದು. ಸಪ್ಟೆಂಬರ್ ೨೨ರಂದು ಕನ್ಯಾ ರಾಶಿಗೆ ಪ್ರವೇಶಿಸುವ ಬಂಧ, ಅಕ್ಟೋಬರ ೯ ರಂದು ತುಲಾ, ಅಕ್ಟೋಬರ್ ೨೮ರಂದು ವೃಶ್ಚಿಕ ರಾಶಿಗೆ ಪ್ರವೇಶಿಸಿ, ನವೆಂಬರ್ ೨೧ರಂದು ವಕ್ರವಾಗುವದು.

**ಶುಕ್ರ :**

ದೀಪಾವಳಿಯ ವೇಳೆಗೆ ತುಲಾದಲ್ಲಿರುವ ಶುಕ್ರ ನವೆಂಬರ್ ೨೭ರಂದು ವೃಶ್ಚಿಕಕ್ಕೆ ಪ್ರವೇಶಿಸಿ ಡಿಸೆಂಬರ್ ೨೧ಕ್ಕೆ ಧನು ರಾಶಿಗೆ ಪ್ರವೇಶಿಸುವನು. ೧೯೭೮ ಜನವರಿ ೧೪ರಂದು ಮಕರ ರಾಶಿಯನ್ನು ಪ್ರವೇಶಿಸಿ, ಫೆಬ್ರುವರಿ ೭ರಂದು ಕುಂಭ, ಮಾರ್ಚ್ ೩ರಂದು ಮೀನ, ಮಾರ್ಚ್ ೨೮ರಂದು ಮೇಷ, ಏಪ್ರಿಲ್ ೨೦ರಂದು ವೃಷಭ. ಮೇ ೧೫ ರಂದು ಮಿಥುನ, ಜೂನ್ ೯ರಂದು ಕರ್ಕ. ಜುಲೈ ೨೨ರಂದು ಸಿಂಹ, ಆಗಸ್ಟ್ ೩೦ರಂದು ಕನ್ಯಾ ಮತ್ತು ಅಕ್ಟೋಬರ್ ೧೨ರಂದು ವೃಶ್ಚಿಕಕ್ಕೆ ತಿರುಗಿ ಅಕ್ಟೋಬರ್ ೨೧ರಂದು ವಕ್ರವಾಗಿ ತಿರುಗತೊಡಗುವನು. ಅಕ್ಟೋಬರ್ ೨೩ರಂದು ತುಲಾ ರಾಶಿ ಪ್ರವೇಶಿಸುವ ಶುಕ್ರ ಮುಂದಿನ ದೀಪಾವಳಿಯ ವರೆಗೂ ಅಲ್ಲಿಯೇ ವಕ್ರ ಗತಿಯಲ್ಲಿ ನಿಲ್ಲುವನು.

**ಕುಜ :**

ದೀಪಾವಳಿ ಪ್ರಾರಂಭವಾದಾಗ ಕರ್ಕ ರಾಶಿಯಲ್ಲಿರುವ ಕುಜ ಡಿಸೆಂಬರ್ ೧೩ರಂದು ವಕ್ರವಾಗಿ ತಿರುಗಿ, ೧೯೭೮ರ ಮಾರ್ಚ್ ೩ರಂದು ನೇರವಾಗಿ ತಿರುಗಲಾರಂಭಿಸುವನು. ಮೇ ೨೮ ರಂದು ಸಿಂಹ ರಾಶಿಯನ್ನು ಪ್ರವೇಶಿಸಿ ಜುಲೈ ೨೨ರಂದು ಕನ್ಯಾ, ಸಪ್ಟೆಂಬರ್ ೮ರಂದು ತುಲಾ, ಅಕ್ಟೋಬರ್ ೨೨ರಂದು ವೃಶ್ಚಿಕ ರಾಶಿಗೆ ಬಂದು ಮುಂದಿನ ದೀಪಾವಳಿಯ ವರೆಗೂ ಅಲ್ಲಿಯೇ ಇರುವನು.

**ಗುರು :**

ದೀಪಾವಳಿಯ ವೇಳೆಗೆ ಮಿಥುನದಲ್ಲಿ ವಕ್ರಗತಿಯಲ್ಲಿರುವ ಗುರು ೧೯೭೮ರ ಫೆಬ್ರುವರಿ ೨೦ ರಂದು ನೇರವಾಗಿ ತಿರುಗತೊಡಗಿ ಜುಲೈ ೨೯ ರಂದು ಕರ್ಕ ರಾಶಿ ಪ್ರವೇಶಿಸಿ ಮುಂದಿನ ದೀಪಾವಳಿ ವರೆಗೆ ಅಲ್ಲಿಯೇ ಇರುವನು.

**ಶನಿ :**

ಈ ಡಿಸೆಂಬರ್ ೧೨ಕ್ಕೆ ಶನಿ ಸಿಂಹ ರಾಶಿಯಲ್ಲಿ ವಕ್ರಗತಿ ಹೊಂದುವನು. ೧೯೭೮ರ ಏಪ್ರಿಲ್ ೨೬ರಂದು ಅಲ್ಲಿಯೇ ನೇರವಾಗಿ ತಿರುಗಲಾರಂಭಿಸಿ ಮುಂದಿನ ವರುಷದ ವರೆಗೂ ಇರುವನು.

**ರಾಹು-ಕೇತು :**

ಇಬ್ಬರೂ ಕನಾ ಮತ್ತು ಮೀನ ರಾಶಿಯಲ್ಲಿದ್ದು ಹಿಂತಿರುಗುವಿಕೆಯನ್ನು ವರ್ಷವಿಡೀ ನಡೆಸುತ್ತಾರೆ. ●

ವೇಧದಿಂದ ಬಳಲುವನು. ಶನಿ ಅಷ್ಟೇನೂ ಸಹಕಾರಿಯಲ್ಲದಿದ್ದರೂ ಕುಜ ಮತ್ತು ಗುರುವಿನ ಪ್ರಭಾವವಿರುವುದರಿಂದ ನಿಮ್ಮ ಮೇಲೆ ಶುಭದೃಷ್ಟಿ ಬೀರುವನು.

ಆಗಸ್ಟ್‌ವರೆಗೆ ಹಣ ಕಾಸಿನ ಸ್ಥಿತಿಯಲ್ಲೇನೂ ಬದಲಾವಣೆಯಿಲ್ಲ. ಆಗಸ್ಟ್‌ನಿಂದ ಡಿಸೆಂಬರ್ ವರೆಗಿನ ದಿನಗಳಲ್ಲಿ ಆರ್ಥಿಕ ಸ್ಥಿತಿ ಹದಗೆಟ್ಟು ನೀವು ಹಣಕ್ಕಾಗಿ ಪರದಾಡಬೇಕಾಗುವದು. ಆದರೆ ಗೆಳೆಯರು ನಿಮ್ಮ ಅವಶ್ಯಕತೆಗಳನ್ನು ಪೂರೈಸುವರು. ಹೀಗಾಗಿ ತೊಂದರೆಗಳಿಂದ ಪಾರಾಗುವಿರಿ.. ದುಂದು ವೆಚ್ಚದಿಂದ ದೂರವಿರುವುದು ಒಳಿತು. ವರ್ಷದ ದ್ವಿತೀಯಾರ್ಧದಲ್ಲಿ ಹಣ ತೊಡಗಿಸಬೇಕಾದರೆ ಜಾಗರೂಕರಾಗಿರಿ. ಲಾಟರಿ–ಸಟ್ಟಾ ವ್ಯವಹಾರಗಳಲ್ಲಿ ಜಯ ಲಭಿಸುವ ಸಾಧ್ಯತೆಗಳುಂಟು.

ಸ್ಥಾವರ ಆಸ್ತಿ ವ್ಯವಹಾರಗಳಲ್ಲಿ ಒಳ್ಳೆಯ ಫಲ ಕಂಡು ಬರುವುದರ ಜತೆಗೆ ಲಾಭವೂ ಉಂಟು. ನಿರುದ್ಯೋಗಿಗಳಿಗೆ ಒಳ್ಳೆಯ ನೌಕರಿ ದೊರೆಯುವದು. ಉದ್ಯೋಗಸ್ಥರಿಗೆ ಸಹೋದ್ಯೋಗಿಗಳಿಂದ ಸ್ನೇಹಮಯ ಸಹಕಾರ. ವ್ಯವಹಾರಸ್ಥರಿಗೆ ಒಳ್ಳೆಯ ಲಾಭ. ವ್ಯಾಪಾರ ತೇಜಿ. ವ್ಯಾವಹಾರಿಕ ಪ್ರವಾಸಗಳು ಸಂತೋಷ ತರುವುದರ ಜತೆಗೆ ಲಾಭವನ್ನು ತರುವವು. ವೃತ್ತಿಯಲ್ಲಿ ವೃದ್ಧಿಯ ಜತೆಗೆ ಪ್ರಸಿದ್ಧಿ.

ನಿಮ್ಮ ಮತ್ತು ಮಕ್ಕಳ ಆರೋಗ್ಯಕ್ಕೆ ಒಳ್ಳೆಯ ಚಿಕಿತ್ಸೆಯ ಆವಶ್ಯಕತೆಯುಂಟು. ವರ್ಷಾರಂಭದಲ್ಲೇ ಒಮ್ಮೆ ದೈಹಿಕ ಪರೀಕ್ಷೆ ಮಾಡಿಸಿಕೊಳ್ಳಿ. ಏನಾದರೂ ರೋಗ ಲಕ್ಷಣಗಳಿದ್ದರೆ ಚಿಕಿತ್ಸೆ ಪ್ರಾರಂಭಿಸುವುದು ಸೂಕ್ತ. ಮಾನಸಿಕ ಶ್ರಮ ಮತ್ತು ಹೆಚ್ಚು ದಣಿವಿನಿಂದಾಗಿಯೇ ಹೆಚ್ಚಾಗಿ ಈ ಅನಾರೋಗ್ಯ ತಲೆದೋರುವುದು. ವಿಶ್ರಾಂತಿ ಅಗತ್ಯ. ಹಳೆಯ ಜಾಡ್ಯಗಳಿಂದ ಬಳಲುವವರಿಗೆ ಈ ವರ್ಷ ತೊಂದರೆಯಿಲ್ಲ. ಹೆಚ್ಚಿನ ಶ್ರಮದಿಂದ ದೂರವಿರಿ.

ಕೌಟುಂಬಿಕ ಜೀವನ ಸುಖಮಯ. ಹೊಸ ಫರ್ನೀಚರ್‌ಗಳನ್ನು, ವಾಹನಗಳನ್ನು ಕೊಳ್ಳುವಿರಿ. ದೇಶದ ಬೇರೆ ಭಾಗಗಳಲ್ಲಿ ಕುಟುಂಬದ ಜನರೊಂದಿಗೆ ಸಂಚರಿಸಿ ಇಚ್ಛಿತ ಸ್ಥಳಗಳಿಗೆ ಭೇಟಿ ಕೊಡುವಿರಿ. ತರುಣ–ತರುಣಿಯರಿಗೆ ಸಂತೋಷದ ದಿನಗಳು. ಗೆಳೆಯರೊಂದಿಗೆ ಸೌಹಾರ್ದ ಹೆಚ್ಚುವದು. ಅವಿವಾಹಿತರು ಸಂತೋಷದಿಂದಿದ್ದು ಯಾರಿಂದಲೋ ಆಕರ್ಷಿತರಾಗಬಹುದು.



ದೀಪಾವಳಿಯು ಸರ್ವರಿಗೂ ಶುಭಪ್ರದವಾಗಲಿ !

# ದಿ ವಿಜಾಪುರ ಅಗ್ರಿಕಲ್ಚರಲ್ ಪ್ರೊಡ್ಯೂಸ್ ಮಾರ್ಕೆಟ್ ಕಮಿಟಿ ವಿಜಾಪುರ

ವಿಜಾಪುರ ಅಗ್ರಿಕಲ್ಚರಲ್ ಪ್ರೊಡ್ಯೂಸ ಮಾರ್ಕೆಟ ಕಮಿಟಿಯು ನಮ್ಮ ರಾಜ್ಯದಲ್ಲಿಯೆ ಅತ್ಯಂತ ಹಳೆಯ ಮಾರ್ಕೆಟ ಕಮಿಟಿಗಳಲ್ಲಿ ಒಂದಾಗಿದೆ. ನಮ್ಮ ಮಾರ್ಕೆಟ ಕಮೀಟಿಯು ಆಗಿನ ಮುಂಬೈ ಪ್ರಾಂತದ ಕೆಳಗೆ ಕಾಟನ್ ಮಾರ್ಕೆಟ ಅಂತಾ 1938ರಲ್ಲಿ ಸ್ಥಾಪನೆಯಾಯಿತು ಮುಂದೆ ಬದಲಾದ ಮಾರ್ಕೆಟ ಕಾಯ್ದೆಗಳ ಪ್ರಕಾರ ತನ್ನ ಕಾರ್ಯಕ್ರಮಗಳನ್ನು ಮುಂದುವರಿಸಿಕೊಂಡು ವರ್ಷಂಪ್ರತಿ ಪ್ರಗತಿಪಥದಲ್ಲಿ "ಅ" ವರ್ಗದ ಮಾರುಕಟ್ಟೆಗಳಲ್ಲಿ ಒಂದೆಂದು ಎಣಿಸಲಾಗುತ್ತದೆ.

ಸಮಿತಿಯು ಮುಖ್ಯಯಾರ್ಡದಲ್ಲಿ ಬೆಳೆಗಾರ ಮಾರಾಟಗಾರರಿಗೆ ಅನುಕೂಲ ಒದಗಿಸಲು ಸಮಿತಿಯು ಸ್ವಂತ ಖರ್ಚಿನಿಂದ ಕೆಳಗೆ ಕಾಣಿಸಿದ ಅಭಿವೃದ್ಧಿ ಕೆಲಸಗಳನ್ನು ಕೈಕೊಳ್ಳಲಾಗಿದೆ. 1. ಆಫೀಸ ಕಟ್ಟಡ 2) ಕ್ಯಾಂಟಿನ 3) ರೈತಭವನ 4) ಪಂಪಹೌಸ್ 5) ಪಾಯರ ಹೈಡ್ರುವಿಟ 6) ಬ್ಯಾಂಕ ಬಿಲ್ಡಿಂಗ 7) ಪೋಸ್ಟ ಆಫೀಸ.

—: ಉಪಮಾರುಕಟ್ಟೆಗಳಲ್ಲಿ :—

**ಸಿಂದಗಿ :-** 1) ಆಫೀಸ ಕಟ್ಟಡ 2) ರೈತಭವನ ● **ಇಂಡಿ :-** 1) ಆಫೀಸ ಕಟ್ಟಡ 2) ಕ್ಯಾಂಟಿನ 3) ರೈತಭವನ 4) ದನಗಳ ಕೊಟ್ಟಿಗೆ 5) ಮಾರಾಟ ಭವನ.

ಸಮಿತಿಯ ಕ್ಷೇತ್ರವು ಇಂಡಿ, ಸಿಂದಗಿ ಹಾಗೂ ಬಸವನ-ಬಾಗೇವಾಡಿ ವಿಜಾಪೂರ ಈ ನಾಲ್ಕು ತಾಲೂಕಗಳನ್ನೊಳ- ಗೊಂಡಿರುತ್ತದೆ. ಸಮಿತಿಯು ಸಧ್ಯದ ಮಾರ್ಕೆಟ ಯಾರ್ಡಗಳಲ್ಲಿ ಆಫೀಸಿನ ಕಟ್ಟಡ ಕ್ಯಾಂಟಿನ ಕ್ಯಾಟಲ್ ಶೆಡ್ ಕಟ್ಟಿಸಲಾಗಿದೆ ಅಲ್ಲದ ಇನ್ನುಳಿದ ಸಭೆ ಮಾರ್ಕೆಟ ಯಾರ್ಡಗಳಲ್ಲಿ ಅಭಿವೃದ್ಧಿ ಕೆಲಸಗಳ ಯೋಜನೆಯನ್ನು ತಯಾರಿಸಲಾಗಿದೆ. ಸಮಿತಿಯು ಅಭಿವೃದ್ಧಿಗಾಗಿ ಜಾಗತಿಕ ಬ್ಯಾಂಕಿನಿಂದ ರೂ. ಎರಡು ಕೋಟಿ 25 ಲಕ್ಷಗಳ ಆರ್ಥಿಕ ನೆರವು ದೊರೆಯಲಿದೆ.

**ಸಮಿತಿಯ 1976-77ನೇ ಸಾಲಿನ ಆದಾಯವು 24,98,740-20**

ಕಮೀಟಿಯು ಈ ಪ್ರಗತಿಗೆ ಕಾರಣರಾದಂತಾ ವ್ಯಾಪಾರಿ ಮತ್ತು ಕೃಷಿಬಾಂಧವರಲ್ಲಿ ವಿನಂತಿಸುವದೇನೆಂದರೆ ಕೃಷಿಕರು ತಮ್ಮ ಮಾಲನ್ನು ಸ್ವಚ್ಛ ಮಾಡಿಕೊಂಡು ಬಂದಲ್ಲಿ ಅಂಥವರಿಗೆ ಒಳ್ಳೆ ಧಾರಣೆ ಸಿಗುತ್ತದೆ. ಮತ್ತು ವ್ಯಾಪಾರಿ ಬಂಧುಗಳು ತಮಗೆ ಅವಶ್ಯಯಿಸತಕ್ಕ ಸಮಿತಿಯು ಎಲ್ಲ ಲಾಯಸನ್ಸಗಳನ್ನು ಪಡೆದು ವ್ಯವಹರಿಸಬೇಕು ಮತ್ತು ಸಮಿತಿಯಿಂದ ನಿಗದಿಪಡಿಸಿದ ದರಗಳನ್ನಷ್ಟೆ ಆಕರಣೆ ಮಾಡಬೇಕು. ಕಾಯ್ದೆ ಕಾನೂನಗಳನ್ನು ಬದ್ಧವಾಗಿ ಆಚರಿಸಲು ಕಮಿಟಿಯು ಕೈಕೊಂಡ ಕೃಷಿಕರ ಆರ್ಥಿಕ ಅಭಿವೃದ್ಧಿ ಕಾರ್ಯದಲ್ಲಿ ಸಹಕರಿಸುವಿರೆಂದು ನಂಬಿರುವೆ.

| ಎಚ್. ಶ್ರೀನಿವಾಸಾಚಾರರು | ಸಿ.ಎಂ. ದೇಸಾಯಿ | ಕುಮಾರಗೌಡ ಎ. ಪಾಟೀಲ |
|---|---|---|
| ಸೆಕ್ರೆಟರಿ | ವೈಸ್ ಚೇರಮನ್ | ಚೇರಮನ್ |

## ಅಗ್ರಿಕಲ್ಚರಲ್ ಪ್ರೊಡ್ಯೂಸ ಮಾರ್ಕೆಟ್ ಕಮಿಟಿ ವಿಜಾಪುರ

—: ಸ ಮಿ ತಿ ಯ ಸ ದ ಸ್ಯ ರು :—

1) ಆರ್. ಎಮ್. ಪಾಟೀಲ
2) ಆಯ್. ಎಮ್. ಪಾಟೀಲ
3) ಡಿ. ಎಸ್. ಪಾಟೀಲ
4) ಬಿ. ಎಸ್. ಪಾಟೀಲ
5) ಎಸ್. ಆರ್. ಪಾಟೀಲ
6) ಎಸ್. ಸಿ. ಪಾಟೀಲ
7) ಸಿ. ಬಿ. ಹಕ್ಕಾಪಕ್ಕಿ
8) ಎಸ್. ಎಫ್. ಸಜ್ಜನ
9) ಆರ್. ಎಸ್. ಅವರಂಗಬಾದ
10) ಎ. ಜಿ. ಮುಲ್ಲಾ
11) ಎಸ್. ಎಸ್. ಕೆರಕಲಮಟ್ಟಿ

**ಡಿಸ್ಟ್ರಿಕ್ಟ್ ಮಾರ್ಕೆಟಿಂಗ್ ಆಫೀಸರ, ವಿಜಾಪುರ**

ವಿದ್ಯಾರ್ಥಿ ವಿದ್ಯಾರ್ಥಿನಿಯರಿಗಿದು ಅಭ್ಯಾಸಕ್ಕೆ ಅನುಕೂಲವಾಗುವ ವರ್ಷ. ಜ್ಞಾನಾಭಿವೃದ್ಧಿಯ ಜತೆಗೇ ಶೈಕ್ಷಣಿಕ ಕೇಂದ್ರಗಳ ಭೇಟಿಯ ಅವಕಾಶಗಳೂ ಉಂಟು. ಹೆಚ್ಚಿನ ಅಭ್ಯಾಸಕ್ಕೆ ವಿದೇಶ ಪ್ರವಾಸದ ಯೋಗವೂ ಇದೆ.

ಉತ್ತರಾಷಾಢಾ ಮತ್ತು ಮೂಲಾ ನಕ್ಷತ್ರದವರಿಗಿಂತ ಪೂರ್ವಾಷಾಢಾದವರಿಗಿದು ಉತ್ತಮ ವರ್ಷ.

## ಮಕರ

ಕಂಜ ಸಪ್ಟೆಂಬರ್‌ನಿಂದ ಡಿಸೆಂಬರ್ ವರೆಗೆ ನಿಮಗೆ ಅನುಕೂಲಿಯಾಗಿರುವನು. ಜುಲೈ ವರೆಗೆ ಗುರು ಕೃಪೆಯುಂಟು. ವರ್ಷದ ಬಹು ಭಾಗ ಶುಕ್ರ ನಿಮ್ಮ ಸಹಾಯಕ್ಕಿರುವನು.

ಆರ್ಥಿಕ ಮುಗ್ಗಟ್ಟು ಮತ್ತು ಒತ್ತಡಗಳಿಂದಲೇ ಈ ವರ್ಷ ಆರಂಭವಾಗುತ್ತದೆ. ಆಗಸ್ಟ ನಂತರ ಪರಿಸ್ಥಿತಿ ಸ್ವಲ್ಪ ಸುಧಾರಿಸುತ್ತದೆ. ಅಲ್ಲಿಯ ವರೆಗೆ ಸ್ವಲ್ಪ ಎಚ್ಚರದಿಂದಿದ್ದು ಎಲ್ಲಾ ಅನವಶ್ಯಕ ವೆಚ್ಚಗಳನ್ನೂ ಕಡಿಮೆ ಮಾಡಿರಿ. ಸಪ್ಟೆಂಬರ್‌ನಿಂದ ಡಿಸೆಂಬರ್ ವರೆಗಿನ ದಿನಗಳಲ್ಲಿ ಗ್ರಹಬಲದಿಂದ ಲಾಟರಿ ಲಕ್ಷ್ಮಿ ಒಲಿಯುವ ಸಾಧ್ಯತೆಯಿದೆ. ಸ್ಥಾವರ ಆಸ್ತಿ ಸಂಬಂಧಿತ ವಿಷಯಗಳಲ್ಲಿ ಆಶಾದಾಯಕ ಚಿಹ್ನೆ ಕಳಿದ್ದು ಸಪ್ಟೆಂಬರ್‌ನಿಂದ ಡಿಸೆಂಬರ್ ವರೆಗಿನ ದಿನಗಳಲ್ಲಿ ಒಳ್ಳೆಯ ವ್ಯವಹಾರ ನಡೆಸಬಹುದು. ಉದ್ಯೋಗಸ್ಥರಿಗೆ ಈ ವರ್ಷವಿಡೀ ಶ್ರಮ. ಉದ್ಯೋಗ ವ್ಯವಹಾರಗಳಲ್ಲಿ ಅಷ್ಟೇನೂ ಅನುಕೂಲದ ದಿನಗಳಿಲ್ಲ. ವರ್ಷದ ಮೊದಲರ್ಧದಲ್ಲಿ ಉಂಟಾಗುವ ಆಘಾತಗಳನ್ನು ಸಹಿಸಿಕೊಳ್ಳುವ ತಾಳ್ಮೆ ಪಡೆಯಿರಿ.

ಫ್ಲೂ ಮುಂತಾದ ಕಿರು ಜಾಡ್ಯಗಳಿಂದ ಆರೋಗ್ಯ ಕೆಡಬಹುದು. ವರ್ಷವಿಡೀ ಒಂದಲ್ಲ ಒಂದು ಕಿರಿಕಿರಿ. ಆದರೆ ಸಕಾಲಿಕ ವೈದ್ಯಕೀಯ ಚಿಕಿತ್ಸೆಯಿಂದ ಪರಿಸ್ಥಿತಿ ಸುಧಾರಿಸುವದು. ಹಳೆಯ ಜಾಡ್ಯದಿಂದ ಬಳಲುತ್ತಿರುವವರ ಸ್ಥಿತಿ ಮತ್ತಷ್ಟು ಹದಗೆಡುವುದರಿಂದ ಉತ್ತಮ ಔಷಧೋಪಚಾರ ಅವಶ್ಯ.

ಕೌಟುಂಬಿಕ ಜೀವನ ನೀರಸ. ಪತಿ ಪತ್ನಿಯರ ಮಧ್ಯೆ ಜಗಳಗಳಾಗುವವು. ನಿಮ್ಮ ಬಗ್ಗೆ ತಪ್ಪು ಕಲ್ಪನೆಯುಂಟಾಗುವ ಸಾಧ್ಯತೆಗಳಿರುವದರಿಂದ ಯಾರ ಬಗ್ಗೆಯೂ ಯಾವದೇ ರೀತಿಯ ಟೀಕೆಗೆ ಆಸ್ಪದ ಕೊಡಬೇಡಿ. ಸಾಮಾಜಿಕ ಜೀವನದಲ್ಲಿ ನಿರಾಸೆ ಕಂಡು ಬರುವದರ ಜತೆಗೆ ತೊಂದರೆ ನೀಡುವ ಗೆಳೆಯರು ಹೆಚ್ಚುವರು. ಆದ್ದರಿಂದ ಓದುವುದರಲ್ಲಿ ಇಲ್ಲವೇ ಇತರ ಹವ್ಯಾಸಗಳಲ್ಲಿ ವೇಳೆ ಕಳೆಯುವುದೊಳಿತು.

ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಅವರ ಪ್ರತಿಭಾ ಪ್ರಕಾಶಕ್ಕಿದು ಒಳ್ಳೆಯ ವರ್ಷ. ಚಟುವಟಿಕೆಗಳಲ್ಲಿ ಅತ್ಯಂತ ಯಶಸ್ಸು. ಲಲಿತಕಲೆಗಳಲ್ಲಿ ಆಸಕ್ತರಿಗೆ ಬುದ್ಧಿವಂತರ ಮಾರ್ಗದರ್ಶನ ಇದರಿಂದ ಭಾವೀ ಜೀವನದಲ್ಲಿ ಉಪಯೋಗವುಂಟು.

ಶ್ರವಣಾ ನಕ್ಷತ್ರದವರಿಗೆ ಧನಿಷ್ಠಾ ಮತ್ತು ಉತ್ತರಾಷಾಢದವರಿಗಿಂತ ಒಳ್ಳೆಯ ದಿನಗಳು.

## ಕುಂಭ

ಕಂಜ. ಗುರು ಮತ್ತು ಶುಕ್ರರು ನಿಮ್ಮ ಮೇಲೆ ಪ್ರಸನ್ನರು. ಶನಿಯ ಕಾಕದೃಷ್ಟಿ ಇದೆಯಾದರೂ ಮೇಲಿನ ಮೂವರ ಬಲವಿರುವುದರಿಂದ ವರ್ಷದ ಬಹು ಭಾಗ ಅಷ್ಟೇನೂ ತೀವ್ರತರವಲ್ಲ.

ಆರ್ಥಿಕವಾಗಿ ತುಂಬಾ ಒಳ್ಳೆಯ ವರ್ಷ. ಹೊಸ ಮೂಲಗಳಿಂದ ಆದಾಯ. ಮೊದಲಿನ ಮೂಲಗಳಿಂದಲಂತೂ ಈ ಆದಾಯ ದ್ವಿಗುಣ. ಈ ವರ್ಷ ಲಾಟರಿಗಳಲ್ಲಿ ಬಹುಮಾನ ಬಂದರೂ ಬಂದೀತು. ಒಳ್ಳೆಯ ಭಾಂಡವಲಿನಿಂದ ಉತ್ತಮ ಲಾಭ. ಆದರೆ ವ್ಯಾವಹಾರಿಕವಾಗಿ ಸ್ವಲ್ಪ ಲುಕ್ಸಾನು.

ಉದ್ಯೋಗಸ್ಥರಿಗೆ ಹೆಚ್ಚಿನ ಅಧಿಕಾರ ಮತ್ತು ಗೌರವದ ಸ್ಥಾನಕ್ಕೆ ವರ್ಗಾವಣೆ. ಹೊಣೆ ಜಾಸ್ತಿ. ಆದರೂ ನೀವು ನಿರ್ವಹಿಸುತ್ತೀರಿ. ವ್ಯವಹಾರಸ್ಥರು ಮತ್ತು ಸ್ವತಂತ್ರೋದ್ಯೋಗಿಗಳು ತಮ್ಮ ಕ್ಷೇತ್ರ ವಿಸ್ತಾರದಿಂದ ಲಾಭ ಪಡೆಯುವರು. ಸ್ಥಾವರ ಆಸ್ತಿ ವಿಷಯದಲ್ಲಿ ಹೆಚ್ಚು ಲಾಭ. ಕೊಟ್ಟ ಸಾಲ ಮರಳಿ ಬಾರದೆಂಬ ನಿಮ್ಮ ಅನಿಸಿಕೆ ಸುಳ್ಳಾಗಿ ಸಾಲ ಪಡೆದವರು ಮರಳಿಸುವರು. ಆಸ್ತಿಯ ದುರಸ್ತಿ, ವಿಸ್ತರಣೆ, ಮುಂತಾದ

ಕಾರ್ಯಗಳು ಭರದಿಂದ ಸಾಗುವುದಲ್ಲದೇ ಬಲಿಷ್ಠ ಹಣ ಉಳಿತಾಯ ವೆಚ್ಚದಲ್ಲಾಗುವದು.

ಆರೋಗ್ಯದ ದೃಷ್ಟಿಯಿಂದ ನೀವು ತುಂಬಾ ಸದೃಢರಾಗುವಿರಿ. ಹಳೆಯ ಜಾಡ್ಯಗಳಿಂದ ಬಳಲುತ್ತಿರುವವರ ಸ್ಥಿತಿ ಸುಧಾರಿಸುತ್ತದೆ. ಈಗ ಪ್ರಾರಂಭಿಸಿದ ವೈದ್ಯಕೀಯ ಚಿಕಿತ್ಸೆ ಬೇಗನೇ ಫಲಕಾರಿಯಾಗುತ್ತದೆ.

ಕೌಟುಂಬಿಕ ಜೀವನ ಸಂತೋಷಮಯ. ಅನೇಕ ಸಮಾರಂಭಗಳು ಈ ವರ್ಷ ನಿಮ್ಮ ಮನೆಯಲ್ಲಿ ನಡೆದು ಸಂತೋಷ ಇಮ್ಮಡಿಯಾಗುವದು. ವಿವಾಹ ವಯಸ್ಕ ಹುಡುಗ–ಹುಡುಗಿಯರಿಗೆ ಒಳ್ಳೆಯ ಸಂಬಂಧದಲ್ಲಿ ಮದುವೆ ಜರುಗುವದು. ಅವಿವಾಹಿತರಿಗೆ ಅನೇಕ ಕಡೆಗಳಿಂದ ಆಹ್ವಾನ. ಸಾಮಾಜಿಕವಾಗಿ ಅವರು ತುಂಬಾ ನೆಮ್ಮದಿ ಪಡೆಯುವರು. ಕೆಲವರಿಗಂತೂ ಸ್ನೇಹ ಪ್ರಣಯವಾಗಿ ಪರಿಣಮಿಸಿ ಮದುವೆಯಲ್ಲಿ ಪರ್ಯವಸಾನಗೊಳ್ಳುವದು.

ವಿದ್ಯಾರ್ಥಿ–ವಿದ್ಯಾರ್ಥಿನಿಯರಿಗೆ ಒಳ್ಳೆಯ ವರ್ಷ. ಕ್ರೀಡಾ ಪಟುಗಳಿಗೆ ಉತ್ತಮ ಅವಕಾಶ. ಪ್ರಶಸ್ತಿಗಳ ಜತೆಗೆ ರಾಜ್ಯಮಟ್ಟದ ಕ್ರೀಡೆಗಳಲ್ಲಿ ಭಾಗವಹಿಸುವ ಅವಕಾಶ. ಪ್ರತಿಭಾವಂತರು ಮತ್ತು ವಿಶೇಷ ಚಟುವಟಿಕೆಯುಳ್ಳವರಿಗೆ ದೊಡ್ಡ ಜನರ ಸಹವಾಸದಿಂದ ಭಾವೀ ಜೀವನಕ್ಕೊಂದು ಸುಭದ್ರ ನೆಲೆ.

ಪೂರ್ವಾಭಾದ್ರಪದದವರಿಗಿಂತ ಧನಿಷ್ಠಾ ನಕ್ಷತ್ರದವರಿಗೆ ಈ ವರ್ಷ ಒಳ್ಳೆಯದು.




ವರ್ಷದ ದ್ವಿತೀಯಾರ್ಧದಲ್ಲಿ ಗುರು ಒಳ್ಳೆಯ ಸ್ಥಾನದಲ್ಲಿರುವನು. ಕೆಲ ತಿಂಗಳುಗಳವರೆಗೆ ಕುಜನೂ ನಿಮ್ಮ ಮೇಲೆ ಕೃಪಾಳು. ಶುಕ್ರ ಸ್ವಲ್ಪ ವಕ್ರ. ಶನಿ ಮಾತ್ರ ನಿಮ್ಮ ಬಗ್ಗೆ ಕನಿಕರದವನು.

ಆರ್ಥಿಕವಾಗಿ ಒಳ್ಳೆಯ ವರ್ಷ. ಹೊಸ ಯೋಜನೆಗಳು ಸಾಧಿತವಾಗುವವು. ಜತೆಗೇ ಹೇರಳ ಲಾಭವೂ ದೊರೆಯುವದು. ಈ ವರ್ಷದಲ್ಲಿ ನಿಮ್ಮ ಜೀವನದಲ್ಲಾಗುವ ಬದಲಾವಣೆಗಳೆಲ್ಲಾ ಮಹತ್ವವಾದವುಗಳು. ಲಾಟರಿ–ಸಟ್ಟಾ ಜೂಜುಗಳಲ್ಲಿ ಒಳ್ಳೆಯ ಲಾಭ. ಯಾರಾದರೂ ನಿಮ್ಮನ್ನು ಜಾಮೀನಾಗಲು ಕೇಳಿದರೆ ಮಾತ್ರ ಸ್ವಲ್ಪ ಎಚ್ಚರದಿಂದಿರಿ. ಯಾವುದೇ ಪ್ರಸಂಗದಲ್ಲೂ ಜಾಮೀನಾಗಿ ಕೈಕಟ್ಟಿಸಿಕೊಳ್ಳಬೇಡಿ. ಕೊನೆಗೆ ತಾಪತ್ರಯ ಪಡಬೇಕಾದೀತು.

ಉದ್ಯೋಗಸ್ಥರಿಗೆ ಈ ವರ್ಷ ಒಳ್ಳೆಯ ಕಾಲ. ಬಡ್ತಿ ಮತ್ತು ಇನ್‌ಕ್ರಿಮೆಂಟ್‌ಗಳು ಇಚ್ಛೆಯಂತೆ ಸಿಕ್ಕುವವು. ತಮ್ಮ ಇಚ್ಛಿತ ಸ್ಥಳಗಳಿಗೆ ವರ್ಗಾವಣೆಯೂ ಸಿಗಬಹುದು. ಮೇಲಾಧಿಕಾರಿಗಳು ನಿಮ್ಮ ಉದ್ಯೋಗದ ಅಭಿವೃದ್ಧಿಗೋಸ್ಕರ ಸಹಕರಿಸುವರು. ವ್ಯವಹಾರಸ್ಥರಿಗೆ ಹೊಸ ಉದ್ಯಮದಲ್ಲಿ ಕೈ ಹಾಕಲು ಹುಮ್ಮಸ್ಸು ಸಿಕ್ಕುವದು. ಸ್ವತಂತ್ರ ವೃತ್ತಿಯವರಿಗೆ ಅವರ ನಿರೀಕ್ಷೆಗಿಂತ ಹೇರಳ ಲಾಭ ದೊರೆಯುವದು.

ಸಪ್ಟೆಂಬರ್ ಮತ್ತು ಅಕ್ಟೋಬರ್ ತಿಂಗಳನ್ನು ಉಳಿದು ವರ್ಷದ ಉಳಿದೆಲ್ಲ ದಿನಗಳಲ್ಲಿ ಆರೋಗ್ಯ ಚೆನ್ನಾಗಿಯೇ ಇರುವದು. ಮೇಲೆ ಹೇಳಿದ ಎರಡು ತಿಂಗಳಲ್ಲಿ ಮಾತ್ರ ಉಷ್ಣ, ಕೆಮ್ಮು, ತುರಿ, ಮೂಲವ್ಯಾಧಿ ಮತ್ತು ರಕ್ತಬೇಧಿಗಳಂತಹ ಜಾಡ್ಯಗಳಿಂದ ಬಳಲುವಿರಿ. ಇದಕ್ಕೆ ಒಳ್ಳೆಯ ಉಪಾಯವೆಂದರೆ ತಂಪು ಆಹಾರ ಸೇವನೆ. ಕಾಫಿ ಸೇವನೆ ತ್ಯಾಜ್ಯ. ಹಳೆಯ ವ್ಯಾಧಿಗಳಿಂದ ಬಳಲುವವರು ಸ್ವಲ್ಪ ಮಟ್ಟಿಗೆ ಗುಣಹೊಂದುವರು.

ಕೌಟುಂಬಿಕವಾಗಿ ಮಧುರವಾದ ದಿನಗಳು. ದಂಪತಿಗಳಲ್ಲಿ ಅನ್ಯೋನ್ಯತೆ. ವಿವಾಹಿತರಿಗೆ ಪ್ರವಾಸ ಮತ್ತು ಸಾಮಾಜಿಕ ಸಮಾರಂಭಗಳಲ್ಲಿ ಪಾಲ್ಗೊಳ್ಳುವುದರಿಂದ ಸಂತೋಷ, ಹೊಸ ಅನುಭವ. ಮಕ್ಕಳಿಂದ ಮನಕ್ಕೆ ಮುದ. ಮಕ್ಕಳು ತಮ್ಮ ಅಭ್ಯಾಸದಿಂದ ಶಾಲೆಯಲ್ಲಿ ಒಳ್ಳೆಯ ಹೆಸರು ಪಡೆದು ನಿಮಗೂ ಹೆಮ್ಮೆ ತರುವರು. ಅವಿವಾಹಿತರಿಗೆ ನೆರೆಹೊರೆ ಮತ್ತು ಸಮಾಜದಲ್ಲಿ ಒಳ್ಳೆಯ ಸ್ಥಾನ. ಪ್ರಣಯ ವ್ಯವಹಾರಗಳಲ್ಲಿ ಅಷ್ಟೇನೂ ಪ್ರೋತ್ಸಾಹವಿಲ್ಲದಿದ್ದರೂ, ರಚನಾತ್ಮಕ ಕಾರ್ಯಗಳಲ್ಲಿ ಮನಸ್ಸು ತೊಡಗಿಸುವುದರಿಂದ ನಿಮಗೆ ಒಳ್ಳೆಯ ಹೆಸರು.

ವಿದ್ಯಾರ್ಥಿ–ವಿದ್ಯಾರ್ಥಿನಿಯರು ರಾಜ್ಯಮಟ್ಟದ ಪರೀಕ್ಷೆಗಳಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯ ಜತೆಗೆ ಬಹುಮಾನ ಪಡೆಯುವರು. ಚರ್ಚಾಗೋಷ್ಠಿ ಸ್ಪರ್ಧೆಗಳಲ್ಲಿ ಪ್ರಥಮ ಸ್ಥಾನ.

ರೇವತಿ ನಕ್ಷತ್ರದವರು ಪೂರ್ವಾಭಾದ್ರಪದ ಮತ್ತು ಉತ್ತರ ಭಾದ್ರಪದದವರಿಗಿಂತ ಒಳ್ಳೆಯ ದಿನಗಳನ್ನು ಕಾಣುವರು. ●●

ವಿಶ್ವದ ಸಂಗಡ ತನ್ನ ನಂಟನ್ನು ಕುರಿತು ಮನುಷ್ಯ ಮಾಡಿದ ಚಿಂತನೆಯ ಊಹಾತ್ಮಕವೂ, ವೈಜ್ಞಾನಿಕವೂ ಆದ ಸಾಹಸಮಯ ದೀರ್ಘ ಚರಿತ್ರೆಗೆ ಜ್ಯೋತಿಷ ಶಾಸ್ತ್ರದ ಕಥೆಯೂ ಸೇರುತ್ತದೆ.

ಮನೋವಿಜ್ಞಾನವನ್ನಾಗಲೀ, ವೈದ್ಯ ವಿಜ್ಞಾನವನ್ನಾಗಲಿ ಯಾರಾದರೂ ಆಯಾ ಕ್ಷೇತ್ರದ ತಜ್ಞರಲ್ಲಿ ವಿರೋಧಾಭಿಪ್ರಾಯಗಳಿವೆಯೆಂಬ ಕಾರಣಕ್ಕಾಗಿ ಪರಿಶೀಲನೆಗೆ ತಕ್ಕ ವಿಷಯಗಳಲ್ಲ ಎಂದು ತಳ್ಳಿಹಾಕಿದರೆ ಅದನ್ನು ವೈಜ್ಞಾನಿಕ ಸಚ್ಚರಿತೆ ಎಂದು ಹೇಳಲಾಗುತ್ತದೆಯೆ?

ಮನೋವಿಜ್ಞಾನವನ್ನೋ ವೈದ್ಯ ವಿಜ್ಞಾನವನ್ನೊ ಕುರಿತ ಪಠ್ಯಪುಸ್ತಕವೊಂದನ್ನು ಓದಿದ ತರುವಾಯ ರೋಗಲಕ್ಷಣವನ್ನು ಸರಿಯಾಗಿ ತಿಳಿದುಕೊಳ್ಳಲು ಯಾರಿಗಾದರೂ ಅಸಾಧ್ಯವಾದರೆ ಆ ಕಾರಣವಷ್ಟರಿಂದಲೆ ಹಾಗೆ ತಳ್ಳಿಹಾಕುವುದು ವೈಜ್ಞಾನಿಕ ಸಚ್ಚರಿತೆಯಾದೀತೆ?

ಸಾರ್ವಜನಿಕ ಪ್ರಚಾರ ಸಾಧನಗಳು ಯಾವುದೇ ವಿಷಯವನ್ನು ಕುರಿತು ತಾಳುವ ಧೋರಣೆಯನ್ನು ನೆಚ್ಚಿಕೊಂಡು ಆ ವಿಷಯವನ್ನು ವೈಯಕ್ತಿಕವಾಗಿ ಅಧ್ಯಯನ ಮಾಡದೆಯೆ ಅದರ ಬಗ್ಗೆ ಕಾರ್ಯಾನುಭವವನ್ನು ಗಳಿಸದೆಯೆ ಖಂಡನೆಮಾಡುವುದು ವಿಜ್ಞಾನ ವಿಧಾನವೆ?

ಜ್ಯೋತಿಷವು ಮಾನವನಿಗೆ ಗೊತ್ತಿರುವ ಅತ್ಯಂತ ಪ್ರಾಚೀನವಾದ ವಿಜ್ಞಾನವೆಂದು ಹೇಳಲಾಗಿದೆ. ಆ ವಿಷಯಕವಾದ ವಿಪುಲ ಸಾಹಿತ್ಯವು ಭಾರತದಲ್ಲೆ ಅಲ್ಲದೆ ಯೂರೋಪು ಚೀಣಗಳಲ್ಲೂ ಪ್ರಸ್ತುತವಾಗಿದೆ. ನಡೆದುಬಂದಿರುವ ಸಂಪ್ರದಾಯವು ಹಲವು ಕಳೆಗಳಿಂದ ಕೂಡಿದ್ದರೂ ಋ(ರು)ಜುವಾದದ್ದೆ ಆಗಿವೆ. ಎಲ್ಲಾ ಪ್ರಾಚೀನ ಜ್ಞಾನ ಸಮುಚ್ಚಯಗಳಲ್ಲೂ ಕಂಡುಬರುವಂತೆ, ಜ್ಯೋತಿಷದ ಗ್ರಂಥಗಳಲ್ಲೂ ಅಪಾತ್ರದಿಂದ ಜ್ಞಾನದ ದುರ್ವಿನಿಯೋಗವಾಗದೆ ಇರುವಂತೆ ತಪ್ಪಿಸಲು ಸತ್ಯಾಂಶವನ್ನು ಹುದುಗಿಸಿಟ್ಟಿರಲಾಗಿದೆ.

ಜ್ಯೋತಿಷ ಶಾಸ್ತ್ರದ ಬಗ್ಗೆ ಅಂತಾರಾಷ್ಟ್ರೀಯ ಸಮ್ಮೇಳನಗಳು ನಡೆಯುತ್ತಿವೆ. ಆಧುನಿಕ ವಿಧಾನಗಳಿಂದಲೂ ಕಂಪ್ಯೂಟರ್‌ಗಳ ಸಹಾಯದಿಂದಲೂ ಹಿಂದೆಂದೂ ನಡೆಯದೆ ಇದ್ದಂತೆ ಸಂಶೋಧನೆಗಳು ಸಾಗುತ್ತಿವೆ. ಆದರೆ ಸಂಶೋಧಕರ ಸಂಖ್ಯೆ ಕಡಿಮೆ. ಮತ್ತು ಆಧುನಿಕ ಮನೋವಿಜ್ಞಾನದಲ್ಲಿ ಕಂಡುಬರುವಂತೆ ತತ್ವಗಳಿಗೂ, ಪ್ರಯೋಗಗಳಿಗೂ ಕೊಂಚ ತ್ವಂಚಾವಿಂಚ ಇದೆ. ಆದರೂ ಜ್ಯೋತಿಷವು ಸಮಾಜಕ್ಕೆ ತಕ್ಕಷ್ಟು ಉಪಯುಕ್ತವಾದ ಅಧ್ಯಯನ ವಿಷಯವಾಗಿದೆ.

ಜ್ಯೋತಿಷ ಅಂದರೆ ಏನು? ಹಲವರು ಅದನ್ನು ಹಲವು ಬಗೆಯಾಗಿ ತಪ್ಪು ತಿಳಿದುಕೊಳ್ಳುತ್ತಾರೆ. ಸಾಧಾರಣವಾಗಿ ಅದೃಷ್ಟದ ಬಗ್ಗೆ ಅವಧಾನ ಮಾಡುವ ಶಾಸ್ತ್ರ ಅದು ಎಂದು ತಪ್ಪಾಗಿ ಭಾವಿಸಲಾಗಿದೆ. ಜ್ಯೋತಿಷವಾದರೋ ವಿಸ್ತಾರವಾದ ಜ್ಞಾನ ಕ್ಷೇತ್ರವಾಗಿದ್ದು ಅದನ್ನು ಎಲ್ಲಾ ವಿಜ್ಞಾನಗಳಿಗೂ ತಾಯಿ ಎಂದು ಕರೆದರೆ ಅತ್ಯುಕ್ತಿಯಾಗುವುದಿಲ್ಲ. ಅದರ ನಿಜ ಸ್ವರೂಪವನ್ನು ಗ್ರಹಿಸುವಂತಾಗಬೇಕಾದರೆ ಒಂದು ಸುಲಭವಾದ ಒಂದು ಲಕ್ಷಣ ನಿರೂಪಣೆ ಅವಶ್ಯವೆನಿಸುತ್ತದೆ. ಪರಿಷ್ಕಾರವನ್ನೆಬಹುದಾದ ಒಂದು ಲಕ್ಷಣ ನಿರೂಪಣೆ ಎಂದರೆ "ಯಾವ ವಿಜ್ಞಾನವು ಭೂವ್ಯಾಪಾರಗಳನ್ನು ಭೂವ್ಯಾತೀತ ವ್ಯಾಪಾರಗಳನ್ನು ಮಾನವ ವ್ಯಾಪಾರಗಳನ್ನೂ ಹೊಂದಿಸಿ ಮನುಷ್ಯನಿಗೂ ವಿಶ್ವಕ್ಕೂ ಅನುಸಂಬಂಧವನ್ನು ಸ್ಥಾಪಿಸಲು ಎಳೆಸುತ್ತದೆಯೋ" ಅದೇ ಜ್ಯೋತಿಷ. ಅನೇಕ ಕೋಟಿ ಬ್ರಹ್ಮಾಂಡಗಳಿಗೂ ಜೀವಕಣಗಳಿಗೂ ಇರುವ ಅಂತರಕ್ಕೆ ಸೇತುವೆಯನ್ನು ಕಟ್ಟಲು ಯತ್ನಿಸುವ ವಿಜ್ಞಾನ ಅದು.

ಸಾವಿರಾರು ವರ್ಷಗಳಿಂದ ಪ್ರಾಚೀನ ಋಷಿಗಳು ಒಂದು ಕಡೆ ಗ್ರಹಚಾರಗಳಿಗೂ ನಕ್ಷತ್ರಗಳ ಪರಸ್ಪರ ಸ್ಥಿತಿಗಳಿಗೂ ಮತ್ತೊಂಧು ಕಡೆ ಭೂಗೋಳದ ನಡವಳಿಕೆಗಳಿಗೂ ಇರುವ ಸಂಬಂಧವನ್ನು ತರ್ಕಿಸಿದ್ದಾರೆ. ಮುಂಬರುವ ಪ್ರವೃತ್ತಿಗಳನ್ನು—ವಾಸ್ತವ ಘಟನೆಗಳನ್ನು ಮುನ್ನುಡಿಯುವ ಅವರ ಸಾಮರ್ಥ್ಯವು ಪದೇ ಪದೇ ಪ್ರಮಾಣಿತವಾಗಿದೆ.

ಜ್ಯೋತಿಷದ ಬಗ್ಗೆ ವೈಚಾರಿಕರೆಂದು ಹೇಳಿಕೊಳ್ಳುವ ಕೆಲವರಿಗಿರುವ ಕುರುಡು ವಿರೋಧಭಾವನೆಗೆ ಎರಡು ಮೂಲಗಳಿವೆ. ಎರಡೂ ಕೂಡ ಅಜ್ಞಾನದ ಮೂಲಗಳೇ. ಜ್ಯೋತಿಷವೆಂದರೆ ಭವಿಷ್ಯಾವಧಾನ ಎಂಬ ಭಾವನೆ ಅವರಿಗಿರುವುದರಿಂದ, ಜ್ಯೋತಿಷದ ಬಗ್ಗೆ ಅವರಿಗೆ ನಿಷ್ಕೃಷ್ಟವಾದ ಲಕ್ಷಣ ಕಲ್ಪನೆಯಿಲ್ಲದಿರುವುದು ಮತ್ತು ಪತ್ರಿಕೆಗಳಲ್ಲಿ ಬರುವ ವಾರಭವಿಷ್ಯವೇ ಮುಂತಾದವನ್ನು ನೆಚ್ಚಿಕೊಂಡು ಅದನ್ನೇ ಜ್ಯೋತಿಷವೆಂದು ಭ್ರಾಂತಿಪಟ್ಟಿರುವುದು. ಪತ್ರಿಕೆಗಳಲ್ಲಿ ಪ್ರೇಮಾರ್ಥಿಗಳಿಗೆ ನೀಡುವ ಸಲಹೆಗಳ ಆಧಾರದ ಮೇಲೆ ಮನೋವಿಜ್ಞಾನದ ಪ್ರಮಾಣವನ್ನು ನಿರ್ಧರಿಸುವ ಪರಿಪಾಠಕ್ಕೆ ಈ ಪ್ರವೃತ್ತಿ ಸಾಟಿಯಾಗುತ್ತದೆ.

ದೂಷಕರು ಜ್ಯೋತಿಷವನ್ನು ನಿಷ್ಪಕ್ಷಪಾತದೃಷ್ಟಿಯಿಂದ ಕಾಣಲು ಆಗದಿರುವುದಕ್ಕೆ ಒಂದು ದಾರ್ಶನಿಕ ಪ್ರಮೇಯವೂ ಇದೆ– ತಾತ್ವಿಕ ಸಮರ್ಥನೆಯು ಬೇಕೆಂಬ ಒತ್ತಾಯ, ಅಪೇಕ್ಷೆ.

ಜ್ಯೋತಿಷವನ್ನು 'ಹೇತು ಹೀನ' ಎಂದು 'ಅವಿಚಾರ ಶ್ರದ್ಧೆ'ಎಂದು ಹೇಳುವವರು ವೈಟ್ ಹೆಡ್ ಎಂಬ ದಾರ್ಶನಿಕರು ತಮ್ಮ "ವಿಜ್ಞಾನ ಮತ್ತು ಆಧುನಿಕ ಪ್ರಪಂಚ" ಎಂಬ ಗ್ರಂಥದಲ್ಲಿ ಸಂಕ್ಷೇಪವಾಗಿ ಹೇಳಿರುವ ಈ ಅಂಶವನ್ನು ಗ್ರಹಿಸಬಹುದು "ಯೂರೋಪಿನ ನವೋದಯದ ಉತ್ತರ ಭಾಗದಲ್ಲಿ ಉಂಟಾದ ಚಾರಿತ್ರಿಕವಾದ ಬಂಡಾಯದಿಂದ ಉದ್ಭವಿಸಿದ ವಿಜ್ಞಾನವು ತನ್ನ ಮೂಲವನ್ನು ಕೊಡವಿಕೊಳ್ಳಲು ಸಮರ್ಥವಾಗಿಲ್ಲ. ಅದು ಪ್ರಧಾನವಾಗಿ ವೈಚಾರಿಕ ವಿರೋಧಿ ಚಳುವಳಿಯಾಗಿಯೇ ಉಳಿದುಕೊಂಡಿದೆ. ಒಂದು ಭೋಳೆ ನಂಬಿಕೆಯನ್ನು ಅವಲಂಬಿಸಿದೆ.... ಆ ಚಾರಿತ್ರಿಕ ಬಂಡಾಯವೇನೋ ಸಮರ್ಥನೀಯ. ಅದು ವಿಚಕ್ಷಣೆಯ ಪ್ರತಿಕ್ರಿಯೆಯೂ ಹೌದು. ಆದರೆ ಅದು ಹೇತುವಾದದ ಪರವಾಗಿ ಆದ ಪ್ರತಿಭಟನೆಯಲ್ಲ."

# ಜ್ಯೋತಿಷ ಶಾಸ್ತ್ರ ಹಾಗೂ ಆಧುನಿಕ ವಿಜ್ಞಾನ ವಿಧಾನ

ಡಾ॥ಬಿ.ವಿ.ರಾಮನ್

ವೈಜ್ಞಾನಿಕ ಮನೋಧರ್ಮದ ಮೂಲೆಗಲ್ಲೆಂದರೆ, ತಮ್ಮ ನೆಚ್ಚಿನ ನಂಬಿಕೆಗಳನ್ನು ಸಾಧಾರಣ ಭಾವನೆಗಳನ್ನು ಹೊಸ ಸಾಕ್ಷ್ಯ ಸಂಗತಿಗಳ ಮೇರೆಗೆ ಪುನರ್ವಿಮರ್ಶಿಸಿಕೊಳ್ಳುವ ಸಿದ್ಧತೆ. ಹೊಸ ಸಂಗತಿಗಳನ್ನು ಸಂಗ್ರಹಿಸಬೇಕಾದರೆ ಹೊಸ ಕ್ಷೇತ್ರಗಳನ್ನು ಪ್ರವೇಶಿಸಲು ಮನಸ್ಸು ಬಿಡುಬೀಸಾಗಿರಬೇಕು, ಸವೆದದಾರಿಯಲ್ಲೆ ಸಾಗುವುದನ್ನು ಬಿಡಲು ಸಮರ್ಥವಾಗಿರಬೇಕು.

ಸಿದ್ಧಾಂತಗಳು ಅನುಭವಕ್ಕೆ ವಿರೋಧವಾದರೆ ಏನಾಗುತ್ತದೆ? ಕಟ್ಟಾ ವಿಜ್ಞಾನಿಗಳು ಅವ್ಯವಹಾರ್ಯವಾದ ವಸ್ತುವಾದಕ್ಕೆ ಗಂಟುಬಿದ್ದು ಜ್ಯೋತಿಷದ ಸಾಕ್ಷ್ಯ ಸಂಗತಿಗಳನ್ನು ಕಣ್ಣು ಬಿಟ್ಟು ನೋಡಲು ಆಗದೆ ವ್ಯವಹಾರ ಪಟುಗಳು ವಿಜ್ಞಾನವು ಕೂಡ ಹೇಗೆ, ಏಕೆ ಎಂದು ವಿವರಿಸಬಾರದಂಥ ಉಪಯುಕ್ತ ವಿಷಯಗಳನ್ನು ಪ್ರಯೋಗಿಸಿ ನೋಡುತ್ತಾರೆ. ಆಸ್ಪಿರಿನ್‌ಕ್ರಿಯಾ ವಿಧಾನ ಯಾವು

ಎಂಬುದನ್ನು ವಿಜ್ಞಾನವು ತಿಳಿಯಲು ಅಸಮರ್ಥವಾಗಿದ್ದರೂ ಬಹಳ ಜನರು ಇದನ್ನು ಉಪಯೋಗಿಸುತ್ತಾರೆ. ನಾವು ಜ್ಯೋತಿಷಕ್ಕೆ ವೈಜ್ಞಾನಿಕ ವಿಧಾನವನ್ನು ಅನ್ವಯಿಸಿ, ಅದರ ಐದು ಸಾವಿರ ವರ್ಷಗಳ ಇತಿಹಾಸಕಾಲದಲ್ಲಿ ಸಂಗ್ರಹವಾಗಿರುವ ಸಿದ್ಧಾಂತ ಸಂಪ್ರದಾಯಗಳ ಪೈಕಿ ಯಾವುದು ಅವಲಂಬನೀಯ ಎಂದು ಪ್ರಮಾಣಪಡಿಸಬೇಕಾಗಿದೆ. ಸುಶಿಕ್ಷಿತ ಭಾರತೀಯರಲ್ಲಿ ಬಹುಮಂದಿ, ನಿರಕ್ಷರರ ಮಾತು ಬಿಡಿ, ಜ್ಯೋತಿಷವನ್ನು ನಂಬುವಾಗ, ಆ ಜನ ಸಮುದಾಯವನ್ನು ಕಂದಾಚಾರದವರೆಂದಾಗಲೀ, ಕೇವಲ ಮೂಢನಂಬಿಕೆಯುಳ್ಳವರೆಂದಾಗಲೀ ಕರೆಯುವುದು, ತಾವೇ ನಿರ್ಣಯಮತಿಗಳೆಂದು ಕರೆದುಕೊಳ್ಳುವ ಜನರ ಘನತೆಯನ್ನು ಊರ್ಜಿತ ಪಡಿಸತಕ್ಕುದಲ್ಲ.

ನಾವು ವಸ್ತುವಾದತತ್ವಗಳನ್ನು ವಿಜ್ಞಾನದ ವಿಧಾನಗಳಿಂದ ಬೇರ್ಪಡಿಸಿ ಭಾವಿಸಬೇಕಾದುದು ಅಗತ್ಯ. ವಸ್ತುವಾದತತ್ವಗಳು ಜೀವವನ್ನಾಗಲೀ ವಿಶ್ವವನ್ನಾಗಲಿ ಅರ್ಥಮಾಡಿಕೊಳ್ಳಲೊದಗಿಸುವ ಅವಕಾಶಗಳಿಗೆಲ್ಲ ಅಡ್ಡಿಯೊಡ್ಡುತ್ತವೆ. ವಿಜ್ಞಾನ ವಿಧಾನಗಳು ಅವಶ್ಯಕ. ಅವನ್ನು ಮಾನಸಿಕ ಅನುಭವಗಳಿಗೂ ಜ್ಯೋತಿಷವೆ ಮುಂತಾದವುಗಳಿಗೂ ಅನ್ವಯಿಸಬೇಕು.

ಜ್ಯೋತಿಷವು ಮಾನವ ವರ್ಗವು ನಡೆಸಿದ ಪ್ರಥಮ ವಿಜ್ಞಾನ ಪ್ರಯತ್ನ; ಪ್ರಪಂಚದ ನಡವಳಿಕೆಗಳಲ್ಲಿ ಅರ್ಥ ವ್ಯವಸ್ಥೆಗಳನ್ನು ಹುಡುಕುವ ಪ್ರಯತ್ನ. ಸಾವಿರಾರು ವರ್ಷಗಳ ಅವಧಿಯಲ್ಲಿ ಅಲ್ಲವಾದರೂ ಶತಮಾನಗಳ ಅವಧಿಯಲ್ಲಿ ಹಲವು ತಲೆಮಾರುಗಳ ವೀಕ್ಷಕರು ಸಂಗ್ರಹಿಸಿರುವ ಅವಲೋಕನಗಳು ಜ್ಯೋತಿಷವನ್ನು ಒಂದು ವಿಜ್ಞಾನವನ್ನಾಗಿಯೂ ಭವಿಷ್ಯವಧಾನ ಮಾಡುವ ಕಲೆಯನ್ನಾಗಿಯೂ ಪರಿವರ್ತಿಸಿದೆ.

ವೈಜ್ಞಾನಿಕ ಸಂಶೋಧನೆಯು ಉಪಯುಕ್ತವಾದ ಫಲವನ್ನು ಕೊಡಬೇಕಾದರೆ ಪರೀಕ್ಷಣಕ್ಕೆ ತೆಗೆದುಕೊಳ್ಳುವ ಸಮಸ್ಯೆಯು ವೈಜ್ಞಾನಿಕ ಸ್ವರೂಪದ್ದಾಗಿರಬೇಕು. ಜ್ಯೋತಿಷಕ್ಕೆ ವೈಜ್ಞಾನಿಕ ಸ್ವರೂಪವಿಲ್ಲ ಎಂದು ಹೇಳುವುದು ಉಂಟು. ಈ ವಾದ ಹೂಡುವವರ ಕಣ್ಣು ವಿಜ್ಞಾನದ ಯಾವುದಾದರೂ ಈ ಒಂದು—ಭೌತವಿಜ್ಞಾನ, ರಾಸಾಯನಿಕ ವಿಜ್ಞಾನ ಭೂಗರ್ಭ ವಿಜ್ಞಾನ ಇತ್ಯಾದಿ—ವಿಭಾಗದ ಮೇಲೆ ನಟ್ಟಿರುತ್ತದೆ, ಎಂಬುದು ಖಚಿತ. ಅವರಿಗೆ ವಿಜ್ಞಾನವೆಂದರೆ ಒಂದು ಅಖಂಡವಾದ ಪರಿಜ್ಞಾನ ಇಲ್ಲದಿರುವುದು ಸ್ಪಷ್ಟ. ಅವರಿಗೆ ವಿಜ್ಞಾನ ಕ್ಷೇತ್ರಕ್ಕೆ ಆಗಿಂದಾಗ್ಗೆ ಬಂದು ಸೇರುತ್ತಿರುವ ಹೊಚ್ಚ ಹೊಸ ವಿಷಯಗಳ ಪರಿವೆಯೂ ಇದ್ದಂತೆ ಕಾಣುವುದಿಲ್ಲ. ಮನೋವಿಜ್ಞಾನ ಖಗೋಳ—ಜೀವಶಾಸ್ತ್ರ ಮುಂತಾದವು ಈ ಮುಂಚೆ ವಿಶ್ಲೇಷಣಾತ್ಮಕವಾದ ಅಧ್ಯಯನಕ್ಕೆ ಹೊರತಾದವೆಂದು ಭಾವಿಸಲ್ಪಟ್ಟಿದ್ದರೂ ಈಗ ಖಚಿತ ವಿಜ್ಞಾನಗಳ ಅಂತಸ್ತನ್ನು ಗಳಿಸಿಕೊಂಡಿವೆ. ಇದಕ್ಕೆ ಕಾರಣವೇನೆಂದರೆ **ವಿಭೂತಿ ಪುರುಷರು**, ನೈಜವಾದ ವೈಜ್ಞಾನಿಕ ಮನೋಭಾವವನ್ನು ಪಡೆದವರಾಗಿ ಮನೋವ್ಯಾಪಾರಗಳನ್ನು —ಅವು ಆಗ ರಹಸ್ಯ ಶಾಸ್ತ್ರಗಳ ಗುಂಪಿಗೆ ಸೇರಿದ್ದವು—ಶುದ್ಧ ವಿಜ್ಞಾನದ ಪರಿಧಿಯಿಂದ ಆಚೆ ದೂಡಲು ನಿರಾಕರಿಸಿದ್ದಾರೆ. ಅಪಕ್ವವಾದ ವಿಜ್ಞಾನಿಗಳು ಅರ್ಧಂಬರ್ಧ ಶಿಕ್ಷಣ ಪಡೆದ ಧಾರ್ಮಿಕ ಗುರುಗಳಿಗಿಂತ ಕಡಿಮೆಯಾಗೇನು ಶ್ರದ್ಧೋನ್ಮತ್ತರಲ್ಲ.

ಈಗಿರುವಂತೆ ಜ್ಯೋತಿಷವು ವಿಪುಲ ವಸ್ತು ಸಂಗ್ರಹವಾಗಿದೆ. ಅದರಲ್ಲಿ ಕೆಲವು ಪ್ರಸಕ್ತವಾದ ವೈಜ್ಞಾನಿಕ ವಿಧಾನಗಳಿಂದ ಸಮರ್ಥನೆಯಾಗತಕ್ಕವು. ಮತ್ತೆ ಕೆಲವು ಆಗುವುದಿಲ್ಲ. ಜೀವಿಗಳ ಲಿಂಗ ಜೀವನದ ಮೇಲೆ ಚಂದ್ರನ ಕಲೆಗಳು ಬೀರುವ ಪ್ರಭಾವ, ಶೀತಜ್ವರ, ಹೃದ್ರೋಗಗಳಿಗೂ ಸೂರ್ಯನ ಕಲೆಗಳಿಗೆ ಇರುವ ಅನುಸಂಬಂಧ; ಸೌರ ವಿಸರಣಗಳಿಂದ ವ್ಯವಸಾಯ ಉತ್ಪನ್ನಗಳ ಮೇಲಾಗುವ ಪರಿಣಾಮ; ಮತ್ತು ತನ್ಮೂಲಕ ಲೋಹಗಳೆ ಮುಂತಾದ ಖನಿಜ ವಸ್ತುಗಳ ಬೆಲೆಗಳ ಮೇಲಾಗುವ ಪರಿಣಾಮ, ಅಮಾವಾಸ್ಯೆ ಹುಣ್ಣಿಮೆಗಳ ವೇಳೆಗೆ ಒದಗುವ ಭೂಕಂಪಗಳು, ಈ ಕೆಲವು ಜ್ಯೋತಿಷಿಕ ಸಂಗತಿಗಳು ವೈಜ್ಞಾನಿಕ ಪರೀಕ್ಷಣಕ್ಕೆ ಒಳಪಡಿಸಲು ತಕ್ಕವು. ಗತಕಾಲದ ಮತ್ತು ಮುಂಬರುವ ಕಾಲದ ಬದುಕಿನ ಬಗ್ಗೆ ಮಾಡುವ ಭವಿಷ್ಯಾವಧಾನ ಎರಡನೆಯ ದರ್ಜೆಯ ಜ್ಯೋತಿಷಿಕ ಸಂಗತಿಗಳು. ಇವನ್ನು "ವೈಜ್ಞಾನಿಕ ವಿಧಾನಗಳಿಂದ" ಇವತ್ತಿನ ಪರಿಸ್ಥಿತಿಯಲ್ಲಿ ಪರೀಕ್ಷಿಸಲು ಸಾಧ್ಯವಾಗುವುದಿಲ್ಲ.

ಜೋತಿಷವನ್ನು ವಿಶ್ವವಿದ್ಯಾನಿಲಯಗಳ ಪಠ್ಯ ವಿಷಯವಾಗಿ ಸೇರಿಸಬೇಕೆಂದು ನಾನು ನಿವೇದಿಸುವಾಗ ಹೊಸ ಬಗೆಯ ವ್ಯವಹಾರಗಳಿಗೆ ವಿಜ್ಞಾನವನ್ನು ಅನ್ವಯಿಸಬೇಕೆಂದು ಮಾತ್ರ ನಾನು ಹೇಳುತ್ತೇನೆ. ನಮ್ಮ ಕಾರ್ಯವಿಧಾನವು ಪಕ್ಷಪಾತದಿಂದ ಕೂಡಿರಬೇಕೆಂದಾಗಲಿ, ಜೋತಿಷಿಗಳು ಹೇಳಿಕೊಳ್ಳುವುದನ್ನೆಲ್ಲಾ ಅವು ನಮ್ಮ ಅನುಭವದಲ್ಲಿ ವಿರುದ್ಧವಾಗಿ ಕಂಡುಬಂದಾಗಲೂ ನಾವು ಎತ್ತಿ ಹಿಡಿಯಬೇಕೆಂದಾಗಲಿ ಹೇಳುವುದಿಲ್ಲ. ನಾವು ಜ್ಯೋತಿಷ ವಿಜ್ಞಾನದ ಮೇಲೆ ಇಡಿಯಾಗಿ ತೀರ್ಮಾನ ಮಾಡಬೇಕಾಗಿಲ್ಲ. ಅದರ ಪ್ರತಿಪ್ರತಿಪಾದನೆಗಳನ್ನು ತೆಗೆದುಕೊಂಡು ಇತ್ಯರ್ಥ ಮಾಡಬಹುದು. ಆ ಪೈಕಿ ಕೆಲವು ಈ ಪರೀಕ್ಷೆಯಲ್ಲಿ ಊರ್ಜಿತವಾಗಬಹುದು. ಕೆಲವು ಆಗದೆ ಹೋಗಬಹುದು.

ಸಮರ್ಥನೀಯವಾದ ಜ್ಯೋತಿಷಿಕ ಅಂಶಗಳು ಎರಡು ಬಗೆಯವು.

(೧) ಇವತ್ತಿನ ವೈಜ್ಞಾನಿಕ ಜ್ಞಾನದ ಆಧಾರದ ಮೇಲೆ ಹೇತುಪೂರ್ವಕವಾದ ಪ್ರತಿಪಾದನೆ ಮಾಡಲು ಸಾಧ್ಯವಾದವು; ಮತ್ತು

(೨) ಈ ಬಗೆಯ ವಿಶ್ಲೇಷಣಾತ್ಮಕವಾದ ಸಮರ್ಥನೆಯು ಸಾಧ್ಯವಿಲ್ಲದವು; ಆದರೆ ಸಂಖ್ಯಾ ಶಾಸ್ತ್ರವು ಕೊಂಚಮಟ್ಟಿಗೆ ಸಮರ್ಥನೆ ನೀಡಬಲ್ಲವು.

ಮೊದಲ ಬಗೆಯ ಸಂಗತಿಗಳನ್ನು ನೇರವಾಗಿ ವೈಜ್ಞಾನಿಕ ಜ್ಞಾನಸಮುಚ್ಚಯಕ್ಕೆ ಸೇರಿಸಿಕೊಳ್ಳಬೇಕು. ಭೂನಿವಾಸಿಗಳ ಮೇಲೆ ಸೌರ ಮತ್ತು ಚಾಂದ್ರ ವಿಸರಣಗಳು ಉಂಟು ಮಾಡುವ ಭೌತಿಕ ದೈಹಿಕ ಪರಿಣಾಮಗಳನ್ನೆಲ್ಲಾ ಭೂಮಿಯ ಮೇಲೆ ಬೀಳುವ ಅಂತರಿಕ್ಷ ಮತ್ತು ವಿದ್ಯುತ್ ಕಾಂತ ಪ್ರಭಾವಗಳು ವಿವಿಧ ಗ್ರಹಗತಿಗಳಿಂದ ಪರಿಣಾಮಗೊಳ್ಳುವದನ್ನು ಮೊತ್ತವಾಗಿ ಪ್ರಮಾಣೀಕರಿಸಿ ಪರಿಶೀಲಿಸಿ, ಸಾಧ್ಯವಾದರೆ ಪ್ರಾಚೀನ ಕಾಲದ ನಂಬಿಕೆಗಳನ್ನು ಕುರಿತು ಸಮರ್ಥನೆಯನ್ನು ಒದಗಿಸಬೇಕು. ಪ್ರಾಯೋಗಿಕವಾಗಿ ಸಾಕ್ಷ್ಯಾಧಾರ ಪಡೆಯದೆ ಹೋಗುವ "ಪುರಾವೃತ್ತ"ಗಳನ್ನು ಬೇರ್ಪಡಿಸಿ ಅವುಗಳನ್ನು ಪ್ರತ್ಯೇಕವಾಗಿ ಪರಾಮರ್ಶೆಗೆ ತೆಗೆದುಕೊಳ್ಳಬೇಕು.

ವಿಶ್ಲೇಷಣಾತ್ಮಕವಾದ ಸಮರ್ಥನೆಗೆ ನಿಲುಕದ ಆದರೆ ಸಂಖ್ಯಾ ಶಾಸ್ತ್ರೀಯವಾದ ಪುಷ್ಟೀಕರಣಕ್ಕೆ ಒದಗುವ ಸಂಗತಿಗಳು ಒಂದು ಮುಖ್ಯವಾದ ವರ್ಗ, ವಿಜ್ಞಾನದಲ್ಲಿ ಅದನ್ನು ಪ್ರಯೋಗಸಿದ್ಧವಾದ ನಿಯಮಗಳು ಎನ್ನುತ್ತಾರೆ. ಅವು ಪ್ರಾಯೋಗಿಕವಾಗಿ ದೃಢಪಟ್ಟರೂ ಅದಕ್ಕೆ ಈವರೆಗೆ ಹೇತುಯುಕ್ತವಾದ ಸಮರ್ಥನೆಯನ್ನು ಕೊಡಲು ಸಾಧ್ಯವಾಗಿಲ್ಲ, ಖಗೋಳ

ವಿಜ್ಞಾನದಲ್ಲಿ 'ಬೋಡ್' ಪ್ರತಿಪಾದಿಸಿದ ಒಂದು ನಿಯಮ ಇದೆ. ಅದು ಇದಕ್ಕೆ ಉತ್ಕೃಷ್ಟ ನಿದರ್ಶನ. ಸೂರ್ಯನಿಂದ ಗ್ರಹಗಳಿಗಿರುವ ಅಂತರವನ್ನು ಕುರಿತದ್ದು ಈ ನಿಯಮ.

ಈ ಬೋಡ್ ನಿಯಮದ ಪ್ರಕಾರವೇ ಸೂರ್ಯನ ಸುತ್ತ ತಮ್ಮ ಕಕ್ಷೆಗಳಲ್ಲಿ ಗ್ರಹಗಳು ಏಕೆ ಸುತ್ತುತ್ತವೆಯೋ ಈ ವರೆಗೆ ಹೇಳಲು ಆಗಿಲ್ಲ. ಈ ಗ್ರಹಗಳ ದೂರವು ಯಾವ ಕಾರಣಕ್ಕಾಗಿ ೪,೭,೧೦,೧೬,೨೮,೫೨,೧೦೦ ಹೀಗೆ ಮುಂತಾದ ಸರಾಸರಿ ಶ್ರೇಣಿಗೆ ಒಳಪಟ್ಟಿರುತ್ತದೆ. ಎಂಬುದು ಸುತರಾಂ ನಮಗೆ ಗೊತ್ತಿಲ್ಲ. ಹೀಗೆ ಸಮರ್ಥನೆಯನ್ನು ನೀಡಲು ನಮಗೆ ಆಗದೆ ಇದ್ದರೂ ಕೂಡ, ನಾವು ಬೋಡ್ ನಿಯಮವನ್ನು ಅವಲಂಬಿಸಿ ಅಂತರಿಕ್ಷವನ್ನು ಶೋಧಿಸಲು, ಹೊಸ ಗ್ರಹಗಳನ್ನು ಕಂಡು ಹಿಡಿಯಲು ಹಿಂತೆಗೆದಿಲ್ಲ. ಪ್ರಯೋಗಸಿದ್ಧವಾದ ಔಷಧಿಯನ್ನು, ಅದರ ರಚನೆ ದೇಹದ ಮೇಲೆ ಅದು ಮಾಡುವ ರಾಸಾಯನಿಕ ಪರಿಣಾಮಗಳು ಗೊತ್ತಿಲ್ಲವಾದರೂ ರೋಗಿಯು ಸೇವಿಸದೇ ಇರುವುದಿಲ್ಲ.

ಈ ಪ್ರಸಂಗವನ್ನು ಏಕೆ ಎತ್ತಿದೆನೆಂದರೆ ಕೆಲವು ಮಂದಿ ಕಪಟ ವಿಜ್ಞಾನಿಗಳು ಜ್ಯೋತಿಷದಲ್ಲಿ ಗ್ರಹಗತಿಗಳಿಗೂ ಮುಂದೆ ಒದಗುವಂತೆ ನುಡಿಯುವ ಘಟನೆಗಳಿಗೆ ಯಾವ ಬಗೆಯ ನೇರವಾದ ಕಾರ್ಯಕಾರಣ ಸಂಬಂಧವು ಕಾಣಬರುವುದಿಲ್ಲ, ಎಂದು ಜ್ಯೋತಿಷವಾಕ್ಯಗಳನ್ನು ನಿರಾಕರಿಸುತ್ತಾರೆ. ಅಂಥ-ಸಂದರ್ಭಗಳಲ್ಲಿಯಿರಬೇಕಾದ ರುಜು ವಿಜ್ಞಾನ ಮಾರ್ಗವೆಂದರೆ ಮೊದಲು ಮುನ್ನುಡಿದ ಸಂಗತಿಗೂ ಅದನ್ನು ಸೂಚಿಸುವ ಜ್ಯೋತಿಷಿಕ ದತ್ತಾಂಶಕ್ಕೂ ಅನುಸಂಬಂಧವನ್ನೂ ಸಂಖ್ಯಾಶಾಸ್ತ್ರೀಯವಾದ ವಿಧಾನದಿಂದ ಸ್ಥಾಪಿಸುವುದು, ತರುವಾಯ ವಿವರಣಾತ್ಮಕವಾದ ಸಮರ್ಥನೆಯನ್ನು ಅರಸುವುದು. ಪ್ರಯೋಗದಲ್ಲಿ ದೃಢಪಟ್ಟ ನಿಯಮವನ್ನೂ ಅದಕ್ಕೆ ತಕ್ಕ ವಿಶ್ಲೇಷಣಾತ್ಮಕ ಸಮರ್ಥನೆಗೆ ದೊರಕುತ್ತಿಲ್ಲವೆಂಬ ಕಾರಣದಿಂದಲೇ ತಳ್ಳಿ ಹಾಕಬಾರದು. ಜ್ಯೋತಿಷದ ಅರ್ಹತೆಗಳು ಹಲವಾರು, ಕೆಲವನ್ನಂತೂ ಸಾಧಾರಣವಾದ ರೀತಿಯಲ್ಲಿ ಪರೀಕ್ಷಿಸಬಹುದು. ಉದಾಹರಣೆಗೆ, ಆಯುರ್ದಾಯಕ್ಕೂ ತತ್ಸಂಬಂಧವಾದ ಗ್ರಹ, ನಕ್ಷತ್ರಗಳ ಸ್ಥಿತಿಗತಿಗಳಿಗೂ ಇರುವ ಪರಸ್ಪರ ಸಂಬಂಧವನ್ನು ಸೌರ ದಾಖಲೆಗಳಿಂದ ಪತ್ತೆ ಹಚ್ಚಬಹುದು. ಆಸ್ಪತ್ರೆ ದಾಖಲೆಗಳಿಂದಲೂ ಕೋರ್ಟು ನಡವಳಿಕೆಗಳ ದಾಖಲೆಗಳಿಂದಲೂ ವ್ಯಕ್ತಿಗಳು ತಮ್ಮ ಜಾತಕದ ವಿಶೇಷ ಲಕ್ಷಣಗಳಿಗೆ ತಕ್ಕಂಥ ಜೀವನ ನಡೆಸಿದ್ದರೆ ಎಂಬ ಅಂಶವನ್ನು ಪತ್ತೆ ಹಚ್ಚಬಹುದು.

ಪ್ರಾಚೀನ ನಾಗರಿಕತೆಗಳು, ವಿಶೇಷತಃ ಭಾರತವು ಸೃಜಿಸಿಕೊಂಡಿರುವ ಜ್ಯೋತಿಷದ ನಿರೂಪಣೆಗಳನ್ನು ಕೆಲವು ವಿಜ್ಞಾನಿಗಳು ಈವರೆಗೆ ಹೀಗಳೆಯುತ್ತಿದ್ದವರು ಈಗ ಅವುಗಳು ವೈಜ್ಞಾನಿಕ ಸಂಗತಿಗಳನ್ನೆ ಮರೆಮಾಚಿಸುತ್ತಿದೆ ಎಂದು ಆಡುತ್ತಿದ್ದಾರೆ.

ಸಧ್ಯ ಭಾರತದಲ್ಲಿ ಪ್ರಸ್ತುತವಿರುವ ಅಗಾಧವಾದ ಜ್ಯೋತಿಷ ಶಾಸ್ತ್ರ ಸಾಹಿತ್ಯದಲ್ಲಿ ಪ್ರೋಕ್ತವಾಗಿರುವಂಥ ಭಾವನೆಗಳದೆ ಅನುಗುಣವಾಗಿ ಹಲವು ಮಂದಿ ವಿಜ್ಞಾನಿಗಳು ಋತು, ಜನನಮಾಸ, ಮುಂತಾದವು ಜಾತಕನ ದೈಹಿಕ ಮಾನಸಿಕ ಭಾವನಾ ರೀತಿಗಳಲ್ಲಿ ವಿಸ್ಮಯಕಾರಕವಾದ ವ್ಯತ್ಯಾಸಗಳನ್ನು ಮಾಡಬಲ್ಲವೆಂದು ಮನಗಾಣಸಿ ತೊಡಗಿದ್ದಾರೆ. ಮನೋ ವಿಜ್ಞಾನಿಗಳ ಇತ್ತೀಚಿನ ಪರಿಶೋಧನೆಗಳು ಜ್ಯೋತಿಷದ ನಿರ್ಣಾಯಕ ಸಾಮರ್ಥ್ಯವನ್ನು ಸಮರ್ಥಿಸುತ್ತವೆ. ಮನುಷ್ಯ ದೇಹದಲ್ಲಿ ಒಡಮೂಡುವ ವ್ಯಗ್ರತೆ ಮುಂತಾದ ಒತ್ತಡಗಳು ಸೂರ್ಯ ಚಂದ್ರರ ನಡುವಣ ಕೋಣ ಲಕ್ಷಣ ಎಂದು ಇತ್ತೀಚೆಗೆ ಕಂಡು ಹಿಡಿಯಲಾಗಿದೆ. ಈ ಕೋಣವು ನಮ್ಮ ಹಳೆಯ ಚಾಂದ್ರಮಾನದ ತಿಥಿಯಲ್ಲವೆ?

ಸೂಕ್ಷ್ಮ ತರಂಗಗಳ ರೇಡಿಯೋ ಸಂಪರ್ಕವನ್ನು ವಿದ್ಯುತ್ಕಣ ಆವರಣದಲ್ಲುಂಟಾಗುವ ಪಲ್ಲಟಗಳು ಹದಗೆಡಿಸಿ ಹಾಳುಮಾಡುತ್ತವೆ. ಎಂಬುದು ಈಗ ಸ್ಥಾಪಿತವಾಗಿದೆ. ಅಮೇರಿಕಾದ ಆರ್. ಸಿ. ಎ. ಸಂಸ್ಥೆಯು ಜಾನ್‌ನೆಲ್ಸನ್ ಈ ಪಲ್ಲಟಗಳನ್ನು ಗ್ರಹಗಳ ಪರಸ್ಪರ ಸಂಬಂಧಗಳ ಮೇರೆಗೆ ಶೇಕಡ ೯೦ರಷ್ಟು ಕರಾರುವಾಕ್ಕಾಗಿ ಮುನ್ಸೂಚಿಸಲು ಶಕ್ತರಾಗಿದ್ದಾರೆ.

ವಾತಾವರಣದ ವಿದ್ಯುತ್ಕಣೀಕರಣವು ಸೌರಜ್ವಾಲೆಗಳಿಗೆ ಸಂಬಂಧಪಟ್ಟದೆಂದು ಕಂಡುಕೊಳ್ಳಲಾಗಿದೆ. ಗಾಳಿಯ ಧನಋಣ ವಿದ್ಯುತ್ ಕಣೀಕರಣದಿಂದ ಆರೋಗ್ಯವು ದೈಹಿಕ ಮಾನಸಿಕ ಕ್ರಿಯೆಗಳ ಪರಸ್ಪರ ಅನುಸಂಬಂಧವು ಕಂಡಷ್ಟು ಪರಿಣಾಮಗೊಳ್ಳುತ್ತದೆ. ವಾಸ್ತವವಾಗಿ ೧೯೬೧ರಲ್ಲಿ ಅಮೇರಿಕದ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಕ್ಲೈಮೆಟಾಲಜಿ ಒಂದು ಹೇಳಿಕೆಯಲ್ಲಿ ವಾತಾವರಣದಲ್ಲಿರುವ ವಿದ್ಯುತ್ ಭಾಗವು ನಮ್ಮ ಯೋಚನೆ, ಭಾವನೆ ನಡವಳಿಕೆಗಳನ್ನು ಪ್ರಭಾವಿಸುತ್ತದೆ ಎಂದು ತಿಳಿಸಿದೆ. ಈ ವಿದ್ಯುದಂಶವು ಸೌರಜ್ವಾಲೆಗಳನ್ನು ಅವಲಂಬಿಸುತ್ತದೆ. ಸೌರಜ್ವಾಲೆಯಾದರೋ ಇತರ ಗ್ರಹ ಗತಿಸ್ಥಿತಿಗಳನ್ನು ಅವಲಂಬಿಸಿದೆ. **ವಾಸ್ತವವಾಗಿ ಪ್ರಾಚೀನ ಜ್ಯೋತಿಷಗ್ರಂಥಗಳಲ್ಲಿ ಮಾನವನ ನಡವಳಿಕೆಯನ್ನು, ಅವನ ಜೀವನ ಘಟನೆಗಳನ್ನು ಕುರಿತು ಗ್ರಹ ಪರಿಸ್ಥಿತಿಗಳನ್ನು ನಿರೂಪಿಸಲಾಗಿದೆ.**

"ಜರ್ನಲ್ ಆಫ್ ಹೆರಿಡಿಟಿ" ಪತ್ರಿಕೆಯಲ್ಲಿ ಡಾ|| ಲೈನೆಕ್ಸ್ ಮತ್ತು ಡಾ|| ಗಿಬ್ಸ್ ಅವರು ಚಂದ್ರನ ಕಲೆಗಳಿಗೆ ಅನುಗುಣವಾಗಿ ಮೆದುಳಿನ ಅಲೆಗಳು ಉಂಟಾಗುತ್ತವೆ ಎಂದು ವರದಿಮಾಡಿದ್ದಾರೆ. ಮನುಷ್ಯನ ಪ್ರತಿಕ್ರಿಯೆಗಳನ್ನು ನಿರೂಪಿಸಲು ಜ್ಯೋತಿಷವು ಬಹಳಷ್ಟು ಉಪಯುಕ್ತ. ಮಾನವ ವ್ಯಕ್ತಿಗಳಿಗೆ ಸಂಬಂಧಿಸಿದಂತೆ ಒಂದು ಕಾರ್ಯಕ್ರಮವನ್ನು ನಿರೂಪಿಸಿಕೊಳ್ಳಲೂ ಜ್ಯೋತಿಷವು ಎಷ್ಟು ಪ್ರಯತ್ನ ಎಂಬುದನ್ನು ಈ ಉದಾಹರಣೆಗಳು ಸೂಚಿಸುತ್ತವೆ.

ಭೂಕಂಪಗಳು ಎಲ್ಲೆಲ್ಲೂ ಅಗಾಧವಾದ ಪ್ರಾಣನಷ್ಟವನ್ನೂ ಮಾಡುವುದರ ಜೊತೆಗೆ ಕೋಟ್ಯಾಂತರ ರೂಪಾಯಿಗಳಷ್ಟು ದ್ರವ್ಯ ನಷ್ಟವನ್ನುಂಟುಮಾಡಿವೆ. ಈ ಸಂದರ್ಭದಲ್ಲಿ ಜ್ಯೋತಿಷವು ತನ್ನ ಪ್ರಶಸ್ತಿಯನ್ನು ತೋರ್ಪಡಿಸಿದೆ. ಡಾ|| ಟೊಮಾಷಕ್ ಎಂಬ ಭೌತವಿಜ್ಞಾನಿಯು ೧೩೪ ಭಾರಿ ಭೂಕಂಪಗಳನ್ನು ಪರಿಶೀಲಿಸುವಾಗ ಶೇಕಡ ೮೨ ರಷ್ಟು ಭೂಕಂಪಗಳ ಕಾಲದಲ್ಲಿ ಯುರೇನಸ್ ಗ್ರಹವೆ ಕಂಪನ ಪೀಡಿತವಾದ ಭೂಭಾಗದ ನಡು ನೆತ್ತಿಯಲ್ಲಿ ಇದ್ದುದನ್ನು ಕಂಡುಕೊಂಡಿದ್ದಾರೆ. ಇದು ಸೀದಾಸಾದಾ ಜ್ಯೋತಿಷವೆ ತಾನೆ "ಬೃಹತ್ ಸಂಹಿತೆ"ಮುಂತಾದ ಗ್ರಂಥಗಳಲ್ಲಿ ಹೇಳಿರುವುದು ಇದನ್ನೇ.

ಹವಾ ಮುನ್ಸೂಚನೆಯ ಕಾರ್ಯದಲ್ಲಿ ಜ್ಯೋತಿಷದ ಪ್ರಾಮುಖ್ಯವನ್ನು ಅಲ್ಲಗಳೆಯುವಂತಿಲ್ಲ. ವರಾಹ ಮಿಹಿರರ ಮುಂತಾದ ಆಚಾರ್ಯರು ಪ್ರತಿಪಾದಿಸಿರುವ ನಿಯಮಗಳ ಪ್ರಕಾರ–"ಜ್ಞಾ ಶುಕ್ರಯೋಃ ಸಮಾಗಮೇ ಪತತಿ ಜಲಂ" ಎಂಬ ಸೂತ್ರದ ಪ್ರಕಾರ–ಶುಕ್ರ ಬುಧ ಸಮಾಗಮವಾದರೆ ಮಳೆ ಬೀಳುತ್ತದೆ. ಇದನ್ನು ಹವಾವಿಜ್ಞಾನಿಗಳು ಸುಲಭವಾಗಿ ಪರೀಕ್ಷಿಸಬಹುದಷ್ಟೇ "ಸ್ಯೂ ಸೈಂಟಿಸ್ಟ್" ಪತ್ರಿಕೆಯ ಇತ್ತೀಚಿನ ಪ್ರತಿಯೊಂದರಲ್ಲಿ ಬುಧ, ಶುಕ್ರ, ಭೂಮಿ, ಗುರು ಈ ಗ್ರಹಗಳ ಸ್ಥಿತಿಯನ್ನು ಲೋಕದ ಹವಾಮಾನ ಅವಲಂಬಿಸುತ್ತದೆ ಎಂದು ಹೇಳಿರುವುದು ಸ್ವಾರಸ್ಯಕರವಾಗಿದೆ.

ವ್ಯಕ್ತಿಗಳ ಜೀವನದಲ್ಲೂ ರಾಷ್ಟ್ರಗಳ ಜೀವನದಲ್ಲೂ ಜ್ಯೋತಿಷದ ಉಪಯುಕ್ತತೆ ಹಲವು ಪ್ರಕಾರದ್ದಾಗಿದೆ.

ಪಶ್ಚಿಮಾ ದೇಶಗಳಲ್ಲಿ ಜ್ಯೋತಿಷದ ಪುನರ್ವಿಮರ್ಶೆ ಯಾ ಪುನರ್ವ್ಯವಸ್ಥೆಯೂ ನಡೆಯುತ್ತಿದೆ.

ನಾವು ಕೂಡ ಜ್ಯೋತಿಷಕ್ಕೆ ವಿಜ್ಞಾನ ಶಾಸ್ತ್ರಗಳ ಪಂಕ್ತಿಯಲ್ಲಿ ತಕ್ಕ ಸ್ಥಾನವು ದೊರಕುವಂತೆ ಯತ್ನಿಸುವಲ್ಲಿ ಹಿಂದೆಗೆಯಬಾರದು.

ಕಾರಲ್ ಯುಂಗ್ ಎಂಬ ಮನೋವಿಜ್ಞಾನಿಯ ಅಭಿಪ್ರಾಯದಲ್ಲಿ, ಆಧುನಿಕ ನಾಗರೀಕತೆಯು ಜ್ಯೋತಿಷವನ್ನು ಕಡೆಗಾಣುವುದರಿಂದ ಪಡೆಯುವ ಲಾಭ ಕೊಂಚ, ಪಡೆಯಬಹುದಾದ ನಷ್ಟ ಹೆಚ್ಚೇ ಆಗಿದ್ದೀತು.

"ಪ್ರಾಚೀನ ಕಲಾ ಶಾಸ್ತ್ರವೊಂದು ಹೇತುವತ್ತಾದ ಸಮರ್ಥನೆಗೆ ಅಡಗುತ್ತಿಲ್ಲವೆಂಬ ಕಾರಣಕ್ಕೋಸ್ಕರ ಅದನ್ನು ತುಚ್ಛವಾಗಿ ಪರಿಗಣಿಸಿ ಅವಹೇಳನ ಮಾಡಲಾಗಿದೆ"ಎಂದು ಆವರು ಅಭಿಪ್ರಾಯಪಟ್ಟಿದ್ದಾರೆ.

ಮಡಿವಂತ ವಿಜ್ಞಾನಿಗಳ ಅನಿಸಿಕೆಗಳಿಗೆ ವಿರುದ್ಧವಾಗಿ ಕಾಣುತ್ತದೆ ಎಂಬ ಕಾರಣಕ್ಕಾಗಿ ಜ್ಯೋತಿಷವು ಎಷ್ಟೇ ಸುಸ್ಥಾಪಿತವಾದ ಪಕ್ಕಾ ಶಾಸ್ತ್ರವಾಗಿದ್ದರೂ ಅದನ್ನು ವಿಶ್ವ-ವಿದ್ಯಾನಿಲಯಗಳಲ್ಲಿ ಪಠ್ಯ ವಿಷಯವಾಗಿ ಸೇರಿಸಕೂಡದೆಂದು ಕೆಲವೊಮ್ಮೆ ನಿಸ್ಸಾರವಾದ ಕ್ಷುಲ್ಲಕ ಆಕ್ಷೇಪಗಳು ಕೇಳಿ ಬರುತ್ತಿರುವುದು ವಿಷಾದಕರ. ಆಧುನಿಕ ವಿಜ್ಞಾನವು ತನ್ನ ದಿಗಂತವನ್ನು ವಿಸ್ತರಿಸಿಕೊಂಡು ಸಾವಿರಾರು ವರ್ಷಗಳಿಂದ ಭಾರತದಲ್ಲಿ ಬೆಳೆದು ಬಂದಿರುವಂಥ ಜ್ಯೋತಿಷ ಮುಂತಾದ ಜ್ಞಾನ ಭಾಗಗಳನ್ನು ಮಾನವ ಕುಲಕ್ಕೆ ನಿಜವಾಗಿಯೂ ಉಪಯೋಗವಾಗುವಂತೆ ಅಧ್ಯಯನಕ್ಕಾಗಿ ಸ್ವೀಕರಿಸಿಕೊಳ್ಳಬೇಕು.





ಆಚೆ–ಈಚೆ ಓಡ್ಯಾಡುತ್ತಿದ್ದ ಲಕ್ಷ್ಮಿಯನ್ನು ನಾರಾಯಣ ನೋಡಿದ. ಮೂರು ವರ್ಷದ ಹಿಂದೆ ಬಂದಿದ್ದಾಗ ಲಕ್ಷ್ಮಿ ಇಷ್ಟೊಂದು ಬೆಳೆದಿರಲಿಲ್ಲ. ಅವನ ಜೊತೆಯಲ್ಲಿ ಸಲಿಗೆಯಿಂದ ಮಾತಾಡುತ್ತಿದ್ದಳು. ಹುಡುಗಿ ಈಗ ಸುಮ್ಮನೆ ನಗುತ್ತಾಳೆ. ಏನು ಮಾತಾಡಿದರೂ ಹಳ್ಳಿ ಅಷ್ಟೊಂದೇನೂ ಬೆಳೀಲಿಲ್ಲ. ತಾನಿರುವ ನಗರ ಬೆಳೀತಿದೆ. ಇಲ್ಲಿ ಲಕ್ಷ್ಮೀ ಬೆಳೀತಿದ್ದಾಳೆ. ಚಿಕ್ಕಮ್ಮ ನಿಗಿನ್ನೂ ಬೆಳವಣಿಗೆಯಿಲ್ಲ! ಅಂಗಳದತ್ತ ನೋಡಿದ. ಬೆಳಿಗ್ಗೆ ತುಳಸಿ ಗಿಡಕ್ಕೆ ಅರಶಿನ ಕುಂಕುಮ ಹಚ್ಚಿ ಆಗಿದೆ. ಅದರ ಎದುರು ಹಾಕಿದ ದೊಡ್ಡ ರಂಗೋಲಿ ನೋಡಿದ. ಚಿಕ್ಕಮ್ಮ ಬಿಡಿಸಿದ್ದು. ಎಲ್ಲಿಂದ ಶುರುವಾಗಿ ಎಲ್ಲಿಗೆ ಮುಗಿಯಿತೋ ಗೊತ್ತಾಗುತ್ತಿಲ್ಲ. ಕಟ್ಟೆ ಬುಡದಲ್ಲಿಟ್ಟ ಹಾಲು–ಬೆಲ್ಲ ಹಾಗೇ ಇದೆ. ಮುಗುಟ ಉಟ್ಟು ಸ್ತೋತ್ರ ಹೇಳಿಕೊಂಡು ಪಾತ್ರೆಗಳ ಸದ್ದು ಮಾಡುತ್ತಿರುವ ಚಿಕ್ಕಮ್ಮ ಇನ್ನೂ ಏನಾದ್ರೂ ಬೆಳಿಯೋದಿಲ್ಲ. ಲಕ್ಷ್ಮೀನೂ ಈ ರಂಗೋಲಿ ಎಳೆಗೊಳಗೆ ಕೂರಿಸಿ ಅರಿಶಿನ–ಕುಂಕುಮ ಹಚ್ಚಿರಬೇಕೆಂದುಕೊಂಡ. ಚಿಕ್ಕಮ್ಮ ಮಾತಾಡಿಸಲಿಕ್ಕೇಂತ ಹಳ್ಳಿಗೆ ನಿನ್ನೆ ಬಂದಿದ್ದಾನೆ. ಮಣ್ಣು ರಸ್ತೇಲಿ ಹೋಗುವ ಎತ್ತಿನ ಗಾಡಿ. ಸೆಗಣಿ ಹಾಕ್ಕೊಂಡು ಅಂಬೇಂತ ಕಿರುಚಿಕೊಳ್ಳುವ ಕರುಗಳನ್ನು ನೋಡಿ ಬೆಳೀದ ಹಳ್ಳೀಲಿ ಕೂರೋದು ಕಷ್ಟವಾಗಿತ್ತು.

ಮನೆ ಇಳಿದು
ಮೈದಾನಕ್ಕೆ ಬಂದಾಗ
ಹದ್ದುಗಳು
ಹಾ
ರಾ
ಡು
ತ್ತಿದ್ದವು........
ಹಳ್ಳಿಯಿಂದ
ಪಟ್ಟಣಕ್ಕೆ
ನಾರಾಯಣ
ನೊಡನೆ....
ಲಕ್ಷ್ಮಿ
ಈಗ
ಹೊಸ



ಇವತ್ತು ಕತ್ತಲಾದರೂ ಹುಲ್ಲು ಕುಯ್ಯಲಿಕ್ಕೆ ಹೋದ ಲಕ್ಷ್ಮೀ ಮನೆಗೆ ಬರಲಿಲ್ಲ. ಸ್ವಲ್ಪ ಹೊತ್ತಿನ ಹಿಂದೆ ತೋಡು ಬದಿಯಲ್ಲಿ ಬೆಳೆದ ಹುಲ್ಲು ಹಸುವಿಗೆ ಕುಯ್ದು ತರುತ್ತೇನೆಂದು ಹೋಗಿದ್ದಳು. ಗೌರಮ್ಮ ಮಗಳು ಏನು ಮಾಡುತ್ತಾಳೋ ತೋಡು ಬದೀಲೀಂತ ಆಗಾದ ಬಾಗಿಲಲ್ಲಿ ನಿಂತು ಕತ್ತಲನ್ನ ನೋಡುತ್ತಿದ್ದಳು ಲಕ್ಷ್ಮಿ ಬರುವ ಸೂಚನೆಯೇ ಇಲ್ಲ. ನಾರಾಯಣ ಸಾಯಂಕಾಲ ಬೆಟ್ಟದೂರಿಗೆ ಹೋಗಿ ಬರ್ತೇನೇಂತ ಹೇಳಿ ಹೋಗಿದ್ದ ಅವನೂ ಬಂದಿರಲಿಲ್ಲ. ಇಲ್ಲದಿದ್ರೆ ಅವನನ್ನಾದರು ಕಳುಹಿಸಬಹುದಿತ್ತು. ಗೌರಮ್ಮ ಹಿಂದುಗಡೆ ಕೊಟ್ಟಿಗೆಗೆ ಬಂದು ನೋಡಿದಳು. ಮೈ ಬಾಯಿ ಮಾಡಿಕೊಂಡಿದ್ದ ಹಸು ಮಲಗಿಕೊಂಡಿತ್ತು. ಅದರೆದುರು ಹಾಕಿದ್ದ ಒಣಹುಲ್ಲು ಹಾಗೇ ಬಿದ್ದಿತ್ತು. ಮಗಳಿಗೆ ಹೊತ್ತು ಗೊತ್ತು ಒಂದೂ ಇಲ್ಲವೆಂದು ಗೊಣಗಿ ಎದುರು ಅಂಗಳದಲ್ಲಿ ನಿಂತು ನೋಡಿದಳು.

ಗೌರಮ್ಮನಿಗೆ ಲಕ್ಷ್ಮೀ ಬರಲಿಲ್ಲಾಂತ ಚಿಂತೆ ಹೆಚ್ಚಾಯಿತು. ಎದುರು ಮನೆಯಲ್ಲಿ ಕೂತಿದ್ದಾಳೇನೋಂತ ಕತ್ತಲಲ್ಲೇ ರಸ್ತೆಗಿಳಿದು ಎದುರು ಮನೆಗೆ ಬಂದಳು. ಹುಡುಗ ಜಗುಲಿಯಲ್ಲಿ ಕೂತು ಮಗ್ಗಿ ಹೇಳುತ್ತಿದ್ದ. ಅವನನ್ನೇ ಲಕ್ಷ್ಮಿ ಇದ್ದಾಳಾಂತ ಕೇಳಿದಳು. ಲಕ್ಷ್ಮಿ ಸಂಜೆ ಹೊತ್ತಿನ ಹುಡುಗರು ಮೈದಾನದಲ್ಲಿ ಆಡು

# ಬದುಕಿನ ತಿರುವಿನಲ್ಲಿ

* ಕುಸುಮಾ ಶಾನಭಾಗ

ತ್ತಿದ್ದಾಗ ಹಬೀಬ ಜೊತೆ ಮಾತಾಡುತ್ತಿದ್ದಳೊಂತ ಹುಡುಗ ಹೇಳಿದಾಗ ಗೌರಮ್ಮನಿಗೆ ಹೇಗೆ-ಹೇಗೋ ಆಯಿತು. ಸುಣ್ಣ ಬಳಿಯೋ ಹಬೀಬನೊಡನೆ ಅವಳಿಗೇನು ಮಾತೋ ಗೊತ್ತಾಗಲಿಲ್ಲ. ಅಲ್ಲಿ ನಿಲ್ಲದೆ ಗೌರಮ್ಮ ಮನೆಗೆ ಬಂದಾಗ ನಾರಾಯಣ ಕಾಲಿನ ಶೂ ಬಿಚ್ಚಿ ಒಳಗೆ ಕೂತಿದ್ದ. ಗೌರಮ್ಮ ಲಕ್ಷ್ಮಿ ಹುಲ್ಲಿಗೆ ಹೋದವಳು ಬರಲಿಲ್ಲವೆಂದಳು. ಸ್ವಲ್ಪ ಬಿಟ್ಟು ಅವನ ಕಿವಿಬುಡದಲ್ಲಿ "ಹುಡುಗಿ ಸುಣ್ಣ ಬಳಿಯೋ ಹಬೀಬನೊಡನೆ ಮಾತಾಡುತಿದ್ಲಂತೆ" ಆತಂಕದಿಂದ ಮನಸ್ಸಿನ ಸಂಶಯ ಹೇಳಿದಳು. ನಾರಾಯಣ ಕೈಯೆತ್ತಿ ಗಂಟೆ ನೋಡಿದ ಏಳೂವರೆಯಾಗುತ್ತಾ ಬಂದಿತ್ತು. ಹೊರಗೆ ತುಂಬಾ ಕತ್ತಲಾಗಿತ್ತು.

"ಸರಿ, ನಾನೇ ಹೋಡಿಕೊಂಡು ಬರ್ತೀನೆ ಎಲ್ಲಿಗೇಂತ ಹೊರಟಿದ್ಲು?"

"ಹಸುವಿಗೆ ಹಸಿ ಹುಲ್ಲು ತರೋಕೆ ತೋಡಿನ ಹತ್ರ ಹೋಗ್ತೇನೇಂತ ಹೇಳಿದ್ಲಪ್ಪ" ಗೌರಮ್ಮ ಅಳು ಧ್ವನಿಯಲ್ಲಿ ಹೇಳಿದಳು. ಮುಂದಿನ ಬಾಗಿಲೇರಿಸಿಕೊಂಡು ಅವನೊಡನೆ ಅಂಗಳದ ಗೇಟಿನ ವರೆಗೂ ಬಂದಳು. ಎದುರು ಮನೆ ಹುಡುಗ ಕತ್ತಲಲ್ಲಿ ರಸ್ತೆವರೆಗೆ ಬಂದು "ಅತ್ತೆ, ಈಗ ಹತ್ತು ನಿಮಿಷದ ಹಿಂದೆ ಅಣ್ಣಯ್ಯ ಬರುವಾಗ ಲಕ್ಷ್ಮಕ್ಕ ಕೈಯಲ್ಲಿ ಚೀಲ ಹಿಡಕೊಂಡ ಹಬೀಬನ ಜೊತೆ ಮೈದಾನದ ಹಿಂಬದಿ ರಸ್ತೆ, ಬಸ್ಸು ಬರುತ್ತಲ್ಲ, ಆ ಹಾದೀಲಿ ಹೋದ್ಲಂತೆ ಅಣ್ಣಯ್ಯನ ನೋಡಿ ಮುಖ ತಿರುಗಿಸಿ ಕೊಂಡ್ಲಂತೆ." ಹೇಳಿದ. ಗೌರಮ್ಮನಿಗೆ ಎದೆ ಹೊಡೆತ ಜೋರಾಯಿತು. ಹಾಳು ಶನಿ ಎಲ್ಲಿ ಹುಡುಗನ್ನ ಗಂಟು ಹಾಕ್ಕೊಳ್ತೋಳೋಂತ ಗೊಣಗಿಕೊಂಡು, ಹುಡುಗನ ಮಾತಿಗೆ ಉತ್ತರಿಸದೆ ಮುಂದೆ ಹೋಗಿದ್ದ ನಾರಾಯಣನನ್ನ ಜೋರಾಗಿ ಕೂಗಿದಳು. ನಾರಾಯಣ ಹತ್ತಿರ ಬಂದಾಗ "ಬಸ್ಸು ಬರೋ ರಸ್ತೇಲಿ ಚೀಲ ಹಿಡಕೊಂಡು ಹೋದ್ಲಂತೆ. ಬೇಗ ಹೋದ್ರೆ ಸಿಕ್ಕಿಯಾಳಪ್ಪ. ಅಲ್ಲಿದ್ರೆ ಎಳ್ಕೊಂಡು ಬಾ. ಮುಂದಿಗೆ ಮಸಿ ಬಳಿಯೋ ಕೆಲಸವೊಂದು ಬಾಕಿ ಉಂಟು" ಹೇಳಿದಳು.

ನಾರಾಯಣ ಆಗಲೆಂದು ಹೇಳಿ ಓಡಿದ. ಬಸ್ಸೇನಾದ್ರು ಬಂದ್ರೆ ಹತ್ತಿ ಹೋಗಿರ್ತಾರೆ. ಇಲ್ಲಾಂದ್ರೆ ಎತ್ತಿನ ಗಾಡಿ ಮಾಡಿಕೊಂಡೋ, ನಡಕೊಂಡೊ ಹತ್ರದ ಹಳ್ಳಿಗೆ ಹೋಗಿರ್ತಾರೆ. ಜನರನ್ನ ಕೇಳಿದ್ರೆ ತಿಳಿಯುತ್ತೇಂತ ನಾರಾಯಣ ಯೋಚಿಸಿದ. ಶೇಷಪ್ಪನ ಅಂಗಡಿಯಲ್ಲಿ ಇಬ್ಬರು ಕೂತಿದ್ರು. ಲಕ್ಷ್ಮಿ ಇರಲಿಲ್ಲ. ನಾರಾಯಣ ಒಬ್ಬನ್ನ ಬಸ್ಸು ದಾಟಿ ಹೋಯ್ತೇನೋಂತ ಕೇಳಿದ. ಅವರಿಲ್ಲವೆಂದರು. ಶೇಷಪ್ಪ ನಾರಾಯಣನಿಗೆ ಕೂತುಕೊಳ್ಳಲು ಹೇಳಿದ. ಹಬೀಬ್ ಈಚೆಗೆಲ್ಲಾದರೂ ಬಂದಿದ್ದಾನಾಂತ ಶೇಷಪ್ಪನ್ನ ಕೇಳಿದ. ಮೊದಲಿಗೆ ಸುಮ್ಮನೆ ನಿಂತಿದ್ದ ಶೇಷಪ್ಪ ಇಲ್ಲವೆಂದು ತೊದಲಿದ. ನಾರಾಯಣ ಮತ್ತೂ ಒತ್ತಾಯಿಸಿದ. ಹಬೀಬ್ ಇಲ್ಲೇ ಸ್ವಲ್ಪ ಆಚೆಗೆ ಬಸ್ಸಿಗೆ ಕಾಯುತ್ತಿದ್ದಾನೆ. ಲಕ್ಷ್ಮಿ ಅಂಗಡಿ ಹಿಂಬದಿಗೆ ಕೂತಿದ್ದಾಳೆ. ಬಸ್ಸು ಬಂದಾಗ ಎದ್ದು ಬಂದ್ರೆ ಸಾಕೂಂತ ಹಬೀಬ್ ಅವಳಿಗೆ ಅಲ್ಲಿ ಕೂರಲು ಹೇಳಿದ್ದ. ನಾರಾಯಣ ಶೇಷಪ್ಪನ ಮುಂದಿನ ಮಾತು ಕೇಳದೆ ಅಂಗಡಿಯಿಂದ ಎರಡು ಮಾರು ಮುಂದಕ್ಕಿದ್ದ ಮರದ ಬುಡಕ್ಕೆ ಬಂದು ಮರೆಯಲ್ಲಿ ನಿಂತಿದ್ದ ಹಬೀಬನ ಕುತ್ತಿಗೆಗೆ ಕೈ ಹಾಕಿ ಹಿಡಿದೆಳೆದ. ಹಿಡಿತ ಬಲವಾಗಿತ್ತು. ಹಬೀಬ್ ಯಾರೂಂತ ಕಣ್ಣು ಬಿಟ್ಟು ನೋಡಬೇಕಾದರೆ ಕೆನ್ನೆ ಮೇಲೆ ನಾಲ್ಕು ಪೆಟ್ಟು ಬಿದ್ದು ಹೋಗಿತ್ತು. "ಏನೋ ಬ್ರಾಹ್ಮಣರ ಹೆಂಡ್ತೀಗೀಸ ಹಾರಿಸಿಕೊಂಡು ಹೋಗೋದು ಸುಲಭಾಂತ ತಿಳ್ಕೊಂಡ್ಯಾ? ಆ ಹುಡುಗಿಗೆ ತಂದೆ ಇಲ್ದಿರಬಹುದು. ನಾನು, ಚಿಕ್ಕಪ್ಪನ ಮಗ ಅಣ್ಣ ಇದ್ದೀನಿ ಕಣಪ್ಪ" ಎಂದು ಮತ್ತೆರಡು ಕೊಟ್ಟ. ನಾರಾಯಣನ ದೊಡ್ಡ ಧ್ವನಿಗೆ ಲಕ್ಷ್ಮಿ ಹೆದರಿ ಹಬೀಬನ ಹತ್ತಿರ ಓಡಿ ಬಂದಳು. ಅಂಗಡಿಯಲ್ಲಿದ್ದ ಜನರೂ ಮರದ ಬುಡಕ್ಕೆ ಬಂದ್ರು. ಹಬೀಬ್ ಪೆಟ್ಟು ತಿಂದು ಕಂಗಾಲಾಗಿ ಮರಕ್ಕೆ ಒರಗಿ ಹೋದ. ನಾರಾಯಣ ಲಕ್ಷ್ಮಿ ಕೈ ಎಳೆದು ಅವಳಿಗೆರಡು ಕೊಟ್ಟು ಬಾಯಿ ಮುಚ್ಚಲಿಕ್ಕೆ ಹೇಳಿದ.

"ನಾವಿಬ್ರೂ ಮದುವೆ ಆಗ್ತೀವಿ. ಬಿಟ್ಟು ಬಿಡಿ" ಲಕ್ಷ್ಮಿ ದೊಡ್ಡ ಸ್ವರ ಎತ್ತಿ ಅಳತೊಡಗಿದಳು. ಜನ ಮಂಕಾಗಿ ನಿಂತ ಹಬೀಬನನ್ನೂ, ಅಳುವ ಲಕ್ಷ್ಮಿಯನ್ನು ನೋಡಿ ನಕ್ಕರು. ಜಗಳ ನಿಂತು ಶಾಂತವಾದಾಗ ಬಸ್ಸು ಬಂತು. ನಾರಾಯಣ ಹಬೀಬನಿಗೆ ಅದರಲ್ಲಿ ಹತ್ತಲಿಕ್ಕೆ ಹೇಳಿ ಲಕ್ಷ್ಮಿಯನ್ನು ಕೈ ಹಿಡಿದೆಳೆದು ಮನೆಗೆ ಕರಕೊಂಡು ಬಂದ.

ಲಕ್ಷ್ಮಿ ಹಬೀಬನೊಟ್ಟಿಗೆ ಓಡಿ ಹೋದಳೂಂತ ಹತ್ತಿರದ ಮನೆಯವರು ಹುಡುಗನ ಗಟ್ಟಿ ಮಾತನ್ನ ಕೇಳಿ ಅಂಗಳದಲ್ಲಿ ನಿಂತು ಮಾತಾಡಿ ಕೊಳ್ಳತೊಡಗಿದರು. ನಾರಾಯಣನ ಹಿಂದೆ ಲಕ್ಷ್ಮಿ ಅಳುತ್ತಲೇ ಬರುತ್ತಿದ್ದಳು. ಮನೆಹತ್ತಿರ ಬರುತ್ತಲೆ ಅಕ್ಕ ಪಕ್ಕದವರು ಎದುರು ಬಂದು "ಏನು? ಸಿಕ್ಕಿದ್ಲ? ಸದ್ಯ ಅವನ ಹಿಂದೆ ಓಡಿ ಹೋಗಲಿಲ್ಲವಲ್ಲ?" ಹೇಳಿದಾಗ ಲಕ್ಷ್ಮಿ ತಲೆ ಎತ್ತಲಿಲ್ಲ. "ಏನು ಕಾಲಪ್ಪ ಇದು. ಗಂಡು ಬರಲಿಲ್ಲಾಂದ್ರೆ ಆ ಸುಣ್ಣ ಬಳಿಯೋನ ಹಿಂದೆ ಓಡ್ಬೇಕಾ?" ಜನ ಚಟಾಕಿ ಹಾರಿಸಿದರು.

ಲಕ್ಷ್ಮಿ ಮನೆಗೆ ಬಂದಾಗ ನಾಲ್ಕಾರು ಜನ ಕುತೂಹಲದಿಂದ ಅವಳ ಹಿಂದೆ ಬಂದಿದ್ದರು. ನಾರಾಯಣ ಒಳಗೆ ನುಗ್ಗಿದ್ದೆ ಲಕ್ಷ್ಮಿಗೆ ಇನ್ನು ನಾಲ್ಕು ಹೊಡೆದು ಮೂಲೆಯಲ್ಲಿ ಕೂರಿಸಿದ. "ಹಾಳು ರಂಡೆ, ಏನು ರೋಗ ಬಂದ್ಹೋಯ್ತೆ ನಿಂಗೆ? ನನ್ನ ಮರ್ಯಾದೆ ಮೂರು ಕಾಸಿಗೆ ಮಾಡ್ದೆ. ಯಾವತ್ತಿಂದ ನಿನ್ನ ಆಟ ಶುರುವಾಯ್ತು? ಕುಂದೆಯಿಲ್ಲದ ಹೊಗುವಂತೆ ಸಾಕಿದಕ್ಕೆ ಇದೇನಾ ನೀನು ಮಾಡೋದು"? ಗೌರಮ್ಮನವರು ಎರಿಯುತ್ತಿರುವ ಸಿಟ್ಟಲ್ಲಿ ಬಡ ಬಡಿಸಿ, ಲಕ್ಷ್ಮಿ ಕೂದಲು ಹಿಡಿದು ತಲೆಯನ್ನು ಗೋಡೆಗೆ ಕುಟ್ಟಿದಳು. ಲಕ್ಷ್ಮಿ ಯಾವುದಕ್ಕೂ ಮಾತಾಡದೆ ಅಳುತ್ತಾ ಕೂತಿದ್ದಳು.

"ಅಮ್ಮ, ಸ್ವಲ್ಪ ನಿಲ್ಲು...ಫಸ್ಟ್‌ಕ್ಲಾಸ್ ಪಟಾಕಿ ಬಿಡೋಕಿಲ್ಲ...ಬೇಗ ಬರ್ನಾಲ್ ತಂದು ಕೊಡಿಯಾಗ್ತಿದೆ."

ಎದುರು ಬಾಗಿಲು ಹಾಕಿ ಗೌರಮ್ಮ ನಾರಾಯಣನೊಡನೆ ಏನು ಮಾಡುವುದೆಂದು ಚಿಂತಿಸುತ್ತಿದ್ದಳು. ಹಳ್ಳಿ ಜನಕ್ಕೆ ಲಕ್ಷ್ಮಿ ಓಡಿ ಹೋಗಲಿಕ್ಕೆ ಹೊರಟ ವಿಚಾರ ತಿಳಿದು ಹೋಗಿ . ನಾಳೆ ದಿನ ಅದಕ್ಕೆ ಮತ್ತಷ್ಟು ಬಣ್ಣ ಬರುತ್ತೆ. ಇವತ್ತಲ್ಲದಿದ್ದರೆ ನಾಳೆ ಹಬೀಬ್ ತಿರುಗಿ ಬರದೆ ಇಲ್ಲ ಮತ್ತಾದ್ರೂ ಲಕ್ಷ್ಮಿ ಓಡಿ ಹೋದಾಳು. ಗೌರಮ್ಮನಿಗೆ ಪರಿಹಾರವೇ ಸಿಕ್ಕದೇ ಒದ್ದಾಡುತ್ತಿದ್ದಳು.

"ಏನ್ ಮಾಡ್ಲಿ ಹೇಳು?" ಗೌರಮ್ಮ ಮಾತಾಡದೆ ಕೂತ ನಾರಾಯಣನನ್ನು ಕೇಳಿದಳು.

"ಯೋಚಿಸ್ತೇನೆ." ಹೇಳಿದ ನಾರಾಯಣ ಉರಿಯುತ್ತಿರುವ ದೇವರ ದೀಪ ನೋಡಿದ. ರಂಗೋಲಿಯನ್ನು ಈಗ ಸುಲಭದಲ್ಲಿ ಎಳೆ ಎಳೆಯಾಗಿ ಬೇರ್ಪಡಿಸಬಹುದೆಂದುಕೊಂಡ.

ನಾರಾಯಣ ನಗರಕ್ಕೆ ಹೋಗುವಾಗ ಲಕ್ಷ್ಮಿಯನ್ನು ಒಟ್ಟಿಗೆ ಕರಕೊಂಡು ಹೋಗೋದು. ಅಲ್ಲಿ ಕಟಿಂಗ್ ಏನಾದ್ರು ಕಲೀಲೀಂತ ಹೇಳಿದ. ಗೌರಮ್ಮನಿಗೆ ಇನ್ನೂ ಹೆದರಿಕೆ ಹೋಗಿರಲಿಲ್ಲ. ಅಲ್ಲಿಗೂ ಹಬೀಬ್ ಬಂದು ಮತ್ತೆ ಹಾರಿಸಿಕೊಂಡು ಹೋದರೇಂತ ಕೇಳಿದಳು. ನಾರಾಯಣ ಜೋರಾಗಿ ನಕ್ಕು "ಮನೇಲಿ ನಾನಿಲ್ವೆ? ನನ್ನ ಹೆಂಡತಿ ಮಕ್ಳು ಎಲ್ಲಾ ಇರ್ತಾರೆ. ಹಬೀಬ್‌ಗೆ ಜನ್ಮಕ್ಕೆ ಸಾಕಾಗೋವಷ್ಟು ಕೊಟ್ಟಿದ್ದೇನೆ. ಇನ್ನವನು ಲಕ್ಷ್ಮಿ ಸುದ್ದಿಗಿಲ್ಲ" ಹೇಳಿದ.

ಗೌರಮ್ಮನಿಗೆ ಸಮಾಧಾನವಾಯಿತು. ಮೂಲೆಯಲ್ಲಿ ಕೂತು ಅಳ್ತಾಯಿದ್ದ ಲಕ್ಷ್ಮೀನ ಒಳಗೆ ಕರೆದುಕೊಂಡು ಬಂದು ದೇವರ ದೀಪ, ರಂಗೋಲಿ, ಪಟಕ್ಕೆ ಹಚ್ಚಿದ ಅರಶಿನ ಕುಂಕುಮ, ತೋರಿಸಿ, ಹಬೀಬನ್ನ ಮರೀಂತ ಹೇಳಿದ. ಲಕ್ಷ್ಮಿ ಪೆಚ್ಚು-ಪೆಚ್ಚಾಗಿ ಅವನನ್ನೇ ನೋಡಿ ತಲೆ ಕುಣಿಸಿದಳು.

ಬೆಳಗ್ಗೆ ಎದ್ದು ಲಕ್ಷ್ಮಿ ಹಿತ್ತಲಲ್ಲಿ ಕಟ್ಟಿದ್ದ ಹಸುವನ್ನು ನೋಡಿದಳು. ಅದರ ಮೈ ಗಾಯವನ್ನು ಕಾಗೆ ಕುಟುಕಿ ದೊಡ್ಡದು ಮಾಡಿತ್ತು. ಬಾಲ ಅಲ್ಲಾಡಿಸಿ ಕಾಗೆಗಳನ್ನು ಓಡಿಸಲಿಕ್ಕೂ ಅದಕ್ಕೆ ಶಕ್ತಿಯಿಲ್ಲ. ಎರಡು ದಿನಗಳಿಂದ ಹುಲ್ಲು, ಮಡ್ಡಿಗಳನ್ನು ಮುಟ್ಟುತ್ತಿರಲಿಲ್ಲ. ಗಾಯಕ್ಕೆ ಮದ್ದು ಹಚ್ಚಿ ಕುತ್ತಿಗೆ ಕೆಳಕ್ಕೆ ತುರಿಸಲಿಕ್ಕೇಂತ ಕೈ ಹಚ್ಚಿದರೂ ಹಸು ಕುತ್ತಿಗೆ ನೀಡಲಿಲ್ಲ. ಸ್ವಲ್ಪ ಹೊತ್ತಿಗೆ ಹಸು ಸತ್ತು ಹೋಯಿತು. ಜನ ಅದನ್ನ ಹೊತ್ತುಕೊಂಡು ಹೋಗುವಾಗ ಮಧ್ಯಾಹ್ನವಾಗಿತ್ತು. ಊಟ ಮುಗಿಸಿ ಲಕ್ಷ್ಮಿ ನಾರಾಯಣನೊಟ್ಟಿಗೆ ನಗರಕ್ಕೆ ಹೊರಟಳು. ಕೊಟ್ಟಿಗೆಗೆ ಹೋಗಿ ನಿಂತಳು. ಹಸುವಿಲ್ಲದ ಕೊಟ್ಟಿಗೆ ಬಣಗುಟ್ಟುತ್ತಿತ್ತು. ಹಳ್ಳಿ ಬಿಟ್ಟು ನಗರಕ್ಕೆ ಹೋಗಲಿಕ್ಕೆ ಅವಳಿಗೆ ಮನಸ್ಸಿಲ್ಲ. ತಾಯಿಯ ಮಾತು ಅವಳನ್ನು ಹಳ್ಳಿಯಿಂದ ಓಡಿಸುತ್ತಿತ್ತು.

ಮನೆ ಇಳಿದು ಮೈದಾನದ ಹಿಂದಿನ ರಸ್ತೆಗೆ ಬಂದಾಗ ಆಕಾಶದಲ್ಲಿ ಹದ್ದುಗಳು ಹಾರಾಡುತ್ತಿದ್ದವು. ಬಂಡೆ ಬುಡದಲ್ಲಿ ಕಚ್ಚಾಡುವ ಶಬ್ದ. ಲಕ್ಷ್ಮಿ ಕಣ್ಣದ

ಲಿಸಿ ನೋಡಿದಳು. ಹಸುವನ್ನು ಜನ ಇಲ್ಲಿ ಎಸೆದು ಹೋಗಿದ್ರು ಚೀಲ ಬಿಚ್ಚಿ ಹೋದ ಹಾಗೆ. ಅದರ ದೇಹದ ಚರ್ಮ ಬಿಚ್ಚಿ ಹೋಗಿತ್ತು. ಹತ್ತಿಪ್ಪತ್ತು ಹದ್ದುಗಳು ಕುಟುಕಿ–ಕುಟುಕಿ ಅದರ ಮಾಂಸ ಎಳೀತಾ ಇದ್ವು.

"ಅಯ್ಯೋ, ನಮ್ಮ ಹಸೂನ ಇಲ್ಲಿ ಹಾಕಿದ್ದಾರೆ!" ಲಕ್ಷ್ಮಿ ಜೋರಾಗಿ ಉದ್ಗರಿಸಿದಳು. ನಾರಾಯಣ ತಿರುಗಿ ನೋಡಿದ. ಲಕ್ಷ್ಮಿ ಸತ್ತ ...ಹಸೂನ ನೋಡ್ಕೊಂಡು ಅಲ್ಲೆ ನಿಂತಿದ್ಲು. "ನನ್ನ ಹಸೂನ ಹದ್ದು ಕುಟುಕುತ್ತಿದೆ" ಅಳುತ್ತಾ ಹೇಳಿದಳು.

"ಸತ್ತ ಹಸು ಇನ್ನೇನಾಗಬೇಕು. ಇಲ್ಲೆ ನಿಂತ್ರೆ ಬಸ್ಸು ತಪ್ಪಿ ಹೋಗುತ್ತೆ. ಹಸೂಗೆ ಸಂಸ್ಕಾರ ಮಾಡ್ಬೇಕ?" ಲಕ್ಷ್ಮಿಯನ್ನು ಗದರುವಂತೆ ಕೇಳಿದರೂ ಅವಳು ಮಿಸುಕಾಡಲಿಲ್ಲ. ನಾರಾಯಣ ಮತ್ತೆ ಅವಳನ್ನು ಆತುರಪಡಿಸಿ ಕೈ ಹಿಡಿದೆಳೆದಾಗ ಮಾಂಸ ತಿನ್ನುತ್ತಿರುವ ಹದ್ದುಗಳು, ಮೈ ಚಾಚಿ ಬಿದ್ದು ಹೋದ ಹಸುವನ್ನು ತಿರುಗಿ ತಿರುಗಿ ನೋಡಿ ನಾರಾಯಣನನ್ನು ಅನುಸರಿಸಿದಳು.

ಹಳ್ಳಿಯಿಂದ ಬಸ್ಸು ಹೊರಟಾಗ ಕಾಡು. ಮರ. ಗದ್ದೆ, ಮೇಯುತ್ತಿರುವ ಹಸು ಎಲ್ಲವನ್ನೂ ಒಂದೊಂದಾಗಿ ನೋಡಿದಳು. ಬಸ್ಸು ಓಡುತ್ತಿದ್ದಂತೆ ತಾನು ಅವುಗಳಿಂದ ದೂರವಾಗೋದು ಸಹಿಸದೆ ಬಿಕ್ಕಳಿಸಿದಳು. ನಗರ ತಲುಪಿದಾಗ ಮರು ದಿನ ಎಳೆ ಬಿಸಿಲು ಬೀಳುವ ಹೊತ್ತಾಗಿತ್ತು. ಎಷ್ಟೊಂದು ದೂರದ ಪ್ರಯಾಣವೆಂದುಕೊಂಡಳು. ನಾರಾಯಣ ಇಳಿಯಲು ಹೇಳಿದಾಗ ಅವನ ಮುಖ ನೋಡಿದಳು. ಎಲ್ಲೋ ನೋಡುತ್ತಿದ್ದ ಬಾಯಲ್ಲಿ ಆತುರ ಮಾಡುತ್ತಿದ್ದ ಓಡುವ ಬಸ್ಸಿನ ಹಾಗೆ ಲಕ್ಷ್ಮಿ ಸುತ್ತ ಕಣ್ಣೋಡಿಸಿದಳು. ತುಂಬಾ ಬಸ್ಸುಗಳು! ಬಸ್ಸುಗಳ ಬುಡದಲ್ಲಿ ಜಾತ್ರೆ ಸೇರಿದ ಹಾಗೆ ಜನ. ಬಸ್ಸಿಂದ ಇಳಿದು ಕಾಲು ಹಾಕೋಕೆ ಜಾಗವಿಲ್ಲ. ಸಂದು–ಸಂದಿಯಲ್ಲಿ ಭಿಕ್ಷೆಗೆ ಕೂತವರು. ನಿಲ್ಲಲಾರದೆ ನಡೆಯಲಾರದೆ ಲಕ್ಷ್ಮಿ ಮಂಕಾಗಿ ನಿಂತಳು. ನಾರಾಯಣನ ಧ್ವನಿ ಅವಳನ್ನು ಎಚ್ಚರಿಸಿದಾಗ ಅದೇನೋ ಗಡಸಾಗುತ್ತಿದೆಯೆಂದಳು. ಅವನು ಕೈ ಹಿಡಿದು ಮುಂದಕ್ಕೆ ಜಗ್ಗಿದಾಗ. ಹಬೀಬನ್ನ ಓಡಿಸಿ ಎಳಕೊಂಡು ಬಂದುದಕ್ಕಿಂತಲೂ ಈಗಿನ ಹಿಡಿತ ಬಿಗಿಯಾದಂತೆನಿಸಿತು. ಅವನ ಕೈ ಹಿಡಿತ ಬಿಗಿಯಾದ್ದರಿಂದ ಲಕ್ಷ್ಮಿ ಜನರ ಮಧ್ಯದಿಂದ ಅವನ ಹಿಂದೆ ಹೋದಳು.

ಅಗಲವಾದ ರಸ್ತೆ ಬದಿಯಲ್ಲಿ ಲಕ್ಷ್ಮಿ ನಾರಾಯಣನ ಬದಿಗೆ ನಿಂತುಕೊಂಡಳು. ಹಿಂದೆ ಯಾವತ್ತೂ ನೋಡಿರದಷ್ಟು ದೊಡ್ಡ ಕಟ್ಟಡ. ಆ ಕಟ್ಟಡದ ಬದಿಯ ನಳಿಗೆಯಿಂದ ಕಪ್ಪು–ಕಪ್ಪಾದ ಹೊಗೆ ಬುಸುಗುಟ್ಟುತ್ತಾ ಹೊರಗೆ ಬರುತ್ತಿತ್ತು. ಆ ಹೊಗೆಯನ್ನೇ ನೋಡಿದಳು. ಸ್ವಲ್ಪ ಎತ್ತರದೊರೆಗೆ ಕಾಣುವ ಹೊಗೆ ಮತ್ತಲ್ಲಿ ಹೋಗುತ್ತೇಂತ ಆಶ್ಚರ್ಯವಾಯಿತು. ಮೈಯೆಲ್ಲಾ ಬಿಸಿಯಾದಂತಾಗಿ ಹರಿಯುತ್ತಿದ್ದ ಬೆವರನ್ನು ಒರೆಸಿಕೊಂಡು ನಾರಾಯಣನ್ನ ನೋಡಿದಳು. ಅವನ ಮುಖ ಕಪ್ಪು–ಕಪ್ಪಾಗಿತ್ತು ಲಕ್ಷ್ಮಿ ಜೊತೆ ಮಾತಾಡಲಿಲ್ಲ. ರಸ್ತೆ ನೋಡಿದಳು. ಪುರುಸೊತ್ತಿಗಿಲ್ಲದೇ ಓಡಾಡುವ ಬಸ್ಸು, ಕಾರುಗಳನ್ನು ನೋಡಿದಳು. ತಲೆ ತಗ್ಗಿಸಿಕೊಂಡಾಗ ನಿಮಿಷ ಬಿಡುವಿಲ್ಲದೆ ನಡೆದಾಡುವ ಸಾವಿರಾರು ಕಾಲುಗಳು! ಎಲ್ಲಿಗೆ ಓಡಾಟ, ಯಾಕೀ ವೇಗ, ಏನು ಉರಿ. ಲಕ್ಷ್ಮಿಗೆ ಅರ್ಥವಾಗಲಿಲ್ಲ. ಇವರೆಲ್ಲರೊಡನೆ ತಾನೂ ಕೊಚ್ಚಿ ಹೋಗುತ್ತಿದ್ದೇನೆನಿಸಿದರೂ ತನ್ನ ಕೈಯನ್ನು ನಾರಾಯಣ ಬಲವಾಗಿ ಹಿಡಿದುಕೊಂಡಿರುವಂತಾಯಿತು. ಹಾರನ್ನು ಮಾಡಿಕೊಂಡು ಬಸ್ಸು ಹತ್ತಿರ ನಿಂತ ಶಬ್ದಕ್ಕೆ ಬೆಚ್ಚಿ ಹೋಗಿ ನಾರಾಯಣನಿಗೆ ಆತು ನಿಂತು ನಗರ ಬೇಡವೆಂದಳು. ಹಳ್ಳಿಗೆ ಹೋಗಬೇಕೆಂದು ಅವನ ಮುಖ ನೋಡಿದಳು. ನಾರಾಯಣ ದುರುಗುಟ್ಟಿ ನೋಡಿದ. ಹಬೀಬನನ್ನು ಬಡಿಯುವಾಗ ಇದ್ದ ರೋಷಕ್ಕಿಂತ ಈಗ ಹೆಚ್ಚು ರೋಷ ಮುಖದಲ್ಲಿ ಕಾಣುತ್ತಿತ್ತು. ಲಕ್ಷ್ಮಿ ಮಾತಾಡದೆ ಅತ್ತಳು. ಸತ್ತ ಹಸು. ಹಾರುವ ಹದ್ದು ಗದರಿಕೊಂಡ ಅಮ್ಮನನ್ನು ಯೋಚಿಸಿ ಮತ್ತೂ ಅತ್ತಳು. ನಾರಾಯಣ ಅವಳ ಕೈ ಹಿಡಿದು ಬಸ್ಸಿಗೆ ಹತ್ತೆಂದು ಸಿಡುಕಿದಾಗ ನಿಂತಿದ್ದ ಭೂತಾಕಾರದ ಬಸ್ಸೇರಿದಳು.

ಮತ್ತೆ ಯಾವುದೋ ಒಂದು ಮನೆ. ದೊಡ್ಡ ಕಾಂಪೌಂಡಿನೊಳಗೆ ಆ ಮನೆ ಹೂತು ಹೋದಂತಿತ್ತು. ನಗರ, ಜನರ ಓಡಾಟ, ಬಸ್ಸು, ಕಾರುಗಳ ಗಜಿಬಿಜಿಯಿಂದ ಕಾಂಪೌಂಡ್ ಮನೆಯನ್ನು ಬೇರೆ ಮಾಡುವಂತೆ ಗಟ್ಟಿಯಾಗಿ ನಿಂತಿತ್ತು. ಜನ ಸದ್ದು ಗದ್ದಲವಿಲ್ಲದ ಮನೆ ಸಣ್ಣಗಿತ್ತು. ಲಕ್ಷ್ಮಿ ಮೂಕಳಾಗಿ ನಾರಾಯಣನ ಹಿಂದೇ ಬಂದಳು. ಅವನು ಕೂರಲು ಹೇಳಿದ ಜಾಗದಲ್ಲಿ ಕೂತು ಮುಖ, ಹಣೆ, ಕುತ್ತಿಗೆ ಒರೆಸಿಕೊಂಡಳು. ಬಿಸಿಲಿನ ಶಾಖ ಹೆಚ್ಚಾಗಿ ಮೈ ಉರಿಯುತ್ತಿತ್ತು. ಉಸ್ ಎಂದು ಉಸಿರು ಬಿಟ್ಟಳು.

ನಾರಾಯಣ ಬೆಲ್ ಒತ್ತಿದ. ಹೆಂಗಸೊಬ್ಬಳು ಬಂದಳು. ಮತ್ತೆ ಸುರುಳಿ–ಸುರಳಿಯಂತೆ ಸುತ್ತಿಕೊಂಡು ಹೋಗುವ ಮಹಡಿ ಮೆಟಲನ್ನ ಏರಿದಳು. ನಾರಾಯಣ ಅವಳನ್ನು ಕುಳ್ಳಿರಿಸಿ ಎದುರಿನ ಕೋಣೆಗೆ ಹೋದ. ಲಕ್ಷ್ಮಿ ಮಾತಿಲ್ಲದೆ ನೋಡುತ್ತಲೇ ಕುಳಿತಳು. ಎದುರಿನ ಕೋಣೆಯಿಂದ ಅಸ್ಪಷ್ಟ ಮಾತು ಕೇಳುತ್ತಿತ್ತು.

"ಹುಂ. ಇನ್ನು ಪ್ರಾಯಕ್ಕೆ ಬರುತ್ತಿರೋ ಹುಡುಗಿ ತಂದೆ–ತಾಯಿ ಯಾರೂ ಇಲ್ಲ. ಏನೂ ಅನುಭವವಿಲ್ಲ. ಏಳ್‌ನೂರಾದ್ರೆ ಬೇಕು..." ಮತ್ತೆ ಮಾತು ಅಸ್ಪಷ್ಟ. ಯಾರು ತಂದೆ ತಾಯಿ ಇಲ್ಲದವರು ಲಕ್ಷ್ಮಿ ನಾರಾಯಣನ ಮಾತು ಕೇಳಿ ಯೋಚಿಸಿದಳು. ಮತ್ತೊಂದು ಹೆಣ್ಣು ಧ್ವನಿ "ಏಳ್ ನೂರು ಹೆಚ್ಚೆ... ಇರಲಿ: ನಿನ್ನ ಸಹಾಯ ಬೇಕಲ್ಲ..." ಮತ್ತೆ ನಗು.

ಬಾಗಿಲು ತೆರೆಯಿತು. ನಾರಾಯಣ "ಇಲ್ಲೇ ಕೂತಿರು ಬರ್‍ತೇನೆ" ಎಂದು ಹೇಳಿ ಡಬಡಬ ಮೆಟ್ಟಲಿಳಿದು ಹೋದ ಲಕ್ಷ್ಮಿ ಹಾಂ–ಹೂಂ ಹೇಳಬೇಕಾದರೆ ನಾರಾಯಣ ಮಾಯವಾಗಿದ್ದ. ದೂರದಲ್ಲಿ ಮೆಟ್ಟಲಿಳಿಯುವ ಹೆಜ್ಜೆ ಸಪ್ಪಳ ಮಾತ್ರ ಕೇಳುತ್ತಿತ್ತು. ಪೆಚ್ಚಾದ ಲಕ್ಷ್ಮಿ ಎದುರು ನಿಂತ ದಢೂತಿ ಹೆಂಗಸನ್ನು ನೋಡಿದಳು, ಮುಗುಳು ನಗುತ್ತಾ ಲಕ್ಷ್ಮಿಯ ಕೈ ಹಿಡಿದುಕೊಂಡಿದ್ದಳು.

"ನಮ್ಮ ಬಾಬೂ ರಾಯ್ರು ಬಂದು ನೋಡಿದ್ದೆ ಏನೂರು ರೂಪಾಯಿ ಎಸೀತಾರೆ" ತನ್ನಷ್ಟಕ್ಕೆ ಹೇಳಿ ಲಕ್ಷ್ಮಿಗೆ ಎದ್ದು ಒಳಗೆ ಬರಲು ಹೇಳಿದಳು. ಲಕ್ಷ್ಮಿ ಸುತ್ತ ಕಣ್ಣೋಡಿಸಿದಳು. ಎತ್ತರ–ಎತ್ತರವಾದ ಗೋಡೆ. ಬಾಗಿಲು, ಅಗಳ ಎಲ್ಲಾ ಗಟ್ಟಿ! ಹೆಂಗಸು ಬದಿಯ ಬಾಗಿಲು ತೋರಿಸಿ 'ಈಚೆ ಬಾರಮ್ಮ' ಅಂದಳು. ಲಕ್ಷ್ಮಿ ಅವಳು ಹೇಳಿದಂತೆ ಬಾಗಿಲು ದಾಟಿ ಒಳಗೆ ಹೋದಳು. ದಢಾರನೆ ಬಾಗಿಲು ಮುಚ್ಚಿಕೊಂಡಿತು. ಕೆಳಗಿಸು ಮೆಟ್ಟಲಿಳಿದು ಕೆಂಪು ಲೈಟ್ ಹಾಕಿದ್ದ ಕೋಣೆಯತ್ತ ಹೋಗಲು ಹೆಂಗಸು ಹೇಳಿದಳು. "ಇಲ್ಲ ಅಣ್ಣನ ಜೊತೆ ಹೋಗ್ತೇನೆ ಬಿಡಿ." ಲಕ್ಷ್ಮಿ ಗಾಬರಿಯಿಂದ ಹೇಳಿ ಮೆಟ್ಟಲಿಳಿಯದೆ ಬಾಗಿಲು ದೂಡಿದಳು. ಅದು ತೆರೆಯಲಿಲ್ಲ. ಪುನಃ ಹೆಂಗಸು ಬಲವಂತದಿಂದ ಮೆಟ್ಟಲು ಇಳಿಯಲು ಹೇಳಿ ಹೆಗಲಿಗೆ ಕೈ ಹಾಕಿದಾಗ. ಈ ಹಿಡಿತ ನಾರಾಯಣನ ಕೈಗಿಂತ ಬಿಗಿಯಾದಂತೆನಿಸಿ ಏನೂ ತಿಳಿಯದೆ ಕೆಂಪು ಲೈಟು ಉರಿಯುತ್ತಿದ್ದ ಕೋಣೆಗೆ ಒಂದೊಂದೇ ಮೆಟ್ಟಲಿಳಿಯುತ್ತ ಹೋದಳು.

●



ಕನ್ನಡ ಚಿತ್ರೋದ್ಯಮ ಇಂದು ಭದ್ರವಾಗಿ ನೆಲೆಯೂರಿದ್ದರೆ, ಅದು ಹಲವಾರು ಸಾಧನೆಗಳನ್ನು ಸಾಧಿಸಿದ್ದರೆ, ಅದಕ್ಕೆ ಇರುವ ಕೆಲವೇ ಕಾರಣಗಳಲ್ಲಿ ರಾಜಕುಮಾರ್ ಗಳಿಸಿದ ಜನಪ್ರಿಯತೆಯೂ ಒಂದು ಎನ್ನುವ ಮಾತಿಗೆ ಎರಡಿಲ್ಲ. ಕನ್ನಡ ಚಿತ್ರಗಳು ಬಿಡುಗಡೆಯಾದ ದಿನವೂ ಚಿತ್ರಮಂದಿರ ಭರ್ತಿಯಾಗದ ಕಾಲವೊಂದಿತ್ತು. ಶಿವಾಜಿ ಗಣೇಶನ್, ಎಂ.ಜಿ.ಆರ್.ರಂಥ ಅನ್ಯಭಾಷಾ ನಟರು ಕನ್ನಡ ನಾಡಿನ ಚಿತ್ರಪ್ರೇಮಿಗಳ ಹೀರೋಗಳು. ಸಿನಿಮಾ ಜನತೆಯ ಮಾನಸಿಕ ವೇದಿಕೆಯಿಂದ ಈ ಅನ್ಯ ಹೀರೋಗಳನ್ನು ಉಚ್ಚಾಟಿಸಿ ಕನ್ನಡದ ಹೀರೋ ಸ್ಥಾಪನೆಯಾಗಲು ಪಾವು ರಾಜಕುಮಾರ್ ಅವರಿಗೆ ಕಾಯಬೇಕಾಯಿತು. ಹೀಗೆ ಒಂದು ಹೀರೋ ಇಮೇಜ್ ಕಾಣಿಸಿಕೊಳ್ಳದಿದ್ದರೆ ಜನತೆಯಲ್ಲಿ ಆ ಭಾಷೆಯ ಚಿತ್ರಗಳನ್ನು ನೋಡುವ ಹವ್ಯಾಸ ರೂಪಗೊಳ್ಳುವುದಿಲ್ಲ. ಚಿತ್ರೋದ್ಯಮ ನೆಲೆಗೊಳ್ಳುವುದಿಲ್ಲ.

ಇಂದು ರಾಜ್‌ರ ಸುತ್ತ ಬೆಳೆದಿರುವ ಇಮೇಜ್ ಅಪ್ರತಿಮವಾದದ್ದು. ಇವರ ಜನಪ್ರಿಯತೆ ಕನ್ನಡದ ಯಾವ ನಟನಿಗೂ ಹಿಂದೆ ದಕ್ಕದಂತಹದ್ದು. ಎಡೆದಡೆ ನೂರಾರು ಕಣ್ಣು, ನಿಂತೆಡೆ ಸಂದಣಿ. ಅತ್ಯಂತ ಎತ್ತರದ ನಟ, ಅತಿಪ್ರಾಬಲ್ಯದ ನಾಯಕನಿಗೆ ತಾವು ತುತ್ತತುದಿಯ ಸ್ಥಾನದಲ್ಲಿರುವಾಗ ಅನಿಸುವುದೇನು? ತಾನು ಸಾಧಿಸಬೇಕಾದ್ದು ಬಹಳ ಇದೆ. ತಾನು ಗಳಿಸಿದ್ದು ಏನಿದ್ದರೂ ತಂದೆಯವರ ಆಶೀರ್ವಾದ, ಪತ್ನಿಯ ಸಹಕಾರ, ಕನ್ನಡ ಜನತೆಯ ಅಭಿಮಾನ ಎನ್ನುವ ಸೌಜನ್ಯ ಇವರದು. ಸರಳ, ನೇರ ನಡೆಯ, ನುಡಿಯ ಇವರಿಗೆ ಅಹಂಕಾರದ ಲೇಶಮಾತ್ರವೂ ಮೊಗದಲ್ಲಾಗಲೀ ಮಾತಿನಲ್ಲಾಗಲೀ ಇರದುದು ನನಗೆ ಬೆರಗು ಮೂಡಿಸಿತು.



# ರಾಜಕುಮಾರ್

## ಒಂದು ವಿಶೇಷ, ವಿಶಿಷ್ಟ ಸಂದರ್ಶನ

ಸಂದರ್ಶಕರು: ವಿಕ್ರಮ ಹಾಂದ್ರೂ

'ಕರ್ಮವೀರ'ಕ್ಕಾಗಿ ವಿಶೇಷ ಸಂದರ್ಶನ ಪಡೆಯಲು ಹೋದಾಗ "ಅಬ್ಬಾ ಏನು ಬಿಸಿಲು ಅಂತೀರಾ. ನಿನ್ನೆಯೂ ಹೀಗೆ ಇತ್ತು. ಮಳೇನೂ ಬರಲಿಲ್ಲ" ಎಂದ ನಟಸಾರ್ವಭೌಮನಿಗೆ ಗಾಳಿ ಬೀಸುವ ಚಮಚಾಗಳೂ ಇಲ್ಲ, ಬೆವರು ಒರೆಸುವವರೂ ಇಲ್ಲ. ಆ ಆಡಂಬರ ಈತನಿಗೆ ಬೇಡ. ಶ್ರದ್ಧಾವಂತ ಕಲಾಕಾರನಿಗೆ ಇವೆಲ್ಲ ಏಕೆ ಎನ್ನುವುದು ಇವರ ನಿಲುವು. ಶೂಟಿಂಗ್‌ಗೆ ಹೊರ ಊರಿಗೆ ಬಂದಾಗ ಲಕ್ಸುರಿ ಹೋಟೇಲುಗಳಲ್ಲಿ ತಂಗುವ ಅವಕಾಶವಿದ್ದರೂ, ಅನುಕೂಲವಿರುವ ಮಧ್ಯಮದರ್ಜೆಯ ಹೋಟೆಲುಗಳಲ್ಲಿಯೇ ವಾಸ್ತವ್ಯ. ಸರಳ ಸಾತ್ವಿಕ ನಟರಾದ ಇವರಿಗೆ ಸಿಗರೇಟು, ಕುಡಿತ ಮತ್ತಿತರೇ ಸಿನಿಮಾ ವ್ಯಸನಗಳು ವರ್ಜ್ಯ.

"ನನಗೆ ಸಿಗರೇಟಿನ ಬಗ್ಗೆ ದ್ವೇಷವೂ ಇಲ್ಲ, ಸೇದಬಾರದೆಂದೂ ಇಲ್ಲ. ಆದರೆ ನನಗೆ ಆ ಚಟ ಅಂಟಿಲ್ಲ ಅಷ್ಟೇ. ಆವ ರೂಪಕ್ಕೆ ಒಂದೊಂದು ಸೇದುವುದುಂಟು".

ಇವರು ಕೈಯಲ್ಲಿ ಸಿಗರೇಟು ಹಿಡಿದರೇ ಚಿತ್ರರಸಿಕರು ಸಹಿಸಲಾರರು ಎಂದು ಕಾಣುತ್ತದೆ.

"ಅವರ ಅಭಿಮಾನ ಅದು. ಜನ ಬಯಸಿದ ಹಾಗೆ ನಾನು ಇರಬೇಕು ಅಂತ ನಿಯಮ ಇಲ್ಲ. ಆದರೂ ಅವರ ನಿರೀಕ್ಷೆಯನ್ನು ಸುಳ್ಳುಮಾಡುವುದು ನಮಗೂ ಸರಿಯಲ್ಲ."

ಈ ಹವ್ಯಾಸಗಳಿಲ್ಲದ ಇವರು ಕನ್ನಡ ತೆರೆಯ ಅದ್ವಿತೀಯ ಜೇಮ್ಸ್‌ಬಾಂಡ್. ಜೇಡರ ಬಲೆ, ಗೋವಾದಲ್ಲಿ ಸಿಐಡಿ, ಆಪರೇಷನ್ ಜಾಕ್‌ಪಾಟ್‌ಗಳು ಬಾಕ್ಸಾಫೀಸಿನಲ್ಲಿ ಅದ್ಭುತ ಯಶ ಗಳಿಸಿದವು. ಆದರೆ ಆಮೇಲೆ ಬಾಂಡ್ ಚಿತ್ರಗಳು ಬರಲೇ ಇಲ್ಲ.

"ಅಂಥ ಚಿತ್ರ ತಯಾರಿಸುವ ಸಮರ್ಥರಾರೂ ಮುಂದೆ ಬರಲಿಲ್ಲ. ಎನ್ನುವುದು ಒಂದು ಕಾರಣ. ಒಂದೇ ತರದ ಟೈಪ್‌ಚಿತ್ರಗಳನ್ನು ಕೊಡುವುದು ನನಗೂ ಹಿತಕಾಣಿಸಲಿಲ್ಲ. ಆಗಾಗ ಒಂದೊಂದು ಬಂದರೆ ಚೆನ್ನ. ಇಂಥ ಚಿತ್ರಗಳನ್ನು ನಿರ್ಮಿಸುವುದರಲ್ಲಿ ದೊರೆ-ಭಗವಾನರು ಎತ್ತಿದ ಕೈ. ಹಾಗಾಗಿ ಇತ್ತೀಚೆಗೆ ಅವರ ಒಂದು ಚಿತ್ರಕ್ಕೆ ಒಪ್ಪಿಕೊಂಡಿದ್ದೇನೆ."



## ನೊ ಸ್ಮೋಕಿಂಗ್ ಪ್ಲೀಸ್

ಸ್ಟಾರ್ ಇಮೇಜ್ ಎಂದರೆ ತುಟಿಯಲ್ಲಿ ಹೊಗೆಯಾಡುತ್ತಿರುವ ಸಿಗರೇಟು. ಆದರೆ ನಮ್ಮ ರಾಜಕುಮಾರರಿಗೆ ಇದು ಸಲ್ಲ. ನಿಜ ಜೀವನದಲ್ಲಿರಲಿ ತೆರೆಯ ಮೇಲೆಯೂ ಅವರ ಸಿಗರೇಟು ಸೇದುವ ಭಂಗಿ ಇಲ್ಲ. ಬಾಂಡ್ ಶೈಲಿಯ ಚಿತ್ರಗಳಲ್ಲಿಯೂ ಕಾಣಸಿಗದು. 'ಕರ್ಮವೀರ'ಕ್ಕಾಗಿ ವಿಶೇಷ ಫೋಟೋ. ಸಂದರ್ಶನ ಕಾಲದಲ್ಲಿ ಸಿಗರೇಟು ತುಟಿಗಿಟ್ಟು ಒಂದು ಪೋಸ್ ಕೊಡಿ ಎಂದಾಗ ಸಂಕೋಚಪಟ್ಟುಕೊಂಡೆ ಹಚ್ಚದ ಸಿಗರೇಟನ್ನು ತುಟಿಗೇರಿಸಿದರು. 'ಹಚ್ಚಲೇನು ರಾಜಣ್ಣ' ಎಂದಾಗ 'ಬೇಡ ಬೇಡ ಹಚ್ಚಬೇಡಿ' ಎನ್ನುತ್ತಿರುವಂತೆ ಕ್ಯಾಮರಾ ಕ್ಲಿಕ್ ಎಂದಿತು.

ಕನ್ನಡದಲ್ಲಿ ವರ್ಣಚಿತ್ರಗಳ ಯುಗ ಆರಂಭವಾಗಿದೆ. ಚಿತ್ರ ನಿರ್ಮಾಣಕ್ಕೆ ಅದ್ದೂರಿಯಲ್ಲಿ ಹಣ ವೆಚ್ಚಮಾಡಲಾಗುತ್ತಿದೆ. ಆದರೆ ಕನ್ನಡದಲ್ಲಿ ಇಲ್ಲಿಯವರೆಗೆ ವಿದೇಶೀ ಹೊರಾಂಗಣವುಳ್ಳ ಒಂದು ಚಿತ್ರವೂ ಹೊರಬಂದಿಲ್ಲ. ಇಂಥ ಚಿತ್ರ ತೆಗೆಯಬೇಕಾದರೆ ರಾಜಕುಮಾರ ನಾಯಕನಾಗುವಂಥ ಚಿತ್ರಗಳ ತಯಾರಕರಿಗೆ ಮಾತ್ರ ಸಾಧ್ಯ. ಏಕೆಂದರೆ ಹಾಕಿದ ಹಣ ವಾಪಸ್ಸು ಬರುವ ಗ್ಯಾರಂಟಿ. ಅಭಿಮಾನಿಗಳು ವಿದೇಶದಲ್ಲಿ ರಾಜನಿರುವುದನ್ನು ತೆರೆಯ ಮೇಲೆ ಕಾಣ ಬಯಸುತ್ತಾರೆ.

"ಆದರೆ ಆ ಆಸೆಯನ್ನು ನಿರಾಸೆ ಮಾಡಬಾರದು. ಮಾಮೂಲಿ ಚಿತ್ರಗಳಲ್ಲಿ ಕೇವಲ ವಿದೇಶದ ಹಿನ್ನೆಲೆಯನ್ನು ತುರುಕುವುದು ಶುದ್ಧ ತಪ್ಪು. ಬಾಂಡ್ ಚಿತ್ರಗಳನ್ನು ತಯಾರಿಸಲು ನಾವು ವಿದೇಶಕ್ಕೆ ಹೋಗಬೇಕೆ? ಅಂಥ ನೂರಾರು ಚಿತ್ರಗಳು ಅಲ್ಲಿಂದಲೇ ಬರುತ್ತವೆ. ಅವುಗಳನ್ನು ನೋಡಿದ ಧಾಯಿತು. ವಿದೇಶಿ ಚಿತ್ರಗಳ ಮೇಲ್ಪಂಕ್ತಿಯಿಂದಲೇ ತಯಾರಿಸುವ ನಮ್ಮ ಬಾಂಡ್ ಚಿತ್ರಗಳನ್ನು ಅಲ್ಲಿಯೇ ಹೋಗಿ ತೆಗೆಯುವುದು ಹಾಸ್ಯಾಸ್ಪದ. ವಿದೇಶೀ ನೆಲವನ್ನು ಒಳಗೊಂಡ ಚಿತ್ರಗಳಲ್ಲಿ ಅಭಿನಯಿಸುವ ಅಭಿಲಾಷೆ ನನಗೂ ಇದೆ ಆದರೆ ಒಳ್ಳೆಯ ಕಥೆ ಬೇಕು ಕಥೆ."

ನಾಯಕನಿಗೆ ಹೆಸರು ಬರುತ್ತಿದ್ದಂತೆಯೇ ಗಾಳಿಸುದ್ದಿಗಳು ಅವನನ್ನು ಸುತ್ತುವರಿಯುವುದು ಸರ್ವೇಸಾಮಾನ್ಯ. ಹಿಂದಿ ಚಿತ್ರರಂಗದಲ್ಲಿ ಇರುವಂತೆ ಗಾಳಿಸುದ್ದಿಗಳ ಮೇಲಾಟ ಅಬ್ಬರ ಕನ್ನಡದಲ್ಲಿ ಇಲ್ಲ. ಆದರೂ ಇತ್ತೀಚೆಗೆ ರಾಜ್ ಗಾಳಿಸುದ್ದಿಗಳ ಕೇಂದ್ರ, ಗಾಸಿಪ್‌ಗಳ ಬಗ್ಗೆ ಅವರು ಏನನ್ನುತ್ತಾರೆ: ವೈಯಕ್ತಿಕವಾಗಿ ನೊಂದಿರುವ ಇವರು "ಇದನ್ನು ತೀವ್ರವಾಗಿ ಪ್ರತಿಭಟಿಸಬೇಕು. ಸರ್ಕಾರವೂ ಈ ಬಗ್ಗೆ ಕ್ರಮ ಕೈಗೊಳ್ಳಬೇಕು, ಕಲಾವಿದರೂ ಎಚ್ಚರ ವಹಿಸಬೇಕು" ಎಂದು ಮೊದಲು ಕಿಡಿಗಾರಿದರೂ, ತಮ್ಮ ನೆಚ್ಚಿನ ನಟರು ತೆರೆಯ ಹಿಂದೆ ಏನು ಮಾಡುತ್ತಿರುತ್ತಾರೆ ಎಂದು ತಿಳಿವ ತವಕವಿರುವ ಚಿತ್ರಪ್ರೇಮಿಗಳಿಗೆ, ಆ ಬಗ್ಗೆ ಉಣಿಸುವುದು ತಪ್ಪೇನಲ್ಲ ಎನ್ನುವುದನ್ನು ಒಪ್ಪುತ್ತಾರೆ.

"ಆದರೆ ಈ ಗಾಸಿಪ್‌ಗಳು ನಟನಿಗೆ ಅವಮರ್ಯಾದೆ ಮಾಡುವಂತಾದ್ದಾಗಿರಬಾರದು: ಅವನ ಮನಸ್ಸಿಗೆ ನೋವುಂಟು ಮಾಡಬಾರದು, ತಿಳಿಹಾಸ್ಯದ ಸ್ವರೂಪ







ರಾಜಣ್ಣಾ, ನಿಮ್ಮ ನಾಯಕಿಯರ ಬಗ್ಗೆ ಏನಂತೀರಿ? ಎಂಬ ಪ್ರಶ್ನೆಗೆ ಉತ್ತರಿಸುತ್ತಿರುವಾಗ ಪಕ್ಕದಲ್ಲೇ ಇದ್ದ ಶ್ರೀಮತಿ ಪಾರ್ವತಮ್ಮನವರತ್ತ 'ರಾಜಕುಮಾರ' ಓರೆಗಣ್ಣು ನನ್ನನೇನು ನೋಡ್ತೀರಿ ಎನ್ನುತ್ತ ಪಾರ್ವತಮ್ಮ ಕಿವಿಹಿಂಡಿದಾಗ ಕ್ಯಾಮರಾ ಕ್ಲಿಕ್ ಎಂದಿತು.

ಫೋಟೋಗಳು: ಎಸ್. ರಾಮಪ್ರಸಾದ್

ದಲ್ಲಿದ್ದರೆ ಪರವಾಗಿಲ್ಲ"

ಇತ್ತೀಚೆಗೆ ಮೈಸೂರಿನ ಪೀತ ಪತ್ರಿಕೆಯೊಂದು ಇವರ ಬಗ್ಗೆ ವಾಚ್ಯ ನಿಂದಾತ್ಮಕ ಗಾಸಿಪ್‌ಗಳನ್ನು ತೂರುತ್ತಿತ್ತು. ಆ ಸಂದರ್ಭದಲ್ಲಿ ಮೈಸೂರಿನಲ್ಲಿಯೇ ಶೂಟಿಂಗ್‌ನಲ್ಲಿದ್ದ ರಾಜ್‌ಕುಮಾರರ ಬಳಿಗೆ ರಾಜ್ ಅಭಿಮಾನಿ ಸಂಘದವರು ಬಂದು 'ನೀವು ಅನುಮತಿ ಕೊಟ್ಟರೆ ಸಾಕು, ನೋಡಿಕೊಳ್ಳುತ್ತೇವೆ' ಎಂದದ್ದುಂಟು.

"ಛೆ, ಛೆ, ಇಂಥದ್ದಕ್ಕೆಲ್ಲ ಸೊಪ್ಪು ಹಾಕಬಾರದು. ಗಣನೆಗೇ ತೆಗೆದುಕೊಳ್ಳಬಾರದು. ಅವರು ಏನಾದರೂ ಹೇಳಿಕೊಳ್ಳಲಿ. ನಮ್ಮ ಕೆಲಸ ನಾವು ನಿಷ್ಠೆಯಿಂದ ಮಾಡುತ್ತಾ ಬಂದರಾಯಿತು. ಯಾವುದು ಸರಿ ಯಾವುದು ಸರಿಯಲ್ಲ ಎನ್ನುವುದನ್ನು ಜನತೆಯೇ ಅರಿತುಕೊಳ್ಳುತ್ತದೆ. ಈ ಬಗ್ಗೆ ನೀವೇನು ಮಾಡಬೇಡಿ ಎಂದು ಸಮಾಧಾನ ಮಾಡಿ ಕಳುಹಿಸಿದೆ".

ಇಂದು ಯಾವದೇ ಚಲನಚಿತ್ರ ಪತ್ರಿಕೆಯ ಉದಯವಾದರೂ ಮೊದಲ ಸಂಚಿಕೆಯ ಮುಖಪುಟ ರಾಜನನ್ನು ಒಳಗೊಳ್ಳದೆ ಬರುವಂತೆಯೇ ಇಲ್ಲ. ಸಿನಿಮಾ ಅಂಕಗಳಲ್ಲಿ ಸಿಂಹಪಾಲು ಇವರದು. ಹೀಗಿದ್ದು ಕರ್ನಾಟಕದ ಆದ್ಯಂತ ಅಪಾರ ಜನಪ್ರಿಯತೆ ಇದ್ದರೂ ಇವರಿಗೆ ಲವರ್‌ಬಾಯ್ ಇಮೇಜ್ ಇಲ್ಲ. ಹುಡುಗಿಯರು ತಮ್ಮ ಪರ್ಸ್‌ಗಳಲ್ಲಿ ಇವರ ಫೋಟೊ ಇಟ್ಟುಗೊಳ್ಳುವುದಿಲ್ಲ. ಇದಕ್ಕೆ ಕಾರಣ ಇವರು ಚಿತ್ರರಂಗದಲ್ಲಿ ನಡೆದು ಬಂದ ಹಾದಿ, ಗಳಿಸಿದ ಸಾಧನೆಯ ಕ್ರಮ ಇರುವ ವಿಶಿಷ್ಟ ರೀತಿ. ಒಂದು ಕಾಲದಲ್ಲಿ ಭಕ್ತಿರಸ ಪ್ರಧಾನ ಪಾತ್ರಗಳಿಗೆ ಮಾತ್ರ ಇವರು ಮೀಸಲು. ಉಳಿದ ಪಾತ್ರಗಳಿಗೆ ಸರಿಹೊಂದುವುದಿಲ್ಲ ಎಂದು ಮೂಗು ಮುರಿಯುವ ಕಾಲ ಒಂದಿತ್ತು.

"ಇಲ್ಲಿಯವರೆಗೆ ನಾನು ಎಲ್ಲ ಬಗೆಯ ಪಾತ್ರಗಳಲ್ಲಿ ಅಭಿನಯಿಸುತ್ತಿದ್ದೇನೆ, ಭಕ್ತಿಪಾತ್ರಗಳು, ಐತಿಹಾಸಿಕ ಪಾತ್ರಗಳು, ಸಾಮಾಜಿಕ ಪಾತ್ರಗಳು, ಪೌರಾಣಿಕ ಪಾತ್ರಗಳು. ಬಾಂಡ್ ಶೈಲಿ ಪಾತ್ರಗಳು ಯಾವುದನ್ನೇ ನನಗೆ ವಹಿಸಿಕೊಡಲಿ ಅದನ್ನು ಅಧ್ಯಯನಮಾಡಿ ಔಚಿತ್ಯವರಿತು ಮಾಡುತ್ತೇನೆ. ಅದರ ಬಗ್ಗೆ ಯೋಚಿಸುವುದೇ ನನ್ನ ಕಾಯಕವಾಗಿಬಿಡುತ್ತದೆ. ಪಾತ್ರಕ್ಕೆ ತಕ್ಕ ಅಭಿನಯವನ್ನು ಸ್ಪಷ್ಟವಾಗಿ ಅಭಿವ್ಯಕ್ತಗೊಳಿಸುವವರೆಗೆ ನನಗೆ ತೃಪ್ತಿಯಾಗುವುದಿಲ್ಲ."

ಭಕ್ತಿ ಪೂರ್ಣ ಹಾಗೂ ಸಾತ್ವಿಕ ಪಾತ್ರಗಳ ಅಭಿನಯ ಕಾಲದಲ್ಲಿ ಇವರಿಗೆ ತನ್ಮಯತೆ ಹೆಚ್ಚು ಎನ್ನುವದಕ್ಕೆ ಜೀವಂತ ಸಾಕ್ಷಿಗಳು ಇತ್ತೀಚಿನ "ಭಕ್ತ ಕುಂಬಾರ" ಹಾಗೂ "ಸನಾದಿ ಅಪ್ಪಣ್ಣ" ಚಿತ್ರಗಳು.

"ಪುರಸೊತ್ತಾದಾಗ ಸಿನಿಮಾಗಳನ್ನು ನೋಡುವುದುಂಟು. ನನಗೆ ಫೈಟಿಂಗ್ ಚಿತ್ರಗಳೆಂದರೆ ಮೊದಲಿನಿಂದಲೂ ಇಷ್ಟ", ಎಂದು ತುಂಟನಗೆ ಬೀರಿದರು.

ಅಂದಿನಿಂದ ಇಂದಿನವರೆಗೆ ಮೂರು ಸ್ತರದ ನಾಯಿಕೆಯರು ಜೊತೆ ಅಭಿನಯಿಸಿಯಾಗಿದೆ. ಪಂಢರಿಬಾಯಿ, ಎಂ.ವಿ.ರಾಜಮ್ಮ, ಆದವಾನಿ ಲಕ್ಷ್ಮೀದೇವಿ, ನಂತರ ಲೀಲಾವತಿ, ಜಯಂತಿ, ಭಾರತಿ, ಈಗ ಜಯಮಾಲಾ, ಲಕ್ಷ್ಮೀ, ಜಯಪ್ರದ ಇತ್ಯಾದಿ, ಇತ್ಯಾದಿ. ಈ ನಾಯಕಿಯರಲ್ಲಿ ಇವರ ಅಭಿನಯ ಪ್ರತಿಭೆಗೆ ಸ್ಪಂದಿಸಿದ ನಾಯಕಿ ಯಾರು? ಯಾರು ಇವರ ಮೆಚ್ಚುಗೆಗೆ ಪಾತ್ರ? ಪ್ರಶ್ನೆ ಕೇಳಿದೊಡನೆ ಕಣ್ಣಲ್ಲಿ ಉತ್ತರ ಮಿಂಚಿದಂತಾಯಿತು. ಒಂದು ಗಳಿಗೆ ಸುಮ್ಮನಾಗಿಬಿಟ್ಟು ನಾನು ನಿರೀಕ್ಷಿಸಿದಂತೆ ಇದಕ್ಕೆ ಉತ್ತರ ಕೊಡಲಿಲ್ಲ.

"ಈ ಪ್ರಶ್ನೆಗೆ ಉತ್ತರ ಕೊಡೋದು ಕಷ್ಟ. ಏಕೆಂದರೆ ಈ ಬಗ್ಗೆ ನಾನು ಯೋಚನೆ ಮಾಡಿಯೇ ಇಲ್ಲ."

ಮಲ್ಟಿಸ್ಟಾರರ್‌ಗಳಲ್ಲಿಯೂ ಅಭಿನಯಿಸಲು ಸಿದ್ಧರಿರುವ ಇವರು "ಅಂಥ ಚಿತ್ರಗಳನ್ನು ತೆಗೆಯುವುದು ದುಬಾರಿಯಾಗುತ್ತದೆ. ಅದಕ್ಕೆ ಅನುಗುಣವಾದ ಒಳ್ಳೆಯ ಕಥೆ ಬೇಕು,

ಜೊತೆಗೆ ಪಾತ್ರಗಳನ್ನು ಎಲ್ಲರಿಗೂ ರುಚಿಸುವಂತೆ ಬೆಳೆಸುವುದೂ ಕಷ್ಟ." ಎನ್ನುತ್ತಾರೆ.

ಚಿತ್ರರಂಗದಲ್ಲಿನ ರಾಜಕೀಯ ಸುಳಿಯ ಬಗ್ಗೆ ಪ್ರಶ್ನಿಸಿದಾಗ ಗಂಭೀರವಾದ ಇವರು "ಚಿತ್ರ ನಿರ್ಮಾಣದ ಕಮರ್ಶಿಯಲ್ ಜಗತ್ತಿನಲ್ಲಿ ರಾಜಕೀಯದ ಸುಳಿ ಇದ್ದದ್ದೆ. ಯಾವುದೇ ಒಂದು ತೀರ್ಮಾನವನ್ನು ತೆಗೆದುಕೊಂಡರೂ ಕೆಲವರಿಗೆ ಪ್ರಿಯವಾದರೆ ಉಳಿದವರಿಗೆ ಅಸಹನೀಯವಾಗುತ್ತದೆ. ಎಲ್ಲರನ್ನು ಸಂತೋಷಗೊಳಿಸುವುದು ಹೇಗೆ ಸಾಧ್ಯ?

ಕಲಾವಿದನಾಗಿ ನನ್ನ ಸೇವೆ ನಾನು ಮಾಡಿಕೊಂಡು ಹೋಗುವುದಷ್ಟೇ ನನಗೆ ಮುಖ್ಯ"

ಚಿತ್ರ ನಿರ್ಮಾಣದ ಎಲ್ಲ ಹಂತದಲ್ಲಿಯೂ ನಾಯಕನ ಹಿಡಿತವಿದೆ. ಅನ್ನುತ್ತಾರಲ್ಲ... ನಾಯಕಿ, ಕ್ಯಾಮರಾಮನ್, ನಿರ್ದೇಶಕ ಇಂಥಿಂಥಾವರೇ ಬೇಕು ಅಂತಾ...

"ಛೆ, ಛೆ, ಅಂಥದ್ದೆಲ್ಲ ಇಲ್ಲ. ಎಷ್ಟೋ ಜನ ಹೊಸ ನಿರ್ದೇಶಕರ ಜೊತೆ ಕೆಲಸ ಮಾಡಿದ್ದೇನಲ್ಲ. ಚಿತ್ರಪ್ರೇಮಿಗಳು ಯಾರನ್ನು ಒಪ್ಪಿಕೊಳ್ಳುತ್ತಾರೊ ಅವರು ತೆರೆಯ ಮೇಲೆ ಮುಂದುವರಿಯುತ್ತಾರೆ. ಒಳ್ಳೆಯ ಚಿತ್ರವಾಗಬೇಕಾದರೆ ಟೀಮ್ ಸ್ಪಿರಿಟ್ ಇರಬೇಕು. ಅಂಥ ತಂಡವೊಂದಿದರಾಯಿತು".

ಎಮರ್ಜೆನ್ಸಿ ಕಾಲದಲ್ಲಿ ಸೆನ್ಸಾರ್ ದಾಂಧಲೆ, ವಿ.ಸಿ. ಶುಕ್ಲರ ಉಡ ಹಿಡಿತದ ಪ್ರಭಾವದ ಧಗೆ ಸೋಂಕಿದ್ದುಂಟೇ?

"ಇಲ್ಲ ನಮಗೆ ಆ ತರದ ತೊಂದರೆಗಳು ಏನೂ ಆಗಲಿಲ್ಲ. ರಾಜಾ ನನ್ನ ರಾಜಾ ಚಿತ್ರ ಮಾತ್ರ ಸ್ವಲ್ಪ ಸೆನ್ಸಾರ್ ತೊಂದರೆಗೆ ಸಿಲುಕಿತ್ತು. ಅದೇ ಫೈಟಿಂಗ್ ದೃಶ್ಯಗಳು. ಆಮೇಲೆ ಅದು ಸರಿಹೋಯಿತು."

ಎಲ್ಲಿ ಹೋದರೂ ಇವರನ್ನು ಫ್ಯಾನ್‌ಗಳು ಸುತ್ತುವರಿಯುತ್ತಾರಲ್ಲ. ಮೊನ್ನೆ ಮೈಸೂರು ಮಾನಸಗಂಗೋತ್ರಿಯಲ್ಲಿ ನಡೆದ ಶೂಟಿಂಗ್ ಕಾಲದಲ್ಲಿ ಸುತ್ತ ಮುತ್ತಣ ಬಡಾವಣೆ, ಹಳ್ಳಿಗಳಿಂದ ಬಂದ ಜನರ ಜಾತ್ರೆಯೋ ಜಾತ್ರೆ. ಹೀಗೆ ಜನ ಘೇರಾಯಿಸುವುದರಿಂದ ಕಾನ್‌ಸೆಂಟ್ರೇಶನ್ ಹಾಳಾಗುವುದಿಲ್ಲವೇ, ಬೇಜಾರಾಗುವುದಿಲ್ಲವೇ?

"ಉಂಟೇ, ಉಂಟೇ, ಅವರಿರುವುದರಿಂದಲೇ ಅಲ್ಲವೇ ನಾವಿರುವುದು. ಅವರ ವಿಶ್ವಾಸ ನಮಗೆ ಮುಖ್ಯ. ಅಭಿಮಾನ ಇಟ್ಟುಕೊಂಡೇ ಅಲ್ಲವೇ ಅವರು ಬರುವುದು. ಅವರಿದ್ದಾಗಲೇ ನನಗೆ ಮತ್ತಷ್ಟು ಹುಮ್ಮಸ್ಸು. ಹುರುಪು."

ಗಂಗೋತ್ರಿಯಲ್ಲಿ ಶೂಟಿಂಗ್ "ಇಂಥ ಸರಸ್ವತೀ ಕ್ಷೇತ್ರದಲ್ಲಿ ಅದೂ ಪ್ರೊಫೆಸರನ ಪಾತ್ರದಲ್ಲಿ ಅಭಿನಯಿಸುವುದು ನನ್ನ ಪೂರ್ವ ಪುಣ್ಯದ ಭಾಗ್ಯವೇ ಸರಿ."

ಅಪಾರ ಬೇಡಿಕೆಯ ಈ ನಾಯಕ ಎಲ್ಲ ಕರೆಗಳಿಗೂ ಸಹಿ ಹಾಕುವುದಿಲ್ಲ. "ಒಂದು ಸಾರಿಗೆ ನಾಲ್ಕು ಚಿತ್ರಕ್ಕಿಂತ ಹೆಚ್ಚು ನಾನು ಒಪ್ಪಿಕೊಳ್ಳುವುದೇ ಇಲ್ಲ. ಅನೇಕ ಶಿಫ್ಟ್‌ಗಳಲ್ಲಿ, ಹಲವಾರು ಚಿತ್ರಗಳಲ್ಲಿ ಒಟ್ಟೊಟ್ಟಿಗೆ ನಟಿಸುವುದು ಎಂದರೆ ಅಭಿನಯವೇ, ಕಲಾಸೇವೆಯೇ?"

ಇಪ್ಪತ್ತೂರು ವರ್ಷಗಳಿಂದ ಕನ್ನಡ ತೆರೆಯ ಚಿರನಾಯಕನಾಗುಳಿದಿರುವ ಇವರು ಇನ್ನೂ ಹರೆಯದ ಅಂಚಿನಲ್ಲಿಯೇ ಇದ್ದಾರೆ. ದಿನವೂ ಮುಂಜಾನೆ ಮಾಡುವ ದೈಹಿಕ ವ್ಯಾಯಾಮದ ಜೊತೆಗೆ ಇತ್ತೀಚೆಗೆ ಇವರು ಅಭ್ಯಾಸ ಮಾಡಿಕೊಂಡಿರುವ ಧ್ಯಾನ ಇವರ ಚಿರಯೌವನದ ಗುಟ್ಟು. ಟ್ರಾನ್ಸಿಂಡೆಂಟಲ್ ಮೆಡಿಟೇಷನ್ ಮಹೇಶ ಯೋಗಿಯ ಪರಂಪರೆಯವರಿಂದ ಧ್ಯಾನದೀಕ್ಷೆ.

"ದಿನಕ್ಕೆ ಇಪ್ಪತ್ತು ನಿಮಿಷಗಳ ಕಾಲ ಈ ಮೆಡಿಟೇಷನ್ ಮಾಡುತ್ತೇನೆ ನೋಡಿ. ಎಷ್ಟು ಆರಾಮ ಗೊತ್ತೇ? ಧ್ಯಾನದ ಪ್ರಭಾವ ದೇಹದ ಮೇಲೆ, ಮನಸ್ಸಿನ ಮೇಲೆ ಅದ್ಭುತವಾಗಿ ಆಗುತ್ತದೆ. ಮೊದಲು ನನಗೆ ಎಷ್ಟು ಕೋಪ ಇತ್ತು ಅಂತೀರಾ. ಮೂಗಿನ ತುದೀಲೆ. ಸ್ವಲ್ಪ ಸ್ವಲ್ಪಕ್ಕೆಲ್ಲ ರೇಗಿ ಹೋಗುತ್ತಿತ್ತು. ಈಗ ಧ್ಯಾನ ಮಾಡಲು ಆರಂಭಿಸಿದ ಮೇಲೆ ನನಗೆ ಸಿಟ್ಟೆಲ್ಲ ಇಳಿದುಹೋಗಿದೆ. ಮನಸ್ಸು ಬಹಳ ಪ್ರಶಾಂತವಾಗಿರುತ್ತದೆ", ಎಂದವರು ನಗುತ್ತ,

"ನೀವು ಎಂಥ ಪ್ರಶ್ನೆಗಳನ್ನು ಬೇಕಾದರೂ ಕೇಳಿ ನನಗೆ ಸಿಟ್ಟು ಬರುವುದಿಲ್ಲ"ಎಂದರು.

"ಇನ್ನು ಪ್ರಶ್ನೆ ಏನೂ ಇಲ್ಲ. ಆದರೆ ಒಂದು ಪೋಸ್ ಕೊಡಿ. ಪ್ರಣಯ ಸನ್ನಿವೇಶದ ಶೂಟಿಂಗ್‌ನಲ್ಲಿದ್ದೀರಿ ಎಂದು ಭಾವಿಸಿಕೊಳ್ಳಿ. ಇದ್ದಕ್ಕಿದ್ದಂತೆ ನಾಯಕಿ ನಟಿ ನಿಮ್ಮನ್ನು ಬಿಗಿದಪ್ಪಿ ಚುಂಬಿಸುತ್ತಾಳೆ. ಆಗ ನಿಮ್ಮ ಮೊಗದಲ್ಲಿ ಯಾವ ಎಕ್ಸ್‌ಪ್ರೆಶನ್ ಬರುತ್ತದೆ. ದಯವಿಟ್ಟು ಒಂದು ಪೋಸ್ ಪ್ಲೀಸ್."

"ಹ್ಹಾ ಹ್ಹಾ ಗೊತ್ತಾಯಿತು. ಒಂದು ತರದ ಗಾಬರಿ, ಅರ್ಧಸಿಟ್ಟು, ಫಜಲ್‌ಮೆಂಟ್, ಕನ್‌ಫ್ಯೂಷನ್ ಭಾವ ಇರಬೇಕಲ್ಲವೆ... ಇದ್ದಕ್ಕಿದ್ದಂತೆ ಈ ತರದ ಪೋಸ್ ಕೊಡೋದು ಕಷ್ಟ. ಇನ್ನೊಮ್ಮೆ ಮೂಡ್ ಇದ್ದಾಗ ನೋಡೋಣ"

ಇನ್ನೊಂದು ಸಾರಿ ಆ ಮೂಡ್‌ಗಾಗಿ ಕಾಯೋಣ. ●●●



ಒಂದು ಮತ್ತು ಒಂದೂವರೆ ಲಕ್ಷದ ಸಬ್ಸಿಡಿ ಯೋಜನೆ ಇರುವುದರಿಂದ ಇದು ಪ್ರತಿಯೊಬ್ಬ ನಾಟಕಕಾರ ಮತ್ತು ಸಾಹಿತಿ ಚಿತ್ರ ತಯಾರಿಸುವ ಮಟ್ಟಕ್ಕೆ ಏರಿದ್ದಾರೆ. ಚಿತ್ರ ತಯಾರಿಕೆ ಕೇವಲ ಬಂಡವಾಳಶಾಹಿಗಳ ಕೈಲೇ ಇರಬೇಕೆಂದೇನೂ ಅಭಿಪ್ರಾಯವಲ್ಲ. ಯಾರೂ ತಯಾರಿಸಬಹುದು. ಯಾರೂ ಕೈ ಸುಟ್ಟುಕೊಳ್ಳಬಹುದು. ಆದರೆ ಸಬ್ಸಿಡಿ ಯೋಜನೆ ಮತ್ತು 'ಹೊಸ ಅಲೆ'ಯ ಗಾಳಿಯಿಂದಾಗಿ ಚಿತ್ರರಂಗದಲ್ಲಿ ನಡೆಯುತ್ತಿರುವ ಹೊಲಸು ನಾತ ಅಂತಾರಾಷ್ಟ್ರೀಯ ಮಟ್ಟಕ್ಕೆ ಪ್ರಸಾರವಾಗುವ ಕಾಲ ಹೆಚ್ಚು ದೂರವಿಲ್ಲ.

ಹೊಸ ಅಲೆ ಕನ್ನಡದಲ್ಲಿ ಎಂದು ಪ್ರಾರಂಭವಾಯ್ತು? ಹೊಸ ಅಲೆ ಎಂದರೇನು? ಚಿತ್ರವಾಗಿ ಉಳಿಯಲಿಲ್ಲ.

ಹೊಸ ಅಲೆಯ ಪದಕ್ಕೆ 'ಸಂಸ್ಕಾರ'ವೇ ನಾಂದಿ ಎಂದು ಕನ್ನಡದ ಮಟ್ಟಿಗೆ ನಾವು ಒಪ್ಪಲೇಬೇಕು. ಹೊಸವಸ್ತು, ಹೊಸ ಸಮಸ್ಯೆ, ಹೊಸ ಪರಿಸರದಿಂದಾಗಿ ಇದು ನವ್ಯಜಾಡಿನ ಚಿತ್ರ. ಹೊಸ ಅಲೆಯ ಚಿತ್ರದೊಂದಿಗೆ ಹೊಲಸು ಪ್ರಾರಂಭವಾದುದೂ ಇಲ್ಲಿಯೇ. ಚಿತ್ರವನ್ನು ನಿರ್ದೇಶಿಸಿ ತಯಾರಿಸಿದ ಪಟ್ಟಾಭಿರಾಮ ರೆಡ್ಡಿಯವರನ್ನು ಮೂಲೆಗೆ ತಳ್ಳಿ ಗಿರೀಶ್ ಕಾರ್ನಾಡರೇ ನಿರ್ದೇಶಕರು ಎಂಬ ಒಂದು ವಾದವನ್ನು ಆಸಕ್ತ ಪತ್ರಕರ್ತರು ಹುಟ್ಟಿಸಿ ವಿವಾದ ಎಬ್ಬಿಸಿದರು. ಅಲ್ಲಿಂದಲೇ ವ್ಯಕ್ತಿಪೂಜೆ ಪ್ರಾರಂಭವಾಯಿತು. ವ್ಯಕ್ತಿ ಗುತ್ತಿದ್ದ ಕ್ರಮೇಣ ಹೊಗಳುಭಟ್ಟರಲ್ಲಿ ಇವರೂ ಸೇರಿ 'ಗೋವಿಂದಾ' ಅಂದರು. ವಿಮರ್ಶೆ ಮಾಡಿದರೆ ನಾವು ಎಲ್ಲಿ ಸಣ್ಣವರಾಗಿ ಬಿಡುತ್ತೇವೋ ಎಂದು ವಿಮ್ಮ ನಿಷ್ಣಾವಂತರಿಗೂ ಭಯ.

ಹೊರ ಪ್ರಜ್ಞೆಯ ಗುಂಪಿನಿಂದ 'ಕಾಡು' ತಯಾರಿ ಆದಾಗ ಮತ್ತೆ ವಿದೇಶೀ ನಿರೂಪಣೆರೇ ಅವರ ನಕಲಿಯ ಛಾಯೆ ಕಾಣಿಸಿತು. ಕಾಡು ಜೀವನ, ಹಳ್ಳಿಯ ವಾಸನೆ ಇಲ್ಲದ ನಿರ್ದೇಶಕರ ಕಲಾತ್ಮಕ ಭಾವನೆಗಳಷ್ಟೇ ಸ್ಪಷ್ಟವಾದವು ಹೊರತು ಹೊಸ ಅಲೆ ಇಲ್ಲೂ ಕಾಣಿಸಲಿಲ್ಲ. ನಮ್ಮ ಹಳ್ಳಿಗರ ಒರಟುತನ, ಅನಾಗರಿಕತೆ ನಟನೆಯಲ್ಲಾಗಲೀ ನಿರೂಪಣೆಯಲ್ಲಾಗಲೀ ಕಾಣಿಸಲಿಲ್ಲ. ಕೇವಲ

# ಹೊಸ ಅಲೆಯ ಚಿತ್ರಗಳು ಮತ್ತು ಹೊಲಸು

ವಿಶುಕುಮಾರ್

'ಬುದ್ಧಿವಂತ'ರು ಅನ್ನಿಸಿಕೊಂಡು ಪ್ರತ್ಯೇಕವಾಗಿ ಗುಂಪು ಕಟ್ಟುವ ಕೆಲವು ಜನರು ಹಾಡು, ಫೈಟು, ತಾರಾಗಣವಿಲ್ಲದೆ ಮಂದಗತಿಯಲ್ಲಿ ಸಾಗುವ ಚಿತ್ರಗಳನ್ನು ತಯಾರಿಸತೊಡಗಿದಾಗ ಅರ್ಥ ಗೊತ್ತಿಲ್ಲದವರೂ ಇದಕ್ಕೆ ಹೊಸ ಅಲೆ ಚಿತ್ರಗಳೆಂದು ನಾಮಕರಣ ಮಾಡಿದರು. ನವ್ಯ, ಪ್ರಾಯೋಗಿಕ ಎಂಬ ಪದಗಳ ಸಮೇತ ಈಗ ಹೆಚ್ಚಿನಂಶ ಎಲ್ಲಾ ನಿರ್ಮಾಪಕರು ಹೊರಡುತ್ತಾರೆ. ಹೊಸ ಅಲೆ ಪ್ರವೇಶ ಮಾಡಿದ್ದು ವಿದೇಶಗಳಿಂದಲೇ. ಕೆಲವು ವಿದೇಶೀ ಹೊಸ ಅಲೆಯ ಚಿತ್ರಗಳನ್ನು ನೋಡಿದರೆ ಕನ್ನಡದಲ್ಲಿ ಇದುವರೆಗೆ ಬಂದ ಹೊಸ ಅಲೆಯ ಚಿತ್ರಗಳು (ಕಥಾವಸ್ತುಗಳನ್ನು ಬಿಟ್ಟು) ವಿದೇಶೀ ಚಿತ್ರಗಳ ಅಥವಾ ಬಂಗಾಲಿ ಚಿತ್ರಗಳ ಪ್ರತಿರೂಪ ಎಂದು ಹೇಳಬಹುದು.

'ಆರು ಮೂರು ಒಂಬತ್ತು' ಚಿತ್ರ ನಿರ್ದೇಶಿಸಿದ ರವಿ ತನ್ನದು ಹೊಸ ಅಲೆ ಚಿತ್ರ-ಯಾವತ್ತೋ ಮಾಡಿದೆ ಎಂದಿದ್ದರು. ಲಕ್ಷ್ಮೀನಾರಾಯಣ್ 'ನಾಂದಿ' ಮಾಡಿದಾಗ ನಿರೂಪಣೆಯಲ್ಲಿ ಪ್ರಾಮಾಣಿಕತೆ ಸರಳತೆ ಇದ್ದುದರಿಂದ ಅದಕ್ಕೂ ಹೊಸ ಅಲೆ ಪಟ್ಟ ಅಂಟಿತ್ತು. ಮುಂದೆ 'ಮುಕ್ತಿ' ಮತ್ತು 'ಅಬಚೂರಿನ ಪೋಸ್ಟಾಫೀಸು' ನೋಡಿದ ಮೇಲೆ ಖಾತ್ರಿಯಾಯ್ತು, ಇದಕ್ಕಿಂತ ಹೊಸ ಅಲೆಯನ್ನು ಇವರು ಕೊಡಲಾರರು ಎಂದು. ಹಾಗೆ ನೋಡ ಹೋದರೆ ಚದುರಂಗರ 'ಸರ್ವಮಂಗಳ'ವೇ ಕನ್ನಡಕ್ಕೆ ಹೊಸ ಅಲೆಯ ಚಿತ್ರ. ಅವರ ದುರದೃಷ್ಟ, ಸಿನಿಮಾ ತಾರೆಯರನ್ನು ಹಾಕಿದ್ದರಿಂದ ಅದು ಸಿನೀಮಿಯವಾಗಿ ಬಂತೇ ಹೊರತು ಗ್ರಾಮೀಣ ಪೂಜೆಯ ಜೊತೆಯಲ್ಲಿ ಜಾತೀಯತೆ ಬೆಳೆಯಿತು. ಕಮರ್ಶಿಯಲ್ ಚಿತ್ರರಂಗದಲ್ಲೂ ಜಾತೀಯತೆ ಇಲ್ಲದೆ ಇರಲಿಲ್ಲ. ಆದರೆ ಹಣದ ಹಾಸಿಗೆಯಲ್ಲೇ ಇರುವ ಈ ಜನಗಳು ಜಾತಿಗೆ ಹೆಚ್ಚು ಪ್ರಾಶಸ್ತ್ಯ ನೀಡುತ್ತಿರಲಿಲ್ಲ. ಜಾತೀಯತೆಯ ದ್ವೇಷ ಭಾವನೆ ಬೆಳೆದದ್ದು ಈಗ ತಾಂಡವವಾಡುತ್ತಿರುವುದು ಹೊಸ ಪ್ರಜ್ಞೆಯ ಗುಂಪುಗಳಲ್ಲೇ.

ಹೊಸ ಅಲೆಯ 'ಸಂಸ್ಕಾರ' ಅಪಕ್ವವಾಗಿದ್ದರೂ ರಾಷ್ಟ್ರ ಮಟ್ಟದಲ್ಲಿ ಅದು ಗಳಿಸಿದ ಪ್ರಶಸ್ತಿ, ಒಂದು ವರ್ಗದವರ ಗುಂಪು ಕಟ್ಟಲು ಸಾಧ್ಯವಾಯಿತು. ಪಟ್ಟಾಭಿರಾಮರೆಡ್ಡಿ ವಹಿಸಬೇಕಾಗಿದ್ದ ನಾಯಕತ್ವವನ್ನು ಗಿರೀಶ್ ಕಾರ್ನಾಡ್ ವಹಿಸಿದರು. ಮುಂದೆ ಕನ್ನಡ ಚಿತ್ರಗಳಿಗೆ ಪ್ರಶಸ್ತಿಗಳು ಕಟ್ಟಿಟ್ಟ ಗಂಟು. 'ವಂಶ ವೃಕ್ಷ'ಕ್ಕೆ ಸೇರ್ಪಡೆಯಾದ ಬಿ. ವಿ. ಕಾರಂತರು ಮೊದಲೇ ದೇಹಲಿಯಲ್ಲಿದ್ದವರು. ಕಾರಂತ, ಕಾರ್ನಾಡ, ಶ್ಯಾಮಬೆನೆಗಲ್ ಗುಂಪಿಗೆ ಪತ್ರಿಕೆಗಳು ಸರ್ವಾಧಿಕಾರ ನೀಡಿದವು. ಸತ್ಯಜಿತ್ ರೇ ಅಥವಾ ವಿದೇಶೀ ಚಿತ್ರಗಳ, ಮಂದಗತಿಯ ನಿರೂಪಣೆಯ ನಕಲು 'ವಂಶವೃಕ್ಷ'ದಲ್ಲೂ ಕಾಣಿಸಿತು. ಆದರೂ ಪ್ರಭಾವದ ಪರಿಣಾಮ ಕನ್ನಡಕ್ಕೆ ಪ್ರಶಸ್ತಿ. ನಾವು ಧನ್ಯರು. ಈ ಗುಂಪುಗಳಿಂದ ಅಥವಾ ಜಾತೀಯತೆಯಿಂದ ದೂರವಾದ ಪಟ್ಟಾಭಿರಾಮ ರೆಡ್ಡಿ ಮತ್ತು ಚದುರಂಗರು ವನವಾಸ ಆಚರಿಸಿದ್ದರಲ್ಲಿ ತಪ್ಪೇನೂ ಇಲ್ಲ. ಕಾರ್ನಾಡ್ ಕಾರಂತರ ಮೂರು ಚಿತ್ರಗಳು ಬರುವಾಗ ಲಕ್ಷ್ಮೀನಾರಾಯಣರು ಪ್ರಾರಂಭದಲ್ಲಿ 'ಇವೆಲ್ಲ ಎಷ್ಟು ದಿನ?' ಎಂದು ಹಿಂದಿನಿಂದ ಗೊಣ ಸತ್ಯಜಿತ್‌ರಾಯ್ ಅವರ ಬಂಗಾಲಿ ದೃಷ್ಟಿ ಮಾತ್ರ ಚಿತ್ರದಲ್ಲಿ ಕಾಣಿಸಿತು. ಶಿವರಾಮ ಕಾರಂತರ 'ಚೋಮನ ದುಡಿ' ಸಿನಿಮಾ ಮೂಲಕ ನಮ್ಮ ಬೆಂಗಳೂರು ಪ್ರೇಕ್ಷಕರಿಗೆ ತೀರಾ ಹೊಸ ವಸ್ತು ಹೊಸ ಜೀವನ ಅದು ಜನರಿಗೆ ಹಿಡಿಸಲೇ ಬೇಕು ಹಿಡಿಸಿತು. ಅದೇ ಚಿತ್ರ ದಕ್ಷಿಣ ಕನ್ನಡದಲ್ಲಿ ಇನ್ನೂ ಹೆಚ್ಚಾಗಿ ಹಿಡಿಸಬೇಕಾಗಿತ್ತು. ಯಾಕೆಂದರೆ ಚೋಮನ ಧಣಿಗಳು ಬಂಧುಗಳು ನೆರೆಕರೆಯವರು ವಾಸಿಸುವುದು ಅಲ್ಲೇ. ಆದರೆ 'ಚೋಮನ ದುಡಿ' ಅಲ್ಲಿಯವರಿಗೆ ಒಗ್ಗಲಿಲ್ಲ. ಕಾರಣ ಸಿನಿಮಾದಲ್ಲಿ ಸಹಜತೆ ಇಲ್ಲ. ಅದು ಸಿನಿಮಾದೃಷ್ಟಿಯ ಜೀವನ ಆಗಿತ್ತು. ಇದಕ್ಕಿಂತಲೂ ಹಿಂದೆ ಬಂದಿದ್ದ 'ಕಂಕಣ' ಮತ್ತು 'ಸಂಕಲ್ಪ' ತೀರಾ ಕಳಪೆ ಪ್ರಜ್ಞೆಯ ನಿರೂಪಣೆ ಆಗಿರುವುದರಿಂದ ಹೆಚ್ಚು ವಿಮರ್ಶೆ ಅನಗತ್ಯ. ಪ್ರೋತ್ಸಾಹಕ್ಕಾಗಿ ಇಂಥ ಚಿತ್ರಗಳಿಗೂ ನಾವು ಪ್ರಶಸ್ತಿ ಕೊಡೋಣ.

ಐಯ್ಯರ್‌ರ 'ಹಂಸಗೀತೆ'ಯನ್ನು ನಾವು ಹೊಸ ಪ್ರಜ್ಞೆಯ ಚಿತ್ರವೆಂದು ಧಾರಾಳವಾಗಿ ಒಪ್ಪುವುದಕ್ಕೆ ಆಗುವುದಿಲ್ಲ. ಇಲ್ಲಿರುವ ನಿರೂಪಣೆಯ ಕಲಾತ್ಮಕತೆ ಮತ್ತು ನಿರ್ದೇಶನಕ್ಕೆ ಹೆಚ್ಚು ಗೌರವ ವಿದೆಯಾದರೂ ಸರಿಸಮಾನವಾಗಿ ತುಂಬಿರುವ ಅಸಹಜತೆಯನ್ನು ಎಣಿಸಿದರೆ ಇದೂ ಸಿನೀಮಿಯ ನಡವಳಿಕೆಯಿಂದ ದೂರವಾಗಿಲ್ಲ. ತೀರ ಮೌನವಾಗಿರುವ ಪಾತ್ರಗಳು, ಸಿನಿಮಾ ನಡೆನುಡಿಯ ಐತಿಹಾಸಿಕ ವ್ಯಕ್ತಿಗಳು ಎಲ್ಲಾ ನಿರ್ದೇಶಕರ ಭಾವನೆಯೇ ಹೊರತು ಐತಿಹಾಸಿಕ ಸತ್ಯವಲ್ಲ. ಹೊಸ ಹೊಸ ವಸ್ತ್ರಗಳನ್ನುಟ್ಟು ಬರುವ ಪಾತ್ರ

ಗಳನ್ನು ಕಂಡಾಗ 'ಸಿನಿಮಾ' ಅಥವಾ ನಾಟಕ ಎಂಬ ಭಾವನೆ ಪ್ರೇಕ್ಷಕರಿಗೆ ಬರುತ್ತಿದೆಯೇ ವಿನಾ 'ಕಲೆ' ಎಂಬ ಭಾವನೆ ಬರಲಾರದು. ಪ್ರಶಸ್ತಿ ಗುಂಪಿಗೆ ಸೇರಿಕೊಂಡ ಐಯ್ಯರ್ ಈಗ ಹೊಸ ಪ್ರಜ್ಞೆಯ ಒಂದು ವರ್ಗವನ್ನೇ ತಯಾರಿ ಮಾಡುತ್ತಿದ್ದಾರೆ.

ಸಿಂಹ ಅವರ 'ಕಾಕನ ಕೋಟೆ' ಕುರುಬರ ವಾತಾವರಣವನ್ನು ಕಣ್ಣ ಮುಂದೆ ನಿಲ್ಲಿಸಿತಾದರೂ ಸಿನೇಮಿಯ ನಿರೂಪಣೆಗೆ ಇವರೂ ಹೊರತಾಗಿಲ್ಲ. ಮುವತ್ತು ವರ್ಷದ ಸುಂದರ ರಾಜನ್‌ಗೆ ಅರವತ್ತು ವರ್ಷದ ಮೇಕಪ್ಪು, ಸಿನೇಮೀಯ ನಡೆ ನುಡಿಗಳು ಮತ್ತು ಸಂಗೀತ ಸಿಂಹ ಅವರನ್ನು ಬಿಟ್ಟು ಹೋಗಲಿಲ್ಲ.

ಹೊಸ ಪ್ರಜ್ಞೆಯವರ ಚಿತ್ರಗಳು ಹೊಸ ಅಲೆಯ ಚಿತ್ರಗಳಾಗುವುದಿಲ್ಲ ಏಕೆ ಅಂದರೆ ಅವುಗಳ ನಿರ್ದೇಶಕರಿಗೆ ಅವರು ಆರಿಸುವ ವಸ್ತುಗಳ ನಿಕಟ ಪರಿಚಯವಿಲ್ಲ. ಜೀವನದ ಅನುಭವವಿಲ್ಲ. ಬಿ.ವಿ. ಕಾರಂತರಿಗೆ 'ಚೋಮನ'ನ ಸ್ನೇಹವಿಲ್ಲ. ಕಾರ್ನಾಡರಿಗೆ 'ಕಾಡಿ'ನಲ್ಲಿದ್ದು ಗೊತ್ತಿಲ್ಲ. 'ಹಂಸಗೀತೆಯ' ಐಯ್ಯರರಿಗೆ ಚಿತ್ರದುರ್ಗದ ಪ್ರಜೆಯಾಗಿದು ಭಾವನೆ ಇಲ್ಲ.

ಲಕ್ಷ್ಮೀನಾರಾಯಣರಿಗೆ ಅಬಚೂರಿನ ಗ್ರಾಮ ಜೀವನ ಗೊತ್ತಿಲ್ಲ. ರೆಡ್ಡಿಯವರಿಗೆ ಬ್ರಾಹ್ಮಣರ ಸಂಸ್ಕಾರ ಗೊತ್ತಿಲ್ಲ. ಇವರೆಲ ಇಂಗ್ಲೀಷು ಗಾಳಿಯ ವಾತಾವರಣ ಬಿಟ್ಟು ವಸ್ತುವಿಗೆ ಸರಿಯಾಗಿ ಅನುಭವ ಗಳಿಸಿ ಚಿತ್ರ ನಿರ್ದೇಶಿಸಿದರೆ ನಿಜವಾದ 'ಹೊಸ ಅಲೆ'ಯ ಚಿತ್ರ ಹುಟ್ಟುತ್ತದೆ. ಈ ಅಪವಾದಕ್ಕೆ ಲಂಕೇಶ್ ಹೊರತು ಹೇಳೋಣ. 'ಪಲ್ಲವಿ'ಯ ನಿರೂಪಣೆ ಎಷ್ಟೋ ಕಡೆ ಬಾಲಿಶವಾಗಿ ಬಂದಿದ್ದರೂ ಅದು ಒಬ್ಬ ವ್ಯಕ್ತಿಯ ಸಂಪೂರ್ಣ ಅನುಭವ ನಿರೂಪಣೆಯಾಗಿರುವುದರಿಂದ 'ಪಲ್ಲವಿ'ಯಲ್ಲಿ ತೋರಿಸಿರುವ ಕಾಲೇಜು ಪರಿಸರಕ್ಕೆ ಅವರು ಅರ್ಹ ನಿರ್ದೇಶಕರಾಗುತ್ತಾರೆ. 'ಕಾಲೇಜು ರಂಗ'ವನ್ನು ಪುಟ್ಟಣ್ಣನವರು ನಿರ್ದೇಶಿಸುವುದಕ್ಕಿಂತಲೂ ಅವರ ಸಾಹಿತಿ ಬಿ.ಜಿ. ಎಲ್. ಸ್ವಾಮಿಗಳವರೇ ಸ್ವಲ್ಪ ಎದೆಗಾರಿಕೆಯಿಂದ ಮುಂದೆ ಬಂದು ನಿರ್ದೇಶಿಸಿದ್ದರೆ 'ಕಾಲೇಜು ರಂಗ' ಶ್ರೇಷ್ಠ ಚಿತ್ರವಾಗುತ್ತಿತ್ತಲ್ಲವೇ?

**ಆದ್ದರಿಂದ ಹೊಸ ಅಲೆಯ ಚಿತ್ರ ಕನ್ನಡದಲ್ಲಿ ಇನ್ನೂ ಬಂದಿಲ್ಲ. ಬರೀ ಪಟ್ಟಿ ಅಂಟಿಸಿಕೊಂಡು ಬಂದ ನಮ್ಮ ಚಿತ್ರಗಳೆಲ್ಲ ಕೃತಕ ಅಲೆಯ ಚಿತ್ರಗಳು.**

ಲಂಕೇಶ್ ಒಂದು ಕಡೆ ಹೇಳಿದ್ದು "ಒಳ್ಳೆಯ ಚಿತ್ರ, ಕೆಟ್ಟ ಚಿತ್ರಗಳು ಮಾತ್ರ ಇವೆ, ಹೊಸ ಅಲೆಯ ಚಿತ್ರಗಳಿಲ್ಲ" ಎಂದು. ಅದಕ್ಕಿಂತಲೂ ನಮಗೆ ಎಲ್ಲರಿಗೂ ಗೊತ್ತಿರುವಂತೆ ವ್ಯಾಪಾರಿ ಚಿತ್ರಗಳು ಮತ್ತು ಕಲಾತ್ಮಕ ಚಿತ್ರಗಳು ಎಂದು ಒಪ್ಪಿಕೊಳ್ಳುವುದೇ ವಾಸಿ. ಏಕೆಂದರೆ ವ್ಯಾಪಾರಿ ಚಿತ್ರಗಳಲ್ಲೂ ಒಳ್ಳೆಯ ಚಿತ್ರ ಕೆಟ್ಟ ಚಿತ್ರಗಳಿವೆ, ಕಲಾತ್ಮಕ ಚಿತ್ರಗಳಲ್ಲಿ ಒಳ್ಳೆಯವು ಬರಬಹುದು, ಕೆಟ್ಟವು ಈಗಾಗಲೇ ಬಂದಿವೆ.

ಲೇಖನ ಪ್ರಾರಂಭಿಸುತ್ತ ಹೊಸ ಅಲೆಯ ಗಾಳಿಯು ಹೊಲಸುನಾತ ಅಂತಾರಾಷ್ಟ್ರೀಯ ಮಟ್ಟಕ್ಕೆ ಪ್ರಸಾರವಾಗುವ ಕಾಲ ಹೆಚ್ಚು ದೂರವಿಲ್ಲ ಅಂದೆ. ಅಂದರೆ ಇಲ್ಲಿರುವ ಹೊಲಸು ಜಾತೀಯತೆ ಮತ್ತು ಗುಂಪುಗಾರಿಕೆ, ಸಿನಿಮಾ ಉದ್ಯಮದಲ್ಲಿ ಕೆಟ್ಟ ಜನರೇ ಹೆಚ್ಚು ನಮಗೆ ಗೊತ್ತು. ಇವರು ಸಮಾಜವನ್ನು ಕೆಡಿಸಿ ತಾವು ಸುಖ ಗಳಿಸುತ್ತಿದ್ದರು. ಹೊಸ ಪ್ರಜ್ಞೆಯವರು ಇಲ್ಲಿ ಕಾಲಿಡುವಾಗ ಇಲ್ಲಿಯೂ ಮಡಿವಂತಿಕೆ ಬರಬಹುದು. ಗಾಂಧಿ ನಗರದ ಶುದ್ಧೀಕರಣವಾದೀತು ಎಂದು ನಾವು ಭಾವಿಸಿದ್ದೆವು. ಆದರೆ ಹೊಸ ಪ್ರಜ್ಞೆಯವರ ಹೊಲಸು ವ್ಯಾಪಾರಿ ಚಿತ್ರಗಳವರ ಜೊತೆಗೆ ಪೈಪೋಟಿಗೆ ನಿಲ್ಲುವ ಹಾಗಿದೆ. ಸೆಕ್ಸ್, ಕುಡಿತ, ಮೋಸ ಮತ್ತು ಜಾತೀಯತೆಗೆ ಬೆಂಕಿ ಹಚ್ಚುವ ಬುದ್ಧಿಜೀವಿಗಳು ಹೊಸ

'ಚೋಮನದುಡಿ' ಗೆ ಸ್ವರ್ಣ ಕಮಲ

ಪ್ರಜ್ಞೆಯ ಹೆಸರಿನಲ್ಲಿ ತಮ್ಮ ಹೊಟ್ಟೆ ಹೊರೆಯುತ್ತಿದ್ದಾರೆ. ಪ್ರಶಸ್ತಿ ವಿಜೇತ ನಿರ್ದೇಶಕರೊಬ್ಬರು ಕಲಾತ್ಮಕ ಚಿತ್ರಗಳ ತಯಾರಿಕೆಗಾಗಿ ಮುಂಬಯಿಯ ಸೂಳೆಗೇರಿಗಳಲ್ಲಿ ನಿರ್ಮಾಪಕರನ್ನು ಮತ್ತು ನಿರ್ಮಾಪಕಿಯರನ್ನು ಅರಸುತ್ತಿದ್ದಾರೆ. ತಾವು ತಯಾರಿಸುವ ಯಾವ ಚಿತ್ರಕ್ಕೂ ಹಣ ವಾಪಸು ಬಾರದಿದ್ದಾಗ ಕರ್ನಾಟಕದಲ್ಲಿ ಅವರಿಗೆ ನಿರ್ಮಾಪಕರು ಸಿಗುವುದು ಅಸಾಧ್ಯವಲ್ಲವೇ?

ಕೆಲವು ನಿರ್ದೇಶಕರು ಲೈಟ್‌ಬಾಯ್‌ನಿಂದ ಹಿಡಿದು ಕಲಾವಿದರು ತಂತ್ರಜ್ಞರವರೆಗೂ ತಮ್ಮವರನ್ನೇ ಹಾಕಿಕೊಂಡು ಸಿನಿಮಾ ರಂಗದಲ್ಲೂ ಜಾತೀಯತೆ ಬೆಳೆಸುತ್ತಿದ್ದಾರೆ. ಅವರಿಗೆ ನಿರ್ಮಾಪಕರು ಮಾತ್ರ ತಮ್ಮವರಲ್ಲದ ಜನ ಬೇಕು. ಹೊಸ ಅಲೆಯ ಚಿತ್ರಗಳವರೂ ಸೆಂಚುರಿ ಕ್ಲಬ್‌ಗಳಲ್ಲಿ ಪತ್ರಿಕೆಯವರಿಗೆ ಸ್ಕಾಚ್ ವ್ಹಿಸ್ಕಿ ಪಾರ್ಟಿಗಳನ್ನು ಏರ್ಪಡಿಸುತ್ತಾರೆ. ಇದರಿಂದ ತಮ್ಮವರೆಲ್ಲರ ನಿರ್ಮಾಪಕ ಮುಳುಗಿ ಹೋಗುತ್ತಾನೆ ಎಂದು ಗೊತ್ತಿದ್ದರೂ ತನಗೆ ಮತ್ತು ತಮಗೆ ಸಾಕಷ್ಟು ಅಂತಾರಾಷ್ಟ್ರೀಯ ಪ್ರಚಾರ ಸಿಗುತ್ತಲ್ಲವೇ?

ಈ ಹೊಸ ಪ್ರಜ್ಞೆಯ ಗುಂಪಿನವರೇ ತಯಾರಿಸುವ ಚಿತ್ರಗಳಿಗೆ ಪರಸ್ಪರ ಪ್ರಶಸ್ತಿ ಹಂಚಿಕೊಂಡು ತಮಗೆ ತಾವೇ ಮೆರೆದಾಡುತ್ತಿದ್ದಾರೆ. ರಾಷ್ಟ್ರೀಯ ಪ್ರಶಸ್ತಿಗಳಿಗೆ ತೀರ್ಪುಗಾರರಾಗಿ ಒಬ್ಬರು ಈ ವರ್ಷ ಒಂದು ಚಿತ್ರಕ್ಕೆ ಪ್ರಶಸ್ತಿ ಕೊಟ್ಟರೆ, ಪ್ರಶಸ್ತಿ ಪಡೆದ ಆಸಾಮಿ ಮುಂದಿನ ವರ್ಷ ತಾನೇ ತೀರ್ಪುಗಾರನಾಗಿ ಬಂದು ಹಿಂದಿನ ವರ್ಷ ತನಗೆ ಪ್ರಶಸ್ತಿಗಳನ್ನು ಕೊಟ್ಟ ತೀರ್ಪುಗಾರನ ಚಿತ್ರಕ್ಕೆ ಪ್ರಶಸ್ತಿ ಕೊಡುತ್ತಾನೆ. ಈ ವರ್ಷ ಡಾ। ಶಿವರಾಮ ಕಾರಂತರ ಹೆಸರನ್ನು ಪ್ರಶಸ್ತಿ ಮಂಡಳಿಯ ಅಧ್ಯಕ್ಷರನ್ನಾಗಿ ಹೆಸರಿಸಿದಾಗಲೇ ಯಾರ್ಯಾರಿಗೆ ಪ್ರಶಸ್ತಿಗಳು ಬರುವವೆಂದು ಬೆಂಗಳೂರಲ್ಲಿ ಸುದ್ದಿ ಹಬ್ಬಿತ್ತು. ಸುದ್ದಿಯ ಪ್ರಕಾರವೇ ಬಿ.ವಿ ಕಾರಂತರಿಗೆ ಸಂಗೀತಕ್ಕೂ, ರಾಮಚಂದ್ರರಿಗೆ ಛಾಯಾಗ್ರಹಣಕ್ಕೂ ಪ್ರಶಸ್ತಿಗಳನ್ನು ಕೊಟ್ಟರು ನಿರ್ದೇಶಕ ಪ್ರಶಸ್ತಿಯನ್ನು ಶಾಮ ಬೆನಗಲ್‌ರಿಗೆ ಕೊಡುವುದಾಗಿ ತೀರ್ಮಾನವಾಗಿತ್ತಾದರೂ ಮತ್ತೊಬ್ಬ ತೀರ್ಪುಗಾರ ಚೌಡಪ್ಪರೆಡ್ಡಿಯವರ ವಕಾಲತ್ತಿನಿಂದಾಗಿ ಲಂಕೇಶ್‌ರಿಗೆ ಪ್ರಶಸ್ತಿ ಬಂತು. ಹಿಂದೆ 'ಕಾಡು' ಚಿತ್ರದ ನಂದಿನಿಗೆ ಪ್ರಶಸ್ತಿ ಬಂದಾಗ ನಡೆದ ವಿವಾದ ಆರಿ ಹೋಗಿಲ್ಲ. ಇಷ್ಟೆಲ್ಲ ನಡೆಯುವುದು ಹೊಸ ಪ್ರಜ್ಞೆಯವರ ಜಾತೀಯತೆಯ ಮತ್ತು ಗುಂಪುಗಾರಿಕೆಯ ಪ್ರಜ್ಞೆಯಿಂದ ಅರ್ಥಂಬರ್ಥ ಕಲಿತ ಈ ಹೊಸ ಪ್ರಜ್ಞೆಯವರಿಂದಾಗಿ ಸಿನಿಮಾ ರಂಗದಲ್ಲಿರುವ ನಿಜವಾದ ತಂತ್ರಜ್ಞರನ್ನೂ ಕಲಾವಿದರನ್ನೂ ನಮ್ಮ ದೇಶ ಮೂಲೆ ಗುಂಪಾಗಿರಿಸಿದೆ. ಕಾರಣ ಹೊಸ ಪ್ರಜ್ಞೆಯ ಗುಂಪಿನವರೇ ಪ್ರಶಸ್ತಿ ಮಂಡಲಿಗಳನ್ನು ರಚಿಸಿ ಪರಸ್ಪರ ಹಾರ ಹಾಕಿಕೊಳ್ಳುತ್ತಿದ್ದಾರೆ. ರಾಜಕೀಯದಲ್ಲಿ ಯಾವ ಜಾತಿಯವನ್ನು ಈ ಸಾರಿ ಮಂತ್ರಿ ಆಗುತ್ತಾನೆ ಎಂಬುದನ್ನು ನಾವು ಹೇಗೆ ಮೊದಲೇ ಊಹಿಸುತ್ತೇವೋ ಸಿನಿಮಾ ಜಗತ್ತಿನಲ್ಲೂ ಹಾಗೇ ಊಹಿಸಬಹುದು. ಬೇಕಿದ್ದರೆ ೧೯೭೭ರ ಸಾಲಿನ ಶ್ರೇಷ್ಠರು ಅಥವಾ ೧೯೭೮ರ ಸಾಲಿನ ಶ್ರೇಷ್ಠರು ಯಾರಾಗುತ್ತಾರೆ ಎಂಬುದನ್ನು ನಾವು ಈಗಲೇ ಘಂಟಾಘೋಷವಾಗಿ ಸಾರಬಹುದು. ಇಂಥ ಹೊಲಸು ಪ್ರಜ್ಞೆಯವರ ಸರ್ವಾಧಿಕಾರವನ್ನು ತೊಡೆದು ಹಾಕಲು ಪ್ರಶಸ್ತಿ ಮಂಡಲಿಯ ರಚನೆಯ ವಿಧಾನವನ್ನು ಬದಲಾಯಿಸಬೇಕು. ಅದು ರಚನಾತ್ಮಕವಾಗಬೇಕು. ಸಮಾಜವಾದದ ರೀತಿಯಲ್ಲಿರಬೇಕು. ಹತ್ತಿಪ್ಪತ್ತು ಜನ ಕೇವಲ ಹತ್ತಿಪ್ಪತ್ತು ಚಿತ್ರಗಳನ್ನು ನೋಡಿ ಶ್ರೇಷ್ಠರನ್ನು ಆರಿಸುವ ಬದಲಿಗೆ ಪ್ರಶಸ್ತಿ ವಿತರಣೆಗಾಗಿ ದೇಶದ ಪ್ರತಿಯೊಂದು ತಾಲೂಕು ಮಟ್ಟದಲ್ಲೂ ತೀರ್ಪುಗಾರರ ಮಂಡಲಿ ಇರಬೇಕು. ಬರೀ ಸಿನಿಮಾ ಮಂದಿ ಇರುವ ಬದಲಿಗೆ ತೀರ್ಪುಗಾರರ ಮಂಡಳಿಯಲ್ಲಿ ಪ್ರೇಕ್ಷಕ ವರ್ಗದ ಎಲ್ಲಾ ತರಗತಿಯವರಿರಬೇಕು. ಸಾಹಿತಿಗಳಿಗೆ, ವೈದ್ಯರಿಗೆ ನ್ಯಾಯವಾದಿಗಳಿಗೆ ಸಾಮಾನ್ಯ ಕೂಲಿ ವರ್ಗದ ಪ್ರೇಕ್ಷಕರಿಗೂ ತೀರ್ಮಗಾರರ ಮಂಡಳಿಯಲ್ಲಿ ಪ್ರಾತಿನಿಧ್ಯವಿರಬೇಕು. ಆಗ ನಿಜವಾದ ಶ್ರೇಷ್ಠ ಚಿತ್ರದ ಆರಿಸುವಿಕೆ ಗೊತ್ತಾಗುತ್ತದೆ. ಇಂದಿರಾ ಗಾಂಧಿ ಮತ್ತು ಸಂಜಯ ಗಾಂಧಿಯವರು ಮಂತ್ರಿಗಳನ್ನು ಅರಳಿಸಿ ಉರುಳಿಸಿದ ಹಾಗಾಗಬಾರದು, ಪ್ರಶಸ್ತಿ ವಿತರಣೆ. ಕೊನೇ ಪಕ್ಷ ನೋಬೆಲ್ ಪ್ರಶಸ್ತಿ ಅಥವಾ ಆಸ್ಕರ್ ಪ್ರಶಸ್ತಿ ನೀಡುವ ವಿಧಾನಗಳನ್ನಾದರೂ ನಮ್ಮ ಸರಕಾರ ನಕಲು ಹೊಡೆಯಬೇಕು. ಆಗ ಮಾತ್ರವೇ ಸತ್ವವುಳ್ಳ ನಿಜವಾದ ಹೊಸ ಅಲೆಯ ಚಿತ್ರಗಳನ್ನು ನಾವು ಗುರುತಿಸಬಹುದು. ●

ಈಗ ಉತ್ತರ ಕರ್ನಾಟಕವೆಂದು ಕರೆಯಿಸಿಕೊಳ್ಳುತ್ತಿರುವ ರಾಜ್ಯದ ವಿಭಾಗವು ೧೯೫೬ರ ನವೆಂಬರ್ ದಿನಾಂಕ ೧ಕ್ಕೂ ಮೊದಲು ಮುಂಬಯಿ ಕರ್ನಾಟಕವೆಂದು ಕರೆಯಲ್ಪಡುತ್ತಿದ್ದಿತು. ಮೋಜಿನ ಸಂಗತಿ ಎಂದರೆ ಚಿತ್ರಗಳ ವಿತರಕರ ದೃಷ್ಟಿಯಲ್ಲಿ ಇದಿನ್ನೂ "ಮುಂಬಯಿ ಕರ್ನಾಟಕ"ವಾಗಿದೆಯೇ ವಿನಾ ಉತ್ತರ ಕರ್ನಾಟಕವಾಗಿಲ್ಲವೆಂಬುದು ಬಹಳ ಜನರಿಗೆ ಗೊತ್ತಿಲ್ಲ.

ಇಪ್ಪತ್ತೊಂದು ವರುಷಗಳ ಹಿಂದೆ ಕನ್ನಡ ನಾಡು ಐದು ಬೇರೆ ಬೇರೆ ಆಡಳಿತಗಳ ಕೈಯೊಳಗೆ ಸಿಕ್ಕು ನರಳುತ್ತಿದ್ದಿತು. ಮುಂಬಯಿ ಕರ್ನಾಟಕ, ನಿಜಾಮ ಕರ್ನಾಟಕ, ಮದ್ರಾಸ್ ಕರ್ನಾಟಕ, ಕೊಡಗು ಮತ್ತು ಮೈಸೂರು ಸಂಸ್ಥಾನ ಹೀಗೆ ಹರಿದು ಹಂಚಿ ಹೋಗಿದ್ದಿತು. ಇದ್ದುದರಲ್ಲಿ ಮೈಸೂರ ಸಂಸ್ಥಾನವು ದೊಡ್ಡದಿದ್ದುದರಿಂದ ಮತ್ತು ಅಲ್ಲಿಯ ದೊರೆಗಳು ಪ್ರಜಾವತ್ಸಲರಾಗಿದ್ದುದರಿಂದ ಅಲ್ಲಿ ಇನ್ನುಳಿದ ಉದ್ಯಮಗಳ ಜೊತೆಗೆ ಚಿತ್ರೋದ್ಯಮವೂ ಬೆಳೆದು ಬಂದಂತೆ ಇನ್ನುಳಿದ ಕಡೆಗಳಲ್ಲಿ ಅದು ಹೇಳಿಕೊಳ್ಳುವ ರೀತಿಯಲ್ಲಿ ಮುಂದೆ ಬರಲಿಲ್ಲ.

ಆಗ ಉತ್ತರ ಕರ್ನಾಟಕದ ವ್ಯವಹಾರವೆಲ್ಲವೂ ಮುಂಬಯಿ ಜೊತೆಗೆ ಇದ್ದುದರಿಂದ ಇಲ್ಲಿಯವರು ಹಿಂದಿ ಮತ್ತು ಮರಾಠಿ ಚಿತ್ರಗಳತ್ತ ಆಕರ್ಷಿತರಾಗಿರುವದು ಅನಿವಾರ್ಯವಾಗಿದ್ದಿತು. ಹೀಗಾಗಿ ಇಲ್ಲಿಯ ಕಲಾವಿದರೂ ಕೂಡ ಮುಂಬಯಿಯ ಮತ್ತು ಕೊಲ್ಹಾಪೂರಗಳನ್ನೇ ತಮ್ಮ ಕಾರ್ಯಕ್ಷೇತ್ರವೆಂದು ಆರಿಸಿಕೊಳ್ಳುವದು ಅನಿವಾರ್ಯವಾಯಿತು. ಈ ಸಮಯದಲ್ಲಿ ಉತ್ತರ ಕರ್ನಾಟಕದ ನಟನಟಿಯರು ಹಿಂದಿ ಚಿತ್ರರಂಗಕ್ಕೂ ಅನಿವಾರ್ಯವಾಗಿದ್ದರೆಂದರೂ ಉತ್ಪ್ರೇಕ್ಷೆಯಾಗಲಾರದು.

ಹಿಂದಿ ಚಿತ್ರರಂಗದ ಜನಪ್ರಿಯ ತಾರೆ ನಂದಾಳ ತಂದೆ ಮಾಸ್ಟರ್ ವಿನಾಯಕರನ್ನು ಮರಾಠರು ವಿನಾಯಕ ಕರ್ನಾಟಕ ಎಂದೇ ಕರೆಯುತ್ತಿದ್ದರು. ಇಂದು ಭಾರತದ ಶ್ರೇಷ್ಠ ನಿರ್ಮಾಪಕ ನಿರ್ದೇಶಕರೆನಿಸಿಕೊಂಡ ವ್ಹಿ. ಶಾಂತಾರಾಮರನ್ನು ಹುಬ್ಬಳ್ಳಿಯಿಂದ ಕೊಲ್ಹಾಪುರಕ್ಕೆ ನಾನು ಕರೆದುಕೊಂಡು ಹೋದೆ ಎಂದು ಮಹಾರಾಷ್ಟ್ರದ ಖ್ಯಾತ ನಟ ಬಾಬುರಾವ ಪೆಂಡಾರಕರು ತಮ್ಮ ಆತ್ಮಚರಿತ್ರೆಯಲ್ಲಿ ಬರೆದಿದ್ದಾರೆ.

ಸೋಹ್ರಾಬ್ ಮೋದಿಯವರ ಮಿನರ್ವಾ ಮೂವ್ಹಿಟೋನದ ಮುಖ್ಯ ನಾಯಕಿಯರಲ್ಲಿ ಹುಬ್ಬಳ್ಳಿಯ ಶೀಲಾ ಕೂಡ ಒಬ್ಬಳಾಗಿದ್ದಳು. ಸೈರಾಬಾನುಳ ತಾಯಿ ನಸಿಮ್ ಬಾನು ಮತ್ತು ಶೀಲಾ ಅಭಿನಯಿಸಿದ ಮಿನರ್ವರವರ ಚಿತ್ರಗಳು ಅಪಾರ ಜನಪ್ರಿಯತೆ ಗಳಿಸಿದ್ದವು. ಪುಣೆಯ ಪ್ರಭಾತ ಫಿಲ್ಮ ಕಂಪನಿಯು ತಯಾರಿಸಿದ "ಆದ್ಮಿ ದಸಬಜೆ" ಮುಂತಾದ ಚಿತ್ರಗಳಲ್ಲಿ ನಾಯಿಕೆ ಆಗಿದ್ದವಳು ಶಾಂತಾ ಹುಬ್ಳೀಕರ ಇವರುಗಳೆಲ್ಲಾ ಸಾಮಾಜಿಕ ಹಿಂದಿ ಮತ್ತು ಮರಾಠಿ ಚಿತ್ರಗಳಲ್ಲಿ ಹೆಸರುಗಳಿಸಿದ್ದರು.

ಇನ್ನು ಸ್ಟಂಟ್ ಚಿತ್ರಗಳಲ್ಲಿ ಜನಪ್ರಿಯರಾದವರಲ್ಲಿ ವಿಜಾಪೂರ ಜಿಲ್ಹೆಯ ಬೀಳಗಿಯ ಕರ್ನಾಟಕ ಸಹೋದರಿಯರು, ಗೋಹರ ಕರ್ನಾಟಕ ಮತ್ತು ಅಮೀರಬಾಯಿ ಕರ್ನಾಟಕಿಯವರು ಸುಮಾರು ಒಂದು ಒಂದೂವರೆ ದಶಕಗಳ ಕಾಲ ಸ್ಟಂಟ್ ಚಿತ್ರಗಳ ಅನಭಿಷಕ್ತ ಸಾಮ್ರಾಜ್ಞಿಯರಾಗಿದ್ದರು. ಅವರ ಜೊತೆಗೆ ಕಾರವಾರ ಜಿಲ್ಲೆಯ ವತ್ಸಲಾ ಕುಮಠೇಕರ ಕೂಡ ಮಿಂಚಿ ಮಾಯವಾದಳು. ಕಾರವಾರ ಜಿಲ್ಲೆಯ ಇದೂವರೆಗೂ ಮುಂಬಯಿಯಲ್ಲಿ ಉಳಿದುಕೊಂಡವರೆಂದರೆ ಸರೋಜ ಬೋರ್ಕರ, ಮತ್ತು ಸುವನ್‌ಕಲ್ಯಾಣಪೂರರೇ ಆಗಿದ್ದಾರೆ.

ಸರೋಜ ಬೋರ್‌ಕರ್‌ಳಂತೂ ಹಿಂದೀ ಮರಾಠೀ ಚಿತ್ರಗಳಲ್ಲದೇ ಕನ್ನಡ ಸಂಗೊಳ್ಳಿ ರಾಯಣ್ಣ ಚಿತ್ರದಲ್ಲಿ ರಾಯಣ್ಣನ ತಾಯಿಯ ಪಾತ್ರದಲ್ಲಿ ಕಾಣಿಸಿಕೊಂಡಿದ್ದನ್ನು ಚಿತ್ರರಸಿಕರು ಮರೆತಿರಲಾರರು. ಅದೇ ಚಿತ್ರದ ರಾಯಣ್ಣನ ಪತ್ನಿಯ ಪಾತ್ರ ವಹಿಸಿದ ಕಾಮಿನಿ ಕದಮ್ ಬೆಳಗಾವಿಯವಳೆಂಬುದು ಎಷ್ಟು ಜನಕ್ಕೆ ಗೊತ್ತಿದೆ? ಮುಂಬಯಿ ಮಾರುಕಟ್ಟೆಯ ಎಣ್ಣೆಯ ದೊರೆ ( oil king ) ಎಂದು ಕರೆಯಿಸಿಕೊಳ್ಳುತ್ತಿದ್ದ ಬಸವರಾಜ ಮನಸೂರ ನಾಗದನ ಪಾತ್ರ ನಿರ್ವಹಿಸಿದ್ದರು. ಆ ಚಿತ್ರದಲ್ಲಿ ಧಾರವಾಡದ ಅತ್ತಿಕೊಳ್ಳದ ದೃಶ್ಯಗಳನ್ನು ಸೆರೆಹಿಡಿಯಲಾಗಿದ್ದಿತು. ಹೀಗೆ ಉತ್ತರ ಕರ್ನಾಟಕದ ದೃಶ್ಯಗಳನ್ನು ಅಳವಡಿಸಿಕೊಂಡ ಪ್ರಪ್ರಥಮ ಭಾರತೀಯ ಚಿತ್ರವಾಯಿತು.

ಮುಂದೆ ಹತ್ತು ವರುಷಗಳ ನಂತರ ಅಂದರೆ ೧೯೪೭ರಲ್ಲಿ, ಶಾಂತೇಶ ಪಾಟೀಲರು ಉತ್ತರ ಕರ್ನಾಟಕದಲ್ಲೆಲ್ಲಾ ಸುತ್ತಾಡಿ ಶೇರ್ ಹೋಲ್ಡರರನ್ನು ಮಾಡಿ "ಪಂಪಾ ಪಿಕ್ಚರ್ಸ" ಸಂಸ್ಥೆ ಸ್ಥಾಪಿಸಿ ಚಂದ್ರಹಾಸವನ್ನು ತೆರೆಗೆ ತಂದರು. ಕನ್ನಡತಿ ಅಮೀರಬಾಯಿ ಆ ಚಿತ್ರದಲ್ಲಿ ಅಭಿನಯಿಸಿದ್ದಳು. ಆ ಕಾಲದ ರಂಗಭೂಮಿಯ ಖ್ಯಾತ ನಟ ದಿ. ಹಂದಿಗನೂರು ಸಿದ್ದರಾಮಪ್ಪನವರು ದುಷ್ಟಬುದ್ಧಿಯ ಪಾತ್ರವನ್ನು ಅಭಿನಯಿಸಿದ್ದರು. ಆದರೆ ಚಂದ್ರಹಾಸ ಚಿತ್ರವೂ ಚಿರಂಜೀವಿಯಂತೆ ಹರಿಹರದಾಚೆ ಹೋಗಲೇ ಇಲ್ಲ. ಹೀಗಾಗಿ ನಿರ್ಮಿಸಿದ ಸಂಸ್ಥೆಗೆ ಮೂಲಾ ನಕ್ಷತ್ರದ ಬಿಸಿ ತಟ್ಟಿ ಅದು ಸತ್ತೇ ಹೋಯಿತು.




★ ಡಾ॥ ಗೋವಿಂದ ಮಣ್ಣೂರ

ಬಿ.ವಿ. ಭೂಮರೆಡ್ಡಿಯವರೂ ಒಂದು ಹಿಂದಿ ಚಿತ್ರವನ್ನೂ ನಿರ್ಮಿಸಿದ್ದರು. ಆದರೆ ಅದು ಯಶಸ್ವಿ ಆಗಲಿಲ್ಲ ಎಂಬ ಮಾತು ಬೇರೆ.

ಈ ರೀತಿ ಉತ್ತರ ಕರ್ನಾಟಕದ ಕಲಾವಿದರು ಹಿಂದೀ ಮತ್ತು ಮರಾಠಿಗಳಲ್ಲಿ ಜನಪ್ರಿಯತೆ ಗಳಿಸತೊಡಗಿದಾಗ, ಕನ್ನಡ ಚಿತ್ರಗಳ ನಿರ್ಮಾಣದ ಬಗೆಗೂ ಉತ್ತರ ಕರ್ನಾಟಕದಲ್ಲಿ ಪ್ರಯತ್ನಗಳು ನಡೆದವು. ೧೯೩೬ರಲ್ಲಿ ಧಾರವಾಡದೊಳಗೆ "ಕರ್ನಾಟಕ ಟಾಕೀಜ ಲಿಮಿಟೆಡ್" ಎಂಬ ತಯಾರಿಕಾ ಸಂಸ್ಥೆ ನಿರ್ಮಾಣಗೊಂಡಿತು. ೧೯೩೭ರಲ್ಲಿ ಅದು ಚಿರಂಜೀವಿಯನ್ನು ತೆರೆಗೆ ತಂದಿತು. ಆದರೆ ಆಗ ಕನ್ನಡ ಜನತೆಯಲ್ಲಿ ಪರಭಾಷಾ ಚಿತ್ರಗಳ ವ್ಯಾಮೋಹ ಹೆಚ್ಚಾಗಿದ್ದರಿಂದ ಆ ಸಂಸ್ಥೆ ಅಲ್ಪ ಜೀವಿಯಾಯಿತು.

ಆಗಿನ ಖ್ಯಾತ ನಿರ್ದೇಶಕ ಕೆ. ಪಿ. ಭಾವೆಯವರು ನಿರ್ದೇಶಿಸಿದ್ದ ಆ ಚಿತ್ರದಲ್ಲಿ ಖ್ಯಾತ ಸಾಹಿತಿಗಳಾದ ದೇವುಡು, ಮುದವೀಡು ಕೃಷ್ಣರಾಯ ಮೊದಲಾದವರು ಅಭಿನಯಿಸಿದ್ದರು. ಚಿರಂಜೀವಿಯ ತಾಯಿಯಾಗಿ ಮಳವಳ್ಳಿ ಸುಂ[illegible] ಕಾಣಿಸಿಕೊಂಡಿದ್ದರು. ಕನ್ನಡ ರಂಗಭೂಮಿಗೆ ಅನಿವಾರ್ಯವೆನಿಸಿದ್ದ

ಭಾರತ ಸ್ವಾತಂತ್ರ್ಯಾನಂತರ ಉತ್ತರ ಕರ್ನಾಟಕದಲ್ಲಿ ಚಿತ್ರೋದ್ಯಮದ ಚಟುವಟಿಕೆಗಳು ಒಂದು ರೀತಿಯಿಂದ ನಿಂತೇ ಹೋದವೆಂದು ಹೇಳಿದರೂ ನಡೆದೀತು. ೧೯೫೫ರಲ್ಲಿ ಬೇಂದ್ರೆಯವರು ಸಂಭಾಷಣೆ ಬರೆದ, ವಿಚಿತ್ರ ಪ್ರಪಂಚ, ತೆರೆಗೆ ಬಂದಿತು. ಈ ಮಧ್ಯ ಮರಾಠಿ ಚಿತ್ರ 'ದೇವಬಾಪ್ಪಾ' ಕನ್ನಡಕ್ಕೆ ಡಬ್ ಆಗಿ "ದೊಡ್ಡಪ್ಪ" ಎಂಬ ಹೆಸರಿನಿಂದ ತೆರೆ ಕಂಡಿತ್ತಾದರೂ, ಅವೆರಡೂ ಚಿತ್ರಗಳು ಬಿದ್ದು ಹೋದವು. ಈ ರೀತಿ ಮೇಲಿಂದ ಮೇಲೆ ಉತ್ತರ ಕರ್ನಾಟಕದವರು ನಿರ್ಮಿಸಿದ ಚಿತ್ರಗಳು ಬಿದ್ದು ಹೋಗುತ್ತಾ [illegible]ಟ್ಟರಿಂದ ಈ ಉದ್ಯಮದತ್ತ ಗಮನ ಹ[illegible] ಭಂಡವಾಳಗಾರರು ಹಿಂಜರಿಯತೊಡಗಿದರು.



ಉತ್ತರ ಕರ್ನಾಟಕದ ಆಕರ್ಷಣೀಯ ಸ್ಥಳಗಳಲ್ಲಿ ಚಿತ್ರೀಕರಿಸಿದ 'ಫಲಿತಾಂಶ'

ಸಂಸ್ಥೆಗಳೂ ತಲೆ ಎತ್ತಿದ್ದು, ರಿಜಿಸ್ಟರ ಆದ ಮತ್ತು ಆಗದೆ ಇದ್ದವುಗಳೂ ಸೇರಿ ಸುಮಾರು ೫೫ ಸಂಸ್ಥೆಗಳು ಈಗ ಉತ್ತರ ಕರ್ನಾಟಕದಲ್ಲಿ ಚಲನ ಚಿತ್ರ ವಿತರಣಾ ಕೇಂದ್ರಗಳಾಗಿ ಕೆಲಸಮಾಡುತ್ತಿವೆ.

ಉತ್ತರ ಕರ್ನಾಟಕದಲ್ಲಿ ಬೆಂಗಳೂರಿಗೆ ಸರಿ ಸಮವಾಗಿ ನಿಲ್ಲಬಲ್ಲಂತಹ ಚಿತ್ರಮಂದಿರಗಳು ಈಗ ನಿರ್ಮಾಣಗೊಂಡಿವೆ. ಮೊದಲು ಇಲ್ಲಿಯ ಚಿತ್ರಮಂದಿರಗಳು ಬಹಳ ಹೀನ ಸ್ಥಿತಿಯಲ್ಲಿ ಇದ್ದವು. ಕರ್ನಾಟಕ ಏಕೀಕರಣದ ನಂತರ ತಯಾರಾದ ಚಿತ್ರಮಂದಿರಗಳು ಭವ್ಯವಾಗಿವೆ. ಒಂದು ದೃಷ್ಟಿಯಿಂದ ಚಿತ್ರಮಂದಿರಗಳ ಒಡೆಯರು ದೊರೆಗಳ ಹಾಗೆ ಇದ್ದಾರೆನ್ನಬೇಕು, ಏಕೆಂದರೆ ಹಿಂದೆ ಅವರು ಮುಂಬಯಿಗೆ ಹೋಗಿ ನಿರ್ಮಾಪಕರ ಬಾಗಿಲಿಗೆ ಎಡತಾಕಿ ಕ್ಯೂ ನಿಲ್ಲಬೇಕಾಗುತ್ತಿತ್ತು. ಆದರೆ ಇಂದು ನಿರ್ಮಾಪಕರು ಮತ್ತು ವಿತರಕರು ಚಿತ್ರಮಂದಿರದ ಮಾಲಕರ ಬಳಿಗೆ ಧಾವಿಸಿ ತಮ್ಮ ಚಿತ್ರಗಳಿಗೆ ತಾರೀಖು ಕೊಡಬೇಕೆಂದು ಕೇಳುತ್ತಿದ್ದಾರೆ. ಈ ರೀತಿ ಪರಿಸ್ಥಿತಿ ಬದಲಾಯಿಸಿ ಬಿಟ್ಟಿದೆ. ಇಂದು ಉತ್ತರ ಕರ್ನಾಟಕದಲ್ಲಿ ಸುಮಾರು (ಟೂರಿಂಗ್ ಟಾಕೀಸ್ ಸೇರಿದಂತೆ) ೨೦೦ ಕ್ಕಿಂತ ಹೆಚ್ಚಿಗೆ ಚಿತ್ರಮಂದಿರಗಳಿವೆ.




೧೯೫೬ರಲ್ಲಿ ಕರ್ನಾಟಕ ಏಕೀಕರಣವಾದ ನಂತರ ಉತ್ತರ ಕರ್ನಾಟಕ ಹಾಗೂ ಹುಬ್ಬಳ್ಳಿಗೆ ಮಹತ್ವ ಬರತೊಡಗಿತು. ಬೆಂಗಳೂರಿನ ನಂತರ ಹುಬ್ಬಳ್ಳಿಯೇ ಮಹತ್ವದ ಕೇಂದ್ರವಾಯಿತು.

ಅದನ್ನು ಗಮನಿಸಿದ ಧಾರವಾಡದ ಜಿಲ್ಲೆಯ ಗುಡಿಸಾಗರದ ಅನಂತ ಹಿರೇಗೌಡರ್ ಅವರು ತಮ್ಮ ಗೆಳೆಯ ನೇಮಿನಾಥ ಗಾಟ್ ಜೊತೆ ಸೇರಿ "ಸಂಗೊಳ್ಳಿ ರಾಯಣ್ಣ" ಚಿತ್ರ ತಯಾರಿಸಿದರು. ಆ ಚಿತ್ರದ ಮುಖಾಂತರ ಧಾರವಾಡದ ಎ. ಎಸ್. ಪಾಟೀಲ ಹೀರೋ ಆಗಿ ತೆರೆಗೆ ಬಂದ. ಇಂದು ಕನ್ನಡ ಚಿತ್ರದಲ್ಲಿ ಮುಂದುವರೆದಿರುವ ರಾಮಗೋಪಾಲ್ ಅಭಿನಯಿಸಿದ ಪ್ರಥಮ ಚಿತ್ರವೂ ಇದೇ ಆಗಿದೆ. ಆದರೆ ಆ ಚಿತ್ರವು ಮೂಲೆ ಗುಂಪಾದಂತೆ ಆ ಚಿತ್ರದ ಹೀರೋ ಪಾಟೀಲ್ ಕೂಡ ತೆರೆಯ ಮರೆಯಲ್ಲಿಯೇ ಉಳಿದುಬಿಟ್ಟ.

ಚಲನಚಿತ್ರ ಕಲಾವಿದರು ಮತ್ತು ನಿರ್ಮಾಣ ಸಂಸ್ಥೆಗಳ ನಂತರ ಬರುವ ವಿಷಯವೆಂದರೆ ಚಲಚಿತ್ರ ಹಂಚಿಕೆದಾರರದಾಗಿದೆ. ಉತ್ತರ ಕರ್ನಾಟಕದ ಚಿತ್ರ ವಿತರಣಾ ವ್ಯವಸ್ಥೆಯು ಬಲು ಮೋಜಿನದಾಗಿದೆ. ಮೂವತ್ತು ವರುಷಗಳ ಹಿಂದೆ ಫೇಮಸ್ ಫಿಲ್ಮ ಸರ್ಕೀಟ್ ಮತ್ತು ರಾಯಲ್ ಟಾಕೀ ಡಿಸ್ಟ್ರಿಬ್ಯೂಟರ್ಸ್ ಎಂಬೆರಡು ವಿತರಣಾ ಸಂಸ್ಥೆಗಳಿದ್ದವು. ಆಗ ಚಿತ್ರಮಂದಿರಗಳ ಮಾಲಕರು, ಹೆಚ್ಚಾಗಿ ಮುಂಬೈಗೆ ಹೋಗಿ ಚಿತ್ರಗಳನ್ನು ತರುವ ಪರಿಪಾಠವಿದ್ದಿತು. ಅಂಥ ಪರಿಸ್ಥಿತಿಯಲ್ಲಿ ಸ್ವರ್ಗೀಯ ಕೆ. ವಿ. ರಾಜುರವರು "ಶ್ರೀನಿವಾಸ್ ಪಿಕ್ಚರ್ಸ್" ಎಂಬ ಹೆಸರಿನ ಸಂಸ್ಥೆಯನ್ನು ಗದುಗಿನಲ್ಲಿ ಸ್ಥಾಪಿಸಿದರು. ಆ ಸಂಸ್ಥೆ ಅಸ್ತಿತ್ವದಲ್ಲಿ ಬಂದನಂತರ ಉತ್ತರ ಕರ್ನಾಟಕದ ವಿತರಣಾ ವ್ಯವಸ್ಥೆಯಲ್ಲಿ ಕ್ರಾಂತಿಕಾರಕ ಬದಲಾವಣೆಗಳು ಪ್ರಾರಂಭವಾದವು.

ಎಲ್ಲರಿಗಿಂತ ಮೊದಲು ಫಿಲ್ಮಸ್ತಾನದವರು ಹುಬ್ಬಳ್ಳಿಯಲ್ಲಿ ತಮ್ಮ ವ್ಯಾಪಕ ಕಚೇರಿಯನ್ನು ಪ್ರಾರಂಭಿಸಿದರು. ಅನಂತರ ಸಾಮಂತ ಫಿಲ್ಮ್ಸದವರು ಬಂದರು. ಕಲಾ ಪಿಕ್ಚರ್ಸದವರೂ ಹುಬ್ಬಳ್ಳಿಯಲ್ಲಿ ತಮ್ಮ ಶಾಖೆ ಪ್ರಾರಭಿಸಿದರು. ನಂತರ ರಾಜಶ್ರೀ ಪಿಕ್ಚರ್ಸನವರು ಬಂದರು. ಈ ಮಧ್ಯೆ ಅಂಕಲಗಿ ಮಿತ್ರರೂ ಸೇರಿ ಸಂದೇಶ್ ಫಿಲಂಸ್ ಕಟ್ಟಿದರು. ಅಲ್ಲಿಂದ ಹೊರಬಿದ್ದ ಎಸ್. ಬಿ ಅಂಕಲಗಿಯವರು ತಮ್ಮದೇ ಆದ ಜಗದೀಶ್ ಫಿಲಂಸ್ ಸ್ಥಾಪಿಸಿಧರು. ನಂತರ ಗುರುರಾಜ ಫಿಲ್ಮಸ್ ಪ್ರಾರಂಭವಾಯಿತು. ಇತ್ತೀಚೆಗೆ ಪ್ರಾರಂಭವಾದ ಮಾಡರ್ನ್ ಮೂವ್ಹೀಸ್ ಕೂಡ ಇಂದು ಖ್ಯಾತ ವಿತರಣಾ ಸಂಸ್ಥೆಯಾಗಿದೆ. ಇವಿಷ್ಟು ಇಂದು ಉತ್ತರ ಕರ್ನಾಟಕದಲ್ಲಿ ಪ್ರಸಿದ್ಧ ವಿತರಣಾ ಸಂಸ್ಥೆಗಳಾಗಿವೆ. ಅನೇಕ ಹೊಸ ಹೊಸ,

ಉತ್ತರ ಕರ್ನಾಟಕದಲ್ಲಿಯೂ ಪ್ರತಿಭಾನ್ವಿತ ಕಲಾವಿದರಿದ್ದಾರೆ, ಬರಹಗಾರರಿದ್ದಾರೆ ಎಂಬುದು ಗೊತ್ತಾದದ್ದು ಹೆಚ್ಚಾಗಿ ಈ ದಶಕದ ಪ್ರಾರಂಭದಿಂದ ಎಂದು ಹೇಳಬಹುದು. ಬೆಳಗಾವಿ ಜಿಲ್ಲೆಯ ಗೋಕಾಕ ವಾಸಿ ಶ್ರೀ ಕೃಷ್ಣಮೂರ್ತಿ ಪುರಾಣಿಕರ ಕಾದಂಬರಿಗಳು ಕಳೆದ ದಶಕಗಳಿಂದಲೂ ಚಲನ ಚಿತ್ರವಾಗುತ್ತಿವೆ. ಧಾರವಾಡದ ಶ್ರೀ ಗಿರೀಶ್ ಕಾರ್ನಾಡ್‌ರು ಸಂಸ್ಕಾರ ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದರು. ಅನಂತರ ಅವರು ನಿರ್ದೇಶಿಸಿದ ಚಿತ್ರಗಳಿಂದ ಕನ್ನಡ ಚಿತ್ರಗಳ ದಿಶೆಯೇ ಬದಲಾಗಿ ಬಿಟ್ಟಿದೆ ಎಂಬುದನ್ನು ಅಲ್ಲಗಳೆಯುವದು ಯಾರಿಂದಲೂ ಸಾಧ್ಯವಿಲ್ಲ. ಆಮೇಲೆ ಬಸವರಾಜ ಕಟ್ಟೀಮನಿ ಅವರ 'ಮಾಡಿ ಮಡಿದವರು'

ತೆರೆಗೆ ಬಂದಿತು. ಈ ಚಿತ್ರದ ಮುಖಾಂತರ ಧಾರವಾಡದ ರಾಮಗೋಪಾಲ್ ನಾಯಕ ನಟನಾದ. ಅಲ್ಲದೆ ನನ್ನ ಪ್ರಥಮ ಚಿತ್ರವೂ ಕೂಡ ಅದೇ ಆಗಿದೆ. ಇದರಲ್ಲಿ ರಂಗಭೂಮಿಯ ಹಿರಿಯ ನಟ ಏಣಗಿ ಬಾಳಪ್ಪ, ಆಕಾಶವಾಣಿಯ ನೀಲಗಾರ್ ಹೀರೆಮಠರು ಬೆಳ್ಳಿ ತೆರೆಗೆ ಪರಿಚಯವಾದರು.

ಅಲ್ಲಿಂದ ಕನ್ನಡ ಚಿತ್ರಗಳ ನಿರ್ಮಾಪಕರ ದೃಷ್ಟಿ ಉತ್ತರ ಕರ್ನಾಟಕದ ಲೇಖಕರ ಕಡೆಗೆ ಹರಿಯಿತು. ಗೀತಾ ಕುಲಕರ್ಣಿ, ಶ್ರೀನಿವಾಸ ಕುಲಕರ್ಣಿ, ಜಡಭರತ, ಗಿರಡ್ಡಿ ಗೋವಿಂದರಾಜ ಮತ್ತು ವೀಣಾಯಲಬುರ್ಗಿ ಮೊದಲಾದವರ ಕೃತಿಗಳು ಹಾಗೂ ಕವಿ ನಾಟಕಕಾರ ಧುತ್ತರಗಿ ಮುಂತಾದವರ ಕೃತಿಗಳು ತೆರೆಗೆ ಬಂದವು, ಅದೇ ರೀತಿ ಅನೇಕ ನಟ ನಟಿಯರು ಚಿತ್ರ ನಿರ್ಮಾಪಕರ ದೃಷ್ಟಿಗೆ ಈ ದಶಕದಲ್ಲಿ ಬಿದ್ದರು. ಉತ್ತರ ಕನ್ನಡದ ಅನಂತ್‌ನಾಗ್, ಹುಬ್ಬಳ್ಳಿಯ ವಿಕ್ರಮ್, ಧಾರವಾಡದ ಅಪ್ಪಿಉಮ್ರಾಣಿ, ಲೀನಾ ಚಂದಾವರ್‌ಕರ್‌ರೂ ಗಿರೀಶ್ ಕಾರ್ನ್ಾಡ್ ಹಿಂದಿಯಲ್ಲಿಯೂ; ಕನ್ನಡದಲ್ಲಿ ರಾಮಗೋಪಾಲ್, ಡಾ|| ಗೋವಿಂದ ಮಣ್ಣೂರ, ಶಾಂತಲಾ, ಥೆರೇಸಮ್ಮ, ರಾಮಚಂದ್ರ-ನಾಯ್ಕು, ಬ್ರಹ್ಮಾವರ ದಂಪತಿಗಳು, ಅಣ್ಣಗೇರಿ ಅರವಿಂದ, ಗುಡಿಗೇರಿ ಬಸವರಾಜ, ಎಲಿವಾಳ ಸಿದ್ದಯ.

ಇವರೆಲ್ಲರಲ್ಲಿ ಎದ್ದು ಕಾಣುವಂತೆ ರಾಷ್ಟ್ರವ್ಯಾಪಿ ಪ್ರಚಾರ ಪಡೆದವರೆಂದರೆ ಗಿರೀಶ್ ಕಾರ್ನಾಡ್, ಹಾಗೂ ಅನಂತ್‌ನಾಗ್. 'ಸಂಸ್ಕಾರ' ಕಾಡು, ತಬ್ಬಲಿಯು ನೀನಾದೆ ಮಗನೆ, ವಂಶವೃಕ್ಷ, ಮುಂತಾದ ಚಿತ್ರಗಳನ್ನು ದಿಗ್ದರ್ಶಿಸಿ, ನಟಿಸಿ, ಕನ್ನಡ ಚಿತ್ರರಂಗಕ್ಕೆ ಒಂದು ಹೊಸ ತಿರುವು ತಂದುಕೊಟ್ಟರು. ಅವರ ಸಂಸ್ಕಾರ ಚಿತ್ರವು ರಾಷ್ಟ್ರಪತಿಗಳ ಸ್ವರ್ಣ ಪದಕ ಪಡೆಯಿತಲ್ಲದೇ ವಿದೇಶಗಳಲ್ಲಿ ಸಹ ಕನ್ನಡದ ಕೀರ್ತಿಯನ್ನು ಹಬ್ಬಿಸಿತು.

ಅಂತಾರಾಷ್ಟ್ರೀಯ ಮಾರುಕಟ್ಟೆಯ ಗುತ್ತಿಗೆ ಹಿಡಿದ ಸತ್ಯಜಿತ್‌ರಾಯ್ ಹೆಸರಿನ ಜೊತೆಗೆ ಗಿರೀಶ್‌ರವರ ಹೆಸರು ಕೂಡ ಕೇಳಿಬರತೊಡಗಿತು. ನಟರಾಗಿ, ಸಾಹಿತಿಗಳಾಗಿ ದಿಗ್ದರ್ಶಕರಾಗಿ, ಪೂನಾ ಫಿಲಂ ಇನ್‌ಸ್ಟಿಟ್ಯೂಟಿನಲ್ಲಿ ಡೈರೆಕ್ಟರರಾಗಿ ಅನೇಕ, ದೊಡ್ಡ ಹುದ್ದೆಗಳಲ್ಲಿ ಕೆಲಸಮಾಡಿ ಚಿಕ್ಕ ವಯಸ್ಸಿನಲ್ಲಿಯೇ ಪದ್ಮಶ್ರೀ ಪಡೆದಿದ್ದಾರೆ ಗಿರೀಶ್ ಕಾರ್ನಾಡ್. ನಂತರ ಅನಂತನಾಗ್ ಪ್ರಾಯೋಗಿಕ ಹಾಗೂ ವ್ಯಾಪಾರಿ ಚಿತ್ರಗಳಲ್ಲೂ ನಟಿಸಿ ಖ್ಯಾತರಾಗಿದ್ದಾರೆ. ಈ ಎರಡು ಕೊಡುಗೆ ಉತ್ತರ ಕರ್ನಾಟಕದ್ದು.

ಹೀಗೆ ಈ ದಶಕವು ಉತ್ತರ ಕರ್ನಾಟಕದಲ್ಲಿ ಚಲನಚಿತ್ರ ಉದ್ಯಮದೊಳಗೆ ಬಹು ಮಹತ್ವದ ಪಾತ್ರವಹಿಸಿದೆ ಎಂಬುದನ್ನು ಈ ಮುಂದೆ ಕಾಣಿಸಲಾದ ವಿವರಗಳಿಂದ ಸಾಧ್ಯವಾಗುತ್ತದೆ.

ಪ್ರಪ್ರಥಮವಾಗಿ ೧) ಅಂಕಲಗಿ ೨) ಚಂದಣ್ಣವರ ೩) ಇಂಗಳಗಿ ೪) ಹುಬಳೀಕರ ಸೇರಿಕೊಂಡು ವರ್ಣಚಿತ್ರವನ್ನು ನಿರ್ಮಿಸಿದರು, ಎರಡನೇ ಚಿತ್ರವನ್ನು ಸಿನಿಮಾಸ್ಕೋಪ್‌ದಲ್ಲಿ ನಿರ್ಮಾಣಮಾಡಿದರಲ್ಲದೆ ಕನ್ನಡ ಚಿತ್ರರಂಗದಲ್ಲಿ ಆಗಲಾರದಂತಹ ಕೆಲಸವನ್ನು ಬಹು ಸುಲಭವಾಗಿ ಮಾಡಿ ತೋರಿಸಿದರು. ಇದು ಕೂಡ ಉತ್ತರ ಕರ್ನಾಟಕ ಹೆಮ್ಮೆಪಡಬೇಕಾದ ಸಂಗತಿಯೇ ಆಗಿದೆ. ವಿಜಾಪೂರ ಜಿಲ್ಲೆಯ ಬಸಂತಕುಮಾರ ಪಾಟೀಲರು ಬಿ. ಪಿ. ಫಿಲ್ಮ್ಸ ಲಾಂಛನದಲ್ಲಿ ಚಿತ್ರಗಳನ್ನು ತಯಾರಿಸುತ್ತಿದ್ದು, ಅವರ ಎರಡನೇ ಚಿತ್ರ ಅನುರಾಧಬಂಧನ ಮುಗಿಯುವ ಹಂತದಲ್ಲಿದೆ. ಇದಲ್ಲದೆ ಶ್ರೀ ಪಿ.ಎಲ್. ಬಂಕಾಪೂರ ಅಧ್ಯಕ್ಷರಾಗಿರುವ ಹುಬ್ಬಳ್ಳಿ ಶಕ್ತಿ ಫಿಲ್ಮ್ ಸಿಂಡಿಕೇಟ್ ಎಂಬ ಸಹಕಾರಿ ಸಂಸ್ಥೆಯ ದೇವಮಂದಿರ ಹಾಗೂ ಗುರುರಾಜ ಕಾಟೆಯವರ ರವಿ ಎಂಟರ್ ಪ್ರೈಸಸ್‌ನ 'ಸಂಚಾರಿ, ಹಾಗೂ ಗುಡಗೇರಿ ಸಂಗಮೇಶ್ವರ ಪ್ರೊಡಕ್ಷನ್ಸ್‌ನ ವೀರ ಸಿಂಧೂರ ಲಕ್ಷ್ಮಣ, ತಯಾರಿಕೆ ಹಂತದಲ್ಲಿರುವ ಚಿತ್ರಗಳು ಇನ್ನು ಅನೇಕ ಜನ ಈಗ ಧೈರ್ಯವಾಗಿ ಚಿತ್ರ ನಿರ್ಮಾಣದಲ್ಲಿ ತೊಡಗಿದ್ದಾರೆ.

ಅದೇ ರೀತಿ ಚಲಚಿತ್ರ ಪತ್ರಿಕೋದ್ಯಮದಲ್ಲಿ ಕೂಡ ಉತ್ತರ ಕರ್ನಾಟಕ ಹಿಂದೆ ಬಿದ್ದಿಲ್ಲ. ಇರುವ ಅನೇಕಾನೇಕ ಸಿನಿಮಾ ಪತ್ರಿಕೆಗಳೇ ಇದಕ್ಕೆ ಸಾಕ್ಷಿ.



ಹುಬ್ಬಳ್ಳಿಯವರೇ ತಯಾರಿಸಿದ "ಸಿನಿಮಾಸ್ಕೋಪ್" 'ಸೊಸೆ ತಂದ ಸೌಭಾಗ್ಯ"ದಲ್ಲಿ ಈ ಸೌಭಾಗ್ಯ.

ಹುಬ್ಬಳ್ಳಿ ಧಾರವಾಡ ಮಹಾನಗರ ಸಭೆಯು ಕೂಡ ಚಿತ್ರೋದ್ಯಮದ ಬಗ್ಗೆ ಆಸ್ಥೆ ತಳೆದಿದೆ. ಸುಮಾರು ೪೦೦ ಎಕರೆ ಸ್ಥಳವನ್ನು ಅದು ಸ್ಟುಡಿಯೋ ನಿರ್ಮಾಣಕ್ಕಾಗಿ ಕಾದಿರಿಸಿದೆ. ಆದರೆ ಇಂದು ಉತ್ತರ ಕರ್ನಾಟಕಕ್ಕೆ ಸ್ಟುಡಿಯೋಕ್ಕಿಂತ ಮುಖ್ಯವಾಗಿ ಬಾಹ್ಯ ದೃಶ್ಯಗಳ ಚಿತ್ರೀಕರಣಗಳ ಸಲಕರಣೆಗಳ (Out door Unit) ಆವಶ್ಯಕತೆ ಹೆಚ್ಚಾಗಿದೆ ಎನ್ನಬೇಕು. ಏಕೆಂದರೆ ಇಲ್ಲಿಯ ನಿಸರ್ಗ ರಮಣೀಯ ದೃಶ್ಯಗಳನ್ನು ಚಿತ್ರೀಕರಿಸಿಕೊಳ್ಳಲಿಕೆ ನಾವೂ ಬೆಂಗಳೂರು, ಮೈಸೂರು, ಮದ್ರಾಸ್‌ಗಳಿಂದ ಸಲಕರಣೆಗಳನ್ನು ತರಿಸಿಕೊಳ್ಳಬೇಕಾಗುತ್ತದೆ. ಅವುಗಳ ಬದಲು ಮಧ್ಯವರ್ತಿಯಾದ ಹುಬ್ಬಳ್ಳಿ ಧಾರವಾಡದಲ್ಲಿಯೂ ಒಂದು ಸಕಲ ಸಲಕರಣೆಗಳುಳ್ಳ (Out door unit Equipment van) ವ್ಯವಸ್ಥೆ ಆದರೆ ಐಹೊಳೆ ಪಟ್ಟದಕಲ್ಲು, ಬದಾಮಿ, ಜೋಗ್, ಕಾರವಾರ, ದಾಂಡೇಲಿ, ಯಾಣ ಮುಂತಾದ ನಿಸರ್ಗ ಸೌಂದರ್ಯದ ಐತಿಹಾಸಿಕ ಸ್ಥಳಗಳನ್ನು ಸ್ವಲ್ಪ ವೆಚ್ಚದಲ್ಲಿಯೇ ಸೆಲ್ಯೂಲಾಯಿಡ್‌ನಲ್ಲಿ ಸೆರೆಹಿಡಿದು ನಿರ್ಮಾಪಕ ವೆಚ್ಚವನ್ನು ತಗ್ಗಿಸಬಹುದು. ಏಕೆಂದರೆ ಹೊಸ ಅಲೆಯ ದಿಗ್ದರ್ಶಕರು ಸ್ಟುಡಿಯೋಗಳಿಗಿಂತಲೂ ನಿಸರ್ಗ ರಮಣೀಯವಾದ ವಾತಾವರಣದಲ್ಲಿಯೇ ಚಿತ್ರೀಕರಣ ನಡೆಸುವದು ಒಳ್ಳೆಯದೆಂಬ ಖಚಿತ ಅಭಿಪ್ರಾಯ ಉಳ್ಳವರಾಗಿದ್ದಾರೆ. ಕಾರಣ ಬಂಡವಲುದಾರರು ಉತ್ತರ ಕರ್ನಾಟಕದಲ್ಲಿ ಚಲನಚಿತ್ರ ಅಭಿವೃದ್ಧಿಯೆಡೆಗೆ ಲಕ್ಷ್ಯ ಹಾಕಿ (Out door unit van ) ಬಾಹ್ಯ ದೃಶ್ಯಗಳ ಚಿತ್ರೀಕರಣಕ್ಕೆ ಬೇಕಾಗುವ ಸಲಕರಣೆಗಳುಳ್ಳ ಒಂದು ವಾಹನವನ್ನು ತಂದರೆ ಅಭಿವೃದ್ಧಿಯ ಜೊತೆಗೆ ತಂದವರಿಗೂ ಲಾಭ ಆಗುತ್ತದೆ ಎಂದು ನನ್ನ ಅಭಿಪ್ರಾಯ.

ಇನ್ನು ಮುಂದೆ ಚಲನಚಿತ್ರ ಚಟುವಟಿಕೆಗಳು ಬೆಂಗಳೂರಿನಷ್ಟೇ ಹುಬ್ಬಳ್ಳಿಯಲ್ಲಿ ನಡೆದುಕೊಂಡು ಹೋಗುವಂತಹ ಸಮಯ ಈಗ ಬಂದಿರುವುದರಿಂದ ಅದಕ್ಕೆ ಸರಕಾರ ಸಹ ತನ್ನ ಗಮನವನ್ನು ಉತ್ತರ ಕರ್ನಾಟಕದಲ್ಲಿ Industry ಅಭಿವೃದ್ಧಿಪಡಿಸಲು ಹರಿಸಬೇಕೆಂಬುದು ನನ್ನ ಅಭಿಪ್ರಾಯ.

●●●



# ಮುಂಬೈ ಮೂಲಕ ಕನ್ನಡ ಚಿತ್ರರಂಗಕ್ಕೆ ಬಂದ ವಾಮನ್



ಸಾಮಾನ್ಯವಾಗಿ ಚಲನಚಿತ್ರರಂಗದ ಬೆನ್ನು ಹತ್ತುವವರ ಮೊದಲ ಆಕರ್ಷಣೆ ಬಾಂಬೆ. ಅವಕಾಶ ಹಿಂದಿಯಲ್ಲಿ ಸಿಕ್ಕರೆ ಸಾಕು. ಒಂದೇ ದಿನದಲ್ಲಿ ಪ್ರಸಿದ್ಧಿಯಾಗುವ ಕಾತರ. ಈ ಚಾನ್ಸು ಸಿಕ್ಕೂ ಕನ್ನಡದಲ್ಲೇ ನಾನು ನಟಿಸಬೇಕು, ಎಂದು ಬಾಂಬೆಯಿಂದ ಬೆಂಗಳೂರಿಗೆ ತಮ್ಮ ಹೆಜ್ಜೆಯನ್ನು ಹಿಂತೆಗೆದುಕೊಂಡವರು ಇವರು. ಹೊಸ ನಟ. ಆರಂಭದಲ್ಲಿ ಇಟ್ಟದ್ದು ಪುಟ್ಟ ಹೆಜ್ಜೆ ಈಗ ಹೆಜ್ಜೆಯ ಮೇಲೊಂದು ಹೆಜ್ಜೆ.

'ಮದರ್' ಚಿತ್ರದ ನಾಯಕನಟ 'ವಾಮನ್'ಗೆ ಕನ್ನಡ ಚಲನಚಿತ್ರರಂಗದ ಮೆಟ್ಟಲು ಏರುವ ಬಯಕೆ.

'ಕೋಟಿ ಚೆನ್ನಯ್ಯ'ನ ಕತೆ ಯಾರಿಗೆ ತಿಳಿದಿಲ್ಲ? ತುಳು ಚಿತ್ರ 'ಕೋಟಿ ಚೆನ್ನಯ್ಯ' ಬಿಡುಗಡೆಯಾದಾಗ ಎಲ್ಲರ ಬಾಯಲ್ಲೂ ಚೆನ್ನಯ್ಯನದೇ ಮಾತು. ಹಾಗೆ ಪಾತ್ರಕ್ಕೆ ಜೀವ ತುಂಬಿದವರು ವಾಮನ್.

ವಿಶುಕುಮಾರರ 'ಮದರ್'ನಲ್ಲಿ ಆ್ಯಂಟಿ ಹೀರೋ ಪಾತ್ರ. 'ಅಮೃತ ಕಳಶ'ದಲ್ಲೂ ಒಂದು ಪಾತ್ರ. ವಾಮನ್ ಈಗ ಬಿಡುವಿಲ್ಲದ ನಟ.

ನೂರೈವತ್ತಕ್ಕೂ ಹೆಚ್ಚು ನಾಟಕಗಳಲ್ಲಿ ನಟಿಸಿರುವ ಈ ನಟನಿಗೆ ನಾಟಕಕ್ಕಿಂತ ಸಿನಿಮಾ ಮಾಧ್ಯಮವೇ ಹೆಚ್ಚು ಸೂಕ್ತ ಎಂಬ ಭಾವನೆ. 'ರಿಹರ್ಸಲ್ ಇತ್ಯಾದಿ ಇತ್ಯಾದಿ ಮಾಡಿ ದಿನಾ ಒಂದೇ ತರಹದ ನಟನೆ ಮಾಡೋದಕ್ಕಿಂತ, ಕ್ಯಾಮರಾ ಮುಂದೆ ಒಂದೇ ಬಾರಿ ನಟಿಸಿದರೆ ಸಾಕಲ್ಲ.' ಈ ಸಾಧ್ಯತೆ ನಾಟಕದಲ್ಲಿ ಸಾಧ್ಯವಿಲ್ಲ. ನಾಟಕದಲ್ಲಿ ಒಬ್ಬ ನಟನಿಗೆ ಹೆಚ್ಚು ತೃಪ್ತಿ ಸಿಗುವುದು ಸಾಧ್ಯವಾದರೂ 'ಟೆಂಪೋ ಬಿಲ್ಡ್' ಆಗೋದಿಲ್ಲ ನೋಡಿ. ವಾಮನ್‌ಗೆ ಎರಡರಲ್ಲೂ ಅನುಭವ.

ವಿಶುಕುಮಾರ್ ಒಬ್ಬ ಒಳ್ಳೆಯ ನಿರ್ದೇಶಕರು. ಅವರ ಜೊತೆ ಇರುವುದೆಂದರೆ ನನಗೆ ಹೆಮ್ಮೆಯ ವಿಷಯ. 'ಮದರ್'ನಲ್ಲಿ ಆ್ಯಂಟೀ ಹೀರೊ ಪಾತ್ರ ನನಗೆ ಬಹು ಹಿಡಿಸಿದ ಪಾತ್ರ. ವಾಮನ್‌ಗೆ ಚೆನ್ನಯ್ಯನ ಪಾತ್ರದ ಇಮೇಜ್ ಅನ್ನು ಉಳಿಸಿಕೊಳ್ಳುವಾಸೆ ಹಾಗೆ ನಟಿಸುತ್ತಿರುವ ತೃಪ್ತಿ.

ಮರಾಠಿ ರಂಗಭೂಮಿಯನ್ನೇರಿ, ಬಾಂಬೆಯಲ್ಲಿ ನಾಟಕಗಳ ಮೇಲೆ ನಾಟಕಗಳನ್ನಾಡುತ್ತಿದ್ದ ವಾಮನ್‌ಗೆ ತಕ್ಕ ಜೊತೆ ಅನಂತನಾಗ್. 'ಬೋರಾ' ನಾಟಕದಲ್ಲಿಯಂ ಖ್ಯಾತಿಯ ಶಿಖರ ವಾಮನ್‌ಗೆ. ಜೊತೆಗೆ ಉತ್ತಮ ನಟನೆಂಬ ಕಿರೀಟ. ವಾಮನ್‌ಗೆ ಆಗ ಜಂಭ ಬರಲಿಲ್ಲ. ಕಲೆಯ ಬಗ್ಗೆ ಮತ್ತಷ್ಟು ಹುಚ್ಚಿಡಿಯಿತು. ಅದೇ ಸ್ಫೂರ್ತಿಯನ್ನು ಉಳಿಸಿಕೊಳ್ಳುತ್ತಾ ಬಂದರು. ಈಗ 'ಮದರ್'ನಲ್ಲಿ ಇರುವ ನಾಯಕ ಪಾತ್ರದ ಬಗ್ಗೆ ಅವರಿಗೆ ನಂಬುಗೆಯಿದೆ. ಅದರೊಂದಿಗೇ ಈಗ ಬೇರೆ ಸಿನಿಮಾಗಳಿಗೂ ಕರೆ ಬರುತ್ತಿದೆ. ವೈ.ಆರ್. ಸ್ವಾಮಿಯವರ 'ಕುದುರೆ ಮುಖ'ದಲ್ಲೂ ಒಂದು ಪಾತ್ರವಿದೆ. 'ಅಮೃತ ಕಳಶ' ಚಿತ್ರದಲ್ಲೊಂದು ಪಾತ್ರ. ತುಳು: 'ಬಂಗಾರದ ಕುರಲ್'ನಲ್ಲೊಂದು. ವಾಮನ್ ಚಲನಚಿತ್ರರಂಗದಲ್ಲಿ ಇಡುತ್ತಿರುವ ಹೆಜ್ಜೆಗಳು ಇವು. ಒಂದೊಂದೇ ಒಂದೊಂದೇ ಸಾಲು. ವಾಮನ್‌ಗೆ ಇದು ಉತ್ತಮ ಭವಿಷ್ಯದ ರೇಖೆ.

ಮಂಗಳೂರು ವಾಮನ್‌ರ ವಾಸಸ್ಥಳ. ಬಾಂಬೆಯಲ್ಲಿ ಸ್ಟೇಟ್‌ಪೋರ್ಟ್ ಆಫೀಸಿನಲ್ಲಿ ಹುದ್ದೆ. ಚಿಕ್ಕಂದಿನಿಂದಲೂ ಕಲಾರಂಗದಗೀಳು. ಬಾಂಬೆಯಲ್ಲಿ ಅದಕ್ಕೆ ಕುಮ್ಮಕ್ಕು. ಚಿಕ್ಕಂದಿನಿಂದ ಇದುವರೆಗೆ ಆಡಿರುವ ನಾಟಕಗಳಿಗೇನೂ ಕೊರತೆಯಿಲ್ಲ. ನೂರೈವತ್ತಕ್ಕೂ ಮಿಗಿಲಾಗಿ ನಾಟಕಾಭಿನಯ. ಇದು ಕಡಿಮೆ ಎಂಬ ಭಾವನೆ ಈ ಹವ್ಯಾಸಿಗೆ. 'ನಟ ತನ್ನದನ್ನು ಪ್ರೇಕ್ಷಕರಿಗೆ ಅರ್ಪಿಸಿ ಸೈ ಅನ್ನಿಸಿಕೊಳ್ಳಬೇಕು' ಎಂಬ ಛಲ. ಇಂಗದ ದಾಹ.

ಸಿನಿಮಾ–ನಾಟಕದ ವ್ಯತ್ಯಾಸ ವಾಮನ್‌ಗೆ ಈಗ ಸ್ಪಷ್ಟವಾಗಿ ಅರಿವಾಗತೊಡಗಿದೆ. 'ನಾಟಕದಲ್ಲಿ ಲಿಬರ್ಟಿಯಿರುತ್ತೆ'ಎನ್ನುವ ಅನುಭವವಾಗತೊಡಗಿದೆ. ಸಿನಿಮಾದಲ್ಲಿ ಡೈರೆಕ್ಟರ್ ಎದುರು ಇರುತ್ತಾರೆ. ಅದರೆ ಡೈರೆಕ್ಟರರನ್ನು ಅರ್ಥ ಮಾಡಿಕೊಂಡು ಬಿಟ್ಟರೆ ಸಮಸ್ಯೆಯಿಲ್ಲ' ವಾಮನ್‌ರ ಅನುಭವ.

ನಾಟಕಗಳ ಮೇಲೆ ನಾಟಕಗಳನ್ನಾಡಿದ ವಾಮನ್‌ಗೆ ನಾಟಕ ಒಂದು ರೀತಿಯಲ್ಲಿ ಬೇಸರ. ಎರಡು ಮೂರು ತಿಂಗಳು ರಿಹರ್ಸಲ್ ಮಾಡಿ, ಒಂದೆರಡು ಸಲ ಮಾತ್ರ ಪ್ರೇಕ್ಷಕರ ಎದುರು ಅಭಿನಯಿಸೋದು. ಆದರೆ

ಸಿನಿಮಾದಲ್ಲಿ ಹಾಗಲ್ಲ ನೋಡಿ. ಒಂದು ಸಲ ನಮ್ಮನ್ನು ನಾವು ಕಲೆಗೆ ಅರ್ಪಿಸಿಕೊಂಡರೆ ಸಾಕು. ದಿನಾ ಮಾಡಬೇಕಿಲ್ಲ. ಆ ಒಂದು ಸಾಧನೆ ಸಿನಿಮಾದಲ್ಲಿದೆ. ಆದ್ದರಿಂದ ವಾಮನ್‌ಗೆ ನಾಟಕಕ್ಕಿಂತ ಸಿನಿಮಾ ಮಾಧ್ಯಮದ ಮೇಲೆಯೇ ಹೆಚ್ಚು ಇಷ್ಟ.

## ಸಿಂಗಲ್ ಟೇಕ್ ಹೀರೋ

ವಾಮನ್‌ಗೆ ಕಲೆ, ಕಲೆ, ಕಲೆ ಎಂಬ ಗುಂಗೇ ಸದಾ ತಲೆ ತುಂಬ ಇರುವುದರಿಂದ ಕಲೆಯ ನೀಡಿಕೆಯ ಸಂದರ್ಭದಲ್ಲಿ ಅವರು ಅದರಲ್ಲೇ ತನ್ಮಯರಾಗಿ ಬಿಡುತ್ತಾರೆ. ಇದರಿಂದ ಕಟ್, ಕಟ್, ಕಟ್, ಕಟ್ ಎಂದು ನಿರ್ದೇಶಕ ಬೊಬ್ಬೆ ಹಾಕಬೇಕಾದ ಅಗತ್ಯವಿಲ್ಲ. ಆದರಿಂದಲೇ ವಾಮನ್‌ಗೆ ಸಿಂಗಲ್‌ಟೇಕ್ ಹೀರೋ ಎಂಬ ಮಾತು ಅಂಟಿಕೊಂಡು ಬಂದಿದೆ. ಸಹಜ ಸನ್ನಿವೇಶಗಳು ಸಹಜವಾಗಿಯೇ ಬರಬೇಕೆಂಬ ನಿಲುವು ವಾಮನ್‌ರದು. ಇತ್ತೀಚಿನ ಜೀಪ್ ಅಪಘಾತ ಅದಕ್ಕೆ ಸಾಕ್ಷಿ. ಡ್ಯೂಪ್ ಬೇಡ ಎಂದು ತಾನೇ ಒಂದು ಭೀಕರ ಸನ್ನಿವೇಶದಲ್ಲಿ ಹೋರಾಡ ಹೋಗಿ ಜೀಪು ಉರುಳಿದ್ದು... ಇತ್ಯಾದಿ.

ಇದೆಲ್ಲಾ ಬಯಸುವ ವಾಮನ್‌ಗೆ 'ಮದರ್'ನಲ್ಲೊಂದು ಒಳ್ಳೆಯ ಪಾತ್ರ. ಆ್ಯಂಟೀ ಹೀರೋ ಆದರೂ ಒಂದು ರೀತಿಯ ಗಮ್ಮತ್ತು ಅದರಲ್ಲಿ. ನಾಯಕನಾದಾಗ... ಎಂಬ ಏನೆಲ್ಲ ಕನಸು ಕಾಣಬಹುದೋ ಅದೆಲ್ಲಕ್ಕೂ ಇದರಲ್ಲಿ ಅವಕಾಶ. ಆದ್ದರಿಂದಲೇ ವಾಮನ್‌ಗೆ ಈ ಪಾತ್ರ ಬಹಳ ಹಿಡಿಸಿದ್ದು.

'ವಿಶುಕುಮಾರ್' ತನ್ನನ್ನು ಬೆನ್ನು ತಟ್ಟಿ ಚಿತ್ರರಂಗಕ್ಕೆ ಕರೆ ತಂದರು. ಪಾತ್ರದಲ್ಲಿ ತನ್ಮಯತೆಯನ್ನು ಕಲಿಸಿದರು. ಎಲ್ಲಕ್ಕಿಂತ ಮುಖ್ಯವಾಗಿ ಪಾತ್ರಕ್ಕೆ ತಕ್ಕ ವ್ಯಕ್ತಿಯನ್ನಾರಿಸುವ ದೊಡ್ಡ ಗುಣ ಅವರಲ್ಲಿದೆ– ವಿಶುಕುಮಾರ್‌ಗೆ ವಾಮನ್ ಕೃತಜ್ಞತೆ.

ಅಭಿನಯಿಸಲೇ ಕಷ್ಟವಾದ ಪಾತ್ರಗಳನ್ನು ವಹಿಸುವುದರಲ್ಲೇ ಈ ನಟನಿಗೆ ಬಲು ಆಸಕ್ತಿ. ನಾಟಕಗಳಲ್ಲೆಲ್ಲಾ ಇಂಥ ಪಾತ್ರಗಳೇ ಉದ್ದಕ್ಕೂ ಸವಾಲು. ಸವಾಲನ್ನು ಸ್ವೀಕರಿಸುವುದರಲ್ಲಿ ಅದಕ್ಕೆ ಜವಾಬು.

'ಸಿನಿಮಾ' ಪ್ರೇಕ್ಷಕರಿಗೆ 'ಕಲಿಸಬೇಕು' ಎನ್ನುವ ವಾಮನ್‌ಗೆ ಇದೊಂದು 'ಸೋಶಿಯಲ್ ವರ್ಕ್' ಎಂಬ ಭಾವನೆ.

ಹುಮ್ಮಸ್ಸು, ಆಸಕ್ತಿ, ಸಾಮರ್ಥ್ಯಗಳ ಖಜಾನೆಯೊಡನೆಯೇ ದಿಢೀರನೆ ಎದ್ದು ನಿಂತ ವಾಮನ್‌ರ ಹೆಜ್ಜೆಯ ಮುಂದಿನ ಮಜಲು ಸ್ಕ್ರೀನು ತುಂಬಾ ತುಂಬಿಕೊಂಡರೆ ಇದರಲ್ಲಿ ಆಶ್ಚರ್ಯವೇನಿಲ್ಲ.

–ಸಮುದ್ರಗುಪ್ತ





# ಜಗದ್ವಿಖ್ಯಾತ ನಿರ್ದೇಶಕ ಇಂಗ್ಮರ್ ಬರ್ಗ್‌ಮನ್

ಎ. ಎನ್. ಪ್ರಸನ್ನ

ಇಂಗ್‌ಮರ್ ಬರ್ಗ್‌ಮನ್ ಚಲನಚಿತ್ರದ ಬೆರಗು. ಅವರು ಆ ಕಲಾ ಪ್ರಕಾರಕ್ಕೆ ಕೊಟ್ಟ ಕಾವು ಎಂಥವರನ್ನೂ ಅಲ್ಲಾಡಿಸುವಂಥದು. ಪತ್ರಕರ್ತನೊಬ್ಬನಿಗೆ ಅವರು ಹೇಳಿದರು: ನನ್ನ ಚಿತ್ರಗಳನ್ನು ಜನ ಅರ್ಥ ಮಾಡಿಕೊಳ್ಳಬೇಕಿಲ್ಲ; ಅನುಭವಿಸಿದರೆ ಸಾಕು. ಯಾವನಾದರೊಬ್ಬ ಅವರ ಚಿತ್ರ ಅರ್ಥವಾಯಿತೆಂದು ಮೆಚ್ಚುಗೆ ವ್ಯಕ್ತಪಡಿಸಲು ಬಂದರೆ ಅವನನ್ನು, ಅವನ ಉದ್ದೇಶವನ್ನು ಬರ್ಗ್‌ಮನ್ ಅನುಮಾನಿಸುತ್ತಾರೆ.

ಚಲನಚಿತ್ರವೊಂದು ತಮ್ಮಲ್ಲಿ ತೆರೆದುಕೊಳ್ಳುವುದನ್ನು ಪ್ರಸ್ತಾಪಿಸಿ, ಸಾಮಾನ್ಯವಾಗಿ ಒಂದು ಪ್ರತಿಮೆಯೊಂದಿಗೆ ಅದರ ಪ್ರಾರಂಭ; ಒಂದು ಮುಖ, ಇದ್ದಕ್ಕಿದ್ದಂತೆ ಬೆಳಗಿದ ಮುಖ; ಎತ್ತಿದ ಕೈ; ಹಳ್ಳಿಯ ಹೆಂಗಸರು ಮುಂಜಾವಿನಲ್ಲಿ ಬೆಂಚಿನ ಮೇಲೆ ಕುಳಿತಿದ್ದರೆ ಅಲ್ಲಿ ಆಚೆ ದೂರದಲ್ಲಿ ಸೇಬು ತುಂಬಿದ ಚೀಲ; ಅಥವಾ ಅನೇಕ ಮೇಳೆ ವ್ಯಕ್ತಿಗಳಿಬ್ಬರ ಮಧ್ಯೆ ತೀರ ಆತ್ಮೀಯವಾದ ಒಂದೆರಡು ಮಾತುಗಳು... ಇವೆಲ್ಲ ಪ್ರತಿಮೆಗಳು ಬಲೆಯಲ್ಲಿ ಬಿದ್ದ ಮೀನುಗಳಂತೆ; ಅಥವಾ ನಾನೇ ಬಲೆಯಲ್ಲಿ ಬಿದ್ದ ಮೀನಿನ ಹಾಗೆ, ಅನಿರ್ದಿಷ್ಟ ರಚನೆಯ ಹಾಗೆ ಸ್ಪಷ್ಟವಾಗಿ ತಿಳಿಯದೆನ್ನುತ್ತಾರೆ.

ಬರ್ಗ್‌ಮನ್ ಅವರಿಗೆ ಸೃಜನಶೀಲತೆ ಹಾಗೆ ನಿಷ್ಠೆ ತೀವ್ರ. ಇಂತಹ ಒತ್ತಾಸೆಗೆ ಅವರು ಕಾರಣಗಳನ್ನು ಹುಡುಕಲು ತೊಡಗಿರಲಿಲ್ಲ. ಇತ್ತೀಚೆಗೆ ಅದರ ತೀವ್ರತೆ ಕಡಿಮೆಯಾದದ್ದಲ್ಲದೆ ಕೊಂಚ ಬದಲಾವಣೆಯಾದಂತೆ ಅವರಿಗೆನಿಸಿದೆ. ಇದರಿಂದಾಗಿ ಸೃಜನಶೀಲತೆಗೆ ಕಾರಣಗಳನ್ನು ತಿಳಿಯಲು ಅವರಿಗೆ ಅಪೇಕ್ಷೆಯಾಯಿತು. ಹೀಗೆಂದಾಗ ಅವರಲ್ಲಿ ಮೆಲ್ಲನೆ ಸುರುಳಿ ಬಿಚ್ಚುತ್ತದೆ; ಬಾಲ್ಯದ ನೆನಪುಗಳು ಹರಡಿಕೊಳ್ಳುತ್ತವೆ.

ಬರ್ಗ್‌ಮನ್‌ಗೆ ಆಗ ಹತ್ತು ವರ್ಷ. ಅವರಿಗೊಂದು **Magic Lantern** ಸಿಕ್ಕಿತು. ಅದರ ಸಹಾಯದಿಂದ ಮೊಟ್ಟ ಮೊದಲು ಚಲನಚಿತ್ರದ ತುಣುಕು ನೋಡುತ್ತಿದ್ದುದನ್ನು ತಿಳಿಸುತ್ತಾ ಅದೊಂದು ಮೂರು ಮೀಟರ್ ಉದ್ದದ ಚಿತ್ರ; ಮೈದಾನಿನಲ್ಲಿ ಮಲಗಿದ ಹುಡುಗಿಯೊಬ್ಬಳು ಎದ್ದು ನಿಂತು ಕೈಗಳನ್ನು ವಿಸ್ತರಿಸಿ ಬಲಭಾಗದಲ್ಲಿ ಮರೆಯಾಗುವ ಚಿತ್ರ; ಈ ಚಿತ್ರವನ್ನು ಪ್ರತಿದಿನ ಅದು ಚಿಂದಿಯಾಗುವವರೆಗೂ ನೋಡಿದೆ ಎನ್ನುತ್ತಾರೆ. ಇದಲ್ಲದೆ ಅವರಿಗಾಗ ಚಿತ್ರ ಬರೆಯುವುದರಲ್ಲಿ, ಆಟದಲ್ಲಿ, ಈಜುವುದರಲ್ಲಿ ಆಸಕ್ತಿಯಿತ್ತು. ಉತ್ತಮ ಮಟ್ಟ ಸಾಧಿಸುವ ಹಂಬಲವಿತ್ತು. ದೊಡ್ಡವರ ಗಮನ ತಮ್ಮ ಕಡೆ ಸೆಳೆಯುವ ಅಪೇಕ್ಷೆಯಿತ್ತು. ಆದರೆ ಅವರೆಲ್ಲ ನಿರ್ಲಕ್ಷಿಸುತ್ತಿದ್ದಾರೆಂದು ತಿಳಿದಾಗ ಮುತ್ತಿಕೊಂಡದ್ದು ಮುಜುಗರ. ಇದರಿಂದ ಹೊರಬರಲು ಸ್ನೇಹಿತರಿಗೆ ತಮ್ಮ ಸಾಹಸ ಕಲ್ಪಿತ ಕಥೆಗಳನ್ನು ಹೇಳತೊಡಗಿದರು. ಅವೆಲ್ಲ ಬರಿ ಸುಳ್ಳಿನ ಕಂತೆಯೆಂದು ಸುತ್ತಲಿನವರಿಗೆಲ್ಲ ತಿಳಿದು ಅವ್ರ ಯೋಜಕವಾಯಿತು. ಅನಂತರ ಎಲ್ಲರಿಂದ ದೂರವಾಗಿ ಅವರು ಶೇಖರಿಸತೊಡಗಿದ್ದು ಕನಸುಗಳನ್ನು. ಇವೆಲ್ಲವುಗಳಿಂದಾಗಿ ಎಲ್ಲರೊಂದಿಗೆ ಬೆರೆಯಲು, ಒಟ್ಟೊಟ್ಟಿಗೆ ಬರುವ ತಮ್ಮ ಕಲ್ಪನೆಗಳನ್ನು ಹಂಚಿಕೊಳ್ಳಲು ಬಯಸಿದ ಬರ್ಗ್‌ಮನ್ ಅವರ ಬಾಲ್ಯನೊಂದ, ಸೊರಗಿದ, ಹಗಲುಗನಸು ಕಾಣುವ ದಿನಗಳಾದವು.

ಜನರು ತಮ್ಮನ್ನು ಕೇಳಿಸಿಕೊಳ್ಳಬೇಕೆಂಬ, ಅವರೊಂದಿಗೆ ಸಂಭಾಷಿಸಬೇಕೆಂಬ ಅಗತ್ಯ ಬರ್ಗ್‌ಮನ್ ಅವರಿಗೆ ಒಂಟಿಯಾದಷ್ಟೂ ಹೆಚ್ಚಾಯಿತು. ಆಗಲೇ ಅವರು ಚಲನಚಿತ್ರವನ್ನು ಅಭಿವ್ಯಕ್ತಿ ಮಾಧ್ಯಮವನ್ನಾಗಿ ಮಾಡಿಕೊಂಡಿದ್ದು. ತಮಗೆ ಯಾವಾಗಲೂ ಕೈಕೊಟ್ಟ ಮಾತು, ಸಾಧಿಸಲಾಗದ ಸಂಗೀತ, ಎಟುಕದ ಚಿತ್ರಕಲೆ, ಇವೆಲ್ಲವನ್ನೂ ಮೀರಿದ ಭಾಷೆಯಿಂದ ಜನರಿಗೆ ತಿಳಿಯುವಂತಾದದ್ದು ಅನಂತರದ ಸತ್ಯ. ಯಾವುದೇ ವ್ಯಕ್ತಿಯೊಂದಿಗೆ ಬುದ್ಧಿಯ ನೆರವನ್ನು ಹೆಚ್ಚಾಗಿ ಅವಲಂಬಿಸದ ಭಾಷೆಯಲ್ಲಿ ಸಂವಾದಿಸುವುದು ಬರ್ಗ್‌ಮನ್ ಅವರಿಗೆ ಸಾಧ್ಯವಾಯಿತು. ಈ ಇಪ್ಪತ್ತು ವರ್ಷ

ಗಳಲ್ಲಿ ಇಡೀ ಪ್ರಪಂಚಕ್ಕೆ ಕನಸು, ಕಲ್ಪನೆ, ಪುಳಕ, ಅತಿರೇಕ ಮುಂತಾದವುಗಳನ್ನು ಅವರು ತಂದು ಕೊಟ್ಟಿದ್ದಾರೆ. ಚಲನಚಿತ್ರ ನಿರ್ದೇಶಕರಾಗಿ ಅವರ ಹಿರಿಮೆ ದಂಗುಬಡಿಸುವಂಥಾದ್ದು. ಆದರೆ ಈ ಗೆಲುವಿನ ಬಗ್ಗೆ ಅವರಿಗೆ ಹುಚ್ಚು ಭ್ರಮೆಗಳಿಲ್ಲ. ಇದರರ್ಥ ಅವರು ತಮ್ಮ ಹಿರಿಮೆಯನ್ನು ಕಡಿಮೆಯೆಂದು ಪರಿಗಣಿಸುತ್ತಾರೆ ಎಂದಲ್ಲ. ಆದರೆ ಅವುಗಳನ್ನು ಕುರಿತು ಭಾವಾತಿರೇಕವಲ್ಲದ ದೃಷ್ಟಿಯಿಂದ ನೋಡುತ್ತಾರೆ. ಅವರು ಹೇಳುತ್ತಾರೆ: ಈಗಲೂ ನಾನು ಭ್ರಾಮಕ (Illusionist) ಎಂದು ಅರಿತಾಗ ಪುಳಕಿತನಾಗುತ್ತೇನೆ; ಬಾಲ್ಯವನ್ನು ಮರು ಜೀವಿಸುತ್ತೇನೆ.

ಬರ್ಗ್‌ಮನ್ ನಾಟಕಕಾರ, ನಾಟಕ ನಿರ್ದೇಶಕ. ರಂಗಭೂಮಿ ಮತ್ತು ಚಲನಚಿತ್ರಗಳನ್ನು ಸಮಾನವಾಗಿ ತೂಗಿಸಿಕೊಂಡು ಬಂದ ವ್ಯಕ್ತಿ. ರಂಗಭೂಮಿ ವಿಧೇಯ ಹೆಂಡತಿ; ಚಲನಚಿತ್ರ ಸಾಹಸವನ್ನು ಅಪೇಕ್ಷಿಸುವ ಪ್ರೇಯಸಿ. ಇಬ್ಬರನ್ನೂ ಪ್ರೇಮಿಸುತ್ತೇನೆ–ಎನ್ನುತ್ತಾರೆ ಬರ್ಗ್‌ಮನ್. ಅವರಿಗೆ ಜಾನಪದ ಸಂಪ್ರದಾಯ ಮತ್ತು ಇದಕ್ಕಿಂತಲೂ ಹೆಚ್ಚು ಸಂಕೀರ್ಣವಾದ ನವೀನ ರಂಗಭೂಮಿಯ ಸಂಪ್ರದಾಯದ ಅರಿವಿದೆ.

ಬರ್ಗ್‌ಮನ್ ಭೂತದಲ್ಲಿ ಬೇರು ಬಿಟ್ಟವರು. ಅವರ ಪ್ರಾರಂಭದ ಚಿತ್ರಗಳಂತೂ ಸಾಂಪ್ರದಾಯಿಕ ವಿಷಯಗಳಿಗೆ ಸಂಬಂಧಿಸಿವೆ. ಬರ್ಗ್‌ಮನ್ ಬಳಸುವ ರೂಪಕ ವಿಧಾನ ಅವರ ಕಲ್ಪನಾಕ್ರಮಕ್ಕೆ ತೀರ ಬಿಗಿಗೊಂಡ ರೀತಿಯದು. ಈ ವಿಧಾನ ಆಗಿನ ಸ್ವೀಡನ್ನಿನ ಎಲ್ಲ ಗಂಭೀರ ದೃಷ್ಟಿಯ ನಿರ್ದೇಶಕರು ಬಳಸುತ್ತಿದ್ದರು. ಅಲ್ಲದೆ ಅದು ಸ್ಟ್ರಿಂಡ್‌ಬರ್ಗ್ ಮತ್ತು ಇಬ್ಸನ್ ರೂಪಕಗಳ ಆಧಾರದ ಮೇಲೆ ನಾಟಕಗಳನ್ನು ರಚಿಸಿದ ಕಾಲ. ಇವರ ನಾಟಕಗಳಿಂದ ಬರ್ಗ್‌ಮನ್ ಪ್ರಭಾವಿತರಾಗಿರುವುದನ್ನು ಗುರುತಿಸಬಹುದು. ಸ್ಟ್ರಿಂಡ್‌ಬರ್ಗ್‌ನ The Road to Damascus ನಾಟಕ ಬರ್ಗ್‌ಮನ್ ನಿರ್ಮಿಸಿದ Wild Straw bervies ಚಲನ ಚಿತ್ರಕ್ಕೆ ಸ್ಫೂರ್ತಿ ಕೊಟ್ಟಿತಲ್ಲದೆ ಈ ಚಿತ್ರದ ಉದ್ದೇಶ ಮತ್ತು ಇಬ್ಸನ್ನನ John Gabriel Borkman. When we Dead Awaken ನಾಟಕಗಳ ಉದ್ದೇಶದಲ್ಲಿ ಹಲವು ಸಮಾನ ಅಂಶಗಳನ್ನು ಕಾಣಬಹುದು.

ಪ್ರೇಕ್ಷಕರ ಸೂಕ್ಷ್ಮಾತಿಸೂಕ್ಷ್ಮ ಭಾವನಾ ಸ್ತರಗಳನ್ನು ಹೆಚ್ಚು ಹೆಚ್ಚು ಬೆಳಗಿಸಬಲ್ಲ ಪ್ರಭಾವ ಪೂರ್ಣ ಉಪಕರಣವೊಂದು ತಮ್ಮ ಕೈಯಲ್ಲಿದೆ ಎನ್ನುವ ಭಾವನೆ ಸದಾ ತಮ್ಮ ಜೊತೆಯಲ್ಲಿದೆ. ಆದರೆ ನಿರ್ಭಿಡೆಯಿಂದ ಹೇಳುವುದಾದರೆ ಕಲೆ (ಸಿನಿಮಾ ಮಾತ್ರವಲ್ಲ) ಈ ಕಾಲದಲ್ಲಿ ತೀರ ಅಮುಖ್ಯ ಜೀವನದ ಗತಿ ಹಾಗೂ ಅದರ ಬೆಳವಣಿಗೆಗೆ ಅದು ಪ್ರಭಾವ ಬೀರುವ ಸಾಧ್ಯತೆಯಿಲ್ಲವೆಂದು ಅವರು ಅಭಿಪ್ರಾಯ ಪಡುತ್ತಾರೆ.

ಸಾಹಿತ್ಯ, ಸಂಗೀತ, ಚಲನಚಿತ್ರ, ರಂಗಭೂಮಿ ತಮ್ಮನ್ನು ತಾವು ವೃದ್ಧಿಸಿಕೊಳ್ಳುತ್ತವೆ. ಹುಟ್ಟಿಸಿಕೊಳ್ಳುವ ಹೊಸ ದೃಷ್ಟಿ, ಹೊಸ ಸಂಪರ್ಕಗಳನ್ನು ಅವು ಒಂದುಗೂಡಿಸುತ್ತವೆ. ಕಲಾವಿದರು ಅತ್ಯುತ್ಸಾಹದಿಂದ ತಮ್ಮ ಬೇಕು–ಬೇಡಗಳನ್ನು ಅಲಕ್ಷಿಸುವ ಜಗತ್ತಿನೆದುರು ಮುಂದಿಡುತ್ತಾರೆ. ಈಗ ಕಲೆ ಮುಕ್ತ, ನಿರ್ಲಜ್ಜ, ಬೇಜವಾಬ್ದಾರಿ; ಆದರ ಚಟುವಟಿಕೆ ಜ್ವರದ ತಾಪದಷ್ಟು ತೀವ್ರ: ಹಾವಿನ ಚರ್ಮದ ಮೇಲೆ ಮುತ್ತಿದ ಇರುವೆಗಳ ಹಾಗೆ. ಹಾವು ಎಂದೋ ಸತ್ತಿದೆ; ವಿಷ ಸಾಕೆಯಾಗಿದೆ; ಎಂದು ಹಾಕಲ್ಪಟ್ಟಿದೆ. ಚರ್ಮದಲ್ಲಿ ಮಾತ್ರ ಸುಮ್ಮನೆ ಹೊಯ್ದಾಡುವ ಜೀವ ತುಂಬಿದೆ–ಎನ್ನುತ್ತಾರೆ ಬರ್ಗ್‌ಮನ್.

ಇವುಗಳಲ್ಲಿ ತಾವೂ ಒಂದು ಇರುವೆಯಾಗಿದ್ದರೆ ದುಡಿತವನ್ನು ಮುಂದುವರೆಸುವುದರಲ್ಲಿ ಏನರ್ಥವೆಂದು ಬರ್ಗ್‌ಮನ್ ಯೋಚಿಸುತ್ತಾರೆ. ರಂಗಭೂಮಿ ಒಳ್ಳೆಯ ದಿನಗಳನ್ನು ಕಂಡು ಈಗ ವೃದ್ಧಾಪ್ಯದಲ್ಲಿದ್ದರೂ ಸಂಗೀತ ಈಗ ಗಣಿತ ಶಾಸ್ತ್ರದ ಚೌಕಟ್ಟಿನಲ್ಲಿ ಸಿಕ್ಕು ಉಸಿರು ಗಟ್ಟಿಸುವಂತಿದ್ದರೂ, ಚಿತ್ರ ಹಾಗೂ ಶಿಲ್ಪಕಲೆಗಳು ವೀರ್ಯನಾಶ ಹೊಂದಿ ಬಾಗುತಿದ್ದರೂ, ಸಾಹಿತ್ಯ ಕೇವಲ ಪದಗಳ ಗುಡ್ಡೆಯಾಗಿ ಗಂಭೀರತೆಯನ್ನು ಕಳೆದುಕೊಂಡಿದ್ದರೂ, ತಾವು ಕೈಕಟ್ಟಿ ಕುಳಿತುಕೊಳ್ಳುವುದು ಸರಿಯಲ್ಲ ಎಂದು ನಿರ್ಧರಿಸುತ್ತಾರೆ.

ಜನ ರಂಗಭೂಮಿಯನ್ನು ತೊರೆಯಬಹುದು ಏಕೆಂದರೆ ಅವರಿರುವುದು ವಿವಿಧ ಹಂತಗಳಲ್ಲಿ ದುಃರಂತವನ್ನು ಒಳಗೊಂಡ ನಾಟಕದ ಮಧ್ಯೆ ಅವರಿಗೆ ಸಂಗೀತದ ಅಗತ್ಯವಿಲ್ಲ: ಕಾರಣ ಪ್ರತಿ ನಿಮಿಷವೂ ಅವರ ಮೇಲೆ ತಡೆಯಲಸಾಧ್ಯವಾದ ಶಬ್ದಗಳ ಒತ್ತಡವಿದೆ. ಕಾವ್ಯ ಬೇಕಿಲ್ಲ. ಕಾರಣ ವಿಶ್ವದ ಕಲ್ಪನೆ ಅವರನ್ನು ಪ್ರಾಣಿಗಳಾಗಿ ಪರಿವರ್ತಿಸಿದೆ ಮನುಷ್ಯ ಈಗ ಸ್ವತಂತ್ರ; ಸ್ತಿಮಿತ ತಪ್ಪುವಷ್ಟು ಸ್ವತಂತ್ರ. ಧರ್ಮ ಮತ್ತು ಕಲೆ ಪ್ರಾಚ್ಯವಸ್ತುಗಳಂತೆ ಜಾಗರೂಕತೆಯಿಂದ ಕಾಪಾಡಲ್ಪಟ್ಟವೆಯೆಂದು ಅವರ ಅಭಿಪ್ರಾಯ.

ಇಷ್ಟೆಲ್ಲ ಗೊಂದಲವನ್ನು ಗಮನಿಸಿ ತಾವಿನ್ನೂ ಸೃಷ್ಟಿ–ಕ್ರಿಯೆಯನ್ನು ಮುಂದುವರಿಸಿಕೊಂಡು ಹೋಗಲು ಕಾರಣ ಕೇವಲ ಕುತೂಹಲ ಮಾತ್ರ; ಅದೊಂದು ಅಸೀಮವಾದ, ತೃಪ್ತಿಯಿರದ, ನಿತ್ಯನೂತನವಾದ ಕುತೂಹಲ. ಈ ಕಾರಣದಿಂದ ಅವರಿಗೆ ಸದಾಕಾಲ ಅನೇಕ ವರ್ಷಗಳು ಬಂದಿಯಾಗಿದ್ದು ಇದ್ದಕ್ಕಿದ್ದಂತೆ ಪ್ರಕ್ಷುಬ್ಧ ಪ್ರಪಂಚವನ್ನು ಎದುರಾದಂತೆ ತೋರುತ್ತದೆ. ಅವರ ಕಣ್ಣುಗಳು ಎಲ್ಲವನ್ನೂ ಒಳಗೊಳ್ಳುತ್ತದೆ; ಇಲ್ಲಿನ ಭೀತಿ, ಭ್ರಮೆ, ಅಸತ್ಯ, ಅಪಹಾಸ್ಯ, ನೀತಿ ನಿರಾಸೆ, ಸಂಸಾರ, ಸಾವು, ಅರ್ಥವಂತಿಕೆ, ನಿರರ್ಥಕತೆ, ಇತ್ಯಾದಿಗಳನ್ನು ಬರ್ಗ್‌ಮನ್ ಹೇಳುತ್ತಾರೆ–ನಾನು ಹಾರುವ ಧಾನ್ಯ ಧೂಳಿಯನ್ನು ಹಿಡಿಯುತ್ತೇನೆ. ಪ್ರಾಯಶಃ ಅದು ಚಲನಚಿತ್ರವಾಗಿರಬಹುದು. ಅದಕ್ಕೇನು ವೈಶಿಷ್ಟ್ಯ? ಯಾವುದೂ ಇಲ್ಲ. ಆದರೆ ನಗರದಲ್ಲಿ ತುಂಬ ಆಸಕ್ತಿ. ಧಾನ್ಯಧೂಳಿಯನ್ನು ಬೊಗಸೆಯಲ್ಲಿ ಹಿಡಿದು ಓಡಾಡುತ್ತೇನೆ; ಮತ್ತಷ್ಟು ಇರುವೆಗಳನ್ನು ಒಂದುಗೂಡಿಸುತ್ತೇನೆ. ಎಲ್ಲ ಕೂಡಿ ಒಂದು ಕೆಲಸದಲ್ಲಿ ಮಗ್ನರಾಗುತ್ತೇವೆ; ಹಾವಿನ ಚರ್ಮ ಮೆಲ್ಲನೆ ಚಲಿಸುತ್ತದೆ.

ಯಾರೇ ಆಗಲಿ ಅನುಭವವನ್ನು ನಲವತ್ತು ವರುಷದೊಳಗೆ ಕ್ರೋಢೀಕರಿಸಬೇಕೆಂಬ ಉಕ್ತಿಯೊಂದಿದೆ. ನಲವತ್ತರ ನಂತರ ಟೀಕೆಗಳನ್ನು ವ್ಯಕ್ತಪಡಿಸಲು ಸಾಮಾನ್ಯವಾಗಿ ಮನ್ನಣೆಯಿದೆ. ಇದಕ್ಕೆ ವಿರುದ್ಧವಾದದ್ದು ಬರ್ಗ್‌ಮನ್ ಅವರಿಗೆ ಅನ್ವಯಿಸುತ್ತದೆ. ಸಿದ್ಧಾಂತಗಳ ಬಗ್ಗೆ ಖಚಿತ ನಿಲುವು ಮತ್ತು ಅವುಗಳನ್ನು ಸಪ್ರಮಾಣವಾಗಿ ವಿವರಿಸಲು ಅವರು ಸದಾ ಸಿದ್ಧ. ತಮ್ಮ ವಿಚಾರ ಮತ್ತು ಕಲ್ಪನೆಗಳ ಬಗ್ಗೆ ಅವರಿಗೆ ಸ್ಪಷ್ಟವಿದೆ. ವಯಸ್ಸಾಗುತ್ತಿದ್ದಂತೆ ಹೆಚ್ಚು ಜಾಗರೂಕನಾಗಿದ್ದೇನೆಂದು ಹೇಳುತ್ತಾರೆ. ಪ್ರಸ್ತುತ ಅನುಭವದ ಹಿನ್ನೆಲೆಯಲ್ಲಿ ಚಿತ್ರ ನಿರ್ಮಾಣದ ಬಗ್ಗೆ ಯಾವುದೇ ಅಭಿಪ್ರಾಯ ವ್ಯಕ್ತಪಡಿಸಲು ಅವರಿಗೆ ಮನಸ್ಸಿಲ್ಲ. ಕಲಾವಿದನೊಬ್ಬನ ನಿಜವಾದ ಕೊಡುಗೆ ಅವನ ಕೃತಿ ಮಾತ್ರ. ಇದಕ್ಕೆ ವಿವರಣೆ ಅನಗತ್ಯ. ಆದ್ದರಿಂದ ಯಾವುದೇ ಬಗೆಯ ಚರ್ಚೆ ನೆಪಗಳಲ್ಲಿ ತೊಡಗುವುದು ಯುಕ್ತವಲ್ಲ ಎನ್ನುತ್ತಾರೆ ಅವರು.

ಹಿಂದೆ ಕಲಾವಿದ ಅನಾಮಿಕವಾಗಿ ಇರುತ್ತಿದ್ದ. ಇದು ತುಂಬ ಉತ್ತಮವಾಗಿದ್ದುದು ಮಾತ್ರವಲ್ಲ ಎಲ್ಲ ಬಗೆಯ ಅಸಂಬದ್ಧ ಪ್ರಭಾವ, ಕಲಾವ್ಯಭಿಚಾರ, ಲೌಕಿಕ ಮಾನದಂಡಗಳಿಂದ ಮುಕ್ತವಾಗಿತ್ತು. ತನ್ನ ಕೃತಿಯ ಬಗ್ಗೆ ಸಂಪೂರ್ಣ ಕಾಳಜಿ ವಹಿಸಿದ ಅವರು ಸತ್ಯಾಸತ್ಯವನ್ನು ದೈವಕ್ಕೆ ಬಿಡುತ್ತಿದ್ದ. ಆದರೀಗ ಕಲಾವಿದನ ಸ್ಥಾನ ಹೆಚ್ಚು ಸೂಕ್ಷ್ಮ. ಅವನೊಬ್ಬ ಕೌತುಕಮಯ ವ್ಯಕ್ತಿ; ಪ್ರದರ್ಶಕ. ಒಂಟಿತನ, ವೈಯಕ್ತಿಕತೆ, ವೈಶಿಷ್ಟ್ಯತೆ ಮುಂತಾದವು ರೋಗ ತರುವಂಥಾದಾಗಿದೆ. ಅವನು ಇಷ್ಟಪಡುವ ಪ್ರತ್ಯೇಕತೆ ಶಾಪವೆನಿಸುತ್ತದೆ; ಅಸ್ವಭಾವಿಕತೆ, ವಿಚಿತ್ರ ನೋವು ಸಮಾಧಾನಗಳನ್ನು ಹೆರುತ್ತವೆ.

ಅನೇಕ ವೇಳೆ ಚಿತ್ರಕತೆ ಅನಿರ್ದಿಷ್ಟವಾಗಿ ಪ್ರಾರಂಭವಾಗುತ್ತದೆ. ಅಲ್ಲೊಂದು ಹಿಡಿದು ನಿಲ್ಲಿಸುವ ಮಾತು, ಇಲ್ಲೊಂದು ಮೂಲಕ್ಕೆ ಸಂಬಂಧವಿರದಿದ್ದರೂ ಖುಷಿಕೊಡುವ ಘಟನೆ ಮುಂತಾದವುಗಳಿಂದ ಇವೆಲ್ಲ ಕ್ಷಣವೊಂದರಲ್ಲಿ ಮನಸ್ಸಿಗೆ ಹೊಳೆದು ಸುಪ್ತ ಪ್ರಜ್ಞೆಯಿಂದಿಳಿದ ರಂಗುರಂಗಿನ ದಾರದೆಳೆಗಳಂತೆ ಕಾಣುತ್ತವೆ. ಈ ಎಳೆಗಳನ್ನು ಜಾಗರೂಕತೆಯಿಂದ ಹೆಣೆದರೆ ಚಲನಚಿತ್ರ ಉದ್ಭವಿಸುತ್ತದೆ; ಆ ಚಿತ್ರದ ವಿಶಿಷ್ಟ ನಾಡಿಮಿಡಿತ, ಲಯಗತಿಗಳು ಪಡಿಮೂಡುತ್ತವೆ.

**ಸ್ವೀಡನ್ನಿನ ಇಂಗ್‌ಮರ್ ಬರ್ಗ್‌ಮನ್ ಜಗದ್ವಿಖ್ಯಾತ ಚಲನಚಿತ್ರ ನಿರ್ದೇಶಕ. ಚಲನ ಚಿತ್ರವನ್ನು ಒಂದು ಶ್ರೇಷ್ಠ ಕಲಾಮಾಧ್ಯಮವನ್ನಾಗಿಸಲು ಅವರು ಪಟ್ಟ ಶ್ರಮ ಅನೇಕಾನೇಕ ಸಾರ್ಥಕ ಫಲಗಳನ್ನು ಕೊಟ್ಟಿದೆ. ಅವರು ನಿರ್ಮಿಸಿದ The Seventh Seal, The Silence, Wild Straw-bervies, The Virgin Spring ಮುಂತಾದವು ಎಂದಿಗೂ ನಮ್ಮಿಂದ ಬಿಡಿಸಿಕೊಳ್ಳಲಾರದಂಥವು. ಅಂತರ್ ರಾಷ್ಟ್ರೀಯ ಚಲನ ಚಿತ್ರೋತ್ಸವಗಳಲ್ಲಿ ಬರ್ಗ್‌ಮನ್ ಅವರಿಗೆ ಹಲವಾರು ಪ್ರಶಸ್ತಿಗಳು ದೊರಕಿವೆ.**

ಈ ಲಯದಿಂದ ಚಿತ್ರ ಸರಣಿಗಳು ಉದ್ದೇಶಿತ ಕ್ರಮಕ್ಕೆ ಹೊಂದಿಕೊಂಡು ಒಂದು ವಿನ್ಯಾಸ ರಚಿಸುತ್ತವೆ.

ಸಾಮಾನ್ಯವಾಗಿ ಚಿತ್ರಕಥೆಯನ್ನು ಬರೆಯುವ ದುಃಖ ಸೋಲುವ ಭಾವನೆ ಮುತ್ತುತ್ತದೆ ಕನಸುಗಳು ಗೋಜಲಾಗುತ್ತವೆ; ಕಲ್ಪನೆಗಳು ಕರಗಿ ಕಂದಾಗುತ್ತವೆ; ನಾಡಿ ಮಿಡಿತ ಕ್ಷೀಣವಾಗುತ್ತದೆ. ಲಯ, ಮೂಡುಗಳು, ವಾತಾವರಣ, ತೀವ್ರತೆ, ಸನ್ನಿವೇಶ ಇತ್ಯಾದಿಯನ್ನು ಓದುವಂಥ ಅಥವಾ ಅರ್ಥವಾಗುವಂಥ ಚಿತ್ರಕಥೆಗೆ ಹೊಂದಿಸಬೇಕು. ಬರ್ಗ್‌ಮನ್ನರ ಅಭಿಪ್ರಾಯದಲ್ಲಿ ಇದು ಕಷ್ಟ. ಆದರೆ ಅಸಾಧ್ಯವಲ್ಲ.

ಸಂಭಾಷಣೆ ಚಲನಚಿತ್ರದಲ್ಲಿ ಪ್ರಮುಖವಾದ ಅಂಗ. ಆದರಿದು ಚಿತ್ರಕಥೆ ಬರೆಯುವಾಗ ಹೆಚ್ಚು ಪ್ರತಿರೋಧ ಉಂಟುಮಾಡುವಂಥಾದ್ದು. ಸಂಭಾಷಣೆ ಬರೆಯಬಹುದು. ಆದರೆ ಅದನ್ನು ಹೇಳುವ ಲಯ, ವೇಗ, ವಾಕ್ಯಗಳ ಅಂತರದಲ್ಲಿ ಜರಗುವ ಕಾರ್ಯ ಇವೆಲ್ಲವನ್ನು ಬಿಡಬೇಕಾಗುತ್ತದೆ. ಏಕೆಂದರೆ ಇವೆಲ್ಲ ಇರುವ ಚಿತ್ರ ಕಥೆಯನ್ನು ಓದುವುದೇ ಕಷ್ಟವಾಗುತ್ತದೆ. ನಿರ್ದೇಶನ ಸೂಚನೆ, ಸ್ಥಳ, ವಿವರಣೆ, ಪಾತ್ರ, ವಾತಾವರಣ ಮುಂತಾದವುಗಳನ್ನು ಚಿತ್ರಕಥೆಯಲ್ಲಿ ಅರ್ಥವಾಗುವಂತೆ ಅಳವಡಿಸುವುದು ಸಾಧ್ಯ. ಎಲ್ಲಕ್ಕಿಂತ ಹೆಚ್ಚಾಗಿ ಸಮಗ್ರವಾದ ಸಾವಯವಯುಳ್ಳ ಮೂರನೆ ಆಯಾಮವೊಂದಿರಬೇಕು. ಇದಿಲ್ಲದಿದ್ದರೆ ಚಲನಚಿತ್ರ ಸತ್ತಂತೆ. ಕೇವಲ ಕಾರ್ಖಾನೆಯ ವಸ್ತುವಾಗುತ್ತದೆ ಎನ್ನುತ್ತಾರೆ ಬರ್ಗ್‌ಮನ್.

ಚಲನಚಿತ್ರ ಸಾಹಿತ್ಯದಂತಲ್ಲ. ಅನೇಕ ವೇಳೆ ಈ ಎರಡು ಕಲಾ ಪ್ರಕಾರಗಳ ವಸ್ತು ಮತ್ತು ರೀತಿಗಳಲ್ಲಿ ಸಂಘರ್ಷವಿರುತ್ತದೆ. ಇವುಗಳು ಮೂಲವಾಗಿ ಯಾವುದನ್ನು ಅವಲಂಬಿಸುತ್ತದೆನ್ನುವುದನ್ನು ಸ್ಪಷ್ಟವಾಗಿ ಹೇಳುವುದು ಕಷ್ಟ. ಆದರೆ ಸ್ವಯಂ ಪ್ರತಿಕ್ರಿಯೆಯ ಪ್ರಕ್ರಿಯೆಗೆ ಸಂಬಂಧಿಸಿದ್ದೆಂದು ಪರಿಗಣಿಸಬಹುದು. ಪದವೊಂದು ಓದಿದ ನಂತರ ಪ್ರಜ್ಞೆಯೊಳಗೆ ಸೇರಿ ಬುದ್ಧಿಯೊಡನೆ ಮೇಳೈಸಿ ಕ್ರಮೇಣ ಕಲ್ಪನೆ ಅಥವಾ ಭಾವನೆಗಳ ಮೇಲೆ ಪ್ರಭಾವ ಬೀರುತ್ತದೆ. ಚಲನಚಿತ್ರದಿಂದ ಇದು ಸಂಪೂರ್ಣ ಭಿನ್ನ: ಚಲನಚಿತ್ರ ನೋಡಿದಾಗ ಅದು ಸೃಷ್ಟಿಸುವ ಭ್ರಾಮಕ ವಾತಾವರಣವನ್ನು ಪ್ರಜ್ಞಾಪೂರ್ವಕವಾಗಿ ಒಪ್ಪುತ್ತೇವೆ, ನಮ್ಮ ಕಲ್ಪನೆಗೆ ದಾರಿಮಾಡಿಕೊಡುತ್ತೇವೆ. ಚಲನಚಿತ್ರ ನೇರವಾಗಿ ಭಾವನೆಗಳ ಮೇರೆ ಪ್ರಭಾವ ಬೀರುತ್ತದೆ.

ಉತ್ತಮ ಸಾಹಿತ್ಯ ಕೃತಿಯೊಂದು ಚಲನಚಿತ್ರಕ್ಕೆ ಸರಿ ಹೋಗುವುದೇ? ಬರ್ಗ್‌ಮನ್ ಹೇಳುತ್ತಾರೆ; ಹಾಗೆ ಮಾಡದಿರುವುದೇ ಒಳ್ಳೆಯದು. ಇದಕ್ಕೆ ಹಲವಾರು ಕಾರಣಗಳಿವೆ. ಎಲ್ಲಕ್ಕಿಂತ ಮುಖ್ಯವಾಗಿ ಸಾಹಿತ್ಯ ಕೃತಿಯೊಂದರ ಧ್ವನಿ ಮತ್ತು ವಿಚಾರಕ್ಕೆ ನಿಲುಕದ ವಿಶಿಷ್ಟ ಆಯಾಮವನ್ನು ಚಲನಚಿತ್ರ ಮಾಧ್ಯಮಕ್ಕೆ ಪರಿವರ್ತಿಸಲು ಪ್ರಯತ್ನಿಸಿದರೆ ಅನೇಕ ಬದಲಾವಣೆಗಳನ್ನು ಮಾಡಬೇಕಾಗುತ್ತದೆ. ಇಂತಹ ಪರಿಶ್ರಮದಿಂದ ಪರಿಮಿತ ಪರಿಣಾಮಗಳನ್ನು ಮಾತ್ರ ಪಡೆಯಲು ಸಾಧ್ಯ. ಇಷ್ಟಾಗಿಯೂ ಸಾಹಿತ್ಯ ಕೃತಿಯನ್ನು ಚಲನಚಿತ್ರವಾಗಿ ಮಾರ್ಪಡಿಸಿದೆ ಎನ್ನೋಣ. ಅನಂತರದ ಚಲನಚಿತ್ರ ವಿಮರ್ಶೆ ಕೇವಲ ಸಾಹಿತ್ಯ ಕೃತಿಯ ವಿಮರ್ಶೆಯಾಗುತ್ತದೆ. ಇದು ಕ್ರೀಡಾವಿಮರ್ಶಕನೊಬ್ಬ ನಾಟಕ ನಿಮರ್ಶೆಮಾಡುವ ಬುದ್ಧಿವಂತಿಕೆಯಾಗುತ್ತದೆ. ಎನ್ನುತ್ತಾರೆ ಬರ್ಗ್‌ಮನ್. ಚಲನಚಿತ್ರವನ್ನು ಕುರಿತು ವಿಮರ್ಶೆಮಾಡುವುದು ಸಾಧ್ಯವೆಂದು ಎಲ್ಲರೂ ಪರಿಗಣಿಸಿರುವುದರಿಂದಲೇ ಚಲನಚಿತ್ರ ಕಲಾ ಪ್ರಕಾರವೆಂದು ಸಮರ್ಥಿಸಿಕೊಳ್ಳಲು ಹೆಣಗಬೇಕಾಗಿದೆ. ಚಲನಚಿತ್ರಕ್ಕೆ ಅವರದೇ ಆದ ಪಾರಿಭಾಷಿಕ ಶಬ್ದ ಸಂಪತ್ತು ಬೇಕು. ಇತರ ಯಾವುದೇ ಕಲಾ ಪ್ರಕಾರಕ್ಕೆ ಹೋಲಿಸಿದರೂ ಚಲನಚಿತ್ರ ನವೀನವಾದದ್ದು. ಆದರೆ ಈಗಿರುವಂತೆ ಚಲನಚಿತ್ರವನ್ನು ಅಸಡ್ಡೆಯಿಂದ ಕಾಣಲಾಗುತ್ತಿದೆಯೆಂದು ಬರ್ಗ್‌ಮನ್ ಅಭಿಪ್ರಾಯ ಪಡುತ್ತಾರೆ.

ಬರ್ಗ್‌ಮನ್ ಅವರ ಒಡನಾಡಿಗಳೆಂದರೆ ಸ್ಟುಡಿಯೋದ ಅರೆಬೆಳಕು, ಗದ್ದಲ, ಗುಂಪು ಹಾಗು ಉಸಿರುಗಟ್ಟಿಸುವ ವಾತಾವರಣಗಳು ಅವರಿಗೆ ಯೋಜನೆ ಮುತ್ತುತ್ತದೆ. ತಾವೇಕೆ ಅತಿ ಕಷ್ಟವಾದ ಸೃಷ್ಟಿಕ್ರಿಯೆಯಲ್ಲಿ ಮಗ್ನನಾಗಿದ್ದೇನೆಂದು ಈ ವಿಧಾನದಲ್ಲಿ ನಿಯಮಗಳು, ಅನೇಕ. ಉದ್ದೇಶಗಳನ್ನು ತೆಳುವಾಗಿಸಲು ಪಿತೂರಿ ಹೂಡುವ ತಾಂತ್ರಿಕ ಉಪಕರಣಗಳ ಮಧ್ಯೆ ತಾವು. ಇವೆಲ್ಲವುಗಳೊಡನೆ ಸೂಕ್ಷ್ಮವಾದ ನೋವಿನ ಖುಷಿಯ ಸೃಷ್ಟಿಕ್ರಿಯೆ ಜರುಗಬೇಕು; ಆತ್ಮೀಯವಾದ ಜೀವನದ ಹೊಳಪು ತನ್ನಷ್ಟಕ್ಕೆ ತಾನು ಸೂಕ್ಷ್ಮವಾಗಿ ಹೊಮ್ಮಬೇಕು. ಇದು ಕೈಗೂಡಬಹುದು. ಅಥವಾ ಹಾಗೆಯೇ ಸುಣುಚಿಕೊಳ್ಳಬಹುದು.

ಚಲನಚಿತ್ರ ಸೃಷ್ಟಿಸುವ ವ್ಯಕ್ತಿಗಳಲ್ಲದೆ ಅಸಂಖ್ಯ ಜನರಿಗೂ ಅದರ ಬಗ್ಗೆ ಕುತೂಹಲವಿರುತ್ತದೆ. ನಿರ್ದೇಶಕನಿಗೆ ತಕ್ಷಣದ ಗೆಲುವು, ಪ್ರಖ್ಯಾತಿ ಮತ್ತು ಜನರನ್ನು ಸಂತೋಷಿಸುವ ಉದ್ದೇಶವಿರುವುದು ಸಹಜ. ಇಂತಹ ಆಕಾಂಕ್ಷೆ ಮತ್ತು **ಮೂರ್ಖತೆಯ ಮಧ್ಯೆ ಚಲನಚಿತ್ರವನ್ನು ನೋಡುವ ಜನರಿರುತ್ತಾರೆ. ಅವರು ಚಲನಚಿತ್ರದಿಂದ ಬಯಸುವುದು ಒಂದನ್ನು ಮಾತ್ರ. ಕತ್ತಲಲ್ಲಿ ಕೂತು** ತಮ್ಮೆಲ್ಲ ನೋವು, ಸಂಕಟಗಳನ್ನು ಮರೆಸುವ ಶಕ್ತಿಯುಳ್ಳ ಚಿತ್ರವನ್ನು, ಈ ಜನರು ಸೂಲಗಿತ್ತಿಗಾಗಿ ಕಾಯುತ್ತಾ ಇನ್ನೇನು ಹೆರಿಗೆಯಾಗಲಿರುವ ಹೆಂಗಸಿನಂತೆ ಎನ್ನುತ್ತಾರೆ ಬರ್ಗ್‌ಮನ್.

ಬರ್ಗ್‌ಮನ್ ಅವರು ಚಲನಚಿತ್ರ ನಿರ್ಮಾಣವನ್ನು ಕುರಿತು ಮೂರು ಅಂಶಗಳನ್ನು ವಿಧಿಸಿಕೊಳ್ಳುತ್ತಾರೆ.

ಒಂದು ಚಲನಚಿತ್ರವನ್ನು ನೋಡುವ ಜನ ಖುಷಿ ಮತ್ತು ಉತ್ಸುಕದನುಭವವನ್ನು ನಿರೀಕ್ಷಿಸುವುದು ತೀರ ಸಹಜ. ಅದರ ಜವಾಬ್ದಾರಿ ನಿರ್ದೇಶಕನದ್ದು. ಅದಕ್ಕಾಗಿ ಪ್ರತಿಭೆಯ ವ್ಯಭಿಚಾರ ಮಾಡಬೇಕಿಲ್ಲ.

ಎರಡು– ಕಲಾ ಪ್ರಜ್ಞೆಗೆ ವಿಧೇಯನಾಗಿದ್ದರೆ ಎಲ್ಲ ಬಗೆಯ ಸುಳ್ಳು, ಪ್ರತಿಭೆಯ ವ್ಯಭಿಚಾರಗಳನ್ನು ತಡೆಯುತ್ತದೆ. ಕಲೆಯ ಉನ್ನತಿ, ಸೂಕ್ಷ್ಮತೆ ಮತ್ತು ತೀಕ್ಷ್ಣತೆಗಳಿಗಾಗಿ ಕೆಲವು ವಿಷಯದಲ್ಲಿ ಹೊಂದಾಣಿಕೆ ಮಾಡಿಕೊಳ್ಳಬೇಕು.

ಮೂರು– ತಯಾರಿಸುವ ಪ್ರತಿ ಚಲನಚಿತ್ರವನ್ನು ಇದೇ ಕೊನೆಯದೆಂದು ಪರಿಗಣಿಸುವುದು. ಈ ವಿಷಯವಾಗಿ ಪ್ರಸ್ತುತ ನಿಲುವನ್ನು ಸ್ಪಷ್ಟಪಡಿಸುತ್ತಾ ಬರ್ಗ್‌ಮನ್ ಹೀಗೆ ಹೇಳುತ್ತಾರೆ. ಜನರು ನನ್ನ ಬಗ್ಗೆ ಯಾವಾಗ ನಿರ್ಲಕ್ಷ್ಯ ಭಾವನೆ ಹೊಂದುತ್ತಾರೋ ತಿಳಿಯದು. ಆಗ ಶೂನ್ಯ ನನ್ನನ್ನು ದಿಟ್ಟಿಸುತ್ತದೆ. ಆಗ ನಾನು ಸ್ವಪ್ರೇರಣೆಯಿಂದ ದೂರ ಸರಿಯುತ್ತೇನೆ. ಹಿಂದೆ ಪ್ರಜ್ಞಾವಂತರು ಬದಲಾಗುವ ಜೀವನ ಗತಿಯನ್ನು ಮರೆಯದಿರಲು ಶವದ ಪೆಟ್ಟಿಗೆಯಲ್ಲಿ ರಾತ್ರಿಗಳನ್ನು ಕಳೆಯುತ್ತಿದ್ದರು. ನಾನು ಹಾಗೆ ವಿಪರೀತ ಕ್ರಮಕ್ಕೆ ಹೋಗದೆ ಚಲನ ಚಿತ್ರನಿರ್ಮಾಣದ ವ್ಯರ್ಥ ಹಾಗೂ ಕ್ರೂರ ಚಂಚಲತೆಗೆ ಒಗ್ಗಿಕೊಂಡು ಪ್ರತಿ ಚಿತ್ರವನ್ನು ಕೊನೆಯದೆಂದು ಪರಿಗಣಿಸುತ್ತೇನೆ.

ಚಲನಚಿತ್ರದಲ್ಲಿ ನಿಮ್ಮ ಗುರಿಯೇನು ಎಂದು ಅನೇಕರು ಕೇಳುವುದನ್ನು ಪ್ರಸ್ತಾಪಿಸಿ ಅವರೆನ್ನುತ್ತಾರೆ. ಸಾಮಾನ್ಯವಾಗಿ ಈ ಪ್ರಶ್ನೆಗೆ ಸುಳ್ಳಿನ **ಹಾರಿಕೆಯ ಉತ್ತರ ಕೊಡುತ್ತೇನೆ.** ಮನುಷ್ಯನ **ಸ್ಥಿತಿಯ ಬಗ್ಗೆ ಸತ್ಯವನ್ನು ತಿಳಿಸಲು** ಪ್ರಯತ್ನಿಸುತ್ತೇನೆ, ಎಂದು. ಆದರೆ ನಿಜವಾದ ಉತ್ತರ ಬೇರೆ: **ನನ್ನ ಪ್ರಜ್ಞೆಯಾಳದಿಂದ ಚಿತ್ರ** ನಿರ್ಮಿಸಲೇಬೇಕೆಂಬ ಅದಮ್ಯ ಅಗತ್ಯ ಉಂಟಾಗುತದೆ. ಹೀಗಾದ್ದರಿಂದ ಚಿತ್ರ ನಿರ್ಮಾಣಕ್ಕೆ ನನ್ನ ವೈಯಕ್ತಿಕ ಅಗತ್ಯ ಬಿಟ್ಟು ಬೇರೆ ಕಾರಣವಿಲ್ಲ. ಇದರಿಂದ ಜನರಿಗೊಂದಿಷ್ಟು ತಮಾಷೆ ಸಿಕ್ಕಬಹುದು. ಅಷ್ಟೇ. ●



## ಅನುಭವ

ಬಹಳ ಕಾಲದ ನಂತರ ನಿನ್ನ ಕಂಡಾಗ
ಮರುಭೂಮಿಯಲಿ ನೀರೊರತೆ ಕಂಡ ಸಂತಸ।
ನಿನ್ನ ಮುಖಾರವಿಂದವ ನನ್ನ ಬೊಗಸೆಯಲಿ ಹಿಡಿದು।
ನಿನ್ನ ಹೂದುಟಿಯ ಚುಂಬಿಸಿ ಸಿಗ್ಗತ್ತೆಗೆ ಬಂದ ಅನುಭವ

* ಪಂಚಾಕ್ಷರಿ ಹಿರೇಮಠ



ಪ್ರತಿಯೊಬ್ಬ ವ್ಯಕ್ತಿಗೂ ಅವನದ್ದೇ ಆದ ಆದರ್ಶಗಳು ಇರುವುದು ಸ್ವಾಭಾವಿಕ. ಆದರೆ ಅವನು ಹಮ್ಮಿಕೊಳ್ಳುವ ವೃತ್ತಿ ಅವನ ಆದರ್ಶಗಳಿಗೆ ಸವಾಲಾಗಿ ಬಿಡಬಹುದು. ಶಾಲೆ ನಾಟಕ–ಬ್ಯಾಂಕ್ ನೌಕರಿ ಇವು ಮೂರಕ್ಕೂ ಅಲ್ಲಲ್ಲೇ ಶರಣು ಹೊಡೆದು ಚಲನಚಿತ್ರ ರಂಗಕ್ಕೆ ಕಾಲಿಟ್ಟ ಅನಂತನಾಗ್ ಚಲನಚಿತ್ರ ಆದಷ್ಟೂ ನೈಜವಾಗಿರಬೇಕೆಂದು ಬಯಸುತ್ತಾರೆ. ಅವಕಾಶ ಸಿಕ್ಕಾಗಲೆಲ್ಲ ಅದನ್ನು ಪ್ರತಿಪಾದಿಸುತ್ತಲೂ ಬಂದಿರುವ ಅವರು, ತಾವು ಅಭಿನಯಿಸಿದ ಚಿತ್ರಗಳಲ್ಲಿ ಎಷ್ಟರ ಮಟ್ಟಿಗೆ ಸಫಲರಾಗಿದ್ದಾರೆ? ಒಂದು ವೇಳೆ ಅಷ್ಟಾಗಿ ಅವರ ನಿಲುವು ಯಶಸ್ವಿಯಾಗದಿದ್ದರೆ ಅದಕ್ಕೇನು ಕಾರಣ–ಈ ಹಿನ್ನೆಲೆಯಲ್ಲಿ ಕೇಳಿದೆ. "ನೀವು ರಿಯಾಲಿಸ್ಟಿಕ್ ಸಿನಿಮಾಗಳನ್ನು ಕುರಿತು ಬಹಳ ಮಾತನಾಡುತ್ತೀರಿ. ಆದರೆ ನೀವು ಅಭಿನಯಿಸಿದ "ಬಯಲುದಾರಿ" ಯಲ್ಲಿ ನಿಮ್ಮ ಪಾತ್ರ ಮರಸುತ್ತಿ ಹಾಡು ಹೇಳುವ ನಾಯಕನಾಗಿದೆಯಲ್ಲ–ಈ ವಿರೋಧಾಭಾಸಕ್ಕೆ ಕಾರಣ ನೀವು ಚಿತ್ರರಂಗದಲ್ಲಿ ಇರಲೇಬೇಕು ಎಂಬ ಕಾರಣಕ್ಕಾಗಿಯೇ ?"

ಅನಂತ್ ಉತ್ತರ ಕೊಡಲು ಹಿಂದೆ ಮುಂದೆ ನೋಡಲಿಲ್ಲ. ಸಿದ್ಧಪಡಿಸಿಟ್ಟುಕೊಂಡಿದ್ದಂತೆ ಅವರು ಪಟ ಪಟ ಉತ್ತರಿಸಿದರು. "ಇಂಡಸ್ಟ್ರಿಯಲ್ಲಿ ಇರಬೇಕಾದ್ರೆ ನಾವು ನಮಗೆ ಓಗ್ಗದ್ದನ್ನೂ ಒಪ್ಪಿಕೊಳ್ಳಬೇಕಾಗ್ತದೆ. ಆಫ್ ಬೀಟ್ ಚಿತ್ರಗಳಲ್ಲಿಯೂ ಅಭಿನಯಿಸೋದಂದ್ರೆ ನನಗೆ ಇಷ್ಟ; ನನ್ನ ಮೊದಲ ಆದ್ಯತೆ ಅದಕ್ಕೇ ನಿಜ. ಆದರೆ ಅಂಥ ಚಿತ್ರಗಳಲ್ಲಿ ಸ್ವಾಭಾವಿಕವಾಗೇ ಸಂಭಾವನೆ ಕಡಿಮೆ. ಹಾಗಾಗಿ ನಮ್ಮ ಬದುಕಿಗಾಗಿ ಹೆಚ್ಚು ಆದಾಯ ತರುವ ಇಂಥ ಚಿತ್ರಗಳಲ್ಲೂ ಅಭಿನಯಿಸಬೇಕಾಗುತ್ತದೆ.

ಅನಂತ್ ತಮ್ಮ ಉತ್ತರವನ್ನು ಅಲ್ಲಿಗೇ ನಿಲ್ಲಿಸಲಿಲ್ಲ. ಮುಂದುವರೆಸಿದರು. "ಸ್ವಾಭಾವಿಕವಾಗಿ ಆಫ್‌ಬೀಟ್ ಚಿತ್ರಗಳ ನಿರ್ಮಾಪಕರು ಹೊಸ ಮುಖಗಳ ಶೋಧದಲ್ಲೇ ಇರ್‍ತಾರೆ. ಪರಿಸ್ಥಿತಿ ಹೀಗಿರೋದ್ರಿಂದ ಮುಂದೆ ಬರೋ ಆಫ್ ಬೀಟ್ ಚಿತ್ರವೊಂದರಲ್ಲಿ ನಮಗೇ ಅವಕಾಶ ಸಿಗ್ತದೆ ಅಂತ ಹೇಗೆ ತಾನೆ ನಂಬೋದು? ಅನಂತ್ ಕೇಳಿದರು.

ಸಂಕಲ್ಪ ಹಾಗೂ ಅಂಕುರ್ ಚಿತ್ರಗಳ ನಂತರ ಅವರ ಕೈಗೆ ಹಂಸಗೀತೆ ಆರಂಭವಾಗುವ ವರೆಗೆ ಒಂದೇ ಒಂದು ಚಿತ್ರವೂ ಬರಲಿಲ್ಲ. ಕೈತುಂಬ ಪಗಾರ ತರುತ್ತಿದ್ದ ಯೂನಿಯನ್ ಬ್ಯಾಂಕ್ ಕೆಲಸಕ್ಕೆ ನಮಸ್ಕಾರ ಹೊಡೆದಾಗಿತ್ತು. ಆ ಒಂದು ವರ್ಷದ ಅವಧಿಯಲ್ಲಿ ಅನಂತ್‌ಗೆ ಯಾವುದೇ ಆದ್ಯಾಯವಿರದೆ ಖರ್ಚಿಗೆ ತಂದೆಯ ಬಳಿ ಕೈಯೊಡ್ಡ ಬೇಕಾದಂಥ ಪರಿಸ್ಥಿತಿ ಒದಗಿತ್ತು. "ಈ ಹುಡುಗ ಯಾವುದಕ್ಕೂ ಪ್ರಯೋಜನವಿಲ್ಲ" ಎಂದು ಹೇಳಿಸಿಕೊಂಡೂ ಆಗಿತ್ತು. ಕೈಯಲ್ಲಿ ಬಿಡಿಗಾಸಿಲ್ಲದ ಅನುಭವ ಚೆನ್ನಾಗಿದ್ದ ಈ ನಟ, ಆದಾಯದ ಚಿತ್ರಗಳಲ್ಲಿ ಮನಸ್ಸಿಗೆ ವಿರೋಧವಾಗಿ ಅಭಿನಯಿಸಲೊಪ್ಪಿಕೊಂಡಿದ್ದರೆ ಅದರಲ್ಲಿ ಅಚ್ಚರಿಯೇನೂ ಇರಲಿಲ್ಲ.

ಸ್ಪಷ್ಟವಾದ ಈ ನಿಲುವಿನೊಂದಿಗೇ ಅನಂತನಾಗ್ ದೇವರ ಕಣ್ಣು, ಬಯಲುದಾರಿ ಚಿತ್ರಗಳಲ್ಲಿ ಅಭಿನಯಿಸಿದ್ದು ಮತ್ತು ಪ್ರೇಮಜ್ವಾಲೆ,ಕುದುರೆಮುಖ ಮುಂತಾದ ಚಿತ್ರಗಳಲ್ಲಿ ಅಭಿನಯಿಸುತ್ತಿರುವುದು.

ಸಂದರ್ಶನ : ಭಾಸ್ಕರ್

## ಕೋಲಾಹಲದ ವರದಿ ಬಗ್ಗೆ

ಖೋಸ್ಲಾ ವರದಿ ಚಿತ್ರರಂಗದ ಒಳಗೆ ಹಾಗೂ ಹೊರಗೆ ಅತ್ಯಂತ ಕೋಲಾಹಲವೆಬ್ಬಿಬ್ಬಿಸಿದ ವರದಿ. ಭಾರತೀಯ ಚಲನಚಿತ್ರಗಳಲ್ಲಿ ಲೈಂಗಿಕ ಹಾಗೂ ಚುಂಬನ ಸನ್ನಿವೇಶಗಳಿಗೆ ಅವಕಾಶ ಕೊಡಬೇಕೆಂದು ಪ್ರತಿಪಾದಿಸುವ ಆ ವರದಿ. ಕಳೆದ ಇಪ್ಪತ್ತು ತಿಂಗಳ




# ಸ್ಟಾರ್ಟ್-ಕಟ್‌ಗಳ ನಡುವೆ ಅನಂತ್‌ಗೆ ಅಭಿನಯ ಮರೆಯುವ ಭಯ

ಅವಧಿಯಲ್ಲಿ ಮೂಲೆಗುಂಪಾಗಿತ್ತು. ಈಗ ಮತ್ತೆ ಆ ವರದಿ ಕುರಿತು ಸರಕಾರದ ಉನ್ನತ ವಲಯದಲ್ಲೂ ಚರ್ಚೆ ಎದ್ದಿದೆ. ಒಂದು ವೇಳೆ ಅದು ಅಂಗೀಕೃತವಾದರೆ, ಸಹಜತೆಗೆ ಅಗತ್ಯವಿದ್ದಷ್ಟು ಎಂಬ ಮಾತನ್ನು ಮರೆತು ಪೂರ್ಣ ಲೈಂಗಿಕ ಚಿತ್ರಗಳನ್ನೇ ನಮ್ಮ ನಿರ್ಮಾಪಕರು ತಯಾರಿಸಬಹುದಾದ ಭಯ ಸಾರ್ವತ್ರಿಕವಾಗಿದೆ. ಒಂದು ವೇಳೆ ಸೆನ್ಸಾರ್ ಅನುಮತಿ ದೊರೆತಲ್ಲಿ ಚಿತ್ರರಂಗ ಯಾವ ಗತಿಯಲ್ಲಿ ಸಾಗೀತು ? ಈ ವಿಷಯದಲ್ಲಿ ಸಮಕಾಲೀನ ಚಿಂತನೆಯ ಈ ನಟ ಏನು ಹೇಳುತ್ತಾರೆ–ಕರ್ಮವೀರ ಅದನ್ನು ತಿಳಿಯಬಯಸಿತು.

"ಸೆನ್ಸಾರ್ ವ್ಯವಸ್ಥೆ ಸಡಿಲುಗೊಂಡಲ್ಲಿ ಇಲ್ಲವೇ ತೆಗೆದೇ ಹಾಕಿದಲ್ಲಿ ನಮ್ಮ ನಿರ್ಮಾಪಕರು "ಬ್ಲೂ ಫಿಲಂ" ಮಾದರಿ ಚಿತ್ರಗಳನ್ನೇ ಹೆಚ್ಚು ತೆಗೆದಾರಲ್ಲವೆ?" ಒಂದು ಪ್ರಶ್ನೆ.

"ಯೂ ಆರ್ ಕರೆಕ್ಟ್. ಆದರಲ್ಲಿ ಅನುಮಾನವೇನೂ ಇಲ್ಲ. ಆದರೆ ನಾವು ಈ ನಿಟ್ಟಿನಲ್ಲಿ ಯೋಚನೆ ಮಾಡುವುದಕ್ಕೆ ಮುನ್ನ ಇನ್ನೊಂದು ಅಂಶವನ್ನು ಗಮನಿಸಬೇಕು. ಇಷ್ಟೆಲ್ಲ ಬಿಗಿ ವ್ಯವಸ್ಥೆಗಳಿರುವ ಈಗ ಬ್ಲೂ ಫಿಲಂ ನಮ್ಮಲ್ಲಿ ಪ್ರದರ್ಶಿತವಾಗುತ್ತಿಲ್ಲೇನು? ಅದರ ನಿರ್ಮಾಣ ನಡೆದಿಲ್ಲೇನು?" ಖಾರವಾಗಿ ಪ್ರಶ್ನಿಸಿದರು ಅನಂತ್. ಮುಂದುವರಿಸಿದರು. "ನಮ್ಮಲ್ಲಿ ಮುಖ್ಯವಾಗಿರೋ ಪ್ರಶ್ನೆ ಅದಲ್ಲ. ಸೆನ್ಸಾರ್ ವ್ಯವಸ್ಥೆ ಸಡಿಲಾಗೋದೂ ಅಂದ್ರೆ ಪೊಲಿಟಿಕಲ್ ಫಿಲಂಸ್ ಮಾಡ್ಲಿಕ್ಕೆ ಅವಕಾಶ ಸಿಗಬೇಕು. ಅದು ಸಿಗ್ತದಾ ? ನನಗೆ ಹಾಗನ್ಸೋಲ್ಲ. ನಮ್ಮಲ್ಲಿ ನಕ್ಸಲೈಟ್ಸ್‌ನ ಗುಂಡಿಟ್ಟು ಕೊಂದ್ರು. ಅದರ ಮೇಲೆ ಸಿನಿಮಾ ಮಾಡ್ಲಿಕ್ಕೆ ಬಿಡ್ತಾರೇನು? ಇವರು. ರಾಜಕೀಯ ಸಿನಿಮಾ ಮಾಡ್ಲಿಕ್ಕೆ ಅವಕಾಶ ಸಿಗಲಿಲ್ಲ ಎಂದರೆ, ಸೆನ್ಸಾರ್ ಬಗ್ಗೆ ಹೇಳೋದೇನೂ ಇರೋದೇ ಇಲ್ಲ."

ಚುಂಬನ ಕುರಿತ ಮತ್ತೊಂದು ಪ್ರಶ್ನೆಗೆ ಉತ್ತರಿಸಿದ್ದು ಹೀಗೆ: "ಚುಂಬನ ನಮ್ಮ ಚಿತ್ರಗಳಲ್ಲಿ ಜಾರಿಗೆ ಬಂದರೆ ನಾನು ಅದನ್ನು ನಿರ್ವಹಿಸಬೇಕಾಗಿ ಬಂದರೆ ಮಾಡಿಯೇನು? ಅನಂತ್ ಹೊಳಪುಗಣ್ಣನ್ನು ಮಿಟುಕಿಸಿ ನಕ್ಕರು

ಅನಂತ್ ದೃಷ್ಟಿಯಲ್ಲಿ ಎಷ್ಟು ಚಿತ್ರಗಳಲ್ಲಿ ಅಭಿನಯಿಸುತ್ತಿದ್ದೇವೆ ಎಂಬುದು ಅಷ್ಟು ಮುಖ್ಯವಲ್ಲ ಹತ್ತು ಚಿತ್ರಗಳಲ್ಲಿ ಹದಿನೈದು ಚಿತ್ರಗಳಲ್ಲಿ ಎಂಬುದು ಅರ್ಥಹೀನ ಎಂಬುದು ಅವರ ಭಾವನೆ. ಆದಾಯ ತರುವ ಒಂದೆರಡು ಚಿತ್ರಗಳಲ್ಲಿ ಅಭಿನಯಿಸುತ್ತಿರಬೇಕು, ಆಫ್‌ಬೀಟ್ ಚಿತ್ರಗಳಲ್ಲಿ ಅಭಿನಯಿಸಲು ಕರೆ ಬಂದರೆ ಅದಕ್ಕೆ ತಕ್ಷಣ ಡೇಟ್ ಕೊಡುವಂತಿರಬೇಕು. ಇದು ಅವರ ಸೂತ್ರ.

ಅನಂತ್‌ಗೆ ಮೆಚ್ಚುಗೆಯಾದ ಚಿತ್ರ ಹಂಸಗೀತೆಯಾದರೂ ಎಲ್ಲ ಕಾಲಕ್ಕೂ ಉತ್ತಮ ಎನ್ನುವ ಚಿತ್ರ ಶ್ಯಾಮ್ ಬೆನಗಲ್‌ರ ಹೊಸ ಚಿತ್ರ "ಅನುಗ್ರಹಂ" (ತೆಲುಗು) ಎಂಬುದು ಅವರ ಅಭಿಮತ. ಹಿಂದಿಯಲ್ಲೂ ಅದು ನಿರ್ಮಾಣವಾಗಿದ್ದು, ಅದಕ್ಕಿನ್ನೂ ನಾಮಕರಣವಾಗಿಲ್ಲ. ಸಂಪ್ರದಾಯಗಳನ್ನು ಅರ್ಥವತ್ತಾಗಿ ಪ್ರಶ್ನಿಸುವ ಈ ಚಿತ್ರ ಎಲ್ಲ ಕಾಲದ ಚಿತ್ರವಾಗಬಹುದೆಂಬುದು ಅನಂತ್ ಅಭಿಪ್ರಾಯ.

ಶೋಷಣೆ ವಿರುದ್ಧ –ರೂಢಿಗತ ಮೌಢ್ಯ ಸಂಪ್ರದಾಯಗಳ ವಿರುದ್ಧ ಮಾತನಾಡುವುದೆಂದರೆ ಅನಂತ್‌ಗೆ ತುಂಬ ಖುಷಿ. ಆ ನಿಟ್ಟಿನಲ್ಲಿ ಏನನ್ನಾದರೂ ಮಾಡಲೇಬೇಕೆಂಬುದವರ ಖಚಿತ ಅಭಿಪ್ರಾಯ. ಎಲ್ಲರಿಗೂ ಇರುವಂತೆ ನಟನಾದವನಿಗೂ ಸಾಮಾಜಿಕ ಹೊಣೆಗಾರಿಕೆ ಇರುತ್ತದೆ. ಆದರೆ ಇಲ್ಲಿ –ನಮ್ಮಲ್ಲಿ ಅದು ಅರ್ಥ ಕಳೆದುಕೊಂಡಿದೆ. ತೆರೆಯ ಹಿಂದೇ ನಿಂತು ನಟನಾದವನು ಇದನ್ನು ಮಾಡಬಹುದು. ಅದನ್ನು ಆಗು ಮಾಡುವ ಬಯಕೆ ಅವರದು.

ಚಿತ್ರ ನಟ ಇಲ್ಲವೆ ಮತ್ತಾವುದೇ ಒಂದು ಉದ್ಯೋಗಿ ಆದ ಮಾತ್ರಕ್ಕೆ ದೇಶದ ರಾಜಕೀಯ ಆಗು ಹೋಗುಗಳಿಗೆ ಆತ ಬೆನ್ನು ಹಾಕಿ ಕೂರುವುದು ಸಲ್ಲ. ಆತನಿಗೂ ಜವಾಬ್ದಾರಿ ಇರುತ್ತದೆ. ಅವ್ಯವಸ್ಥೆ ಒಂದಲ್ಲ ಒಂದು ದಿನ ಸುಮ್ಮನೆ ಕುಳಿತವನನ್ನೂ ತಟ್ಟುತ್ತದೆ. ವ್ಯವಸ್ಥೆಯ ಸುಧಾರಣೆ ಯಾವುದೇ ಒಂದು ಗುಂಪಿನ, ಒಂದು ರಾಜಕೀಯ ಪಕ್ಷದ ಗುತ್ತಿಗೆಯಲ್ಲ. ಯಾವ ವ್ಯವಸ್ಥೆಯನ್ನು ಯಾರು ಒಪ್ಪಿಕೊಳ್ಳಬೇಕಾಗುತ್ತದೋ ಅವರೆಲ್ಲ ಅದರ ಸುಧಾರಣೆಯಲ್ಲಿ ಪಾಲ್ಗೊಳ್ಳಬೇಕು. ಹೀಗೆ ಮಾಡುವುದರಿಂದ ಪ್ರತಿಯೊಬ್ಬನಿಗೂ ಅದರ ಜವಾಬ್ದಾರಿಯ ಅರಿವು ಬರುತ್ತದೆ...ಇವು ಅನಂತ್ ವ್ಯಕ್ತಪಡಿಸಿದ ಕೆಲ ಅಭಿಪ್ರಾಯಗಳು.

## ಇಲ್ಲೂ ನಾಟಕ ಮಾಡುವ ಆಸೆ

ರಂಗಭೂಮಿ ಈ ನಟನ ಬದುಕಿನಲ್ಲಿ ಒಂದಾಗಿರುವ ಅಂಶ. ಮುಂಬಯಿಯಲ್ಲಿ ಆಡಿದ್ದು–ಆಡಿಸಿದ್ದು ಅನೇಕ ನಾಟಕಗಳು. ರಂಗಭೂಮಿಯಿಂದ ಅಮಲೇರಿಸುವ ಚಿತ್ರರಂಗಕ್ಕೆ ಬಂದವರನೇಕರಿಗೆ ರಂಗಭೂಮಿ ಈಗ ಮರೆತೇ ಹೋಗಿದೆ. ಆದರೆ ಅನಂತ್ ಅದಕ್ಕೆ ಹೊರತು. ಬೆಂಗಳೂರಿನಲ್ಲೂ ಒಂದು ನಾಟಕ ನಿರ್ದೇಶಿಸುವ ಯೋಚನೆ ಅವರಿಗೆ ಇದೆ. ಬಿಡುವು ದೊರೆತ ದಿನವೇ ಅದರ ರಿಹರ್ಸಲ್ ಆರಂಭಿಸುವ ಯೋಚನೆಯಿದ್ದು ಗಿರೀಶ್ ಕಾರ್ನಾಡರ ಹೊಸ ನಾಟಕ "ಅಂಜು ಮಲ್ಲಿಗೆ" ಆಯ್ದುಕೊಂಡಿದ್ದಾರೆ.

ಸ್ಟಾರ್ಟ್–ಕಟ್‌ಗಳ ನಡುವೆ ನಿಜವಾದ ಅಭಿನಯವೇ ಮರೆತು ಹೋಗುವ ಭಯ ಇರುತ್ತದೆ. ಅಂಥ ಸಂದರ್ಭಗಳಲ್ಲಿ ನಾಟಕ ಮತ್ತೆ ಜೀವದಾನ ಮಾಡುತ್ತದೆ. ಇದು ಅನಂತ್ ಅಭಿಪ್ರಾಯ.

ಪ್ರಸ್ತುತ ಅವರ ಅಭಿನಯದ ಆರು ಚಿತ್ರಗಳು ತೆರೆಗೆ ಬರುವುದರಲ್ಲಿದ್ದು, ಮೂರು ಚಿತ್ರಗಳಲ್ಲಿ ಅಭಿನಯಿಸುತ್ತಿದ್ದಾರೆ. ಕಾರಂತರ "ನಿಗೂಢ ಮನುಷ್ಯರು" ಗಿರೀಶ ಕಾರ್ನಾಡರ ಹೊಸ ಚಿತ್ರ–ಇವು ಅನಂತ್‌ರ ಹೊಸ ಆಫ್‌ಬೀಟ್ ಚಿತ್ರಗಳು. ●

# ಮಲ್ಲಾಪುರದಿಂದ ಬೆಳ್ಳಿತೆರೆಗೆ

ಕಾಶ್ಮೀರದಲ್ಲಿ ಅನಂತನಾಗ್ ಎಂಬ ಊರೊಂದು ಇದೆಯಂತೆ. ಅದು ಎಷ್ಟರ ಮಟ್ಟಿಗೆ ಪ್ರಸಿದ್ಧ ಎಂಬುದು ಗೊತ್ತಿಲ್ಲ. ಆದರೆ ಅನಂತನಾಗ್ ಎಂಬ ಹೆಸರಿನ ಚಿತ್ರನಟ ನಾಲ್ಕು ವರ್ಷಗಳಿಗೂ ಕಡಿಮೆ ಅವಧಿಯಲ್ಲಿ ಅತ್ಯಂತ ಜನಪ್ರಿಯ ನಟ.

ಈ ಜನಪ್ರಿಯ ನಟ ಚಿತ್ರರಂಗಕ್ಕೆ ಬಂದುದು ಒಂದು ಆಕಸ್ಮಿಕ. ಎಲ್ಲರಿಗೂ ಚಿಕ್ಕ ವಯಸ್ಸಿನಲ್ಲಿ ಹತ್ತು ಹಲವು ಕನಸುಗಳಿರುವಂತೆ ಅನಂತ್‌ಗೂ ಇತ್ತು. ಆದರೆ ಅದರಲ್ಲಿ ಸಿನಿಮಾ ನಟನಾಗುವ ಕನಸಿರಲಿಲ್ಲ. ಕಾಣದ ಕನಸು ನನಸಾಯಿತು. ನನಸಾದ ದಾರಿ ಅನಂತ್ ದೃಷ್ಟಿಯಲ್ಲಿ ಒಂದು ರೋಮಾಂಚಕ ಅನುಭವ. ಅದನ್ನು "ಕರ್ಮವೀರ"ಕ್ಕೆ ನೀಡಿದ ವಿಶೇಷ ಸಂದರ್ಶನದಲ್ಲಿ ಅನಂತನಾಗ್ ವಿವರಿಸಿದ್ದು ಹೀಗೆ:

ಅನಂತನಾಗ್‌ರ ಮೊದಲ ಹೆಸರು ಅನಂತ ನಾಗರಕಟ್ಟೆ. ಉತ್ತರ ಕನ್ನಡ ಜಿಲ್ಲೆಯ ಕುಮಟಾ ಬಳಿಯ ಮಲ್ಲಾಪುರದಲ್ಲಿ ಅವರ ಜನನ. ಕಡು ಬಡ ಕುಟುಂಬದಲ್ಲಿ ಹುಟ್ಟಿದ ಅನಂತ್‌ಗೆ ಚಿಕ್ಕಂದಿನಲ್ಲಿ ವ್ಯವಸ್ಥಿತ ವಿದ್ಯಾಭ್ಯಾಸ ದೊರೆಯಲಿಲ್ಲ. ಅನಂತ್‌ರವರ ತಂದೆ ಮಲ್ಲಾಪುರ ತೊರೆದು, ಬದುಕಿನ ಆಸೆ ಹೊತ್ತು ಮುಂಬಯಿಗೆ ತೆರಳಿದಾಗ ಇವರು ಹಿಂಬಾಲಿಸಿದ್ದು ಪುಟ್ಟ ಪುಟ್ಟ ಹೆಜ್ಜೆಯಿಟ್ಟು.

ಮುಂದೆ ಅನಂತ್‌ಗೆ ನಾಟಕವೇ ಬದುಕಾಯಿತು. ಆ ದಿನಗಳಲ್ಲೇ "ವಂಶ ವೃಕ್ಷ" ಖ್ಯಾತಿಯ ವೆಂಕಟರಾವ್ ತಲಗೇರಿ, ಖ್ಯಾತ ನಾಟಕಕಾರ ನಟ ಆರ್. ಡಿ. ಕಾಮತ್, ಕೆ. ಕೆ. ಸುವರ್ಣರೊಂದಿಗೆ ಸಂಪರ್ಕ. ನಾಟಕ ರಂಗದಲ್ಲಿ ಬೆಳೆಯುತ್ತಿದ್ದ ಈ ನಟನಿಗೆ ಅದರ ಆಧಾರದ ಮೇಲೆಯೇ ಯೂನಿಯನ್ ಬ್ಯಾಂಕಿನಲ್ಲಿ ನೌಕರಿ ದೊರಕಿತು. ಬೆಳಗ್ಗೆ ೧೧ರಿಂದ ೬ರವರೆಗೆ ನೌಕರಿ. ಸಂಜೆ ಹೊತ್ತು ರಂಗಭೂಮಿ ಚಟುವಟಿಕೆ.

### ಹೊಸ ಅಧ್ಯಾಯ

ಜಿ. ವಿ. ಅಯ್ಯರ್‌ರವರ "ಹಂಸಗೀತೆ" ಅನಂತ್ ಬದುಕಿನಲ್ಲಿ ಹೊಸ ಅಧ್ಯಾಯವಾಯಿತು. ಆದರೆ ಅಷ್ಟು ಹೊತ್ತಿಗೆ ಕೆಲಸವೂ ಇಲ್ಲದೆ ಆದಾಯದ ಸಿನಿಮಾವೂ ಇಲ್ಲದೆ ತಂದೆಯ ದೃಷ್ಟಿಯಲ್ಲಿ "ಉಪಯೋಗಕ್ಕೆ ಬಾರದವನು" ಅನ್ನಿಸಿಕೊಂಡಿದ್ದೂ ಆಯಿತು. ಆದರೆ ಆ ಭಾವನೆ ಬಹಳ ದಿನ ಉಳಿಯಲಿಲ್ಲ. ನಂತರ ನಿಷಾಂತ್ (ಅಖಿಲ ಭಾರತ ಖ್ಯಾತಿ) ದೇವರ ಕಣ್ಣು, ಬಯಲು ದಾರಿ, ಕನ್ನೇಶ್ವರ ರಾಮ (ಹಿಂದೀ ಹಾಗೂ ಕನ್ನಡ) ತೆರೆ ಕಂಡವು.

ಇದು ಅನಂತನಾಗ್ ನಡೆದು ಬಂದ ದಾರಿ. ನಡೆಯುವ ದಾರಿಯೂ ಇದೇ. ಅನೇಕ ಕ್ರಾಂತಿಕಾರಿ ವಿಚಾರಗಳು ಅವರ ತಲೆಯಲ್ಲಿ. ಚಲನ ಚಿತ್ರ ಮಾಧ್ಯಮ ಅದರ ಸಾಧಕ–ಬಾಧಕಗಳ ಬಗ್ಗೆ ಅನಂತ್‌ರವರಿಗೆ ಖಚಿತ ನಿಲುವುಗಳಿವೆ. ಮಾರ್ಕ್ಸ್‌ವಾದವನ್ನು ಬಲವಾಗಿ ಮೆಚ್ಚುವ ಅವರಿಗೆ ಜಯಪ್ರಕಾಶ್ ನಾರಾಯಣ್‌ರವರ "ಸಂಪೂರ್ಣ ಕ್ರಾಂತಿ"ಯಲ್ಲಿ ಅಪಾರ ವಿಶ್ವಾಸ ರೂಢಿಗತ ಸಂಪ್ರದಾಯ– ಮೌಢ್ಯಗಳ ವಿರುದ್ಧ ಆದಷ್ಟೂ ದೃಶ್ಯ ಮಾಧ್ಯಮ ಶಿಕ್ಷಣ ನೀಡುವಂತಾಗಬೇಕು. ಇದು ಅವರ ನಿಲುವು. ಅವರ ನಿಲುವಿನ ಕೆಲ ಮುಖಗಳೇ ಈ ಸಂದರ್ಶನ.

# ವಜ್ರದ ಕೊಂಬು

ಟಿ. ಕೆ. ರಾಮರಾವ್

ಮೂವತ್ತು ತಾಸುಗಳ, ಒಂಭೈನೂರು ಮೈಲಿಗಳಿಗೂ ಅಧಿಕವಾದ ಬಿರುಸಿನ ಓಟ ಮುಗಿಸಿದ ಟ್ರೇನಾ ಗುಡ್ಡಗಳ ಮಧ್ಯ ದೃಢ ಗಂಭೀರತೆಯ ದೀರ್ಘ ಸಿಳ್ಳು ಹಾಕಿ ಪ್ರಯಾಣಿಕರ ಮಧ್ಯಾಹ್ನದ ನಿದ್ರೆ ಜೊಂಪನ್ನು ಕದಲಿಸಿತು. ಜೂನ್ ತಿಂಗಳ ಸೂರ್ಯನಾ ಮಧ್ಯಾಹ್ನದ ಪ್ರಖರತೆಯನ್ನು ಬೆನ್ನ ಮೇಲೆ ಹರಡಿಕೊಂಡು ಒಂದೇ ಗತಿಯಲ್ಲಿ ಧಾವಿಸಿತ್ತು ಹವಾನಿಯಂತ್ರಿತ ಪಂಜಾಬ್ ಮೈಲ್ ರೈಲು ಗಾಡಿ.

ಕಿಟಕಿಯಲ್ಲಿ ಸರಿದ ದೃಶ್ಯಗಳ ಮೇಲೆ ಕಣ್ಣು ಹರಿಸಿ ಬೇಸರಗೊಂಡ ಅರ್ಚನಾ ಹಣೆಯ ಮೇಲೆ ಸರಿದಾಡಿದ ಕೂದಲು ಹಿಂದಕ್ಕೆ ಸರಿಸಿ ಹಳೆಯ ಪತ್ರಿಕೆ ತೆರೆದಳು.

"ಇನ್ನರ್ಧ ಗಂಟೆಯಲ್ಲಿ ಕಲ್ಯಾಣಾ ಸೇರ್ತೀವಿ......ಆಮೇಲೆ ಒಂದು ಗಂಟೆಯಷ್ಟು ಪ್ರಯಾಣ ಆದರೆ ಬಾಂಬೆ."

ಕೈ ಗಡಿಯಾರ ನೋಡುತ್ತಾ ಹೇಳಿದ ಎದುರು ಸೀಟಿನವ ಹೊರನಡೆದು ಎರಡು ನಿಮಿಷಗಳಲ್ಲಿ ಎರಡು ಕಪ್ ಕಣ್ಣನೆಯ ಫ್ರೂಟ್ ಕ್ರೀಮ್ ತಂದು ಅವಳಿಗೊಂದು ನೀಡಿದ.

"ಥ್ಯಾಂಕ್ಸ್......ನಿಮ್ಮಿಂದ ಬಹಳ ಕೆಲಸ, ಬಹಳ ಖರ್ಚು ಮಾಡ್ಸಿದೀನಿ."

ಕೃತಜ್ಞತೆಯ ನಗೆ ಮುಖ ತೋರಿ ಕೈಲಿದ್ದ ಕಪ್ ತಿರುಗಿಸಿದಳು.

"ನನ್ನ ಕೆಲಸದ ಕೂಲಿ ಲೆಕ್ಕ ಹಾಕಿ, ಬೊಂಬಾಯಿ ಸೇರಿದಮೇಲೆ ಖರ್ಚಿನ ಪಟ್ಟಿ ಒಪ್ಪಿಸ್ತೀನಿ. ಹಣ ಒಟ್ಟಿಗೆ ಕೊಡುವಿರಂತೆ."

ಎಂದು ಅಣುಕು ಗಾಂಭೀರ್ಯದಲ್ಲಿ ಸೌಜನ್ಯತೆ ಬೆರೆಸಿ ನುಡಿದ ಚೆಂದದ ಮುಖದವನು ಅವಳಿಂದ ಚೆಂದದ ನಗೆ ಹೊರಡಿಸಿದ.

ನವೀನ ದಾಮ್ಲೆ! ಆ ಸಹ ಪ್ರಯಾಣಿಕ ಇಲ್ಲವಾಗಿದ್ದರೆ ಆ ದೀರ್ಘ ರೈಲು ಪ್ರಯಾಣ ಎಷ್ಟು ಬೇಸರಮಯವಾಗುತ್ತಿತ್ತೆಂದು ಕಲ್ಪಿಸಿಕೊಂಡು ಹಣೆ ಒರೆಸಿದಳು.

ನಿನ್ನೆಯ ಬೆಳಗ್ಗೆ ಏಳೂವರೆಯ ಹೊತ್ತಿನಲ್ಲಿ ಪ್ರಯಾಣಿಕರ ಪ್ರವಾಹದ ತಲೆಗೆಡಿಸುವ ಗಲಾಟೆ ಆವರಣದ ಡೆಲ್ಲಿ ಜಂಕ್ಷನ್‌ನಲ್ಲಿ ರೈಲು ಏರಿದಾಗಲೇ ಅವನ ಮುಖ, ನಡಿಗೆ ಕಣ್ಣು ಸೆಳೆದಿತ್ತು. ಬೆಲೆ ಬಾಳುವ ಒಂದೇ ಒಂದು ಸೂಟ್‌ಕೇಸು ಹಿಡಿದು ಅವಳ ಎದುರು ಸೀಟಿಗೆ ಬಂದಿದ್ದ. ರೈಲು ಡೆಲ್ಲಿ ಬಿಟ್ಟ ಹದಿನೈದು ನಿಮಿಷಗಳ ನಂತರ ಡೈನಿಂಗ್ ಕಾರ್‌ನಿಂದ ಎರಡು ಲೋಟ ಕಾಫಿ ತಂದು ಚೆನ್ನಾಗಿ ಕಾಣುವ ಭಂಗಿಯಲ್ಲಿ ನಿಂತ.

ಎರಡನೆಯ ಲೋಟ ಯಾರಿಗೆ? ಯೋಚನೆಗೆ ಮೊದಲೇ ಅವನ ಹಿತವಾದ ಒತ್ತಾಯಕ್ಕೆ ಮಣಿದು ಲೋಟ ತೆಗೆದುಕೊಂಡಿದ್ದಳು.

ಕಪ್ಪು ಗೀರುಗಳ ಕಂದು ಪ್ಯಾಂಟು. ತಿಳಿಗೆಂಪಿನ ಅರೆ ತೋಳು ಷರಟು. ತಲೆಯಲ್ಲಿ ಮೆಲ್ಲನೆ ಜಿಗಿದಾಡಿದ ಕೂದಲು. ತಿಳಿಗಪ್ಪು ಕನ್ನಡಕ......ನಡೆ, ನಿಲುವಿಗೆ ಒಪ್ಪುವ ಸೌಜನ್ಯದ ಮಾತುಗಳು.

ಅರ್ಚನಾ ಸೆಳೆತಕ್ಕೆ ಒಳಗಾಗಿ ಉಸಿರೆಳೆದುಕೊಂಡಳು. ಸಿನಿಮಾ ವಾರ ಪತ್ರಿಕೆ ಅವಳಿಗೆ ಕೊಟ್ಟು ಹಾಸ್ಯದಲ್ಲಿ ಹೇಳಿದ್ದ.

"ಸಂಕೋಚ ಪಡಬೇಡಿ. ಈ ರೈಲು ಬೊಂಬಾಯಿ ಸೇರೋ ಹೊತ್ತಿಗೆ ನೀವೇ ಬೇಸರದಿಂದ ನನ್ನ ಕೆಣಕಿ ಮಾತಾಡಿಸೊ ಹಾಗೆ ಆಗಿ ಬಿಡ್ತೀರಿ. ಅಷ್ಟು ದೊಡ್ಡ ಪ್ರಯಾಣ ಇದು!"

ಅವಳ ಕಣ್ಣುಗಳು ಮಿನುಗಿದವು.

"ಬೊಂಬಾಯಿಗೆ ಹೋಗ್ತಿದೀನಿ ಅಂತ ಹೇಗೆ ಗೊತ್ತಾಯ್ತು?"

"ಮೆಡಾಂ, ಯಾವ ದೊಡ್ಡ ಶೋಧನೆ ಅದು! ಕಂಪಾರ್ಟ್‌ಮೆಂಟ್ ಹೊರಗೆ ಹಾಕಿರೊ ರಿಸರ್ವೇಶನ್ ಪಟ್ಟಿಯಲ್ಲಿ ನಿಮ್ಮ ಸೀಟಿನ ನಂಬರು ಬೊಂಬಾಯಿ ತೋರಿಸ್ತಾ ಇದೆ......ನಿಮ್ಮ ಹೆಸರು ಅರ್ಚನಾ ಪಾವನಾ ಅನ್ನೋದನ್ನೂ ನಾನು ಕೇಳಿ ತಿಳಿಂಪೊ ಅಗತ್ಯ ಇಲ್ಲ."

ಅರ್ಚನಾಳ ಕೆನ್ನೆ ಕೆಂಪಾಯಿತು.

"ಹೌದು, ನಾನು ಬೊಂಬಾಯಿಗೆ ಹೋಗ್ತಿದೀನಿ"

"ನನ್ನ ಹೆಸರು ನವೀನ ದಾಮ್ಲೆ. ನಾನೂ ಅಲ್ಲಿಗೇ ಹೋಗ್ತಿರೋದು. ನೀವು ಈ ಏರ್ ಕಂಡೀಷನ್ಡ್ ಮೈಲ್‌ನಲ್ಲಿ ಬರೋದಿಕ್ಕೆ ಬದಲು ಪ್ಲೇನ್‌ನಲ್ಲಿ ಪ್ರಯಾಣ ಮಾಡಬಹುದಿತ್ತು."

ಅವಳ ಮುಖ ನೋಡಿ ಅಂತಸ್ತಿನ ನಾಡಿ ಹಿಡಿಯುವ ಪ್ರಯತ್ನ ಮಾಡಿದ.

"ರೈಲಿನಲ್ಲಿ ಪ್ರಯಾಣ ಮಾಡಿದ್ರೆ ದೇಶ ಚೆನ್ನಾಗಿ ನೋಡಿಕೊಂಡು ಹೋಗಬಹುದು ಅಂತಾರೆ ನೋಡಿ."

ಅವಳು ಶ್ರೀಮಂತೆ ಎಂಬುದು ಅಲ್ಲಗಳೆಯುವಂತಿಲ್ಲ! ನವೀನ ಸಿಗರೇಟು ಹೊತ್ತಿಸಿದ.

"ಬೊಂಬಾಯಿಗೆ ಹೋಗ್ತಿರೋದು ಮೊದಲನೆ ಬಾರಿಗೆ ಅಂತ ತೋರುತ್ತೆ"

"ಹೌದು."

"ನಿಮ್ಮ ಸ್ನೇಹಿತರು, ಬಂಧುಗಳು ಇರಬೇಕು ಅಲ್ಲಿ"

ಮುಖ ಅವನ ಕಡೆ ತಿರುಗಿಸಿದಳು. ಎರಡು ತಾಸುಗಳ ಹಿಂದೆ ಪರಿಚಿತನಾದ ಸಹ ಪ್ರಯಾಣಿಕ. ಉತ್ತರಿಸುವುದು ಸರಿಯೆ?

"ಅಲ್ಲಿ ಯಾರೂ ಇಲ್ಲ...ಆಫೀಸ್ ಕೆಲಸದ ಮೇಲೆ ಹೋಗ್ತಿದೀವಿ. ನೀವು ಬೊಂಬಾಯಿನಲ್ಲಿ ವಾಸ ಮಾಡ್ತೀರೇನು?"

"ಬೊಂಬಾಯಿಗೆ ತಿಂಗಳಿಗೊಂದು ಸಾರಿಯಾದ್ರೂ ಹೋಗ್ತೀನಿ. ಅಲ್ಲಿ ಸಯಾನ್‌ನಲ್ಲಿ ನನ್ನ ಸೋದರತ್ತೆ ಇದಾಳೆ......ನಾನು ಡೆಲ್ಲಿ, ಮದ್ರಾಸ್, ಕೊಚ್ಚೀನ್ ಅಂತ ಓಡಾಡ್ತಲೇ ಇರ್ತೀನಿ."

ಆಗ್ರಾ ಕಂಟೋನ್ಮೆಂಟ್ ತಲುಪುವುದರಲ್ಲಿ ಎರಡನೆಯ ಕಾಫಿ ತಂದು ಕೊಟ್ಟು ಪತ್ತಾರು ಸೊಗಸಿನ ಮಾತುಗಳನ್ನಾಡಿದ್ದ.

ಮತ್ತೆ ಅರ್ಧ ಗಂಟೆ ಇಬ್ಬರಲ್ಲೂ ಮಾತು ಬರಲಿಲ್ಲ. ಝಾನ್ಸಿ ನಿಲ್ದಾಣ ಬರುವುದರಲ್ಲಿ ಪರಿಚಯ ಮತ್ತಷ್ಟು ಹದವಾಗಿ ಬೆಳೆದು ಮಧ್ಯಾಹ್ನದ ಊಟ ಮುಗಿಸಿದರು.

ಪತ್ರಿಕೆ ಹಿಡಿದವಳನ್ನು ಆಸಕ್ತಿಯಿಂದ ಗಮನಿಸಿದ ನವೀನ. ಪರಿಚಯವಾಗಿದ್ದರೂ ಕೇಳಲಾಗದ ವಿಷಯಗಳು.

ಅರ್ಚನಾ ಉನ್ನತ ಅಂತಸ್ತಿನ ಯುವತಿ...ಬೊಂಬಾಯಿನಲ್ಲಿ ಅವಳ ಬಂಧುಗಳಿಲ್ಲ....ಆ ಮಹಾ ನಗರಕ್ಕೆ ಪ್ರಥಮ ಬಾರಿಗೆ ಒಂಟಿಯಾಗಿ ಪ್ರಯಾಣ ಮಾಡುತ್ತಿರುವ ಚೆಲುವೆ!

ಕುತೂಹಲ ತಡೆಯದೆ ನಯವಾಗಿ ಮಾತೆತ್ತಿದ.

"ನಿಮ್ಮ ಹೆಸರು ಅರ್ಚನಾ ಪಾವನ್ ಅಂತ ಪಟ್ಟಿಯಲ್ಲಿ ಓದಿದಾಗ ತಲೆಯಲ್ಲಿ ಸ್ವಲ್ಪ ಕೆದಕಿದ ಹಾಗಾಯ್ತು...ಕ್ಷಮಿಸಿ, ನೀವು ದೀಪಕ್ ಪಾವನ್‌ಗೆ ಬಂಧುವಲ್ಲ ಅಂತ ಭಾವಿಸಲೆ?...ಮಾರ್ಚ್‌ನಲ್ಲಿ ಬೊಂಬಾಯಿನ ಯಾವುದೋ ಭಾಗದಲ್ಲಿ ಸತ್ತು ಹೋದ ವ್ಯಕ್ತಿ...?"

ಬೆರಳೆತ್ತಿ ನೆನಪು ಕೆದರಿಕೊಂಡ.

ಅವಳ ಮುಖ ಹಿಂದಕ್ಕೆ ಸರಿಯಿತು. ಕಪ್ಪು ಕಣ್ಣುಗಳು ವಿಶಾಲಗೊಂಡು ಸೊಗಸಿನ ಮುಖದಲ್ಲಿ ರಂಗು ಬದಲಿಸಿತು.

"ದೀಪಕ ಪಾವನ್ ನನ್ನ ಅಣ್ಣ...ಬೊಂಬಾಯಿನಲ್ಲಿ ಸತ್ತಿದ್ದು ಅವನೇ."

ಕೈ ಕಂಪಿಸಿತು. ತುಟಿ ಕಚ್ಚಿದಳು.

ಅವನು ಮುಖ ಹಿಂತೆಗೆದ.

"ಮರಣದ ಸುದ್ದಿ ಪತ್ರಿಕೆಯಲ್ಲಿ ಬಂದಿತ್ತು."

"ಅಣ್ಣ ಆತ್ಮಹತ್ಯೆ ಮಾಡಿಕೊಂಡಿದ್ದು ದುರದೃಷ್ಟದ ಸಂಗತಿ. ಅವನಿಗ ಅಷ್ಟು ನಿಶ್ಶಕ್ತ ಮನಸ್ಸು ಇತ್ತೂಂತ ನಂಬೋದಿಕ್ಕೆ ಸಾಧ್ಯವಿಲ್ಲ"

ನೋವಿನ ಧ್ವನಿಯೊಂದಿಗೆ ಕಣ್ಣುಗಳ ಹೊಳಪು ಇಳಿಯಿತು. ಮೃದು ತುಟಿಗಳು ಅದುರಿದವು.

"ಆ ಸಂಬಂಧದಲ್ಲಿ ಈಗ ಪ್ರಯಾಣ ಮಾಡ್ತಿದೀರಾ?"

"ಅಣ್ಣಾ ಸತ್ತು ಮೂರು ತಿಂಗಳಾಯ್ತು. ನನಗೆ ಸುದ್ದಿ ತಿಳಿದಾಗಲೇ ವಿಳಂಬವಾಗಿತ್ತು. ಆಗ ಬರಲಿಕ್ಕೆ ಆಗ್ಲಿಲ್ಲ. ಈಗ ಅವನ ಸಮಾಧಿ ನೋಡಲಿಕ್ಕೆ ಹೋಗ್ತಿದೀನಿ."

ತಲೆ ತಗ್ಗಿಸಿ ಕರವಸ್ತ್ರದಿಂದ ಕಣ್ಣು ಒತ್ತಿದಳು.

ನವೀನ ಪಕ್ಕಗಳಿಗೆ ನೋಡಿದ. ಪ್ರಯಾಣಿಕರಿಗೆಲ್ಲಾ ನಿದ್ರೆಯ ಸೆಳೆತ.

"ನಾನೂ ವಿಷಾದ ಪಡ್ತೀನಿ, ಮಿಸ್ ಅರ್ಚನಾ...ನೀವು ತಪ್ಪು ತಿಳಿಯೋದಿಲ್ಲವಾದ್ರೆ ನಿಮ್ಮಣ್ಣನ ವಿಷಯದಲ್ಲಿ ಸ್ವಲ್ಪ ವಿವರ ಕೊಡಿ."

ಮುಂದಕ್ಕೆ ಸರಿದು ಕುಳಿತು ಆಸಕ್ತಿ ತೋರಿದ.

"ದೀಪಕ ನನಗಿಂತ ಐದು ವರ್ಷ ದೊಡ್ಡೋನು. ತಂದೆ ತೀರಿ ಹೋದಾಗ ನನಗೆ ಡೆಲ್ಲಿಯಲ್ಲಿ ಆಸ್ತಿ ಬಿಟ್ಟು ಹೋದ್ರು. ಅಣ್ಣನಿಗೆ ಚಿತ್ರಕಲೆಯಲ್ಲಿ ಮೊದಲಿನಿಂದ ಆಸಕ್ತಿ. ನಗರಸಾರಿಗೆ ಇಲಾಖೆಯಲ್ಲಿ ದೊಡ್ಡ ಕೆಲಸ ಇತ್ತು. ಬಿಡುವಿಲ್ಲದ ಜವಾಬ್ದಾರಿಯ ಕೆಲಸ. ನನ್ನ ಓದಿಸ್ದ. ನಾನು ಸೆಕ್ರೆಟೇರಿಯಲ್ ಕೋರ್ಸ್ ಮುಗಿಸಿದ್ದು ಅವನ ಇಚ್ಛೆ ಮೇಲೆ......"

ಅವಳಿಗೆ ಆಗ ಡೆಲ್ಲಿಯ ನೆನಪು. ಜನ ನಿಬಿಡ ಕನ್ನಾಟ್ ಸರ್ಕಸ್ ಹಿಂದೆ ಅಡ್ಡ ರಸ್ತೆಯಲ್ಲಿ ತಿಂಗಳಿಗೆ ಐದು ಸಾವಿರದ ಬಾಡಿಗೆ ತರುವ ನಾಲ್ಕು ಅಂಗಡಿಗಳ ಸಾಲು. ಎರಡು ಅಂತಸ್ತುಗಳ ಒಂದು ದೊಡ್ಡ ಮನೆ. ...ತಂದೆ ಹೋದ ಮೇಲೆ ದುಃಖದ ಎಳೆ ತಾಕದಂತೆ ನೋಡಿಕೊಂಡ ಅಣ್ಣ. ಪ್ರತಿ ಸಂಜೆಯ ಬಿಡುವಿನಲ್ಲಿ ಅವನೊಂದಿಗೆ ಕಾರಿನಲ್ಲಿ ಸುತ್ತಾಟ. ಪ್ರತಿ ವಾರ ತಂದು ಕೊಡುತ್ತಿದ್ದ ಉಡುಗೆಗಳು, ಶೃಂಗಾರದ ವಸ್ತುಗಳು. ತನ್ನ ಓದು, ಸಂತೋಷದ ಬದುಕಿಗಾಗಿ ಬದಿಗಿಟ್ಟ ಚಿತ್ರಕಲೆಯ ಹವ್ಯಾಸ......

"ಹೇಳಿ......"

ನವೀನ ಅವಳಿಗೆ ಮುಂದೆ ಹೇಳಲು ನಯವಾಗಿ ಉತ್ತೇಜಿಸಿದ.

"ಅವನಿಗೆ ಬಿಡುವಿಲ್ಲದ ಕೆಲಸ...ಮೂರು ತಿಂಗಳ ಹಿಂದೆ ಸಂಬಳದ ಬಾಕಿ ಹಣ ಒಟ್ಟಾಗಿ ಬಂದಿತ್ತು. ಅವನಿಗೆ ನೆಮ್ಮದಿ, ವಿಶ್ರಾಂತಿ ಇರಲಿ ಅಂತ ನಾನೇ ಬೊಂಬಾಯಿಗೆ ಹೋಗೋದಿಕ್ಕೆ ಸೂಚಿಸಿದೆ. ನನಗೆ ರಜೆ ಸಿಗ್ಲಿಲ್ಲ. ...ಬಂಧುವೊಬ್ಬರ ಮನೆಯಲ್ಲಿ ನನ್ನ ಬಿಟ್ಟು ಹದಿನೈದು ದಿನಗಳ ಪ್ರವಾಸದ ಮೇಲೆ ಹೋದ......"

"ಆಮೇಲೆ" ಕುತೂಹಲ ತೋರಿದ.

"ಬೊಂಬಾಯಿ ಸೇರಿದ ಎರಡು ದಿನಗಳ ಮೇಲೆ ಒಂದು ಕಾಗದ ಬರೆದ... ಎಲಿಫಂಟಾ, ಮಲಬಾರ್‌ಹಿಲ್, ಚೌಪಾಟಿ, ಜುಹುನಲ್ಲಿ ಚಿತ್ರ ಬರೆದದ್ದು ತಿಳಿಸಿದ.... ಆಮೇಲೆ ಕನ್ಹೇರಿ ಗುಹೆಗಳ ಚಿತ್ರ ಬರೆಯೊ ಆಸೆ! ಅವನಿದ್ದ ಹೋಟೇಲಿನಲ್ಲಿ ಯಾರೋ ಹೇಳಿದ್ರಂತೆ ಅದು ಅಗತ್ಯವಾಗಿ ನೋಡಬೇಕಾದ ಸ್ಥಳ ಅಂತ...ಬೋರಿವಿಲಿಯಿಂದ ಬರೆದಿದ್ದ ಕಾಗದ ಅದು......ಬೋರಿವಿಲಿ ಎಲ್ಲಿದೆ?"

"ಬೊಂಬಾಯಿನಲ್ಲೇ ಒಂದು ಬಡಾವಣೆ. ಬಾಂಬೆ ವಿ. ಟಿ. ಸ್ಟೇಷನ್‌ನಿಂದ ಸುಮಾರು ಇಪ್ಪತ್ತು ಮೈಲಿ. ಅಲ್ಲಿಂದಲೇ ಕನ್ಹೇರಿ ಗುಹೆಗಳಿಗೆ ಹೋಗ್ಬೇಕು."

ತಲೆ ಅಲುಗಿಸಿದಳು.

"ಬೋರಿವಿಲಿಯಿಂದ ಬರೆದ ಮೂರನೆ ಕಾಗದವೇ ಕಡೇದು...ಅಲ್ಲಿ ಎರಡು ದಿನ ಕಳೆದು, ಮಹಾಬಲೇಶ್ವರಕ್ಕೆ ಹೋಗಿ, ಪೂನಾ ನೋಡಿಕೊಂಡು ಡೆಲ್ಲಿಗೆ ಹಿಂತಿರುಗೋದು ಅಂತ ತಿಳಿಸಿದ್ದ. ಡೆಲ್ಲಿಗೆ ಇಳಿಯುತ್ತಲೇ ನನಗೊಂದು ಆಶ್ಚರ್ಯದ ಸಂಗತಿ ಕಾದಿದೆ ಅಂತ ಕುತೂಹಲ ಕೆರಳಿಸಿದ್ದ...ಅವನು ಸಾಯೋದಿಕ್ಕೆ ಐದಾರು ದಿನಗಳ ಮೊದಲು ಹಾಗೆಲ್ಲಾ ಬರೆದಿದ್ದು. ಪ್ರವಾಸದಲ್ಲಿ ಅಷ್ಟೊಂದು ಉತ್ಸಾಹ, ಆಸಕ್ತಿ ತೋರಿದ್ದೋನು ಏಕಾಏಕಿ ಆತ್ಮಹತ್ಯೆ ಯಾಕೆ ಮಾಡ್ಕೊಂಡ?"

ಅವಳು ಕಂಪಿಸುತ್ತಿದ್ದ ಕೈ ನೋಡಿಕೊಂಡಳು. ನವೀನನ ಬೆರಳು ಅವಳ ಕೈ ತಟ್ಟಿತು. ಉಸಿರು ಬಿಗಿ ಹಿಡಿದು ಕೈ ಮೆಲ್ಲನೆ ಎಳೆದುಕೊಂಡಳು.

ನವೀನ ಅವಳು ಚಕಿತಗೊಳ್ಳುವಂತೆ ಹೇಳಿದ.

"ಅದು ಸಂಭವಿಸಿದಾಗ ನಾನು ಬೊಂಬಾಯಿನಲ್ಲಿದ್ದೆ. ಪತ್ರಿಕೆಗಳಲ್ಲಿ ಸುದ್ದಿ ನೋಡಿದೆ. ನಿಮ್ಮಣ್ಣನ ದೇಹ ಸಿಕ್ಕಿದ್ದು ಕನ್ಹೇರಿ ಗುಹೆಗಳ ತಗ್ಗಿನ ಸಣ್ಣ ಜಂಗಲ್‌ನಲ್ಲಿ. ಅವನ ಪಕ್ಕದಲ್ಲಿ ರಿವಾಲ್ವರ್ ಇತ್ತು. ಅದರ ಮೇಲೆ ಅವನದೇ ಬೆರಳಚ್ಚು......ಈ ವಿವರವೆಲ್ಲಾ ನಾನು ಈಗ ಹೇಳಿದ ಹಾಗೆ......ಹೌದಾ?"

"ಹೌದು, ಹೌದು."

ಆಸಕ್ತನನ್ನು ಯಾವುದೊ ಆಸೆಯಿಂದ ನೋಡಿದಳು.

"ಅದು ಆತ್ಮಹತ್ಯೆ ತಾನೆ?"

"ಅಣ್ಣನಿಗೆ ರಿವಾಲ್ವರ್ ಹಿಡಿಯೋದು ಗೊತ್ತಿರಲಿಲ್ಲ."

"ಅದಕ್ಕೆ ಯಾವ ತರಪೇತು, ಅನುಭವ ಬೇಕಿಲ್ಲ. ರಿವಾಲ್ವರ್ ದೇಹದ ಮುಂದೆ ಹಿಡಿದು ಕೊಕ್ಕೆ ಎಳೆದರೆ ಆಯ್ತು."

ನಿಟ್ಟುಸಿರು ಹಾಕಿದಳು .

"ಹಾಗೆ ಸಾಯೋದಿಕ್ಕೆ ಕನ್ಹೇರಿ ಗುಹೆಗಳ ಹತ್ರಕ್ಕೆ ಯಾಕೆ ಹೋಗಬೇಕಿತ್ತು ಅವನು? ಅವತ್ತು ಯಾರೂ ಪ್ರವಾಸಿಗಳೇ ಇರಲಿಲ್ಲವಂತೆ! ಚಿತ್ರ ಬರೆಯೋದಿಕ್ಕೆ ಹೋದೋನಿಗೆ ಅದು ವಿಕೃತ ಸ್ಫೂರ್ತಿ ಅಂತೀರಾ?"

ಅವಳಲ್ಲಿ ತುಂಬಿದ್ದ ಶಂಕೆ ಅವನಿಗೆ ಅರ್ಥವಾಯಿತು.



"ಇವೆಲ್ಲಾ ತಲೆಯಲ್ಲಿ ತುಂಬಿಕೊಂಡು ಬೊಂಬಾಯಿಗೆ ಹೋಗ್ತಿದೀರಿ. ನಿಮಗೆ ಅಲ್ಲಿ ಹೊಸದೇನೂ ಸಿಗೋದಿಲ್ಲ.......ಇವೆಲ್ಲಾ ಮುಗಿದು ಮೂರು ತಿಂಗಳಾಗಿವೆ."

ತನಗೆ ಭರವಸೆ ಉಳಿದಿಲ್ಲ ಎನಿಸಿತು. ಸಹಪ್ರಯಾಣಕನಿಗೆ ಭಾವೋದ್ರೇಕದಲ್ಲಿ ತನ್ನ ಕಥೆ ಹೇಳಿದುದು ಹೆಡ್ಡತನ. ಸಹಾಯ ಪಡೆಯುವ ಆಸೆಯಲ್ಲಿ ಹಾಗೆ ಹೇಳಿದ್ದಳು.

ಅಣ್ಣ ದೀಪಕನ ಚಿತ್ರ ಸುಳಿದಾಡಿತು. ಹಸಿದ ಕಣ್ಣುಗಳ ಗಂಭೀರ ಮುಖ. ಮಾತಿನೊಂದಿಗೆ ಕೂಡಿ ಬರುವ ಮುಗುಳು ನಗೆ...

ಹೊಸಬನಲ್ಲಿ ವಿಷಯ ಬಿಚ್ಚಿಟ್ಟದ್ದು ತಪ್ಪು!

ಅವಳ ಚಿಂತೆ, ತುಮುಲಗಳಿಗೆ ಗಮನ ಕೊಡದವನಂತೆ ಅವನು ಸಿಗರೇಟು ಹೊಗೆ ತೂರುತ್ತಿದ್ದ. ರೈಲು ಒಂದೇ ವೇಗದಲ್ಲಿ ಸಾಗಿತ್ತು. ರಾತ್ರಿ ವಿಧಿದಂತೆ ಮಾತು ಕಡಿಮೆ ಆಯಿತು. ಊಟ ಮುಗಿಸಿದರು.

ಹನ್ನೊಂದೂವರೆಯ ಹೊತ್ತಿಗೆ ಜನನಿಬಿಡ ದೊಡ್ಡ ನಿಲ್ದಾಣದಲ್ಲಿ ರೈಲು ನಿಂತಿತು.

"ಇದು ಇಟಾರ್ಸಿ ಅಂತ...ಕೇಳಿರಬಹುದು. ದೊಡ್ಡ ಜಂಕ್ಷನ್. ಸ್ವಲ್ಪ ಇಳಿಯೋಣವೆ? ಪ್ಲಾಟ್‌ಫಾರಂ ನೋಡಲಿಕ್ಕಲ್ಲ. ನಿಮ್ಮ ಬೇಸರದ ಒಂದು ಪದರ ಕಳಚಿ ಹಾಕಲಿಕ್ಕೆ."

ಮಾತಿಲ್ಲದೆ ಅವನೊಂದಿಗೆ ಇಳಿದಳು. ನಿಜಕ್ಕೂ ಅದು ಭಾರಿ ನಿಲ್ದಾಣ. ರಾತ್ರಿಯ ವಾತಾವರಣವನ್ನು ಮರೆಸುವಂತಹ ರೈಲುಗಳ ಸರಿದಾಟ. ಗಲಭೆಯ ಜನಜಂಗುಳಿ.

ಪುಸ್ತಕಗಳ ಸ್ಟಾಲ್‌ನಲ್ಲಿ ನವೀನ ಮರಾಠಿ ಪತ್ರಿಕೆ ಕೊಂಡ. ಅರ್ಚನಾ ಹುಬ್ಬೇರಿಸಿದಳು. ಸಹ ಪ್ರಯಾಣಿಕ ಬಹುಭಾಷಿ!

ಹತ್ತು ನಿಮಿಷಗಳಲ್ಲಿ ಕಂಪಾರ್ಟ್‌ಮೆಂಟಿಗೆ ಹಿಂತಿರುಗಿದರು.

ರಾತ್ರಿಯ ಗಾಢತೆ, ರೈಲಿನ ವೇಗದೊಂದಿಗೆ ಅವಳಿಗೆ ಚಿಂತೆ, ಭಾವನೆಗಳ ತುಳುಕಾಟ. ಬದುಕಿಗೆ ಅಂಟಿದ ಪರಿಸರ, ರಕ್ಷಣಾವಲಯದಿಂದ ದೂರವಾಗುತ್ತಿರುವೆ ಎಂಬ ತಾಕಲಾಟ. ಬೊಂಬಾಯಿಯಲ್ಲಿ ನಾಲ್ಕು ದಿನ ಉಳಿದು ಹಿಂತಿರುಗುವುದು ವಿಹಿತ ಎನಿಸಿತು. ಶರೀರ ಅಗೋಚರ ಭೀತಿಯಿಂದ ಕಂಪಿಸಿತು.

"ಮುಖ ನೋಡಿದರೆ ಮನಸ್ಸು ಸರಿ ಇಲ್ಲಾಂತ ತೋರುತ್ತೆ. ತಲೆ ನೋವೆ?"

ನಿಜ ಹೇಳುವ ಸಾಧ್ಯತೆ ಇಲ್ಲದೆ ತಲೆ ಅಲುಗಿಸಿದಳು. ನವೀನ ಸೂಟ್‌ಕೇಸಿನಿಂದ ಎರಡು ಗುಳಿಗೆಗಳ ಪಟ್ಟಿ ತೆಗೆದ. ಒಂದು ಗ್ಲಾಸ್ ನೀರುತಂದು ಕೊಡುವುದನ್ನೂ ಮರೆಯಲಿಲ್ಲ.. ಅವಳಿಗೆ ನಿದ್ರೆ ಹತ್ತಿತು.

ಬೆಳ್ಳನೆ ಬೆಳಗಾದಾಗ ರೈಲು ಭುಸಾವಲ್ ದಾಟಿ ಮನಮಾಡ್ ಕಡೆಗೆ ಧಾವಿಸಿತ್ತು.

"ಗುಡ್ ಮಾರ್ನಿಂಗ್......"

ಬೆಳಗಿನ ಪ್ರಪಂಚಕ್ಕೆ ಅವಳ ಅರಿವು ತಿರುಗಿಸಿದ ನವೀನ. ಉತ್ಸಾಹ ತುಂಬಲು ಸೊಗಸಾದ ನಾಲ್ಕು ಮಾತುಗಳನ್ನಾಡಿದ. ಹೊಸ ದಿನದ ಹುರುಪಿನೊಂದಿಗೆ ದೀಪಕನ ಬಗೆಗೆ ಮಾತು ಹರಿದಾಗ ಪರಿಚಯದ ಹಳೆಯ ಕಾವಿನಲ್ಲಿ ಕೇಳಿದ.

"ದೀಪಕನ ಮರಣ ವಾರ್ತೆ ನಿಮಗೆ ಮೊದಲು ತಿಳಿದಿದ್ದು ಹೇಗೆ?"

ಮುಖ, ಸ್ವರದಲ್ಲಿ ವ್ಯತ್ಯಾಸ ತೋರದೆ ಮರು ನುಡಿದಳು.

"ತಂತಿ, ಪತ್ರ ಯಾವುದೂ ಬರಲಿಲ್ಲ. ಆ ಯೋಚನೆ, ಆಸಕ್ತಿ ಪೋಲೀಸರಿಗೆ ಎಲ್ಲೀದು? ಬಹುಶಃ ನನ್ನ ವಿಳಾಸವೂ ಬೇಗ ಸಿಕ್ಕಿರಲಾರದು...ಎಲ್ಲಾ ಮುಗಿದ ಹದಿನೈದು ದಿನಗಳ ಮೇಲೆ ನನ್ನ ಡೆಲ್ಲಿ ವಿಳಾಸಕ್ಕೆ ಒಂದು ಪೆಟ್ಟಿಗೆ, ಒಂದು ಸರ್ಕಾರಿ ಪತ್ರ ಬಂತು. ಆ ಪತ್ರದ ಆಧಾರದ ಮೇಲೆ ಬೇರೆ ದಾಖಲೆಗಳನ್ನ ಪಡೆಯೊ ಪ್ರಯತ್ನ ನಡೆಸಿದೀನಿ...ಆ ಪತ್ರ ನೋಡ್ತೀರಾ?"

"ನೀವು ವಿಶ್ವಾಸದಿಂದ ತೋರಿಸೋ ತೊಂದರೆ ತೊಗೊಳೊದಾದ್ರೆ ಸಂತೋಷದಿಂದ ನೋಡ್ತೀನಿ."

ವಿನಯಪೂರ್ವಕವಾಗಿ ಹೇಳಿದ ಆಸಕ್ತ.

ಅರ್ಚನಾ ಸೀಟಿನಡಿಯಲ್ಲಿದ್ದ ಪ್ರಯಾಣದ ಕ್ಯಾನ್ವಾಸ್ ಬ್ಯಾಗ್ ಎತ್ತಿ ಅದರ ಜಿಪ್ ಎಳೆದಳು. ಅದೇ ಸಮಯದಲ್ಲಿ ಮೇಲೆದ್ದ ಸಹ ಪ್ರಯಾಣಿಕ ತನಗೆ ಅರಿವಿಲ್ಲದಂತೆ ನಡುವಿನಿಂದ ಬ್ಯಾಗ್ ಸವರಿಕೊಂಡು ಹೊರಕ್ಕೆ ನಡೆದ. ಬ್ಯಾಗ್ ಮುಂದಕ್ಕೆ ಜಾರಿ ಬಿತ್ತು. ಅದನ್ನು ಎತ್ತಿಕೊಳ್ಳುವ ಭರದಲ್ಲಿ ಚೀಲ ಮತ್ತಷ್ಟು ತೆರೆದುಕೊಂಡಿತು. ವಸ್ತುಗಳು ನೆಲದ ಮೇಲೆ ಹರಡಿದವು.

ನವೀನ ಒಡನೆ ಎದ್ದು ವಸ್ತುಗಳನ್ನು ಆರಿಸಿದ. ಪುಸ್ತಕ, ಬಟ್ಟೆ, ಪ್ಯಾಕೆಟ್‌ಗಳೊಂದಿಗೆ ಕೆಲವು ಫೋಟೊಗಳು. ಅವನ ನೀಲಿ ಕಣ್ಣುಗಳು ಚುರುಕಾದವು.

"ವರ್ಣಚಿತ್ರಗಳಿಂದ ತೆಗೆದ ಫೋಟೊ. ಬಹುಶಃ ದೀಪಕ ಪಾವನ್ ಬರೆದ ಮೂಲ ಚಿತ್ರಗಳೂ ನಿಮ್ಮಲ್ಲಿರಬೇಕು."

"ಚಿತ್ರಗಳು ಡೆಲ್ಲಿಯಲ್ಲಿವೆ. ಅಣ್ಣ ಬರೆದ ಕಡೇ ಚಿತ್ರಗಳ ಫೋಟೋಗಳು ಇವು. ಪೋಲೀಸ್ ಇಲಾಖೆಯಿಂದ ನನಗೆ ಬಂದ ಪೆಟ್ಟಿಗೆಯಲ್ಲಿ ಆರು ವರ್ಣಚಿತ್ರಗಳು ಇದ್ದವು. ...ಇವನ್ನ ನೋಡಿ ಬೊಂಬಾಯಿನ ಯಾವ ಭಾಗಗಳಲ್ಲಿ ಚಿತ್ರಿಸಿದ್ದು ಅಂತ ನೀವು ಹೇಳೋದಿಕ್ಕೆ ಸಾಧ್ಯವಾಗಬಹುದು. ಆ ದೃಶ್ಯಗಳನ್ನ ಕಾಣೋದಿಕ್ಕೆ ನನಗೂ ಕುತೂಹಲ ಇದೆ. ಎಲ್ಲಾ ಹೊರಾಂಗಣದ ದೃಶ್ಯಗಳು....ಒಂದು ಮಾತ್ರ ಬೇರೆ."

ಅವನು ಆರಾಮವಾಗಿ ಕುಳಿತು ಫೋಟೊ ಒಂದೊಂದೇ ನೋಡಿದ. ಹುಬ್ಬುಗಳು ಗಂಟೇರಿದವು, ಇಳಿದವು. ಮೆಚ್ಚಿಗೆಯಿಂದ ಅವಳಿಗೆ ತೋರಿಸಿದ.

"ಇದು ಮಲಬಾರ್‌ಹಿಲ್....ಇದು ಚೌಪಾಟಿ ಬೀಚ್...ಎಲಿಫಂಟಾ ಗುಹೆಯ ತ್ರಿಮೂರ್ತಿ...ಬಹುಶಃ ಫ್ಲೋರಾ ಫೌಂಟನ್ ಹಿಂದಿನ ರಸ್ತೆಗಳು...ಜುಹು ಬೀಚಿನ ತಾಳೆ ಸಮೂಹ, ವರ್ಣಚಿತ್ರದಿಂದ ತೆಗೆದು ಫೋಟೋ ಸ್ವಲ್ಪ ಮಂಕಾಗಿ ಬಂದಿವೆ. ಆದರೆ ಕಲೆಗಾರಿಕೆ ಚೆನ್ನಾಗಿದೆ ಅಂತ ಹೇಳಬಹುದು. ಹದಿನೈದು ದಿನಗಳ ಪ್ರವಾಸದಲ್ಲಿ ದೀಪಕ ವೇಗವಾಗಿ ರಚಿಸಿದ್ದರೂ ಕೈ ಚಳಕ ಅದ್ಭುತ......"

ತೆಳು ಕಾಗದದಲ್ಲಿ ಸುತ್ತಿದ್ದ ಆರನೆಯ ಫೋಟೊ ಎಳೆದ. ಅವಳಿಗೆ ಸಮ್ಮತಿ ತಪ್ಪಿತು. ಕಂಠ ಬಿಗಿದು ಮೌನ ತಾಳಿದಳು.

ತೆಳು ಹಳದಿ ಪರದೆ ಹಾಕಿದ ಹೆಣ್ಣಿನ ಪಾರ್ಶ್ವ ಮುಖದ ಚಿತ್ರ!

"ಯಾರು ಈ ಹೆಂಗಸು...ಗೊತ್ತೆ ನಿಮಗೆ?"

ಮೊನಚಾಗಿ ಕೇಳಿದ ನವೀನ.

* * *

ಅರ್ಚನಾ ಪಾವನ್ 'ಗೊತ್ತಿಲ್ಲ' ಅರ್ಥದಲ್ಲಿ ತುಟಿ ಉಬ್ಬಿಸಿ, ತಲೆ, ಕೈ ಆಡಿಸಿದಳು. ಮೂಲ ವರ್ಣಚಿತ್ರಗಳನ್ನು ಡೆಲ್ಲಿಯಲ್ಲಿ ಪಡೆದ ದಿನ ಅವಳು ಚಕಿತಗೊಂಡಿದ್ದಳು.

ಭುಜ ಮಟ್ಟದ ಮೇಲಿನ ಹೆಣ್ಣಿನ ಮುಖಚಿತ್ರ! ತೆಳುವಾದ ಅವಕುಂಠನದಲ್ಲಿ ಮುಖದ ಬಲ ಪಾರ್ಶ್ವದ ನೋಟ. ಸೊಗಸಾದ ಕಣ್ಣುಗಳ ಒಂದು ಭಾಗ, ತೀಡು ಹುಬ್ಬು, ನೀಳ ನಾಸಿಕ ಅದರಲ್ಲಿ ಸ್ಫುಟವಾಗಿ ಕಾಣುತ್ತಿದ್ದವು. ಕುತ್ತಿಗೆಯ ತಳದ ಚೆಲುವು ಚಿತ್ರಿಸಿದವನು ಮಾತ್ರ ಬಲ್ಲ!

ಮೂಲ ಕೃತಿಯ ಕ್ಯಾನ್ವಾಸ್‌ನಲ್ಲಿ ಭುಜದ ಉಡುಗೆ ಬೂದು ನೀಲಿ, ಮುಖ ಪರದೆ ತೆಳು ಹಳದಿ ಇದ್ದಿರಬೇಕು. ಹೆಣ್ಣಿನ ಕಣ್ಣು ರೋಮಾಂಚನ ಗೊಳಿಸುವಷ್ಟು ಆಕರ್ಷಕ!

"ದೀಪಕನಿಗೆ ಪರಿಚಯವಾದ ಯಾವುದೊ ಹೆಣ್ಣು...ನಾನು ಬೊಂಬಾಯಿನಲ್ಲಿ ಅವಳನ್ನು ಕಾಣೊದಾದ್ರೆ ಸಂತೋಷ, ಅದೃಷ್ಟ."

ಫೋಟೋಗಳನ್ನು ಬ್ಯಾಗ್‌ನಲ್ಲಿಡುವ ಬದಲು ಚರ್ಮದ ಕೈಚೀಲಕ್ಕೆ ಸೇರಿಸಿದಳು.

ನವೀನ ಬೆರಳಾಡಿಸಿದ.

"ನೀವು ಅವಳನ್ನು ಕಾಣುವ ಸಾಧ್ಯತೆ, ಸಂಭವ ಇಲ್ಲ. ನಿಮ್ಮಣ್ಣ ಅವಳನ್ನು ರೂಪದರ್ಶಿಯಾಗಿ ಪಡೆದಿರಬಹುದು. ಅವಳು ಅಂತಾ ಬೃಹತ್ ನಗರದಲ್ಲಿ ನಿಮ್ಮ ಕಣ್ಣಿಗೆ ಬೀಳೋದು ಹೇಗೆ? ಅವಳು ಯಾವ ಸಂಪ್ರದಾಯದೋಳು ಅನ್ನೋದು ಫೋಟೋದಿಂದ ಕಂಡು ಹಿಡಿಯೋದು ಕಷ್ಟ. ನೀವು ರಸ್ತೆಯಲ್ಲಿ ಹೋಗುವಾಗ ಅದೇ ಹೆಂಗಸು ಎದುರಿಗೆ ಬಂದರೂ ಗುರ್ತಿಸಲಾರಿರಿ."

"ಆ ಕಣ್ಣುಗಳನ್ನ ಮಾತ್ರ ಎಲ್ಲಿ ಕಂಡರೂ ಗುರ್ತಿಸಬಲ್ಲೆ!"

ಹಾಗೆಂದು ತನ್ನಲ್ಲಿಯೇ ಹೇಳಿಕೊಂಡಳು ಅರ್ಚನಾ. ಅವಳ ಆಸೆ, ಉದ್ದೇಶ ಅವನಿಗೆ ಹಿಡಿಸಲಿಲ್ಲ.

"ಎಷ್ಟು ದಿನ ಇರ್ತೀರಿ ಬಾಂಬೆಯಲ್ಲಿ?" ಏಕಾಏಕಿ ಕೇಳಿದ.

"ಎರಡು ವಾರ...ಅಷ್ಟೇ ರಜೆ ನನಗೆ. ಮತ್ತೆ ಕೆಲಸಕ್ಕೆ ಹಿಂತಿರುಗಬೇಕು."

"ಏನು ಕೆಲಸ ಮಾಡ್ತೀರಿ?"

ಪರಿಚಯ ಹಳೆಯದಾದರೂ ಆ ಪ್ರಶ್ನೆ ಕೇಳಿರಲಿಲ್ಲ.

"ಆಫೀಸ್ ಕೆಲಸ......"

ಅವಳು ಯಾವ ಆಫೀಸ್ ಎಂದು ತಿಳಿಸಲಿಲ್ಲ. ಅವನು ಕೇಳುವ ಗೋಜಿಗೆ ಹೋಗಲಿಲ್ಲ.

"ನೀವು ಏನು ಕೆಲಸ ಮಾಡೋದು?"

ತನ್ನ ಬಗೆಗೆ ಹೇಳದವಳು ಅವನನ್ನು ನೇರವಾಗಿ ಕೇಳಿದಳು.

"ನನಗೊಂದು ವಿಚಿತ್ರ ಕೆಲಸ. ಸುಗಂಧ ದ್ರವ್ಯಗಳನ್ನು ಅರಬ್ಬೀ ದೇಶಗಳಿಗೆ ಕಳಿಸಿ ಕೊಡೋದು. ಅದಕ್ಕಾಗಿ ಹೀಗೆ ದೇಶವೆಲ್ಲಾ ಸುತ್ತಾಡಬೇಕಾಗುತ್ತೆ...ನೀವು ಬೊಂಬಾಯಿಯಲ್ಲಿರೋವಾಗ ನನ್ನ ಅಂಟಿ ಮನೆಗೆ ತಪ್ಪದೆ ಬರಬೇಕು. ನಾನೇ ಬಂದು ಕಾಣ್ತೀನಿ."

"ಆಗಲಿ" ನಿರ್ಯೋಚನೆಯಿಂದ ಸಮ್ಮತಿಸಿದಳು.

ಗುಡ್ಡಗಳ ಮಧ್ಯೆ ರೈಲು ಕರ್ಕಶವಾಗಿ ಸಿಳ್ಳು ಹಾಕಿತು......

ಕಲ್ಯಾಣ್ ದಾಟಿ ಹತ್ತು ನಿಮಿಷ ಕಳೆದ ಮೇಲೆ ಕೈ ಗಡಿಯಾರ ನೋಡುತ್ತಾ ಹೇಳಿದ.

"ಬಾಂಬೆ ಸಮೀಪಿಸ್ತಾ ಇದೆ. ಒಂದೆರಡು ದಿನಗಳಲ್ಲಿ ನಿಮಗೆ ಫೋನ್ ಮಾಡ್ತೀನಿ. ...ಅದ್ಭುತವಾಗಿ ಕಾಣಬೋದು ನಗರ. ಡೆಲ್ಲಿಗೂ, ಬೊಂಬಾಯಿಗೂ ವಿಪರೀತ ವ್ಯತ್ಯಾಸ. ದೇಶದ ಯಾವ ನಗರವೂ ಇದರ ಹಾಗಿಲ್ಲ. ಇಲ್ಲಿನ ಜೀವನದ ತರಹವೇ

ಬೇರೆ. ಸಾವಿರ ವೇಷಗಳ, ಸಾವಿರ ಮನೋಭಾವನೆಗಳ ಜನ. ಅರ್ಥವಾಗದ ವೇಗದ ವಾತಾವರಣ. ಹಣಕ್ಕೆ ಬೆಲೆಯೇ ಇಲ್ಲ...ಕೀಳು, ಮಹತ್ತರಗಳ ವಿಚಿತ್ರ ಸಂಗಮ."

ಅರ್ಚನಾ ಕಿಟಕಿಯಲ್ಲಿ ದೃಷ್ಟಿ ಏರಿಸಿದಳು. ಉರಿ ಬಿಸಿಲಿನಲ್ಲಿ ಕಪ್ಪು ಮೋಡಗಳ ಅಲೆಗಳು. ಅಡಿಯಲ್ಲಿ ಬೆಳ್ಳಿ ಹಾಸು.

ಇಸ್ಪೇಟು ಎಲೆಗಳಂತೆ ಕಂಡು ಸರಿದು ಹೋಗುವ ಅಂತಸ್ತು ಸೌಧಗಳ ನಿರಂತರ ಅಲೆಗಳನ್ನು ದಿಟ್ಟಿಸಿ ತಲ್ಲೀನಳಾದವಳನ್ನು ಮೆಲ್ಲನೆ ತಟ್ಟಿ ನುಡಿದ.

"ಬೊಂಬಾಯಿ! ರಹಸ್ಯಗಳ ಕ್ಷುದ್ರ ನಗರವೂ ಹೌದು......ನನ್ನ ಮಾತು ಕೇಳಿ. ನಗರ ಅದ್ಭುತವಾಗಿ, ಸ್ವಾರಸ್ಯವಾಗಿ ಕಾಣೋ ಹಾಗೆ ಮಾಡ್ಕೊಳ್ಳಿ. ಇಲ್ಲಿನ ರಸ್ತೆ, ಅಂಗಡಿ ಸಾಲು, ಜನ ಪ್ರವಾಹ, ಸಮುದ್ರ, ಗುಡ್ಡ, ಬೀಚ್ ಎಲ್ಲದರ ನೋಟ ಅನುಭವಿಸಿ. ನಿಮ್ಮ ಸಮಯ ಸುಗಮವಾಗಿ ಕಳೆಯಲಿ ಆದರೆ ನಿಮ್ಮಣ್ಣನ ಸಾವಿನ ವಿಷಯದಲ್ಲಿ ತಲೆ ಕೆಡಿಸಿಕೊಂಡು ವಿವರ ಹುಡುಕೋದಿಕ್ಕೆ ಹೋಗ್ಬೇಡಿ ಅದು ಮುಗಿದ ಸಂಗತಿ."

ಹಾಗೇಕೆ ಹೇಳಿದನೆಂದು ಅರ್ಥವಾಗಲಿಲ್ಲ. ಅವಳ ಅಭಿಪ್ರಾಯದಲ್ಲಿ ಅದು ಮುಗಿದ ಸಂಗತಿ ಅಲ್ಲ. ಅಣ್ಣನ ಆತ್ಮಹತ್ಯೆಯ ಕಲ್ಪನೆ ಸುಡುಬೆಂಕಿಯಂತೆ!

ಬೊಂಬಾಯಿ ವಿಕ್ಟೋರಿಯಾ ಟರ್ಮಿನಸ್ ನಿಲ್ದಾಣದಲ್ಲಿ ಮೈಲ್ ಬಂಡಿ ನಿಂತಾಗ ಅವಳ ಎದೆ ಬಡಿತ ಏರಿತು.

"ನಿಮ್ಮನ್ನ ಹೋಟೆಲ್‌ವರೆಗೆ ಬಿಟ್ಟು ಹೋಗ್ತೀನಿ."

ಎಂದು ಅವಳ ಪೆಟ್ಟಿಗೆ, ವಸ್ತುಗಳಿಗೆ ಕೈ ಹಾಕಿದ. ಅವಳು ಬೇಡ ಎನ್ನಲಿಲ್ಲ. ಜನ ಸಮುದ್ರ, ಗಲಭೆ ಗಮನಿಸಿ ದಿಕ್ಕೆಟ್ಟವಳಂತೆ ನಿಂತವಳ ಮುಖದ ತಲ್ಲಣ, ಆತಂಕ ಗ್ರಹಿಸಿ ಮೆಲ್ಲನೆ ಕೇಳಿದ.

"ನೀವು ತಬ್ಬಿಬ್ಬಾಗಿದೀರಿ. ನನ್ನಲ್ಲಿ ಈಗಲೂ ಮುಚ್ಚುಮರೆ? ನಿಮ್ಮ ರಿಸರ್ವೇಶನ್ ಯಾವ ಹೋಟೇಲಿನಲ್ಲಿ ಆಗಿದೇಂತ ಹೇಳಿ."

ಉಗುಳು ನುಂಗಿದಳು. ಜನಸಂದಣಿಯ ದಿಕ್ಕಿಗೆ ಹೂಡಿದ ನೋಟ ಕೀಳದೆ ತಡೆ ತಡೆದು ಹೇಳಿದಳು.

"ನಾನು ಹೋಟೇಲ್ ರಿಸರ್ವೇಶನ್ ಮಾಡಿಸ್ಲಿಲ್ಲ...ಆತುರದಲ್ಲಿ ಬಂದು ಬಿಟ್ಟೆ. ..."

ತೆರೆದ ಎದೆಗೆ ಉಫ್ ಎಂದು ಗಾಳಿ ಊದಿಕೊಂಡು ತನ್ನಲ್ಲಿಯೇ ನಕ ನವೀನ.

"ಅಯ್ಯೊ, ಚಿಂತಿಸಬೇಡಿ, ...ನಿಮ್ಮ ಅಂತಸ್ತಿಗೆ ನಲವತ್ತು ಐವತ್ತು ರೂಪಾಯಿನ ಕೋಣೆ ಆದೀತು ಅಂತ ಭಾವಿಸ್ತೀನಿ..."

ಸಮ್ಮತಿಯಿಂದ ಮುಖ ಅಲುಗಿತು. ಅವನು ಸಾರ್ವಜನಿಕ ಟೆಲಿಫೋನ್ ಬೂತ್ ಕಡೆಗೆ ನಡೆದು ಐದು ನಿಮಿಷಗಳಲ್ಲಿ ಹಿಂತಿರುಗಿದ.

ಆಟಿಕೆಗಳಂತೆ ಹಿಂದೆ ಮುಂದೆ ವೇಗವಾಗಿ ಸರಿದ ವಾಹನಗಳ ಮಧ್ಯೆ ಟ್ಯಾಕ್ಸಿ ಬಾಂಬೆ ಸೆಂಟ್ರಲ್ ದಿಕ್ಕಿನ ರಸ್ತೆ ಹಿಡಿಯಿತು. ಭವ್ಯವಾದ "ಹೋಟೇಲ್ ಅಮರ್" ಮುಂದೆ ನಿಂತಾಗ ಹೋಟೇಲಿನ ಆಳು ಇಳಿದು ಬಂದು ಸಾಮಾನು ಹೊತ್ತು ಸ್ವಾಗತದ ವಿಭಾಗಕ್ಕೆ ನಡೆದ.

"ನಾನು ಅಲ್ಲಿಗೆ ಬರೋದು ಬೇಡ. ಎಲ್ಲಾ ತಿಳಿಸಿದೀನಿ. ಯೋಚನೆ ಮಾಡಬೇಡಿ. ಹೇಳಿದ್ದು ನೆನಪಿರಲಿ. ಒಂದೆರಡು ದಿನದಲ್ಲಿ ಫೋನ್ ಮಾಡ್ತೀನಿ. ಅಗತ್ಯ ಬಿದ್ದರೆ ನನಗೆ ಫೋನ್ ಮಾಡಿ...ಬೈ ಬೈ"

ನವೀನ ಫೋನ್ ನಂಬರಿನ ಚೀಟಿ ನೀಡಿದ.

"ಬೈ ಬೈ...ತುಂಬ ಥ್ಯಾಂಕ್ಸ್"

ಅವನಿಗೆ ಕೈ ಆಡಿಸಿದಾಗ ಅವಳಿಗೆ ಆತ್ಮೀಯನೊಬ್ಬ ಏಕಾಏಕಿ ಸರಿದು ಹೋದಂತಾಯಿತು. ಅವನು ಕುಳಿತ ಟ್ಯಾಕ್ಸಿ, ರಸ್ತೆಯ ತಿರುವಿನಲ್ಲಿ ಮರೆಯಾಗುವವರೆಗೆ ನೋಡುತ್ತಾ ನಿಂತು ನಿಟ್ಟುಸಿರು ಹಾಕಿ ಕೌಂಟರಿಗೆ ಬಂದಳು.

ವಿವರಗಳನ್ನು ಪುಸ್ತಕದಲ್ಲಿ ಭರ್ತಿ ಮಾಡುತ್ತಾ ಥಕ್ಕನೆ ತಿರುಗಿದಳು. ಹತ್ತು ಅಡಿಗಳ ದೂರಕ್ಕೆ ಕಂಬ ಒರಗಿದ್ದ ಕಿರು ಮೀಸೆಯ, ಕಪ್ಪು ಕಣ್ಣುಗಳ, ಬೆಲೆ ಬಾಳುವ ಸೂಟಿನ ಮನುಷ್ಯ ತನ್ನ ಕಡೆಗೆ ಗಂಭೀರವಾಗಿ ನೋಡುತ್ತಿದ್ದ!

ಕೌಂಟರ್ ಕ್ಲರ್ಕ್ ವಿನಯವಾಗಿ ಸೂಚಿಸಿದ.

"ಡೈನಿಂಗ್ ಹಾಲ್‌ನಲ್ಲಿ ಇನ್ನೂ ಊಟ ಇದೆ. ಕೋಣೆಗೆ ಬೇಕಾದ್ರೂ ಕಳಿಸಿಕೊಡ್ತೀನಿ."

"ಇಲ್ಲಿಗೇ ಬರ್ತೀನಿ" ಎಂದಳು.

ಆಳುಹುಡುಗ ಅವಳೊಂದಿಗೆ ಲಿಫ್ಟ್‌ನಲ್ಲಿ ಏರಿ ಕೋಣೆಯಲ್ಲಿ ಅವಳ ವಸ್ತುಗಳನ್ನು ಅಣಿಗೊಳಿಸಿ ಹೋದ. ಅರ್ಚನಾ ಮುಖ ತೊಳೆದು, ತಲೆ ಸರಿಪಡಿಸಿಕೊಂಡು, ಕೈ ಚೀಲ ತಿರುಗಿಸುತ್ತಾ ಇಳಿದು ಬಂದಳು.

ಹೋಟೇಲಿನ ತಳ ಭಾಗ ಆಕರ್ಷಣೀಯವಾಗಿತ್ತು. ಸಮಾರಂಭದ ವಿಶಾಲ ಹಜಾರ, ಅಂಚಿನಲ್ಲಿದ್ದ ಬಾರ್ ಕಡೆಗೆ ಇಣುಕಿ ಡೈನಿಂಗ್ ಹಾಲ್‌ಗೆ ಬಂದಳು. ಮೂವರು ಮಾತ್ರ ಕುಳಿತಿದ್ದ ಹವಾ ನಿಯಂತ್ರಿತ ಹಜಾರ ಅದು. ಮಧ್ಯ ವಯಸ್ಸಿನ ದಂಪತಿಗಳು. ಎಡಬಲ ನೋಡದೆ ಯಾವುದೋ ಭಾಷೆಯಲ್ಲಿ ವಿರಾಮವಾಗಿ ಮಾತು ನಡೆಸಿದವರು...ಅವಳಿಂದ ಒಂದು ಮೇಜಿನ ಆಚೆಗೆ ನೇರವಾಗಿ ಅವಳನ್ನೇ ನೋಡುತ್ತಿದ್ದ ಆಕರ್ಷಕ ವ್ಯಕ್ತಿ!

ಅರ್ಚನಾ ಪ್ರತಿ ಸಾರಿ ತಲೆ ಎತ್ತಿದಾಗಲೂ ಆ ಮನುಷ್ಯನ ಕಣ್ಣುಗಳು ಅವಳ ಕಣ್ಣುಗಳೊಂದಿಗೆ ಸೇರುತ್ತಿದ್ದವು. ಅವಳಿಗೆ ನೆಮ್ಮದಿ ಕೆಟ್ಟಿತು. ಅವ್ಯಕ್ತ ಭೀತಿ ಮೆಲ್ಲನೆ ದಾಳಿ ಇಟ್ಟಿತು.

ಯಾರದು?...ಅವಳಿಗೆ ನೆನಪು ಕಚ್ಚಿತು. ತಾನು ಕೌಂಟರ್‌ನಲ್ಲಿ ವಿವರ ಭರ್ತಿ ಮಾಡುತ್ತಿದ್ದಾಗ ಕಂಬ ಒರಗಿ ನಿಂತಿದ್ದ ವ್ಯಕ್ತಿ!

ಆ ಕಪ್ಪು ಕಣ್ಣುಗಳಿಂದ ದೂರವಾಗಲು ಊಟ ಬೇಗ ಮುಗಿಸಿ ಹೊರ ಬಂದಳು. ಹಜಾರದ ಗಡಿಯಾರ ಮೂರೂಕಾಲು ಗಂಟೆ ತೋರಿತು. ಅವಳಿಗೆ ಆಯಾಸವಾಗಿತ್ತು. ಲಿಫ್ಟ್ ಕಡೆಗೆ ನಡೆದಾಗ ಅವಳಿಗೆ ತಟ್ಟನೆ ಅರಿವಾಯಿತು... ಡೈನಿಂಗ್ ಹಾಲ್‌ನಲ್ಲಿ ಮರೆತು ಬಂದ ತನ್ನ ಕೈ ಚೀಲ!

ಹಿಂತಿರುಗಿ ನಾಲ್ಕು ಹೆಜ್ಜೆ ಹಾಕುವುದರಲ್ಲಿ ಕಪ್ಪು ಕಣ್ಣುಗಳ ಯುವಕ ಅವಳ ಕಡೆಗೇ ಬರುತ್ತಿದ್ದ. ಅವನ ಕೈಲಿ ತನ್ನ ಚೀಲ. ಅವನ ಕಣ್ಣುಗಳು ತನ್ನ ನೋಟದೊಂದಿಗೆ ಕೂಡಿದಾಗ ಯಾವುದೋ ಸಮ್ಮೋಹನ ಶಕ್ತಿ ಅವಳನ್ನು ಸೆಳೆದಂತಾಯಿತು.

"ಮಿಸ್ ಅರ್ಚನಾ ಪಾವನ್, ನಿಮ್ಮ ವಸ್ತುವನ್ನು ಹಿಂತಿರುಗಿಸಿದ ಸಂತೋಷ ನನ್ನ ಪಾಲಿಗೆ ಇರಲಿ"

ಚೀಲದ ಮೇಲಿನ ಅವಳ ಹೆಸರು ನೋಡುತ್ತಾ, ರಾಗವಾಗಿ ಹೇಳಿದ.

"ಥ್ಯಾಂಕ್ಯು."

ತಗ್ಗಿದ ಧ್ವನಿಯಲ್ಲಿ ಚೀಲ ತೆಗೆದುಕೊಂಡಳು. ಅವನು ತಲೆ ಬಾಗಿದ.

"ನಾನು ಕುಸುಮಾಕರ್. ಮತ್ತೆ ಭೆಟ್ಟಿ ಆಗ್ತೀನಿ...ಗುಡ್ ಡೇ...ರಾತ್ರಿಗೆ ಸೊಗಸಾದ ಕನಸುಗಳು......"

ಹಾಗೆಂದು ಹಾರೈಸಿ ಮರು ನುಡಿಗೆ ಕಾಯದೆ ದೇಹ ಓರೆ ಮಾಡಿ ಸ್ವಾಭಿಮಾನದ ನಡಿಗೆಯಲ್ಲಿ ಹೊರಗಿಳಿದ. ಕಾರು ಹೊರಟ ಸದ್ದು ಬಂತು...ಅರ್ಚನಾ ಬೆವರು ಒರೆಸಿ ಹೆಜ್ಜೆ ಸರಿಸಿದಳು.



ದೀಪಾವಳಿಗೆಂದೇ ವಿಶೇಷವಾಗಿ ತಯಾರಿಸಿದ ಸೀರೆಗಳು ತಾಯಿ...



ಕೋಣೆಯ ಬಾಗಿಲು ಭದ್ರಪಡಿಸಿ ಹಾಸಿಗೆಯ ಮೇಲೆ ಕುಳಿತಳು. ಸೊಗಸಾದ ಸುಸಜ್ಜಿತ ಕೋಣೆ. ವಿಶಾಲ ಕಿಟಕಿಯ ಕರ್ಟನ್ ಸರಿಸಿದಳು. ಹಿಂದಿನ ಬಾಗಿಲು ತೆಗೆದು ಬಾಲ್ಕನಿಯಲ್ಲಿ ನಿಂತಳು. ದೂರದಿಂದ ಯಾವುದೋ ಸಂಗೀತ ಕೇಳಿ ಬರುತ್ತಿತ್ತು. ಶೋಕ ಗೀತೆ! ಬಿಸಿಲು ಇನ್ನೂ ಉಳಿದಿದ್ದು ಬೇಸರ ಸುರಿಯುವ ಧಗೆಯ ರಾಗ.

ಕಿಟಕಿಯ ಕರ್ಟನ್ ಮತ್ತೆ ಎಳೆದು ಹಾಸಿಗೆಯ ಮೇಲೆ ಕುಳಿತು ಕೈ ಚೀಲ ತೆರೆದಳು. ಅಣ್ಣನ ವರ್ಣಚಿತ್ರಗಳ ಫೋಟೋಗಳು ಮೊದಲು ಕಣ್ಣಿಗೆ ಬಿದ್ದವು. ಕಣ್ಣುಗಳು ಪ್ರಶ್ನೆ ಹಾಕಿದವು. ವಿಶೇಷತೆ ಇಲ್ಲವಾದರೂ ಅದೊಂದು ಅಚ್ಚರಿ. ರೈಲಿನಲ್ಲಿ ಫೋಟೋಗಳನ್ನು ಕೈ ಚೀಲಕ್ಕೆ ಸೇರಿಸಿದಾಗ ಅವಕುಂಠನವತಿಯ ಫೋಟೋ ಮೇಲಿತ್ತು. ಅದು ಚೆನ್ನಾಗಿ ನೆನಪಿದೆ. ಈಗ ಅದು ತಳಕ್ಕೆ ಬಂದಿದೆ!

ಕೈ ಚೀಲ ಅವಳಿಂದ ದೂರವಾಗಿದ್ದುದು ಕೇವಲ ಐದು ನಿಮಿಷಗಳ ವರೆಗೆ. ಅವಳ ಹೊರತಾಗಿ ಅದನ್ನು ಮುಟ್ಟಿದವನು ಕಪ್ಪು ಕಣ್ಣುಗಳ ಆ ಮನುಷ್ಯ ಒಬ್ಬನೇ. ಅಪರಿಚಿತನಿಗೆ ಸಂಬಂಧವಿಲ್ಲದ ಆ ಫೋಟೋಗಳಲ್ಲಿ ಯಾವ ಆಸಕ್ತಿ?

ನವೀನ ಹೇಳಿದ ಮಾತುಗಳು ಸ್ಮೃತಿಗೆ ಬಂದವು.

"ಬೊಂಬಾಯಿ ರಹಸ್ಯಗಳ ಕ್ಷುದ್ರ ನಗರ...!ಅಣ್ಣನ ಸಾವಿನ ವಿಷಯ ಮುಗಿದ ಸಂಗತಿ!"

ಬೆಳಗ್ಗೆ ಎಚ್ಚರವಾದಾಗ ಕಿಟಕಿಯ ಕರ್ಟನ್ ಉಂಗುರಗಳ "ಕಡ ಕಡ" ನಾದ ಕೇಳುತ್ತಿತ್ತು. ಜೊತೆಗೆ ಕರೆಗಂಟೆಯ ಸದ್ದು. ಎದ್ದು ಬಾಗಿಲು ತೆರೆದಾಗ ಮಂಪರು ಕಣ್ಣುಗಳಿಗೆ ಹಸನ್ಮುಖದ ಕೆಲಸದ ಹೆಣ್ಣು ಕಾಣಿಸಿದಳು.

"ಗುಡ್‌ಮಾರ್ನಿಂಗ್ ಮೇಮ್ ಸಾಬ್..."

ಹುರುಪಿನ ಧ್ವನಿಯಲ್ಲಿ ವಂದಿಸಿ ಅರ್ಚನಾಳ ಹಿಂದೆಯೇ ಒಳ ಬಂದಳು. ಟವೆಲ್, ಹಾಸಿಗೆ ಹೊದಿಕೆಗಳನ್ನು ಬದಲಾಯಿಸಿದಳು.

"ಮ್ಯಾನೇಜರ್ ಸಾಬ್ ಹೇಳಿದಾರೆ ನಾನು ಈ ಕೋಣೆ ಸರಿಯಾಗಿ ನೋಡಿಕೋಬೇಕೂಂತ...ನಾಲ್ಕು ಗಂಟೆ ಮೇಲೆ ನನ್ನ ಬದಲಿಗೆ ಹೆಣ್ಣಾಳೇ ಬರ್‍ತಾಳೆ... ಹೊರಗಿನಿಂದ ಏನು ಬೇಕಾದ್ರೂ ಹೇಳಿ. ತಂದು ಕೊಡ್ತೀನಿ."

ಮರಾಠಿ ಬೆರೆತ ಸರಳ ಹಿಂದಿ ಭಾಷೆಯಲ್ಲಿ ಹೇಳಿ, ಕೋಣೆ ಸ್ವಚ್ಛಗೊಳಿಸಲು ಆಳು ಕರೆತಂದು ದೂರ ನಿಂತಳು.

"ಇನ್ನು ಇಪ್ಪತ್ತು ನಿಮಿಷ ಆದ ಮೇಲೆ ಕಾಫಿ, ಬ್ರೆಡ್‌ಟೋಸ್ಟ್ ಕಳಿಸಿಕೊಡು" ಗಡಿಯಾರ ನೋಡಿ ಹೇಳಿದಳು ಅರ್ಚನಾ.

ಕಪ್ಪು ಮುಖದ ಚುರುಕಿನ ಹೆಣ್ಣು ಮತ್ತೆ ತಲೆ ಬಾಗಿ ವಂದಿಸಿ ಹೊರ ಬಿದ್ದಳು.

ಕರ್ಟನ್ ಸರಿಸಿ ಕಿಟಕಿ ತೆರೆದು ಹಾಸಿಗೆಯ ಮೇಲೆ ಕಾಲು ಚಾಚಿದಳು. ಕಿಟಕಿ ತೆರೆದಷ್ಟು ಭಾಗದಲ್ಲಿ ಕಾಣುತ್ತಿದ್ದುದು ಚುಕ್ಕೆ ಇಲ್ಲದ ಪೂರ್ಣ ನೀಲಿ ಆಕಾಶ. ರಾತ್ರಿಯಲ್ಲಿ ಮನ ಹೊಕ್ಕ ಭೀತಿ, ಆತಂಕ ದೂರವಾಗಿದ್ದವು.

ಸ್ನಾನ ಮುಗಿಸಿ ರೇಡಿಯೋ ಟ್ಯೂನ್ ಮಾಡಿ ನೀಲಿ ರಂಗಿನ ಸೀರೆ ಉಟ್ಟಳು. ಉಪಹಾರ ಮುಗಿಸಿದ ಮೇಲೆ ಕೈ ಚೀಲದಲ್ಲಿ ಕನ್ನಡಿಸಿ ಲಿಫ್ಟ್ ಹಿಡಿಯದೆ ಮೆಟ್ಟಲು ಇಳಿದು ಸ್ವಾಗತದ ಹಜಾರಕ್ಕೆ ಬಂದಳು.

"ಬೋರಿವಿಲಿಗೆ ಹೋಗ್ಬೇಕು."

ಕೌಂಟರ್ ಕ್ಲರ್ಕ್‌ಗೆ ಹೇಳಿ ಚೀಲ ತಿರುಗಿಸುತ್ತಾ ನಿಂತಳು.

"ಟ್ಯಾಕ್ಸಿ?" ನಯವಾಗಿ ಕೇಳಿದ.

"ಇಲ್ಲ, ರೈಲು."

"ಓಕೆ...ಸೆಂಟ್ರಲ್ ಸ್ಟೇಷನ್‌ನಿಂದ ಹೊರಟರೆ ನೇರವಾಗಿ ಬೋರಿವಿಲಿ ಸೇರ್‍ತೀರಿ. ಅರ್ಧ ಗಂಟೆ ಪ್ರಯಾಣ. ಹೊರಗೆ ಟ್ಯಾಕ್ಸಿ ರೆಡಿ ಇದೆ."

ಹೊಟೇಲಿನ ಆಳು ಅವಳನ್ನು ಹೊರಕ್ಕೆ ಕರೆದೊಯ್ದ. ಟ್ಯಾಕ್ಸಿ ಐದು ನಿಮಿಷಗಳಲ್ಲಿ ಸೆಂಟ್ರಲ್ ಸ್ಟೇಶನ್ ಸೇರಿತು.......ಬೋರಿವಿಲಿ ಸೇರಿದಳು. ನಿಲ್ದಾಣದ ಹಿಂಭಾಗದ ಅಂಗಡಿಯಲ್ಲಿ ಉದ್ದನೆಯ ಹೂವಿನ ಸರ ಕೊಂಡು ಮಾಲೆಯಾಗಿ ಗಂಟು ಹಾಕಿದಳು. ಅಣ್ಣ ದೀಪಕನ ಸಮಾಧಿಗೆ ಪುಷ್ಪ ಮಾಲೆಯ ಅರ್ಪಣೆ!

ಪೋಲೀಸ್ ಠಾಣೆಯ ಅಧಿಕಾರಿ ಅವಳನ್ನು ವಿನಯವಾಗಿ ಬರಮಾಡಿಕೊಂಡು ತಾಳ್ಮೆಯಿಂದ ವಿಷಯ ಕೇಳಿದ. ಸಮಾಧಿ ಎಲ್ಲೆಂದು ಕೇಳಿದಾಗ ಬೇಸರ, ಅಚ್ಚರಿಯಲ್ಲಿ ಕೈ ಎತ್ತಿದ. ರೆಕಾರ್ಡ್ ಹುಡುಕಿ ಹೇಳಿದ.

"ಮ್ಯಾಡಾಂ, ಮೂರು ತಿಂಗಳ ಹಿಂದೆ ನಾನು ಇಲ್ಲಿ ಇರ್ಲಿಲ್ಲ. ಆಗಿನ ಆಫೀಸರ್ ರಿಟೈರ್ ಆಗಿದಾನೆ...ನಿಮ್ಮಣ್ಣನ ದೇಹ ಸಿಕ್ಕಿದ್ದು ಕನ್ಹೇರಿ ಗುಡ್ಡದ ಜಂಗಲ್‌ನಲ್ಲಿ. ಅದು ಆತ್ಮಹತ್ಯೆ. ದೇಹದ ಪರೀಕ್ಷೆ ಆದ ಮೇಲೆ ಅದನ್ನ ಕಾರ್ಪೊರೇಶನ್, ಮ್ಯಾಜಿಸ್ಟ್ರೇಟ್ ಅಪ್ಪಣೆ ಪಡೆದು ದಫನ್ ಮಾಡಿ ಬಿಡ್ತು. ನಮ್ಮಲ್ಲಿ ಅದರ ಫೈಲ್ ಕ್ಲೋಸ್ ಆಗಿದೆ...ದಫನ್ ಮಾಡಿದ ಸ್ಥಳ ನೋಡಬೇಕು ಅಂದ್ರೆ ಕಷ್ಟ...ತಾಳಿ, ಪ್ರಯತ್ನ ಪಡ್ತೀನಿ."

ಎಲ್ಲಿಗೊ ಫೋನ್ ಮಾಡಿದ. ಮೂರು ತಿಂಗಳ ಹಿಂದೆ ಶವ ಸಂಸ್ಕಾರದಲ್ಲಿ ಹಾಜರಿದ್ದ ಕಾನ್ಸ್‌ಟೇಬಲ್‌ನನ್ನು ಹುಡುಕಿ ಕರೆಸಿ ಅವಳೊಂದಿಗೆ ಕಳುಹಿಸಿಕೊಟ್ಟ.

ಬಡಾವಣೆಯ ಆಚೆಗಿದ್ದ ಸಣ್ಣ ಬಯಲು ಭಾಗದಲ್ಲಿ ಸ್ಮಶಾನದ ಹಳೆಯ ಫಲಕವಿತ್ತು. ದಫನ್ ಆದ ಭಾಗವನು ಪೇದೆ ಸರಿಯಾಗಿ ಗುರ್ತಿಸಲಾಗಲಿಲ್ಲ. ನೆನಪಿಗೆ ಬಂದ ಪ್ರದೇಶ ತೋರಿ ಅಲ್ಲಿಯೇ ಸಂಸ್ಕಾರವಾಯಿತೆಂದು ತಿಳಿಸಿದ.

ಅರ್ಚನಾ ನೆಲದ ಮೇಲೆ ಮೊಳಕಾಲೂರಿ ಕುಳಿತು ಅಣ್ಣನ ದೇಹ ಅಡಗಿರಬಹುದಾದ ನೆಲದ ಮೇಲೆ ಹೂ ಮಾಲೆ ಹರಡಿ ಎರಡು ನಿಮಿಷಗಳ ಮೌನದ ನಂತರ ಕಣ್ಣೊರಸಿಕೊಂಡು ಎದ್ದಳು.

ಅಣ್ಣನ ಸಮಾಧಿ ಹೆಸರಿನಲ್ಲಿ ತುಣುಕು ನೆಲ ಕಂಡಾಗಿತ್ತು. ಬೃಹತ್ ನಗರದ ಗರ್ಭದಲ್ಲಿ ಅಡಗಿ ಹೋದ ಪ್ರಕರಣ ಅದು. ನವೀನ ಹೇಳಿದಂತೆ ತಲೆ ಕೆಡಿಸಿಕೊಳ್ಳದೆ ಬೊಂಬಾಯಿನಲ್ಲಿ ನಾಲ್ಕಾರು ದಿನಗಳ ಕಾಲ ಹಗುರ ಮನಸ್ಸಿನಿಂದ ಸುತ್ತಾಡಿ ಡೆಲ್ಲಿಗೆ ಹಿಂತಿರುಗುವುದೇ ಸರಿ...ಅಷ್ಟು ದೂರದಿಂದ ಒಂಟಿಯಾಗಿ ಬಂದು ಮೋಜು ಮಾಡುವ ಅಗತ್ಯವೇನು?

ಹದಿಮೂರು ದಿನಗಳ ರಜೆ ಉಳಿದಿತ್ತು. ಪ್ರಶ್ನೆ ಎದ್ದು ನಿಂತಿತು. ದೀಪಕ ಪಾವನ್ ಆತ್ಮಹತ್ಯೆ ಮಾಡಿಕೊಂಡುದೇಕೆ?"

ನಡಿಗೆ ನಿಧಾನವಾಗಿ ಸಾಗಿತು. ಅಂದಗೆಟ್ಟು ಇಕ್ಕಟ್ಟನಲ್ಲಿ ಉಜ್ಜುತ್ತಾ ನಿಂತ ಹಳೆಯ ಮನೆ, ಅಂಗಡಿಗಳ ಸಾಲು, ಕಲ್ಲಿದ್ದಲು ಹೊರೆ ಹೊತ್ತು ಚಲಿಸಿದ ಕತ್ತೆಗಳು. ಗದ್ದ, ಮೀಸೆಗಳ ಒರಟು ಮಾತಿನ ಜನ. ಬೊಂಬಾಯಿನ ನಿಸ್ಸಾರ ಬಡಾವಣೆ ಅದು.

ರಸ್ತೆ ಮೂಲೆಯ ಸ್ಟಾಲ್ ಮುಂದೆ ನಿಂತು ಚಹದ ಕಪ್‌ನಲ್ಲಿ ಚಮಚ ಆಡಿಸಿದಾಗ ಭಾವನೆಗಳ ತಾಕಲಾಟ ನಡೆದಿತ್ತು.

ಚಿತ್ರಕಲಾವಿದನ ಮನಸ್ಸು ನಿಶ್ಶಕ್ತಗೊಳಿಸಿದ ಹೆಣ್ಣು! ಪ್ರಣಯಕ್ಕೆ ಆತ್ಮಹತ್ಯೆಯಲ್ಲಿ ಪರ್ಯಾವಸಾನ!

ಪ್ರೀತಿಯ ಅಣ್ಣನಿಂದ ಬೀಳ್ಕೊಂಡಂತೆ ಹಿಂದಿನ ದಿಕ್ಕಿಗೆ ನೋಡಿ ಕಣ್ಣೊರೆಸಿದಳು. ರೈಲು ನಿಲ್ದಾಣದ ಕಡೆಗೆ ತಿರುಗಿದಳು.

ಹೆಸರಾಂತ ಕನ್ಹೇರಿ ಗುಹೆಗಳ ನೆನಪೂ ಅವಳಲ್ಲಿ ಸುಳಿದಿರಲಿಲ್ಲ.

* *

"ನಾವು ಮತ್ತೆ ಭೇಟಿ ಆಗ್ತಿದೀವಿ, ಮಿಸ್ ಅರ್ಚನಾ......"

ಅರ್ಚನಾ ಚಕ್ಕನೆ ತಲೆ ಎತ್ತಿದಳು. ಒಂದು ಕ್ಷಣ ಕಣ್ಣು ಕಿರಿದಾಯಿತು. ಎಲ್ಲಿಯ ಪರಿಚಿತ?"

ಅವಳ ಕಣ್ಣುಗಳಿಗೆ ಇನ್ನಷ್ಟು ಸ್ಫುಟವಾಗಿ ಕಾಣಿಸಿದ ಮೂವತ್ತು ವಯಸ್ಸಿನ ಯುವಕ.

"ಗುಡ್‌ನೂನ್" ಪರಿಚಯ ಹಿಡಿದ ಚಕಿತತೆಯಲ್ಲಿ ಮರುನುಡಿದಳು.

"ಇಷ್ಟು ದೊಡ್ಡ ದಾಂಧಲೆ ನಗರವಾದರೂ ಜನ ಒಬ್ಬರನ್ನೊಬ್ಬರು ಸೋಜಿಗದಲ್ಲಿ ಭೇಟಿ ನಡೆಸ್ತಾರೆ. ನೀವು ಬೇಸರ ಪಡೋದಿಲ್ಲವಾದರೆ..."

ಉತ್ತರಕ್ಕೆ ಕಾಯದೆ ಅವಳ ಪಕ್ಕಕ್ಕೆ ಕುರ್ಚಿ ಎಳೆದು ಕುಳಿತ ಕುಸುಮಾಕರ. ವೈಟರ್‌ಗೆ ಬೆರಳಿನಿಂದಲೇ ಸೂಚನೆ ನೀಡಿ ಅವಳತ್ತ ನಸು ನಗೆ ಬೀರಿದ.

"ನೀವು ನಿನ್ನೆ ಸಿಟಿ ನೋಡಲಿಕ್ಕೆ ಹೋಗಿದ್ರಿ"

"ಬೋರಿವಿಲಿಗೆ ಹೋಗಿದ್ದೆ..."

"ಬೋರಿವ್ಲಿ?"

ವಿಸ್ಮಯಗೊಂಡವನು ನಿಧಾನವಾಗಿ ಕಣ್ಣರಳಿಸಿ ಕೇಳಿದ.

"ಕನ್ಹೇರಿ ಗುಹೆಗಳನ್ನು ನೋಡಲಿಕ್ಕೆ?."

"ನಾನು ಗುಹೆ ನೋಡ್ಲಿಲ್ಲ.

ಅರ್ಥವಾಗದೆ ಕಣ್ಣು ರೆಪ್ಪೆ ಪಟ ಪಟ ಆಡಿಸಿದ.

"ಮತ್ತೆ ಯಾಕೆ ಹೋಗಿದ್ರಿ ಆ ಸತ್ತ ಜಾಗಕ್ಕೆ?"

"ಸತ್ತ ಜಾಗ ನೋಡಲಿಕ್ಕೇ ಹೋಗಿದ್ದೆ..."

ವಿಚಿತ್ರ ರೀತಿಯಲ್ಲಿ ನಿಜವೆನಿಸುವ ಮಾತು ಅದೇ ಬಂದಿತ್ತು. ಎರಡನೆಯ ಪರಿಚಿತನೊಂದಿಗೆ ಸ್ವಂತ ವಿಷಯ ಚರ್ಚಿಸುವುದು ಬೇಡವೆನಿಸಿತು. ಗಂಭೀರತೆಯನ್ನು ಒಮ್ಮೆಗೇ ತಿದ್ದಿಕೊಂಡಳು.

"ನಿಮಗೆ ಮನಸ್ಸು ಸರಿ ಇಲ್ಲಾಂತ ತೋರುತ್ತೆ. ಮಾತಿನಿಂದ ಇನ್ನಷ್ಟು ಬೇಸರ ಪಡಿಸಿದರೆ ನಾನು ಪೂರ್ತಿ ಬೇಡವಾದ ಕೀಳು ಮನುಷ್ಯ ಅನ್ನಿಸ್ಕೊಳ್ತೀನಿ."

"ಛೇ, ಹಾಗೇನೂ ಇಲ್ಲ...ರೈಲಿನಲ್ಲಿ ಎಲ್ಲಿಗೋ ಹೋಗ್ತಾ ಬೋರಿವಿಲಿಯಲ್ಲಿ ತಪ್ಪಿ ಇಳಿದು ಬಿಟ್ಟೆ...ಕನ್ಹೇರಿ ನೋಡ್ಲಿಲ್ಲ"

ಅವಳ ಮಾತನ್ನು ಸಂಶಯದಿಂದಲೇ ಗ್ರಹಿಸಿದ.

"ಮತ್ತೆ ನೋಡಿದರಾಯ್ತು. ದೂರದ ಸ್ಥಳವೂ ಅಲ್ಲ. ಸಾಮಾನ್ಯ ನಿಸ್ಸಾರ ಗುಹೆಗಳ ಗುಂಪು...ಬೋರಿವ್ಲಿಯಲ್ಲಿ ನನ್ನದೊಂದು ಮನೆ ಇದೆ."

"ಮನೆ?" ಕಣ್ಣು ಅರಳಿಸಿದಳು.

"ಆ ಹಳೆ ಕೊಂಪೆಯಲ್ಲಿ ಮನೆ ಅಂದ್ರೆ ನಿಮಗೆ ಆಶ್ಚರ್ಯ ಅಲ್ಲವೆ? ತಂದೆಯ ಕಾಲದ ಹಳೆ ಮನೆ. ಅದನ್ನ ಕೆಡವಿಸಿ ಹೊಸ ಮನೆ ಕಟ್ಟಿಸಬೇಕು."

ವೈಟರ್ ಎರಡು ಗ್ಲಾಸ್ ಬೀರ್ ತಂದಿರಿಸಿದ. ಅವನ ನಿರೀಕ್ಷೆಗೆ ವಿರುದ್ಧವಾಗಿ ಅವಳು ಏನೊಂದೂ ಹೇಳದೆ ಗ್ಲಾಸ್ ಎತ್ತಿದಳು. ಅವಳ ಆರೋಗ್ಯ ಕೋರಿ ಅದಕ್ಕೆ ತನ್ನ ಗ್ಲಾಸ್ ಸಶಬ್ದವಾಗಿ ಸ್ಪರ್ಶಿಸಿದ. ಕಿರು ಮೀಸೆ ತುದಿಯ ನಗೆ, ದಟ್ಟ ತಲೆಗೂದಲು ಅವನನ್ನು ಆಕರ್ಷಣೆಯ ವ್ಯಕ್ತಿಯಾಗಿ ತೋರಿದವು.

ಬೋರಿವಿಲಿಯಲ್ಲಿ ಮನೆ......ದೀಪಕನ ವಿಷಯ ತಿಳಿದಿರಬೇಕು,

"ನೀವು ಪಾನೀಯ ಸ್ವೀಕರಿಸಿದ್ದು ಸಂತೋಷ."

ಅವಳ ಯೋಚನೆಯ ಮಧ್ಯೆ ಸಂತೋಷ ವ್ಯಕ್ತಪಡಿಸಿದ.

"ಆಗಾಗ್ಗೆ ಮಿತವಾಗಿ ತೊಗೊಳ್ತೀನಿ."

ಗ್ಲಾಸ್ ಮೇಲೆ ದೃಷ್ಟಿ ಹೂಡಿ ನುಡಿದಳು.

"ಥ್ಯಾಂಕ್ಸ್...ಇಂಗ್ಲೀಷ್, ಹಿಂದಿ ಎರಡೂ ಚೆನ್ನಾಗಿ ಆಡ್ತೀರಿ"

"ಅವೆರಡೂ ಗೊತ್ತಿಲ್ಲದೆ ಈ ದೇಶದಲ್ಲಿ ತಿರುಗಾಡೋದು ಹೇಗೆ?"

ಅವಳಿಗೆ ಧೈರ್ಯ ಮೈಗೂಡಿತ್ತು. ಮೇಜಿನ ಮೇಲೆ ಗ್ಲಾಸ್ ಸುತ್ತಿಸುತ್ತಾ ಕೇಳಿದಳು.

"ಯಾವ ಉದ್ಯೋಗದಲ್ಲಿದ್ದೀರಿ ?"

"ಕೊಡೈಕೆನಾಲ್ ಹೆಸರು ಕೇಳಿದೀರಾ, ತಮಿಳುನಾಡಿನಲ್ಲಿ? ಅಲ್ಲಿ ಸ್ವಲ್ಪ ಟೀ ತೋಟಗಳಿವೆ...ಮದ್ರಾಸಿನಲ್ಲಿ, ಮತ್ತೆ ಇಲ್ಲಿ ಕೆಲವು ವಸ್ತುಗಳ ಸಗಟು ವ್ಯಾಪಾರ ನಡೆಸ್ತೀನಿ...ಜೀವನಕ್ಕೆ ಸಾಕು."

ಅಣಕು ತೃಪ್ತಿ ತೋರಿದ. ಜೀವನದ ನಿರ್ವಹಣೆಗೆ ಅವು ಅತ್ಯಧಿಕ ಎನಿಸಿತು ಅವಳಿಗೆ. ಅವನ ಮಾತು. ಚರ್ಯೆಗಳಲ್ಲಿ ಐಶ್ವರ್ಯವಂತನ ಲಕ್ಷಣ ಚೆನ್ನಾಗಿ ನಿರೂಪಿತವಾಗಿತ್ತು.

"ಕುಸುಮಾಕರ್ ಅನ್ನೋದು ಮರಾಠಿ ಹೆಸರೆ?"

ಏಕಾಕಿ ಹೆಣ್ಣು ದಿಟ್ಟತನದ ಮೆಟ್ಟಲು ಏರುತ್ತಿದ್ದಳು.

"ಹೆಸರಿಗೆ ಜಾತಿ ಇಲ್ಲ...ತಂದೆ ಮಹಾರಾಷ್ಟ್ರೀಯ. ತಮಿಳು ಸೀಮೆಯ ತಾಯಿ"

ಕಣ್ಣುಗಳಲ್ಲೇ ಅವಳನ್ನು ಹೀರುವಂತೆ ನೋಡಿದ. ಅವಳ ಕೆನ್ನೆಗಳಲ್ಲಿ ಉರಿತ ಕಂಡಿತು.

"ನೀವು ರಜೆ ಮೇಲೆ ಬಂದಿರಬೇಕು. ಇಲ್ಲಿ ಉಳಿದು ಏನು ಮಾಡ್ತೀರಿ ?"

ಉಸಿರೇರಿತು. ನವೀನನಿಗೆ ತನ್ನ ಸಂಕ್ಷೇಪ ವಿವರಣೆ ಕೊಟ್ಟಾಗಿದೆ. ಅದೇ ತಪ್ಪು ತನ್ನಿಂದ ಮತ್ತೆ ಜರುಗುವಂತಿಲ್ಲ !

"ಬೀಚ್‌ನಲ್ಲಿ ಹೆಚ್ಚು ಕಾಲ ಕಳೆಯೊ ಇಚ್ಛೆ. ಮರಳು ದಂಡೆ ಬಿಸಿಲಿಗಾಗಿ ಡೆಲ್ಲಿಯಿಂದ ಬಂದೆ."

"ಬಾಂಬೆಗೆ ಪ್ರಥಮ ಭೇಟಿ ಇರ್ಬೇಕು."

"ಹೌದು."

"ಭೇಟಿಗೆ ಆರಿಸಿದ ನಗರವೇನೊ ಸರಿ...ಕ್ಷಮಿಸಿ, ನೀವು ಒಬ್ಬರೇ ಬಂದಿರೋದು ನನಗೆ ಆಶ್ಚರ್ಯ. ಆ ಧೈರ್ಯ ಮೆಚ್ತೀನಿ. ನಿಮಗೆ ಈ ನಗರದ ಎಲ್ಲಾ ಮೂಲೆಯನ್ನೂ ನಾನು ತೋರಿಸ್ತೀನಿ."





ಒಂದೇ ಪ್ಯಾಕ್‌ನಲ್ಲಿ ಆರು ಬಣ್ಣಗಳು



"ತುಂಬಾ ಸಂತೋಷ."

ಹಾಗೆಂದುದು ಸಮಯಕ್ಕೆ ಅಗತ್ಯವಾದ ಪೊಳ್ಳು ಸಮ್ಮತಿಯ ಮಾತು. ಎದೆ ರಿಮ ರಿಮ ಬಾರಿಸುತ್ತಿತ್ತು. ಗ್ಲಾಸ್ ಇಳಿಸಿದಳು.ಕುಸುಮಾಕರ ಗಡಿಯಾರ ಹಿಡಿದು ನೋಡುತ್ತಾ ಎದ್ದು ನಿಂತ.

"ಕ್ಷಮಿಸಿ, ಯಾರನ್ನೋ ಕಾಣೋದಿದೆ...ಬೈ ಬೈ"

ಹಿಂದಕ್ಕೆ ನೋಡದೆ ಹಜಾರ ದಾಟಿ ಇಳಿದು ಹೋದ. ಅವನ ಹಳದಿ ಕಾರು ರಸ್ತೆಯಲ್ಲಿ ಮಾಯವಾಯಿತು.

ಬಿಡುಗಡೆ ದೊರೆತಂತಾಯಿತು. ಅವನಲ್ಲಿ ಸೌಜನ್ಯ, ಮಿತಿ ಕಂಡರೂ ಯಾವುದೊ ಸೆಳೆತ, ಗೆಲ್ಲುವ ಶಕ್ತಿ. ಮತ್ತೆ ಅವನನ್ನು ಕಾಣುವ ಸುಪ್ತ ಆಸೆ!

ಮಧ್ಯಾಹ್ನದ ಊಟ ಕೋಣೆಯಲ್ಲೇ ಮುಗಿಸಿ ವಿಶ್ರಾಂತಿಗಾಗಿ ಹಾತೊರೆದಳು. ಕಿಟಕಿ ಮುಚ್ಚಿ, ಫ್ಯಾನ್ ಚಲಾಯಿಸಿ ಹಾಸಿಗೆಯಲ್ಲಿ ಮೈ ಚಾಚಿದಳು. ಮೊಗಸಾಲೆಯಲ್ಲಿ ಯಾರೋ ಆಡುತ್ತಿದ್ದ ಮಾತುಗಳು ಕೇಳಿದವು. ಅದು ಅಡಗುತ್ತಲೇ ನಿದ್ರೆ ಅವಳ ಮೇಲೆ ತರಂಗಗಳಲ್ಲಿ ಹಾದು ಬಂತು.

ಹಾಸಿಗೆ ಪಕ್ಕದ ಫೋನ್ ಗಂಟೆ ಬಾರಿಸಿದಾಗ ಅವಳಿಗೆ ಎಚ್ಚರವಾಯಿತು. ಅರೆ ನಿಮಿಷ ತಾನೆಲ್ಲಿರುವೆನೆಂಬ ತಬ್ಬಿಬ್ಬಿನಲ್ಲಿ ಎದ್ದು ಕುಳಿತಳು. ಗಡಿಯಾರ ಐದು ಗಂಟೆ ತೋರುತ್ತಿತ್ತು.

ಫೋನ್ ಕಿಂಕಿಣನಾದ ಮತ್ತೆ ಮೊಳಗಿತು. ರಿಸೀವರ್ ಎತ್ತಿದಳು. ಮರೆತಿದ್ದ ಪರಿಚಿತ ಕಂಠ.

"ಹಲೊ, ಮರೆತುಬಿಟ್ರಾ?...ನಾನು ನವೀನ ದಾಮ್ಲೆ...ಒಂದೆರಡು ದಿನ ಹೊರಕ್ಕೆ ಹೋಗ್ತಿದೀನಿ. ಹಿಂದಿರುಗಿದ ಕೂಡಲೇ ರಿಂಗ್ ಮಾಡ್ತೀನಿ."

"ಆಗಬಹುದು." ಅವಳಿಗೆ ನಿರಾಶೆಯಾಗಿತ್ತು.

"ನಾನು ಶನಿವಾರ ವಾಪಸ್ ಆಗ್ತೀನಿ...ಅವತ್ತು ನಾನು, ಆಂಟಿ ನಿಮ್ಮೊಂದಿಗೆ ಊಟ ಮಾಡುವ ಅಂತ. ಸರಿಯೆ?"

"ಸರಿ."

"ಶನಿವಾರ ಸಂಜೆ ಏಳರ ಹೊತ್ತಿಗೆ ಬಂದು ನಿಮ್ಮನ್ನು ಕರೆದೊಯ್ತೀನಿ... ಹೋಟೇಲಿನಲ್ಲಿ ಎಲ್ಲಾ ಸರಿಯಾಗಿದೆ ತಾನೆ?"

"ಚೆನ್ನಾಗಿ ನೋಡಿಕೊಳ್ತಾ ಇದ್ದಾರೆ. ಹೋಟೇಲಿನೋರಿಗೆ ನಿಮ್ಮ ಸೂಚನೆ ಬಲವಾಗಿದೆ."

"ದೂರದಿಂದ ಬಂದಿರೋ ಒಂಟಿ ಹೆಣ್ಣಿನ ವಿಷಯ ನೋಡಿ."

"ಮಿಸ್ಟರ್ ದಾಮ್ಲೆ, ಅಷ್ಟು ಚಿಂತೆ ನಿಮಗೆ ಬೇಡ. ನನಗೆ ಯಾರ ಹೆದರಿಕೆಯೂ ಇಲ್ಲ. ಪಾವನ್ ಮನೆತನದ ಹುಡುಗಿ ನಾನು."

"ವೆರಿ ಗುಡ್. ಕೋಪ ಮಾಡ್ಕೋಬೇಡಿ...ಶನಿವಾರದ ವರೆಗೆ ಗುಡ್ ಬೈ"

ಶನಿವಾರಕ್ಕೆ ಇನ್ನೂ ಎರಡು ದಿನಗಳಿವೆ. ರಿಸೀವರ್ ಇಡುತ್ತಿದ್ದಂತೆ ಹೃದಯದಲ್ಲಿ ನೋವು ಕಾಣಿಸಿತು. ಹೋಟೇಲಿನ ಸಂಗೀತ ಕಾರ್ಯಕ್ರಮ ನೆನಪಿಗೆ ಬಂತು.

ಅರ್ಚನಾ ತಲೆಗೂದಲು ಹೊಳೆಯುವ ವರೆಗೆ ಬ್ರಷ್ ಮಾಡಿ ಸೀರೆ ಬದಲಿಸಿದಳು. ಮನರಂಜನೆ ಹಜಾರಕ್ಕೆ ಇಳಿದು ಬಂದಾಗ ಜನ ಸೇರಿದ್ದರು. ದೂರದ ಕುರ್ಚಿ ಹಿಡಿದು ಬಲಕ್ಕೆ ತಿರುಗಿದಳು. ಅದ್ದ ಸಾಲಿನಲ್ಲಿ ತನ್ನಂತೆ ಒಂಟಿಯಾಗಿ ಕುಳಿತ ಯುವತಿ! ತನ್ನ ಕಡೆಗೇ ಎರಡು ಸಾರಿ ನೋಡಿ ದೃಷ್ಟಿ ಪಕ್ಕಕ್ಕೆ ಹೊರಳಿಸಿದಳು. ಮತ್ತೆ ತಿರುಗಿದಾಗ ತನ್ನತ್ತಲೇ ತಿರುಗಿದ ಕಣ್ಣುಗಳು!

ಮತ್ತಷ್ಟು ದೂರಕ್ಕೆ ಕುಳಿತು ಕೈಲಿದ್ದ ಪುಸ್ತಕ ತೆರೆದಳು ಅರ್ಚನಾ. ಪುಟ ತಿರುವುತ್ತಿದ್ದ ಬೆರಳುಗಳು ಕಂಪಿಸಿದವು. ನಗರದಿಂದ ಹೊರ ಬೀಳುವುದು ಸರಿ ಎಂದು ಕುರ್ಚಿಯಿಂದ ಅರ್ಧ ಎದ್ದಳು. ಮತ್ತೆ ಭಾರವಾಗಿ ಕುಳಿತಳು.

ಒಳ ದನಿ ಹೇಳುತ್ತಿತ್ತು. ತಾನು ನಗರದಲ್ಲಿ ಯಾರಿಗೂ ಹೆದರದೆ ಉಳಿಯುತ್ತಿರುವುದು ಗತಿಸಿದ ಸೋದರನ ಸಲುವಾಗಿ ಅಲ್ಲ...ನವೀನ ದಾಮ್ಲೆಗಾಗಿ! ಶನಿವಾರದ ವರೆಗೆ ಹೊರಡುವಂತಿಲ್ಲ.

ಹುಚ್ಚು ಪರಿಚಯ! ನವೀನನ ವಿಷಯ ಏನೂ ತಿಳಿಯದು. ಅವನಿಗೆ ತನ್ನ ಅರ್ಧದಷ್ಟು ಸಂಗತಿಗಳ ಪರಿಚಯ ಆಗಿ ಹೋಗಿದೆ. ನವೀನ ಎರಡು ದಿನ ಬೊಂಬಾಯಿನಿಂದ ಹೊರ ಹೋಗುತ್ತಿದ್ದಾನೆ......ಬಹುಶಃ ಯಾರನ್ನೋ ಪ್ರೀತಿಸುತ್ತಿದ್ದಾನೆ. ಅವಳೊಂದಿಗೆ ಎರಡು ದಿನಗಳ ಮೋಜು...! ಶನಿವಾರ ತನ್ನಲ್ಲಿಗೆ ಬಂದು ಊಟಕ್ಕೆ ಕರೆದೊಯ್ಯುವುದರಲ್ಲಿ ಯಾವ ಅತಿಶಯವೂ ಇಲ್ಲ. ಪರಿಚಯ ಉಳಿಸಿಕೊಳ್ಳುವ ಒಂದು ಸಾಮಾನ್ಯ ಕಾರ್ಯಕ್ರಮ ಅಷ್ಟೆ.

ನವೀನ ಮನೆದಿಂದ ಹೊರಗಿರುವುದು ಸರಿ. ಅದರ ಸಾಧನೆಗೆ ಡೆಲ್ಲಿಗೆ ಹಿಂತಿ... ದಾರಿ. ಚಂಚಲಚಿತ್ತ ತತ್ಕ್ಷಣದಲ್ಲಿ ಗೆಲುವು ಸಾಧಿಸಿತು... ಸ್ವಾಗತ ವಿಭಾಗಕ್ಕೆ ದೃಢವಾಗಿ ಹೆಜ್ಜೆ ಸರಿಸಿದಳು.

ಅವಳ ಎದುರಿಗೆ ಬರುತ್ತಿದ್ದ ಕುಸುಮಾಕರ !

ಅಷ್ಟು ದೂರದಿಂದಲೇ ಹೇಳಿದ:

"ನಿಮ್ಮನ್ನು ನೋಡೋದಿಕ್ಕೇ ಬಂದೆ......ನಿಮ್ಮ ಕೋಣೆಗೆ ಫೋನ್ ಮಾಡ್ದ. ಉತ್ತರವಿಲ್ಲ......"

"ನೀವು ಪತ್ತೇದಾರರ ಹಾಗೆ ಕಾಣ್ತೀರಿ."

ಕಂಠದಲ್ಲೇ ಬಿರುಸು ಅಡಗಿಸಿದಳು. ಅವನ ಮುಖದಲ್ಲಿ ಅದೇ ಮುಗುಳು ನಗೆ. ಕೈಕಟ್ಟಿ ನಿಂತು ಬೇಡಿಕೆಯ ಪದ ಬಿಡಿಸಿದ.

"ನನಗೆ ವ್ಯವಹಾರದಲ್ಲಿ ಎಣಿಸಿದ್ದಕ್ಕಿಂತ ಹೆಚ್ಚಿಗೆ ಲಾಭ ಬಂದಿದೆ. ನಿಮ್ಮನ್ನ ತಲೆಯಲ್ಲಿ ಇಟ್ಟುಕೊಂಡೇ ಬಂದೆ......ಹೊಟೇಲ್ ಸ್ಕೈಲಾರ್ಕ್‌ನಲ್ಲಿ ನಮ್ಮಿಬ್ಬರ ಊಟ...... ಆಮೇಲೆ ಸ್ವಲ್ಪ ದೂರದ ಡ್ರೈವ್."

ದಿಟ್ಟತನದ ಮುಖವಾಡ ಕಳಚಿತು. ಎದೆ ಬಡಿತ ಏರಿತು. ಮೂಲೆಯಲ್ಲಿ ಧೈರ್ಯ ಇಣುಕಿತು. ಒಂಟಿತನ ದೂರ ಮಾಡಲು ಅದೊಂದು ಅವಕಾಶ. ಆಹ್ವಾನ ನಿರಾಕರಿಸಿ ಇಲ್ಲಿ ಮಾಡುವುದೇನು ? ಡೈನಿಂಗ್ ಹಾಲ್‌ನಲ್ಲಿ ಒಬ್ಬಳೇ ಊಟ ಮಾಡಿ ಮತ್ತೆ ಕೋಣೆ ಸೇರಿ ಹಾಸಿಗೆಯಲ್ಲಿ ದೇಹ ಚಾಚುವುದು... ಆಗ ಏಕಾಕಿತನದ ಪರಿಸರದಲ್ಲಿ ತಪ್ಪದೆ ದಾಳಿ ಇಡುವ ಚಿಂತೆ, ಚಂಚಲತೆ...

"ನೀವು ಇಲ್ಲ ಅಂದರೆ ಈ ಮನಸ್ಸಿಗೆ ತುಂಬ ನೋವು".

ಅವನು ಎದೆಗೆ ಕೈಯಿಟ್ಟು ಹಿತವಾಗಿ ಒತ್ತಾಯಿಸಿದ.

"ಹೊಟೇಲ್ ಸ್ಕೈಲಾರ್ಕ್ ಪಂಚತಾರಾ ಹೊಟೇಲು ಇರಬೇಕು. ನಾನು ಉಡುಗೆ ಬದಲಿಸಿ ಬರ್ತೀನಿ."

"ಈಗಿರೋ ಉಡುಗೆಯಲ್ಲಿ ಚೆನ್ನಾಗಿ ಕಾಣ್ತೀರಿ, ನಡೀರಿ... ನನ್ನ ಕಾರು ಹೊರಗಿದೆ."

ಮುಂದಿನ ಎರಡು ತಾಸುಗಳು ಸುಳಿಯಂತೆ ಸುತ್ತಿ ಹೋದವು.

ಸ್ಕೈಲಾರ್ಕ್ ಹೊಟೇಲಿನ ಭವ್ಯ, ಅಲಂಕೃತ ಲಾನ್. ವಿಶಾಲ ಪೋರ್ಟಿಕೊ. ವರ್ಣದೀಪಗಳ ಮಧ್ಯೆ ಪುಟಿದ ಕಾರಂಜಿ. ಬಣ್ಣದ ಜರಿ ವಸ್ತ್ರಗಳ ದ್ವಾರಪಾಲಕರು. ಬಿಳುಪು ಪೇಟಾ, ಬಿಳುಪು ಸಮ ವಸ್ತ್ರಗಳಲ್ಲಿ ಹರಿದಾಡುವ ವೈಟರುಗಳು... ಅರೆಗತ್ತಲಿನ ಶೃಂಗಾರ ಲೋಕದಲ್ಲಿ ಸೊಗಸಾದ ಭೋಜನ. ಕಿಟಕಿಯಿಂದ ಕಾಣುವ ಉದ್ಯಾನ. ಅದರಿಂದ ಮುಂದಕ್ಕೆ ಅರಬ್ಬೀ ಸಮುದ್ರದ ಜಲರಾಶಿಯ ಕತ್ತಲು ನೋಟ.

ಅವಳ ಮನದಲ್ಲಿ ಸುಳಿದಾಡಿದ ಭೀತಿ, ಶಂಕೆ, ಹರಿದು ಹೋದವು. ಕುಸುಮಾಕರ ಸೊಗಸಾದ ಸಂಗಾತಿ. ತನ್ನ ಓದಿನ ದಿನಗಳ ನೆನಪು ಅವಳ ಮುಂದೆ ಬಿಚ್ಚಿದ. ವ್ಯವಹಾರಗಳ ತುಣುಕು ವಿವರ ನೀಡಿದ. ಅವಳನ್ನು ಪ್ರಶ್ನಿಸಿದ. ರೋಚಕ ಸನ್ನಿವೇಶದ ಕಾವಿನಲ್ಲೂ ಅವಳಿಗೆ ಎಚ್ಚರವಿತ್ತು. ಬೊಂಬಾಯಿಗೆ ಬಂದ ಉದ್ದೇಶ. ಸೋದರ ದೀಪಕನ ವಿಷಯ ಅವನ ಮುಂದೆ ಎತ್ತಲಿಲ್ಲ.

"ಡೆಲ್ಲಿಯಲ್ಲಿ ನಿಮಗೆ ಬಾಯ್‌ಫ್ರೆಂಡ್ ಇಲ್ಲವೆ?"

ಕಾಫಿ ಬಂದ ಮೇಲೆ ಕೇಳಿದ.

"ಇಲ್ಲ"

ಬಿಳುಪು ಸುಳ್ಳು! ನಿರಪಾಯದ ಸ್ನೇಹಿತರೆಂದು ಅಣ್ಣ ಪರಿಚಯ ಮಾಡಿಸಿದವರೊಂದಿಗೆ ತುಸು ಅಧಿಕವಾಗಿಯೇ ಡೆಲ್ಲಿಯಲ್ಲಿ ಸುತ್ತಾಡಿದುದನ್ನು ಸಮಾರಂಭಗಳಲ್ಲಿ ಭಾಗವಹಿಸಿದುದನ್ನು ಅವಳು ಹೇಳಲಿಲ್ಲ. ಶ್ರೀಮಂತ ಕೂಟದಲ್ಲಿ ಒಮ್ಮೆ ಪಾನಮತ್ತಳಾಗಿ ಕಾಮುಕನ ಕೈಗೆ ಸಿಕ್ಕಿ ನರಳಾಡಿದುದನ್ನು ಬಾಯಿ ಬಿಡುವಂತಿಲ್ಲ.

ಅವಳಿಗೊಂದು ಚೆಂದದ ಬದುಕಿನ ಕನಸು ತನ್ನ ಮನಕ್ಕೆ ಹಿತವಾದವನೊಬ್ಬ ಬಾಳ ಸಂಗಾತಿಯಾಗಿ ಸೇರಲು ಆತುರವಿಲ್ಲ.

ಮುಖ ಎತ್ತಿದಾಗ ಕುಸುಮಾಕರನ ದೃಷ್ಟಿ ಅವಳ ಮೇಲಿತ್ತು. ಮನದಲ್ಲಡಗಿರುವುದನ್ನು ಬಿಚ್ಚಿ ಓದುತ್ತಿರುವನೆಂಬ ವಿಚಿತ್ರ ಕಲ್ಪನೆ. ಇಪ್ಪತ್ತನಾಲ್ಕು ತಾಸುಗಳಿಗಿಂತ ತುಸು ಹೆಚ್ಚಿನ ಕಾಲದ ಹಿಂದೆ ಆದ ಸ್ನೇಹ ಎಷ್ಟೊಂದು ಗಾಢವಾಗುತ್ತಿದೆ!

"......ಮಲಬಾರ್ ಹಿಲ್‌ನ ಸಣ್ಣ ಕೆಫೆಯಲ್ಲಿ ಆಫ್ರಿಕನ್ ನೃತ್ತ ನಡೆಯುತ್ತೆ."

ಕುಸುಮಾಕರ ಮೆಲುದನಿಯಲ್ಲಿ ಹೇಳುತ್ತಿದ್ದ. ಹೇಳಿಕೆಯ ಮೊದಲ ಭಾಗ ಅವಳು ಕೇಳಿಸಿಕೊಂಡಿರಲಿಲ್ಲ.

"ಕ್ಷಮಿಸಿ...ನೀವು ಹೇಳಿದ್ದು ಕೇಳಿಸಿಕೊಳ್ಳಲಿಲ್ಲ."

ತಡವರಿಸಿದಳು ಅರ್ಚನಾ.

"ಆಫ್ರಿಕನ್ ಡಾನ್ಸ್ ನೋಡುವ ಅಂತ ಸೂಚಿಸ್ತಿದ್ದೆ".

ನಯವಾಗಿ ಮತ್ತೆ ಹೇಳಿದರೂ ಮುಖಭಂಗವಾದ ಛಾಯೆ ಅವನ ಮುಖದಲ್ಲಿ ಕಂಡಿತು.

ಹೊರ ಬಂದು ಕಾರಿನಲ್ಲಿ ಕುಳಿತರು. ಗುಡ್ಡ ಏರಿ ಎಡ ಬಲ ತಿರುಗಿದರು. ಶ್ರೀಮಂತ ಸೌಧಗಳನ್ನು ದಾಟಿ ಎರಡು ವಿಶಾಲ ಗೋಡೆಗಳ ನಡುವೆ ಸರಿದರು. ವಾಹನದ ವೇಗ ಕುಗ್ಗಿತು. ಮಧ್ಯೆ ಹರಿದಾಡಿದ ಒಬ್ಬಿಬ್ಬರು ರಸ್ತೆಯ ಅಂಚಿಗೆ ಬಂದು ಕಾರಿನ ಬೆಳಕಿಗೆ ಕೈ ಮುಖಕ್ಕೆ ಮರೆ ಮಾಡಿ ಗೋಡೆ ಒರಗಿ ನಿಂತರು.

ಚಂದ್ರನ ಬೆಳಕಿನಲ್ಲಿ ಕಾರು ನಿಂತಿತು. ಕುಸುಮಾಕರ್ ಬಲಗಡೆಯ ಎತ್ತರದ ಹಳೆ ಕಟ್ಟಡ ತೋರಿದ.



"ಇಂಗ್ಲೀಷರ ಕಾಲದ ಕಟ್ಟಡ. ಬೆಳಗ್ಗೆ ಹೊತ್ತಿನಲ್ಲಿ ಹೊರಗಿನ ತೋಟ ನೋಡಲಿಕ್ಕೆ ಚಂದ."

ಉಸಿರು ಬಿಗಿ ಹಿಡಿದು ಮೈ ಅವುಚಿದಳು. ದೀಪಕ ಮಲಬಾರ್ ಹಿಲ್‌ನ ವರ್ಣಚಿತ್ರ ರಚಿಸಿದ್ದ!

"ಹೌದು. ಬೆಳಗ್ಗೆ ಹೊತ್ನಲ್ಲಿ ಬಂದು ನೋಡಬೇಕು"

ಇಲ್ಲವಾದ ಕುತೂಹಲ ತೋರಿದಳು. ಅವಳ ತೋಳಿಗೆ ತನ್ನ ತೋಳು ಕೂಡಿಸಿ ನಡೆದ.

"ಎಚ್ಚರಿಕೆ! ಇಲ್ಲಿ ಹಾಸುಗಲ್ಲುಗಳು ಬಹಳ ನುಣುಪಾಗಿವೆ"

ರಾತ್ರಿಯ ನಿಶ್ಶಬ್ದತೆ ಚೆನ್ನಾಗಿ ಪಸರಿಸಿತ್ತು. ದೂರದಲ್ಲಿ ನಾಯಿಯ ಅಳು ನ ರಾಗ ಕೇಳಿತು. ಇಕ್ಕಟ್ಟಿನ ಭಾಗದಲ್ಲಿ ನಡೆದರು.

"ಈಗ ನಾವು ಹೋಗ್ತಾ ಇರೋದು ಹೊಸ ಕೆಫೆ. ಅದು ಕೆಫೆ ಅಲ್ಲ. ಕ್ಲಬ್ ಅಲ್ಲ. ಮನರಂಜನೆಯ ಸಣ್ಣ ಸ್ಥಳ. ಅದರ ಮಾಲೀಕ ಸೈಫುಲ್ಲಾ ನನ್ನ ಸ್ನೇಹಿತ ವಿದೇಶೀಯರೇ ಅಲ್ಲಿಗೆ ಹೆಚ್ಚಾಗಿ ಬರೋದು. ನಿಮಗೆ ಅದು ಹಿಡಿಸುತ್ತೆ ಅಂತ ಭಾವಿಸ್ತೀನಿ."

ಅವರು ಮೆಲ್ಲನೆ ಇರಿಸುತ್ತಿದ್ದ ಹೆಜ್ಜೆಗಳ ಟೊಳ್ಳು ಸಪ್ಪಳ ನೀರವತೆಯಲ್ಲಿ ಸ್ಫುಟವಾಗಿ ಕೇಳುತ್ತಿತ್ತು. ಎರಡು ಪಕ್ಕಗಳ ಮನೆಗಳೂ ಕತ್ತಲಿನಲ್ಲಿ ಮುಳುಗಿದ್ದವು.

ಅರ್ಚನಾ ಒಮ್ಮೆಗೇ ಭಯಗೊಂಡಳು. ಕಂಡರಿಯದ ನಿರ್ಜನ, ಕತ್ತಲು ಕಾಣದಲ್ಲಿ, ಕೆಲವು ತಾಸುಗಳ ಪರಿಚಯದ ಮನುಷ್ಯನೊಂದಿಗೆ ತಾನು ಇಲ್ಲಿ ಮಾಡುತ್ತಿರುವುದೇನು?

*    *    *    *

ಕುಸುಮಾಕರ ತುಕ್ಕು ಹಿಡಿದ ಕಬ್ಬಿಣದ ಲಾಂಧ್ರದ ಅಡಿಯಲ್ಲಿ ನಿಂತು, ಕಮಾನಿನಂತಿದ್ದ ದೊಡ್ಡ ಬಾಗಿಲಿನ ಪಕ್ಕದ ಹಿತ್ತಾಳೆಯ ಗಂಟೆ ಎಳೆದ.

ಒಳಗಡೆ ಕಡಕ್ಕನೆ ಸಲಾಕೆ ಸರಿಯಿತು. ಬಾಗಿಲು ಹಿಂದಕ್ಕೆ ಸರಿದಂತೆ ಮಾತುಗಳು ಕೇಳಿದವು. ಕಪ್ಪು ಮುಖದ ಆಫ್ರಿಕನ್ ದಪ್ಪನೆಯ ಕರ್ಟನ್ ಸರಿಸಿ ಅವರನ್ನು ಒಳಕ್ಕೆ ಬಿಟ್ಟ.

"ಹೈ ಅಟ್ಲಾಸ್‌ನಿಂದ ಬಂದಿರೋ ಹುಡುಗಿಯಿಂದ ನೃತ್ಯ."

ಅವಳನ್ನು ಕಿರುಗಣ್ಣಿನಲ್ಲಿ ನೋಡಿ ನಗೆ ಮಿಂಚಿಸಿದ.

ಬಾಗಿಲ ಎದುರುಗಡೆಯ ತೆರೆಗಳು ಇಬ್ಭಾಗವಾದವು. ವಾದ್ಯ, ಸಂಗೀತ ಏರಿತು. ನರ್ತಕಿ ಒಳಕ್ಕೆ ಹೆಜ್ಜೆ ಇರಿಸಿದಳು. ಎರಡು ಭುಜಗಳ ಮುಂದೆ ಇಳಿಬಿದ್ದ ಉದ್ದನೆಯ ಕಪ್ಪು ಕೂದಲು. ಹಾವಿನಂತೆ ಬಳುಕುವ ತೋಳುಗಳು. ಎಡ ಬಲ ದೃಷ್ಟಿ ಮಿಂಚಿಸಿ, ಸೊಂಟ ಬಳುಕಿಸಿ ಜಾರಿ ಬಂದಳು.

ಕುಸುಮಾಕರ ಸಂಗಾತಿಯ ಮುಖ ನೋಡಿದ. ಅಶ್ಲೀಲವಾಗಿ ಅಂಗಗಳನ್ನು ಕುಣಿಸುತ್ತಿದ್ದ ನರ್ತಕಿಯ ಮೇಲೆ ತಿರಸ್ಕಾರದ ಕಣ್ಣು ನೆಟ್ಟಿದ್ದಳು.

"ಕಲೆ, ರಂಜನೆ, ಚೆಂದ, ಯಾವುದೂ ಇಲ್ಲದ ನೃತ್ಯ. ಅಟ್ಲಾಸ್ ಹುಡುಗಿಯಲ್ಲಿ ವಿಶೇಷತೆ ಇರುತ್ತೇಂತ ಬಂದಿದ್ದು. ಕಾಫಿ ಮುಗಿಸಿ ಹೊರಟುಬಿಡೋಣ" ಮೆಲ್ಲನೆ ಸೂಚಿಸಿದ.



ಅರ್ಚನಾ ತಬ್ಬಿಬ್ಬಾಗಿ ನಿಂತಳು. ಕುಸುಮಾಕರನ ತೋಳು ಅವಳನ್ನು ಮುಂದುವರಿಯುವಂತೆ ಒತ್ತಿ ಸೂಚಿಸಿದವು.

ವಿಶಾಲವಾದ ಕೋಣೆ ಅದು. ನೆಲಕ್ಕೆ ಬೆಲೆ ಬಾಳುವ ರತ್ನಗಂಬಳಿ ಹಾಸಿತ್ತು. ಬಿಳುಪು ಗೋಡೆಗಳ ಮೇಲೆ ದೊಡ್ಡ ಪ್ರಮಾಣದ ತೂಗು ಚಿತ್ರಗಳು. ಗೋಡೆಯ ದಿಂಬುಗಳಿಗೆ ತಲೆ ಒರಗಿಸಿ ಕಾಲು ಚಾಚಿದ ಕೆಲವೇ ಮಂದಿ ಪ್ರೇಕ್ಷಕರು. ಅವರೆಲ್ಲರ ಮುಂದೆ ಪ್ರತ್ಯೇಕ, ಸಣ್ಣ ದುಂಡು ಮೇಜುಗಳು.

ಅವಳು ಕಸಿವಿಸಿಗೊಂಡಳು. ಆ ಕೂಟದಲ್ಲಿ ಅವಳೊಬ್ಬಳೇ ಹೆಣ್ಣು! ಕುಳಿತವರೆಲ್ಲಾ ಅವಳ ಕಡೆಗೊಮ್ಮೆ ಕಣ್ಣು ಹರಿಸಿ ದೃಷ್ಟಿಬೀರುತ್ತ ತಿರುವಿದರು.

"ಇಲ್ಲಿ......" ಎಂದು ದಿವಾನೆಯೊಂದನ್ನು ಅವಳಿಗೆ ತೋರಿ ತಾನೂ ಪಕ್ಕಕ್ಕೆ ಕುಳಿತು ಮೆಲ್ಲನೆ ಹೇಳಿದ.

"ಇಲ್ಲಿ ಕಾಫಿ ಷರಬತ್ತಿನ ಹೊರತು ಮತ್ತೇನೂ ಕೊಡುವುದಿಲ್ಲ"

"ಕಾಫಿ ಸಾಕು" ಎಂದು ಬಾಗಿಲ ಕಡೆ ನೋಡಿದಳು.

ಜರಿ ಹಳದಿಯ ಪೇಟಾ, ದೊಗಳೆ ಪ್ಯಾಂಟು ಧರಿಸಿದ ಮೂವರು ಸಂಗೀತಗಾರರು ಸಜ್ಜಾಗಿ ನಿಂತಿದ್ದರು. ಕೊಳವೆಯಂತಹ ಉದ್ದನೆಯ ಕಪ್‌ಗಳಲ್ಲಿ ಕಾಫಿ ಬಂತು.

ಬಿಡುಗಡೆ ಬಯಸಿದವಳಂತೆ ತಲೆ ಅಲುಗಿಸಿದಳು. ದಪ್ಪನೆಯ ಪರದೆಗಳು ನಾಲ್ಕು ಕಡೆಗಳಿಂದಲೂ ಇಳಿಬಿದ್ದು ಕೋಣೆಗೆ ಗಾಳಿ ಬರದಂತಾಯಿತು. ಪ್ರೇಕ್ಷಕರು ಕುಡಿಕೆ, ಕೊಳವೆಗಳನ್ನು ಎಳೆದು ಸೇದ ತೊಡಗಿದರು. ಚಿಮ್ಮಿದ ಬೂದು ಬಣ್ಣದ ಹೊಗೆಯ ಕಟು ವಾಸನೆಯಿಂದ ಅವಳ ಕಣ್ಣುಗಳು ಹಿಗ್ಗಿದವು.

"ಹೊಗೆಸೊಪ್ಪೇನು ಅದು?"

ಅವಳ ಮೆದು ಪ್ರಶ್ನೆಗೆ ನಕ್ಕ.

"ಹಷೀಶ್ ಜಾತಿಯ ಹಾಗೆ...ಗಾಂಜಾ"

ವೈಟರ್ ಸಿಹಿ ತಿಂಡಿಗಳ ಟ್ರೇ ಹಿಡಿದು ಬಂದ. ಕೈ ಆಡಿಸಿ ಅವನನ್ನು ಹಿಂದಕ್ಕೆ ಕಳಿಸಿದ. ಅರ್ಚನಾಗೆ ಅವನು ಆಡುತ್ತಿದ್ದ ಮಾತುಗಳು ಕೇಳದು. ತಲೆಯಲ್ಲಿ ಹೊಗೆ, ಕಣ್ಣುಗಳಲ್ಲಿ ಮಂಪರು ಕವಿದಿತ್ತು.

ಹೊರ ಬರುತ್ತಲೇ ನೀಳವಾಗಿ ಉಸಿರೆಳೆದುಕೊಂಡಳು. ಬಿಸಿ ವಾತಾವರಣದಲ್ಲಿ ಗಾಳಿ ತಂಪಾಗಿ ಹರಿದು ಬಂತು. ಬವಳಿ ಬಂದವಳಂತೆ ಸಂಗಾತಿಯ ತೋಳಿಗೆ ತಲೆ ಒರಗಿಸಿದಳು.

"ಏನಾಗ್ತಿದೆ?...ಮೈ ಸರಿ ಇಲ್ಲವೆ?"

ಅವನ ಪ್ರಶ್ನೆ ಬಹು ದೂರದಿಂದ ಬಂದಂತೆ ಕೇಳಿತು.

"ಏನೂ ಇಲ್ಲ...ಒಂದೆರಡು ನಿಮಿಷದಲ್ಲಿ ಸರಿ ಹೋಗುತ್ತೆ."

ಪದಗಳನ್ನು ಜೋಡಿಸಲು ಅವಳಿಗೆ ಶ್ರಮವಾಯಿತು. ಪಕಾವಿಕೆ
ಮಾಡಿದ ಆಯಾಸದೊಂದಿಗೆ ಹೋರಾಡಿದಳು. ತೊಯ್ದು ಹಣೆಯ ವೆ
ಕೈ ಉಜ್ಜಿದಳು.

"ಸಕಿ ರಾತ್ರಿಯಲ್ಲಿ ನಿಮ್ಮನ್ನು ಕರೆತಂದು ತೊಂದರೆ ಕೊಟ್ಟಿದ್ದಕ್ಕೆ
ಕೇಳ್ತಿದೀನಿ."

ಹಾಗೆಂದು ಅವಳಿಗೆ ಅರಿವಾಗುವ ಮೊದಲೇ ಅವಳನ್ನು ಮಗುವಿ
ತೋಳುಗಳಲ್ಲಿ ಎತ್ತಿ ನಡೆದ. ಪಾದಗಳು ನೆಲ ಮುಟ್ಟಿದಾಗ ಅವಳಿಗೆ ಕಾ
ಬಳಿಗೆ ಬಂದಿರುವುದರ ಅರಿವಾಯಿತು.

"ಈಗ ಸರಿಯಾಗಿದ್ದೀರಾ?"

ಅವಳ ಭುಜಗಳಿಗೆ ಕೈ ಹೂಡಿ ನೇರವಾಗಿ ನಿಲ್ಲಿಸಿ ಮಂಪರು ಕಣ್ಣುಗ
ಪ್ರಶ್ನಿಸಿದ. ಆ ಕಣ್ಣುಗಳಿಗೆ ಸಮೀಪಿಸುತ್ತಿದ್ದ ಅವನ ಮುಖ ಮಂಜಾಗಿ
ಸಿತು. ಚಂದ್ರನ ಬೆಳಕಿನಲ್ಲಿ ಮಬ್ಬಾಗಿ ಕಾಣುವ ನಾಲ್ಕಾರು ಚುಕ್ಕಿಗಳ ತರ!

ಅವನ ತುಟಿಗಳು ಅವಳ ತುಟಿಗಳನ್ನು ಬಲವಾಗಿ ಒತ್ತಿದವು. ಅಂತ್ಯ
ದಂತಹ ದೀರ್ಘ ಚುಂಬನ!

ಬಿಡಿಸಿಕೊಳ್ಳಲು ಚೈತನ್ಯವಿಲ್ಲದೆ ಅವನ ತೋಳು ಬಂಧನದಲ್ಲಿ ನಿಂತಳು. ದೇ
ನಾಳಗಳಲ್ಲಿ ಕುದಿ ನೀರು ಹರಿದಿತ್ತು. ಸೆಣಸಿ ಅವನ ಹಿಡಿತದಿಂದ ಹೊರ ಬಂದ
ಅವಳ ತಲೆಗೆ ತುಟಿ ಸ್ಪರ್ಶಿಸಿ ಗೊಣಗಿದ.

"ನಿಮ್ಮನ್ನು ಭ್ರಾಂತಗೊಳಿಸಬೇಕೂಂತ ಇಚ್ಛಿಸಲಿಲ್ಲ......ನಾನು ತ
ಯಿಂದ ಕಾಯಬೇಕೂಂತ ಇದ್ದೆ...ಆದರೆ ನೀವು ತುಂಬಾ ಸುಂದರ
ಕಾಣ್ತೀರಿ."

ಚಂದ್ರನ ಕಡೆಗೆ ತಲೆ ಎತ್ತಿದ.

"ನೀವು ಮಾಡಿದ್ದು ತಪ್ಪು" ಉಬ್ಬಸದಲ್ಲಿ ತೊದಲಿದಳು.

"ಹೌದು, ತಪ್ಪು...ಆತುರಪಟ್ಟೆ. ಇನ್ನು ತಾಳ್ಮೆಯಿಂದ ಇರ್ತೀನಿ. ಅದಕ್ಕೆ
ಹೆಚ್ಚಾಗಿ ಏನೂ ಹೇಳಲಾರೆ...ಮಾತು ಕೊಡ್ತೀನಿ. ನಾವು ಮತ್ತೆ ಸ್ನೇಹಿತ
ಕ್ಷಮಿಸ್ತೀರಾ?"

"ಹುಂ."

ಆ ಪದ ನಿಟ್ಟುಸಿರಿನೊಂದಿಗೆ ಬಂತು. ಶಕ್ತಿ ಉಡುಗಿತ್ತು. ಅವನ ಚುಂ
ಅವಳ ಮನಃಶಕ್ತಿಯನ್ನು ಹೀರಿತ್ತು.

ಅವಳನ್ನು ಕಾರಿನಲ್ಲಿ ಕೂಡಿಸಿ ವೀಲ್ ಹಿಡಿದ. ಹೊಟೇಲ್ ಸೇರುವ ಹೊ
ಅವಳಲ್ಲಿ ಚೇತನ ಕೂಡಿತ್ತು. ಕೈ ಚೀಲದಿಂದ ಕನ್ನಡಿ ತೆಗೆದು ನೋಡಿಕೊಂಡ
ಮುಖದ ಬಣ್ಣ ಕರಗಿದ್ದರೂ ಅಲ್ಲಿ ಶಾಂತತೆ ಉಳಿದಿತ್ತು.

"ನಾನು ಹೋಗ್ತಿದೀನಿ. ನಾಳೆ ಸಮುದ್ರಕ್ಕೆ ಇಳಿಯೋಣ. ಕ್ಷಮೆ ಇರಲಿ ಅ
ಮತ್ತೊಮ್ಮೆ ಕೇಳ್ತಿದೀನಿ."

ಗಾಬರಿ ಪಟ್ಟಿದ್ದು ತನ್ನ ದೌರ್ಬಲ್ಯ ಎನ್ನುವ ಭಾವದಲ್ಲಿ ಅವನತ್ತ
ತೋರಲು ಯತ್ನಿಸಿದಳು....ಅವಳಿಗದು ಪ್ರಥಮ ಚುಂಬನವಲ್ಲ. ಆದರೂ ಅಂ
ಸುಡು ಚುಂಬನದ ಅನುಭವವಿಲ್ಲ!

ಅವಳು ಹೊಟೇಲಿನ ಡೆಸ್ಕ್‌ನಲ್ಲಿ ಕೋಣೆಯ ಬೀಗದಕೈ ಪಡೆಯುತ್ತ
ಅವನ ಕಾರು ಸರಿದು ಹೋಯಿತು. ಲಿಫ್ಟ್‌ನಿಂದ ಸಿಂಧಿ ಹೆಂಗಸರ ಗುಂಪು ಹಾ
ಬಂತು. ಅರ್ಚನಾಳ ಕಣ್ಣು ಥಕ್ಕನೆ ಅರಳಿತು...ಒಬ್ಬಳ ಕೈಲಿ ಮುತ್ತುಗಳ ಕ
ಹಾರ. ಅದರ ಮಧ್ಯ ತೂಗು ಬಿದ್ದ ದಂತದ ಕೊಂಬು!

ಅವರ ಮಾತಿನಿಂದ ತಿಳಿದ ಸಂಗತಿ ಅದು. ಸರದಲ್ಲಿ ಕೊಂಬು ಧರಿಸಿ
ಹೆಣ್ಣಿಗೆ ಶುಭ! ಅದೃಷ್ಟ ತರುವ ಚಿಹ್ನೆ. ದೇವತೆಯ ಆಶೀರ್ವಾದ ಅದು. ಹೆಣ್ಣಿ
ಕೆಟ್ಟದ್ದರಿಂದ ದೂರ ಮಾಡುವ ಯಂತ್ರಪದಕ.

ಅರ್ಚನಾ ಲಿಫ್ಟ್‌ಗೆ ಧಾವಿಸಿದಳು. ಕೋಣೆ ಸೇರಿ ಬಾಗಿಲು ಭದ್ರಪ
ಸೂಟ್‌ಕೇಸ್ ಬಿಚ್ಚಿದಳು. ಅಡಿಯಲ್ಲಿ ಹಳೆಯ ಮಕಮಲ್ ಒಡವೆ ಪೆಟ್ಟಿ
ತಾಯಿ ತನಗೆ ಬಿಟ್ಟು ಹೋದ ಅಮೂಲ್ಯವಾದ ಬಳೆ, ಮೂಗುತಿ, ಕಿವಿಯ ಆಭರ
ದೊಂದಿಗೆ ಮೂರು ತಿಂಗಳ ಹಿಂದೆ ಸೇರಿದ ವಜ್ರದ ಕಂಠಹಾರ. ಅದಕ್ಕೆ ತೂ
ಹಾಕಿದ ನೀಲಿ ವಜ್ರದ ಕೊಂಬು! ಅಣ್ಣನ ಮರಣದ ನಂತರ ಪೋಲೀಸರು ಈ
ಕಳುಹಿಸಿದ ಪೆಟ್ಟಿಗೆಯ ವಸ್ತುಗಳಲ್ಲಿ ಅದೂ ಒಂದು. ದೀಪಕ ಬೆಲೆ ಬಾಳು
ಆ ಕಾಣಿಕೆಯನ್ನು ಯಾರಿಗೆ ಅರ್ಪಿಸಲು ತಂದಿದ್ದನೊ ತಿಳಿಯದು.

ವರ್ಣಚಿತ್ರಗಳ ಫೋಟೋಗಳೊಂದಿಗೆ ವಜ್ರದ ಕೊಂಬನ್ನೂ ತಂದಿದ್ದಳು ಅರ್ಚನಾ. ಆದರಿಂದ ಅಣ್ಣನ ಮರಣದ ವಿವರ ದೊರೆಯಬಹುದೆಂಬ ಆಸೆ.

ಪೆಟ್ಟಿಗೆಯ ತಳಕ್ಕೆ ವಜ್ರದ ನೆಕ್‌ಲೇಸ್ ಸೇರಿಸಿದಳು. ನಿದ್ರೆ ಹತ್ತುವ ಮೊದಲು ಮುಚ್ಚಿದ ಕಣ್ಣುಗಳ ಮುಂದೆ ಎರಡು ದೃಶ್ಯಗಳು.

ದೀಪಕ ಪಾವನ್‌ನ ಹಸಿದ ಕಣ್ಣುಗಳು! ಆ ಕಣ್ಣುಗಳ ಮುಂದೆ ತೂಗಾಡಿದ ಹೊಳಪಿನ ವಜ್ರದ ಕೊಂಬು!

* *

ಎಡ ಮೊಳ ಕೈ ಆಸರೆಯಲ್ಲಿ ನೀಳವಾಗಿ ದೇಹ ಚಾಚಿ ಬಲಗೈ ಬೆರಳುಗಳ ಮಧ್ಯದಿಂದ ಮರಳು ಸುರಿಯುತ್ತಾ ಬೇಡಿಕೆ ಸಲ್ಲಿಸಿದ.

"ಈ ಮಧ್ಯಾಹ್ನದಿಂದ ನನಗೆ ಕೆಲಸ ಇದೆ. ನಾಳೆ ರಾತ್ರಿಗೆ ಮತ್ತೆ ಡ್ರೈವ್ ಹೋಗೋಣ"

ಜುಹು ಬೀಚಿನ ಮರಳಿನ ಮೇಲೆ ಕುಳಿತಿದ್ದರು ಅರ್ಚನಾನ ಸಮುದ್ರದ ನೀರಿನ ಮೇಲೆ ಹಾರಾಟ ನಡೆಸಿದ ಬಿಳುಪು ಪಕ್ಷಿಗಳ ಸಾಲು ನೋಡುತ್ತಿದ್ದಳು ಅವಳನ್ನು ತಟ್ಟಿ ಮತ್ತೆ ಹೇಳಿದ.

"ನಾನು ಒಳ್ಳೆಯವನು ಅಂತ ಒಂದು ಸಾರಿ ಹೇಳಿ"

ನಗೆ ತಡೆದಳು. ಬೇಸರದ ಒಂದು ಎಳೆ ಮುಖದಲ್ಲಿ ಕಂಡಿತು.

ಮಲಬಾರ್ ಹಿಲ್‌ನ ಆ ಹೆಸರಿಲ್ಲದ ಕೆಫೆಗೆ ಭೇಟಿ ನೀಡಿದ ಮೇಲೆ ಕುಸುಮಾಕರ್ ಸೌಜನ್ಯದಿಂದ ವರ್ತಿಸಿದ್ದ. ಆಸಕ್ತಿಪೂರ್ಣ ಅದ್ಭುತ ವ್ಯಕ್ತಿ! ಅರ್ಥವಾಗದ ಸಂಗಾತಿ! ನವೀನನ ಬಗ್ಗೆ ಅವನಿಗೆ ಒಂದು ಪದ ತಿಳಿಸಿರಲಿಲ್ಲ. ಒಳಪ್ರೇರಣೆಯೊಂದು ಇಬ್ಬರು ಯುವಕರನ್ನೂ ಬೇರೆಯಾಗಿ, ಪರಸ್ಪರ ಸಂಬಂಧಿಸದಂತೆ ಇಡಲು ಎಚ್ಚರಿಸಿತ್ತು.

ಕಳೆದ ಎರಡು ದಿನಗಳು ಕುಸುಮಾಕರನ ಜೊತೆಯಲ್ಲಿ ಕಳೆದಿತ್ತು. ಮಲಬಾರ್‌ಹಿಲ್‌ಗೆ ಹಗಲು ಹೊತ್ತಿನಲ್ಲಿ ಭೇಟಿ ಕೊಡುವ ಕಾರ್ಯ ಪೂರೈಸಿತ್ತು. ಟಾಜ್ ಕಾಂಟಿನೆಂಟಲ್‌ನಲ್ಲಿ ಕುಳಿತು ಸಮುದ್ರ ನೋಡುತ್ತಾ ಟೀ ಕುಡಿದಾಗಿತ್ತು. ಚೌಪಾಟಿ ಮರಳು ದಂಡೆ, ಆರ್ಟ್ ಗ್ಯಾಲರಿ, ಪೊವಾಯ್ ಮತ್ತು ವಿಹಾರ್ ಸರೋವರಗಳ ವೀಕ್ಷಣೆ ಆಯಿತು...ಪ್ರತಿ ತಾಣದಲ್ಲೂ ಕುಸುಮಾಕರ ಸೊಗಸಾದ ಮಾರ್ಗದರ್ಶಿಯಾಗಿದ್ದ. ಅವಳನ್ನು ಸಂತೋಷಗೊಳಿಸುವುದರಲ್ಲಿ ತನ್ನ ಸಂತೋಷ ಕಂಡಿದ್ದ. ಆದರೂ ಅವಳಲ್ಲಿ ಉದ್ವೇಗ ಆತಂಕ ತನ್ನ... ಅವನು ಯಾವ ಗಳಿಗೆಯಲ್ಲಾದರೂ ಮತ್ತೆ ತನ್ನನ್ನು ಚುಂಬಿಸುತ್ತಾನೆ! ತನ್ನನ್ನು ಪ್ರೀತಿಸುವುದಾಗಿ ಹೇಳುತ್ತಾನೆ!

ಕುಸುಮಾಕರ ಎದ್ದು ಕುಳಿತು ಮರಳಿನ ಮೇಲಿದ್ದ ಪ್ಯಾಕ್‌ನಿಂದ ಸಿಗರೇಟು ಎಳೆದು ಹಚ್ಚಿದ. ಅವಳ ನೋಟ ಸ್ತಗಿತಗೊಂಡಿತು. ಆಗಲೇ ಅವಳು ಪ್ರಥಮ ಬಾರಿಗೆ ಅವನ ಎಡಮೊಳಕೈ ಒಳ ಭಾಗದಲ್ಲಿ ಚಿತ್ರ ಗಮನಿಸಿದ್ದು. ಜೋಡಿ ಕೊಂಬುಗಳ ಸಣ್ಣ ಹಸಿರು ಗುರುತು!

ಅವಳ ದೃಷ್ಟಿಯೊಂದಿಗೆ ಕಣ್ಣು ಸರಿಸಿದ.

"ನನ್ನ ಕೈ ಕೆಗುರುತು ನೋಡ್ತಾ ಇದೀರಾ?...ನಾನು ಏಳು ವರ್ಷದೋನು ಆಗಿದ್ದಾಗ ನನ್ನ ಕೈಗೆ ಬಂತು ಇದು. ನಮ್ಮ ಮನೆ ತೋಟದೋನು ನನ್ನ ರಕ್ಷಣೆ ಗುರುತು ಅಂತ ಹಸಿರು ಹಚ್ಚೆ ಹಾಕಿದ್ದ...ತಂದೆಗೆ ಕೋಪ ಬಂದು ಅವನ್ನ ಕೆಲಸದಿಂದ ತೆಗೆದ್ರು. ಹೆಂಗಸರೇ ಇದನ್ನ ಹೆಚ್ಚಾಗಿ ನಂಬೋದು. ಧರಿಸೋದು ಫ್ಯಾಶನ್ ಆಗಿದೆ. ನೀವು ಬೇಕಾದಷ್ಟು ನೋಡಿರಬೋದು."

"ಫುಟ್‌ಪಾತ್ ಅಂಗಡಿಯಲ್ಲಿ ನೋಡ್ದೆ"

"ಬೆಳ್ಳೀದು ಸಾಮಾನ್ಯ. ಚಿನ್ನದ್ದೂ ಉಂಟು."

"ವಜ್ರದ್ದೂ ಉಂಟು."

ಎಂದು ತನ್ನಲ್ಲಿ ಹೇಳಿಕೊಂಡಳು. ಅಣ್ಣ ಉಳಿಸಿ ಹೋದ ಆಸ್ತಿಗಳಲ್ಲಿ ಅದೂ ಒಂದು. ತನ್ನ ಕೋಣೆಯ ಪೆಟ್ಟಿಗೆಯಲ್ಲೇ ಇದೆ.

"ಈ ಕೋಡಿನ ಚಿತ್ರದಿಂದ ಚಕಿತರಾದ ಹಾಗೆ ಕಾಣ್ತೀರಿ. ನನ್ನಲ್ಲಿ ವಜ್ರದಿಂದ ಮಾಡಿಸಿದ ಕೋಡು ಇದೆ..."

ಅವಳನ್ನು ಪರೀಕ್ಷಿಸುವಂತೆ ನೋಡಿದ. ಅರ್ಚನಾ ಚಕಿತತೆಯ ಪರಮಾವಧಿಯಲ್ಲಿ ಪ್ರತಿಮೆಯಾಗಿ ಕುಳಿತಳು. ನರಗಳಲ್ಲಿ ಜೀವ ಮಿಡಿದಾಗ ಭಾವನೆಗಳ ತುಮುಲ ಅಡಗಿಸಿ ಮೆದುವಾಗಿ ಧ್ವನಿಸಿದಳು.

"ಜೋಡಿ ಕೊಂಬು ಸರದಲ್ಲಿ ಧರಿಸೋದು ಫ್ಯಾಷನ್ ಇರಬೋದು... ಆದರೆ ಸಾಮಾನ್ಯವಾಗಿ ಹೆಂಗಸರು ಅದನ್ನ ಹಾಕಿಕೊಳ್ಳೋದಿಲ್ಲ."

ಇಬ್ಬರೂ ಮೌನವಾಗಿ ಕುಳಿತರು. ಸೂರ್ಯನ ಕಾವು ತೀಕ್ಷ್ಣಗೊಂಡಿತು. ಸಹಸ್ರ ಸೂಜಿಗಳು ಚರ್ಮ ಇರಿದಂತಾಗಿ ಭುಜ ಹೊರಳಿಸಿದಳು.

"ಎರಡು ನಿಮಿಷ ನನ್ನ ಷರಟು ಹೊದ್ದಿರಿ."

ಅವಳು ತಡೆಯುವ ಮೊದಲೇ ಷರಟು ಬೆನ್ನಿನ ಮೇಲೆ ಹರವಿದ.

"ಇಲ್ಲಿ ಬಿಸಿಲೇ ಜಾಸ್ತಿ."

"ಹಾಗನ್ನೇಡಿ. ಇನ್ನೊಂದು ತಿಂಗಳಿಗೆ ನೋಡಿ. ಈ ಸಿಟಿ ಮುಚ್ಚಿ ಹೋಗೋಷ್ಟು ಆಕಾಶದ ನೀರೆಲ್ಲಾ ಸುರಿದು ಹೋಗುತ್ತೆ. ಬೊಂಬಾಯಿನ ಮಳೆ, ಬಿಸಿಲು ಎರಡೂ ವಿಪರೀತದ್ದು. ಈಗ ಶಾಖ ಸಹಿಸಿ ನಿಧಾನವಾಗಿ ಕಪ್ಪು ಚರ್ಮ ಮಾಡ್ಕೊಬೇಕು."

ಅವನ ನಗೆ ಮುಖ ಚೆಂದ ಚಿಮ್ಮಿತು. ಸ್ನೇಹದ ಆಳ ಹೆಚ್ಚಿ ಮನದ ಚಳಿ ದೂರವಾಯಿತು.

"ಇನ್ನೊಂದು ಸಾರಿ ನೀರಿಗೆ ಇಳಿಯೋಣವೆ?"

ಸಿಗರೇಟು ಮರಳಿಗೆ ಒತ್ತಿದ. ಅವನ ಬಗೆಗೆ ಆತಂಕ ದೂರವಾಗಿ ಮನಸ್ಸು ಹರ್ಷಗೊಂಡಿತ್ತು. ಉತ್ತರ ನೀಡುವ ಬದಲು ನಗುತ್ತಾ ನೀರಿನ ದಿಕ್ಕಿಗೆ ಓಡಿದಳು......

ಸಂಜೆ ನವೀನನ ಕರೆಗೆ ಕಾಯುತ್ತಾ ಇದ್ದಂತೆ ಕುಸುಮಾಕರ ಅವಳಿಂದ ದೂರವಾದ. ನವೀನನ ಆಂಟಿಯ ಮನೆಗೆ ಭೇಟಿ ಕೊಡುವ ತವಕ.

ನೀಳ ದೇಹ ಹೊರಳಿಸಿ ನಿಲುವುಗನ್ನಡಿಯಲ್ಲಿ ಪ್ರತಿಬಿಂಬ ನೋಡಿಕೊಂಡಳು. ಹೊಳಪಿನ ಬಿಳುಪು ಸೀರೆ, ತೋಳಿಲ್ಲದ ಬಿಳುಪು ಬ್ಲೌಸ್...ತೋಳುಗಳು ಅಂದವಾಗಿ ಕಾಣಿಸಿದವು. ಆದರೂ ತೃಪ್ತಿ ಇಲ್ಲ. ಉಡುಗೆ ಸರಳವಾಯಿತು!

ಸೂಟ್‌ಕೇಸಿನಿಂದ ವಜ್ರಹಾರ ತೆಗೆದಳು. ವಜ್ರದ ಕೊಂಬಿನ ಪದಕ ಕನ್ನೆಗೆ ಒತ್ತಿ ನಯವಾಗಿ ಕುತ್ತಿಗೆಗೆ ಹೊಂದಿಸಿದಳು. ಅದೇ ಉಡುಗೆ ಈಗ ತೃಪ್ತಿ ಕೊಟ್ಟಿತು. ಏಳು ಗಂಟೆಗೆ ಐದು ನಿಮಿಷ ಉಳಿದಂತೆ ಕೋಣೆಗೆ ಬೀಗ ಹಾಕಿ, ಲಿಫ್ಟ್ ಹಿಡಿಯದೆ ಮೆಟ್ಟಿಲು ಟಕ ಟಕ ಇಳಿದಳು. ಡೆಸ್ಕ್‌ನಲ್ಲಿ ಬೀಗದ ಕೈ ಒಪ್ಪಿಸಿ ತಿರುಗಿದಳು. ನವೀನ ಬರುತ್ತಿದ್ದ. ಆಗಮನದ ತಿಳಿವು ಇಬ್ಬರೂ ಮೈ ರೋಮಾಂಚನಕ್ಕೆ ಸಿಕ್ಕಿತು.

ನೆನಪಿನಲ್ಲಿ ನಿಂತುದಕ್ಕಿಂತಲೂ ಎತ್ತರದ ತೆಳು ದೇಹದವನು. ತುಟಿಗಳ ಮೇಲೆ ತಾಳ್ಮೆಯ ನಗೆ.

"ವೆರಿ ಗುಡ್. ನಿಮಗೆ ಹೇಗೆ ಗೊತ್ತು? ನಾನು ಕಾಯುವ ಜಾತಿಯೋನಲ್ಲ ಅಂತ."

ಅವಳ ಉಡುಗೆಯ ಮೇಲೆ ಮೆಚ್ಚಿಗೆಯ ಕಣ್ಣು ಹರಿಸಿದ.

"ಸಾಮಾನ್ಯ ಮನಃಶಾಸ್ತ್ರದ ತಿಳಿವಳಿಕೆ."

ಅವನಿಗೆ ಉತ್ಸಾಹ ಹೆಚ್ಚುವಂತೆ ಹೂ ನಗೆ ಹಾಕಿ ಅವನೊಂದಿಗೆ ಹೊರಕ್ಕೆ ನಡೆದಳು ಅವನ ದೃಷ್ಟಿ ಅವಳ ಕುತ್ತಿಗೆಯ ವಜ್ರದ ಕೊಂಬಿನ ಮೇಲಿತ್ತು.

"ಇನ್ನು ನಿಮಗೆ ಅಪಾಯವೇ ಇಲ್ಲ...ನಿಮಗೂ ಇದರ ಗಾಳಿ ಬೀಸಿಬಿಟ್ರೆ? ಹುಂ, ಬೊಂಬಾಯಿ ಗಾಳಿ! ವಜ್ರದಲ್ಲಿ ಮಾಡಿಸಿ ಹಾಕಿಕೊಳ್ಳೋಷ್ಟು ಪ್ರಚಂಡವಾಗಿ ಬೀಸಿದ ಪ್ರಚಂಡ ಬಿರುಗಾಳಿ! ......ಈ ಆಭರಣದಲ್ಲಿ ನೀವು ಮೇಲಿನ ಲೋಕದವರ ಹಾಗೆ ಕಾಣ್ತೀರಿ"

ಹಾಸ್ಯದ ನುಡಿ ತರಂಗ ಅವಳ ಎದೆಯಲ್ಲಿ ತಂತಿ ಮೀಟಿತು. ವಜ್ರದ ಕೊಂಬಿನ ವಿಷಯದಲ್ಲಿ ಅವನಿಂದ ಮತ್ತಷ್ಟು ಮಾತುಗಳಿಗೆ ಕಾತರಿಸಿ ಏನೂ ಹೇಳದೆ ನಿಂತಳು.

"ನಿಲ್ಲ ಬೇಡಿ. ಬನ್ನಿ"

ಅವಳನ್ನು ಎಚ್ಚರಿಸಿ ಟ್ಯಾಕ್ಸಿಗೆ ಚಪ್ಪಾಳೆ ತಟ್ಟಿದ. ವಾಹನ ವಿಶಾಲ ರಸ್ತೆಯ ಜನ ಜಂಗುಳಿಯಲ್ಲಿ ಹಾವಿನಂತೆ ಹರಿಯಿತು.

"ಎರಡು ದಿನ ಏನು ಮಾಡಿದ್ರಿ?"

ಪ್ರಶ್ನೆಯಿಂದ ಉತ್ಸಾಹ ತುಸು ತೂಕಡಿಸಿತು. ಕುಸುಮಾಕರನ ಬಗೆಗೆ ತುಟಿ ಬಿಚ್ಚುವಂತೆ ಮನದ ದನಿ ಮೀಟಿ ಹೇಳಿತು. ಅವಳ ದೌರ್ಬಲ್ಯದ ಕಡೆಗೆ ತಿರಸ್ಕಾರದ ಬೆರಳು ತೋರಿದ ಮತ್ತೊಂದು ದನಿ ನಿಷ್ಠುರವಾಗಿ ಹೇಳಿತು....ಈಗ ಕುಸುಮಾಕರನ ನೆನಪಿಗೂ ತೆರೆ ಎಳೆಯುವುದು ಸೂಕ್ತ!

"ನಗರವೆಲ್ಲಾ ಸುತ್ತಾಡ್ದೆ. ಸಮುದ್ರದಲ್ಲಿ ಈಜಾಡಿದೆ...ಬೋರಿವಿಲಿಗೆ ಹೋದೆ......"



Happy Deepavali

# VISVESVARAYA IRON AND STEEL LIMITED, BHADRAVATI.

**( Karnataka State )**



**Manufacture of :**

Special and alloy Steels (Carbon Special Steels, Chromiun Alloyed Steels, Manganese Alloyed Steels, Chromium Molybdnum Steels, Chromium Vanadium Steels, Chromium Nickel Steels, Silico Manganese Steels, Rimming Steels, Free Cutting Steels), Ferro-Silicon, Steel Castings, Grey Iron Castings, Refractory Bricks, Charcoal Pig Iron, C. I. Pipes, Tor Steel, Cement Etc.

"ಬೋರಿವಿಲಿಗೆ ಯಾಕೆ ಹೋದ್ರಿ? ...ಸರಿ."

ಏರಿದ ಕಣ್ಣು ಇಳಿಸಿದ.

"ಅಣ್ಣನ ಸಮಾಧಿ ಅಂತ ಕಂಡ ನೆಲಕ್ಕೆ ಪುಷ್ಪ ಅರ್ಪಿಸಿ ಬಂದೆ. ಪೋಲೀಸ ರಿಂದ ಪ್ರಯೋಜನ ಆಗ್ಲಿಲ್ಲ. ಅವರು ಅಣ್ಣನ ವಿಷಯದಲ್ಲಿ ಏನೂ ತಿಳಿಸ್ಲಿಲ್ಲ"

ಮುಖದ ಸುಕ್ಕುಗಳು ನೇರವಾದವು. ವಿಷಯ ಹಿಡಿಸದಂತೆ ಗೋಣು ಆಡಿಸಿದ.

"ಅವರು ತಿಳಿಸೋದು ಏನೂ ಉಳಿದಿಲ್ಲ. ನಿಮ್ಮದೂ ವಿಚಿತ್ರ ಹಠ! ಆ ವಿಷಯ ಯಾಕೆ ಬಿಡೋದಿಲ್ಲ?...ನಾನು ಹೇಳಿದ್ದೆ"

ನಸುಗೋಪಕ್ಕೆ ಪ್ರತಿಯಾಗಿ ಅವಳೂ ಸಿಡಿದಳು.

"ಹೇಳಿದ್ರಿ......ನಿಮಗೆ ಹಾಗೆಲ್ಲಾ ಹೇಳೋದು ಸುಲಭ. ಅವನು ನನ್ನ ಅಣ್ಣ ಅನ್ನೋದು ಯಾಕೆ ಮರೆತ್ರಿ?...ಅವನೊಬ್ಬನೇ ನನಗೆ ಉಳಿದಿದ್ದ ರಕ್ತ ಸಂಬಂಧಿ. ಆ ಸಾವು ನೆನಪಿನಿಂದ ದೂರ ಆಗೋದಿಲ್ಲ"

ಅವನು ತುಟಿ ಬಿಗಿಸಿ ಕುಳಿತ. ವಾಹನ ಸಂಚಾರದ ತಡೆಯಿಂದ ಟ್ಯಾಕ್ಸಿ ನಿಂತಿತು.

"ನೀವು ಬೋರಿವಿಲಿಗೆ ಹೋಗೋದು ತಿಳಿಸಿದ್ರೆ ನಾನೂ ನಿಮ್ಮ ಜೊತೆಗೆ ಬರ್‍ತಿದ್ದೆ. ಒಬ್ಬರಿಗಿಂತ ಇಬ್ಬರು ಮೇಲು."

"ವ್ಯತ್ಯಾಸ ಏನೂ ಆಗ್ತಿರ್‍ಲಿಲ್ಲ"

ಕಟುವಾಗಿ ಹೇಳಿದಳು.

"ನಿಮ್ಮ ಅಭಿಪ್ರಾಯಕ್ಕೆ ಎದುರು ಹೇಳೋದಿಲ್ಲ. ವಿಷಯ ಮರೆತು ಬಿಡೋಣ."

ಸರಿ ಎನಿಸಿತು. ಅವನ ಕಡೆಗೆ ತಿರುಗಿದಳು. ನಾಲ್ಕು ಕಣ್ಣುಗಳು ಒಂದಾ ದಾಗ ಅವಳ ಹೃದಯದ ಬಡಿತ ಏರಿತು. ಟ್ಯಾಕ್ಸಿ ಮುಂದಕ್ಕೆ ಚಲಿಸಿತು.

"ವಿಷಯ ಮರೆತು ಬಿಡೋಣಾಂತ ಹೇಳ್ದೆ...ಮತ್ತೆ ನಾವಿಬ್ರೂ ಸ್ನೇಹಿತರು ತಾನೆ?"

ಅವನ ಹುಡುಗು ಪ್ರಶ್ನೆಯಿಂದ ನಗು ಬಂತು.

"ಮತ್ತೆ ಸ್ನೇಹಿತರು" ಒಪ್ಪಿಗೆ ಸೂಚಿಸಿದರು.

ಸಯಾನ್ ವಿಭಾಗ ತಲುಪಿದರು. ಮರಗಳ ಸಾಲು ದಾಟಿ ಎರಡು ಅಂತಸ್ತುಗಳ ಮನೆಯ ಮುಂದೆ ವಾಹನ ನಿಂತಿತು.

"ಇಡೀ ಕಟ್ಟಡ ಆಂಟೀದು. ತಳ ಭಾಗದಲ್ಲಿ ವಾಸ. ಹಿಡಿಸ್ತಾ ಅದು?"

ಹಸಿರು ಬಣ್ಣದ ಕಿಟಕಿಯತ್ತ ಬೆರಳು ಮಾಡಿದ.

"ಫೈನ್"!

ಕಣ್ಣು ಅತ್ತಲಿಂದ ಕೀಳದೆ ಮೆಚ್ಚಿಗೆ ತೋರಿದಳು.

"ಸುಲೋಚನಾ ದಾಮ್ಲೆ ನನ್ನ ಅತ್ತೆ...ನನ್ನ ತಂದೆಯ ಅಕ್ಕ. ನಾನು ಆಂಟಿ ಅಂತ ಕರೆದರೆ ಅವಳಿಗೆ ಬೇಸರ...ಹಿಂದುಗಡೆ ಲಾನ್‌ನಲ್ಲಿ ಅತಿಥಿಗಳು ಇದಾರೆ."

ಅರ್ಚನಾ ಬೆಚ್ಚಿ ನಾಚಿದಳು.

"ಅತಿಥಿಗಳು ? ಅಂದರೆ ಇನ್ನೂ ಕೆಲವು ಮಂದಿಯನ್ನು ಕೂಡಿ ಹಾಕಿದೀರಿ"

ತುಟಿ ಕಚ್ಚಿದಳು. ತಾನೊಬ್ಬಳೇ ಅತಿಥಿಯೆ? ಹೆಚ್ಚು ಮಂದಿ ಅಲ್ಲಿರುವುದ ರಲ್ಲಿ ತಪ್ಪೇನಿದೆ?

"ಅತ್ತೆಗೆ ಅದು ಪ್ರೀತಿಯ ಹವ್ಯಾಸ...ಶನಿವಾರ ಅಂದ್ರೆ ಅತಿಥಿಗಳು ಬರ್‍ತಾರೆ... ಆಂಟಿ ಸುಲೋಚನಾ ಮೊದಲು ಚಿತ್ರಗಳಲ್ಲಿ ಸಣ್ಣ ಪಾತ್ರ ವಹಿಸ್ತಿದ್ಲು. ಅವಳ ಗಂಡ ಪಾರ್ಸಿ. ಅವರು ಹೋದ ಮೇಲೆ ಇಲ್ಲೇ ವಾಸ. ಸ್ವಭಾವದಲ್ಲಿ ಸ್ವಲ್ಪ ಅಧಿಕಾರ ಚಲಾಯಿಸೊ ಚಪಲ. ಅದರ ಕಡೆ ನೀವು ಗಮನ ಕೊಡಬೇಡಿ."

ಹಿಂಭಾಗದ ಆವರಣಕ್ಕೆ ಕಾಲಿಡುತ್ತಲೇ ಎತ್ತರದ, ಬೆಳ್ಳಿ ತಲೆಗೂದಲಿನ ಅಲಂ ಕೃತ ಹೆಂಗಸು ಲಗುಬಗೆಯಿಂದ ಎರಡು ಕೈಗಳನ್ನೂ ಮುಂದಕ್ಕೆ ಚಾಚಿ ಬಂದಳು.

"ಅರ್ಚನಾಪಾವನ್! ನೀವು ನಮ್ಮ ಕಾಕ್‌ಟೈಲ್‌ಗೆ ಬಂದಿದ್ದು ಬಹಳ ಸಂತೋಷ. ನಿಮ್ಮ ಪರಿಚಯ ಮಾಡಿ ಕೊಟ್ಟದ್ದಾನೆ ನವೀನ."

ತಾನು ನವೀನನ ಬಂಧು ಸುಲೋಚನಾ ದಾಮ್ಲೆ ಎಂಬುದನ್ನು ತಿಳಿಸಲಿಲ್ಲ ಚುರು ಕಿನ ಕಾಲುಗಳ ಹೆಂಗಸು. ನವೀನ ತಲೆ ಕೆರೆದ.

ಸುಲೋಚನಾ ಅವಳನ್ನು ತಬ್ಬಿದಂತೆಯೇ ಮುಂದಕ್ಕೆ ಕರೆದೊಯ್ದು ಹೊಸ ಮುಖಗಳ ಪರಿಚಯ ಮಾಡಿಸಿದಳು.

"ಶ್ರೀಮತಿ ಮತ್ತು ಶ್ರೀ ಅಟ್ಕಿನ್‌ಸನ್......ಕರ್ನಲ್ ಹತ್ವಾರ್... ಶೋಭಾ ಆಪ್ಟೆ...ಗೀತಾ ಬೇನ್...ಅವರ ಮಗಳು ಸುರಭಿ...ಪ್ರೊಫೆಸರ್ ಮಲ್ಹೋತ್ರ......."

ಅರ್ಚನಾಪಾವನ್‌ಳ ಹೆಸರನ್ನೇ ಅತಿಥಿಗಳಿಗೆ ಪರಿಚಯಿಸದೆ ಮೂರು ಉಂಗುರಗಳಿಂದ ಥಳ ಥಳಿಸಿದ ಹಸ್ತವನ್ನು ಬೀಸುತ್ತಾ ನಡೆದು ಬಿಟ್ಟಳು ಗಡಿಬಿಡಿ ಹೆಂಗಸು.

"ನಿಮ್ಮನ್ನ ಎಲ್ಲಿಯೊ ನೋಡಿದ ನೆನಪು...ಕಪ್ಪು ಕಣ್ಣುಗಳನು ಮರೆಯೊ ಹಾಗಿಲ್ಲ"

ಅರ್ಚನಾಳ ಮುಂದೆ ನಿಂತ ಕರ್ನಲ್ ಹತ್ವಾರ್ ಮೊನಚಾದ ಮೂಗು ಸವರಿ ಕೊಂಡ.

"ಎಲ್ಲಿಯೂ ನೋಡಿಲ್ಲ. ನಾನು ಬಾಂಬೆಗೆ ಬಂದು ಮೂರೇ ದಿನಗಳು ಆಗಿ ರೋದು."

ಕಪ್ಪು ಕಣ್ಣುಗಳು ಪಕ ಪಕ ಆಡಿದವು. ಮುಖದ ರಂಗು ಬದಲಾಯಿಸಿತೆಂದು ತಿಳಿದಳು....ತಲೆಯಲ್ಲಿ ಚಳುಕು ಬಂತು. ಕರ್ನಲ್ ತನ್ನನ್ನು ನೋಡಿರಬಹುದು ಬಹುಶಃ ಮಲಬಾರ್ ಹಿಲ್‌ನ ಕೆಫೆಯಲ್ಲಿ ರಾತ್ರಿ ಕುಸುಮಾಕರನೊಂದಿಗೆ!

ಬಿಳುಪು ಸಮವಸ್ತ್ರದ ಹುಡುಗ ಚಹ, ಬಿಸ್ಕತ್ ತಿನಿಸುಗಳ ಟ್ರೇ ಹಿಡಿದು ಚಿತ್ರದ ಕುರ್ಚಿಗಳ ಮಧ್ಯೆ ಸುತ್ತಾಡಿದ. ಸುಲೋಚನಾ ಕಾಕ್‌ಟೈಲ್ ಟ್ರಾಲಿಯೊಂದಿಗೆ ನಡೆದು ಅಧಿಕಾರ ಚಲಾಯಿಸುತ್ತಿದ್ದಳು.

"ನೀವು ಬಾಂಬೆಗೆ ಒಬ್ಬಂಟಿಯಾಗಿ ಬಂದಿರೊ ಧೈರ್ಯ ಮೆಚ್ಚತಕ್ಕದ್ದೆ...ನಾನು ನಿಮ್ಮ ಹಾಗೇ......"

ಸುರಭಿ ಅಣಕು ಮೆಚ್ಚಿಗೆಯಲ್ಲಿ ಬಾಲಿಶವಾಗಿ ಹೇಳಿ ಪಾನೀಯದ ಗ್ಲಾಸ್ ನೀಡಿದಾಗ ಹೌಹಾರಿದಳು ಅರ್ಚನಾ. ನವೀನನಿಗಾಗಿ ತಿರುಗಿದಳು. ಅವನು ಕಾಣೆಯಾಗಿದ್ದ. ಮನಸ್ಸು ಹಾಗೆಯೇ ಹದಕ್ಕೆ ಬಂತು.

"ನೀವು ಇಲ್ಲಿನ ನೈಟ್ ಕ್ಲಬ್‌ಗೆ ಭೇಟಿ ಕೊಟ್ಟದೀರಾ?"

ಮತ್ತೆ ಬಂತು ಯುವತಿಯ ಪ್ರಶ್ನೆ.

"ಇಲ್ಲ"

ಕುಸುಮಾಕರನೊಂದಿಗೆ ಸೈಫುಲ್ಲಾನ ಕೆಫೆಯಲ್ಲಿ ಸೇವಿಸಿದ ಮಾದಕ ಹೊಗೆಯ ಘಾಟು ತಲೆಗೇರಿತು.

"ನೈಟ್ ಕ್ಲಬ್ ವಿಷಯದಲ್ಲೇ ಪ್ರಬಂಧ ಬರೀತಾ ಇರೊ ಮನುಷ್ಯ ಇದಾರೆ ಇಲ್ಲಿ...ಅತ್ತ ಕಡೆ ನವೀನನ ಜೊತೆ , ಮಾತಾಡ್ತಾ ಇದಾರಲ್ಲ, ಚಂದ್ರನ ಹಾಗೆ ಗುಂಡು ಮುಖದೋರು...ಆಗಲೇ ಮೂರು ಗ್ಲಾಸ್ ಖಾಲಿ ಮಾಡಿದಾರೆ. ಪತ್ರಿಕೋದ್ಯಮ ಅವರ ಕಸುಬು."

ಅಸಂಬದ್ಧವಾಗಿ ಅಷ್ಟು ಹೇಳಿ ಸುರಭಿ ಜಿಗಿದು ಹೋದಳು. ಎರಡು ನಿಮಿಷ ಗಳ ನಂತರ ಅರೆ ಬಕ್ಕತಲೆಯ, ಕೆಂಗಣ್ಣಿನ ಅರವತ್ತರ ಮನುಷ್ಯ ಅವಳ ಸ್ಥಾನ ಹಿಡಿದ.

"ಕಾಕ್‌ಟೈಲ್ ಪಾರ್ಟಿ ಅಂದ್ರೆ ನನಗೆ ತಲೆನೋವು. ಆದರೆ ಸುಲೋಚನಾ ನನ್ನ ಬಿಡಬೇಕಲ್ಲ....ನಾನು ಮಲ್ಹೋತ್ರ. ಪೂನಾ ಯೂನಿವರ್ಸಿಟಿಯಲ್ಲಿ ಇತಿಹಾಸದ ಪ್ರೊಫೆಸರ್ ಆಗಿದ್ದೋನು. ನನ್ನ ಪರಿಚಯ ಮಾಡಿಕೊಂಡೆ. ನಿಮ್ಮ ಹೆಸರನ್ನೆ ತಿಳಿಸಲಿಲ್ಲ ಸುಲೋಚನಾ. ಅವಳಿಗೂ ನನ್ನ ಹಾಗೇ ಮರೆವು...ಕ್ಷಮಿಸಿ, ಮಿಸ್..."

"ಅರ್ಚನಾ ಪಾವನ್."

ಅವನಲ್ಲಿ ಆಸಕ್ತಿ ಇಟ್ಟು ಹೇಳಿದಳು.

ಕೆಂಗಣ್ಣು ಮತ್ತಷ್ಟು ಕೆಂಪಾಯಿತು. ನಾಲಗೆ ಚಪ್ಪರಿಸಿ ಬಕ್ಕ ತಲೆ ಸವರಿ ಕೊಂಡ ಪ್ರೊಫೆಸರ್.

"ಪಾವನ್?...ಪಾವನ್! ಎಲ್ಲಿ ಕೇಳ್ದೆ ಆ ಹೆಸರು?...ಹಾಂ, ಹಸಿದ ಕಣ್ಣಿನ ಸಂಭಾವಿತ ತರುಣ. ಬೋರಿವಿಲಿಯಲ್ಲಿ ಕಂಡ ಕಲಾಕಾರ...ಎಂತಾ ದುರಂತ ಅದು! ಅಷ್ಟೊಂದು ಪ್ರತಿಭೆ ಇದ್ದೋನು ಹಾಗೇಕೆ ಸಾಯಬೇಕು? ಅವನು ಬರೆದ ಎರಡು ಚಿತ್ರ ತೋರಿಸ್ದ..."

ಪಾನೀಯದ ಗ್ಲಾಸ್ ಅವನ ಮುಂದೆ ಬಂತು. ಮಲ್ಹೋತ್ರ ಆತುರದಿಂದ ಗ್ಲಾಸ್ ಎತ್ತಿ ಕೂಟದ ಶಿಷ್ಟಾಚಾರಕ್ಕೆ ಲಕ್ಷ್ಯಗೊಡದೆ ಗಟ ಗಟನೆ ಕುಡಿದು ಬರಿದು ಮಾಡಿದ.

ಅರ್ಚನಾ ನಿಂತ ನೆಲೆ ಮರೆತಿದ್ದಳು. ಅವನ ಪ್ರತಿ ಪದವನ್ನೂ ಉಸಿರು ಕಟ್ಟಿ ಮೈಯೆಲ್ಲಾ ಕಿವಿ ಮಾಡಿ ಕೇಳಿದಳು.

"ಆ ಪಾವನ್ ಬೇರೆ ಅಲ್ಲ...ನನ್ನ ಅಣ್ಣ ಅವನು...ದೀಪಕ ಪಾವನ್...ಇನ್ನಷ್ಟು ಹೇಳಿ ಪ್ರೊಫೆಸರ್ "

ಉದ್ವೇಗದಲ್ಲಿ ಅವನ ಕೈ ಹಿಡಿದು ಅಲುಗಿಸಿದಳು.

"ನಾವು ಬೋರಿವಿಲಿಯ ಅಗ್ಗದ ಹೊಟೇಲಿನಲ್ಲಿ ಇಳಿದುಕೊಂಡಿದ್ವಿ... ಅವನು ಶ್ರೀಮಂತ. ಕನ್ಹೇರಿ ಗುಡ್ಡದ ಕಾಟೇಜಿನಲ್ಲಿ ಉಳಿಯಬಹುದಿತ್ತು...ತುಂಬಾ ಸರಳ ಸ್ವಭಾವ. ದಿನಕ್ಕೆ ಹತ್ತು ರೂಪಾಯಿನ ಕೋಣೆ ಹಿಡಿದಿದ್ದ. ನಾವು ಆಮ್ಲೆಟ್, ಕಾಫಿ ತಗೊಂಡ್ವಿ"

ಅತ್ಯಧಿಕ ಶಕ್ತಿಶಾಲಿ ಒಗೆಯುವ ಪೌಡರ್




ಹೊಸ ಫಾರ್ಮ್ಯುಲಾ ಡೆಟ್

ಹೆಚ್ಚು ಶಕ್ತಿಶಾಲಿ

ವಿಪುಲವಾದ ನೊರೆ

ತಾಜಾ ಪರಿಮಳ

ಉಜ್ವಲ ಬಿಳಿಪು, ಡೆಟ್‌ನ ಬಿಳಿಪು

(Shilpi dm 11b/76 kan)

"ನಿಜ. ಅವನಿಗೆ ಮೊಟ್ಟೆಯ ಆಮ್ಲೆಟ್ ಅಂದ್ರೆ ಬಹಳ ಇಷ್ಟ."

ದೇಹದ ಎಲ್ಲಾ ಉಸಿರನ್ನೂ ಒಟ್ಟಾಗಿ ಹೊರ ಎಳೆದಳು.

ನವೀನ ಅವರಿಬ್ಬರ ಹಿಂದೆ ತುಸು ದೂರಕ್ಕೆ ಅಚಲನಾಗಿ ನಿಂತಿದ್ದ. ಮಂತ್ರಮುಗ್ಧ ದೀಪಗಳು ಹೊತ್ತಿದವು. ಪ್ರೊಫೆಸರ್ ಅವಳ ಕೈ ಒತ್ತಿದ.

"ಕ್ಷಮಿಸಿ ಮಿಸ್ ಪಾವನಾ... ಇಂತಾ ಸಂತೋಷ ಕೂಟದಲ್ಲಿ ಏನೇನೋ ಹೇಳಿ ಉದ್ರೇಕಗೊಳಿಸ್ದೆ. ಒಂದೊಂದು ಸಾರಿ ಮರೆವಿನಲ್ಲಿ ಸ್ಥಳ, ಜನರ ಪರಿವೆ ಇಲ್ಲದ ಹೀಗೆ ಮಾತಾಡಿ ಬಿಡ್ತೀನಿ."

ಪ್ರೊಫೆಸರ್ ನಿಸ್ಸಹಾಯಕನಂತೆ ತಲೆ ಅಲುಗಿಸುತ್ತಿದ್ದ.

"ನಾನು ಹುಚ್ಚಾಗಿ ಹೇಳೋದೇನೂ ಇಲ್ಲ. ನಿಮ್ಮಣ್ಣನ್ನ ಭೇಟಿ ಮಾಡಿದ್ದು ಕೇವಲ ಆಕಸ್ಮಿಕ. ನಾನು ಕನ್ಹೇರಿ ಗುಹೆಗಳ ವಿವರ ಸಂಗ್ರಹಿಸಲಿಕ್ಕೆ ಹೋಗಿದ್ದೆ. ಅವನು ಅವುಗಳ ಚಿತ್ರ ಬರೆಯೋದಿಕ್ಕೆ ಬಂದಿದ್ದ. ಬೋರಿವಿಲಿ ಹೋಟೆಲಿನಲ್ಲಿ ಅವನದು ನನ್ನ ಪಕ್ಕದ ಕೋಣೆ. ತಿಂಡಿಗೆ, ಊಟಕ್ಕೆ ಟೇಬಲ್ ಬಳಿ ಸೇರ್ತಿದ್ವಿ, ಅಷ್ಟೇ."

ಪ್ರೊಫೆಸರ್ ಮಂತ್ರಮುಗ್ಧ ಪಾನೀಯಕ್ಕಾಗಿ ಮಂಚು ಎತ್ತಿ ಕೈ ಸನ್ನೆ ಮಾಡಿದ.



ಅರ್ಚನಾ ತಾನೇ ಹೋಗಿ ಗ್ಲಾಸ್ ತಂದು ಕೊಟ್ಟಳು.

"ಮಿಸ್ಟರ್ ಮಲ್ಹೋತ್ರ, ಇದನ್ನ ಗುರ್ತಿಸ್ತೀರಾ?"

ಕೊರಳಿನ ನೆಕ್‌ಲೇಸ್‌ನಲ್ಲಿ ತೂಗಾಡಿದ ವಜ್ರದ ಕೊಂಬು ಹೊರಗೆಳೆದು ತೋರಿದಳು.

ಅಚ್ಚರಿ ತೋರದ ಕಣ್ಣು ಮುಚ್ಚಿ ಉತ್ತರ ಕೊಟ್ಟ.

"ಚೆನ್ನಾಗಿ ಗುರ್ತಿಸ್ತೀನಿ. ನಿಮ್ಮಣ್ಣ ಕೊಂಬಿನ ಪ್ಲಾಸ್ಟಿಕ್ ಮಾದರಿ ತಂದು ಅದರ ಹಾಗೆ ಚಿನ್ನದಲ್ಲಿ ಮಾಡಿಸಬೇಕು ಅಂದ. ದಾದರ್‌ನಲ್ಲಿ ನನಗೆ ಗೊತ್ತಿದ್ದ ಒಡವೆ ಅಂಗಡಿಗೆ ಅವನ್ನ ಕರೆದೊಯ್ದೆ. ಅಲ್ಲಿ ವಜ್ರದ ನೆಕ್‌ಲೇಸ್ ಇತ್ತು. ದೀಪಕ ಅದಕ್ಕೆ ವಜ್ರದ ಕೊಂಬು ಸರಿ ಅಂತ ತೀರ್ಮಾನಿಸ್ದ. ಅಂಗಡಿಯೋರು ಒಂದೇ ದಿನದಲ್ಲಿ ವಜ್ರದ ಕೊಂಬು ಮಾಡಿ ಕೊಟ್ರು."

ಅರ್ಚನಾ ಹೊಳಪಿನ ಕೊಂಬು ನೋಡುತ್ತಾ ನಿಂತಳು. ನವೀನ ನಿಂತಲ್ಲಿಂದ ಎರಡು ಹೆಜ್ಜೆ ಸರಿದ. ಅವರಿಬ್ಬರ ಮಾತುಗಳು ಅವನಿಗೆ ಕೇಳಿಸುವಷ್ಟು ದೂರ!

"ಇದನ್ನ ಯಾರಿಗೋಸ್ಕರ ಮಾಡಿಸ್ದ ಅಂತ ಹೇಳ್ತೀರಾ? ನಿಮಗ ತಿಳಿದಿರಬಹುದು. ಅಣ್ಣ ಹೋದ ಮೇಲೆ ನನಗೆ ಬಂದ ವಸ್ತುಗಳಲ್ಲಿ ಇದೂ ಇತ್ತು."

ಮಲ್ಹೋತ್ರ ಕಸಿವಿಸಿಗೊಂಡು ತುಟಿ ಚಪ್ಪರಿಸಿದ. ಧ್ವನಿ ತಗ್ಗಿತು.

"ಸಿಲೋನಿ ನರ್ತಕಿಗೋಸ್ಕರವೇ ಇರಬೇಕು. ಅವಳನ್ನ ಯಾವುದೋ ಕ್ಲಬ್‌ನಲ್ಲಿ ನೋಡಿದನಂತೆ. ಅವಳ ಚೆಲುವಿಗೆ ಸೋತ- 'ಅವಳ ಚಿತ್ರ ರಚಿಸೋವರೆಗೆ ಹೋಯ್ತು ಸ್ನೇಹ, ಅವಳು ಸುಲಭವಾಗಿ ಒಪ್ಲಿಲ್ಲ...'"

"ಹೇಳಿ"

ಅನಿರೀಕ್ಷಿತ ಅದ್ಭುತ! ಸಾಮಾಜಿಕ ಕೂಟದಲ್ಲಿ ತಾನು ಅರಸಿ ಬಂದ ಸಂಗತಿ ಅದಾಗಿ ಹರಿದು ಬಂದಿತ್ತು. ಕುತೂಹಲ ತಡೆಯದಂತಾಗಿತ್ತು. ಹಿಂದೆ ನಿಂತ ನವೀನ ಇನ್ನು ಮರೆತು ಬೇಡಿದಳು.

"ನೀವು ಹೇಳಿದ್ದೆಲ್ಲಾ ನನಗೆ ಮಹತ್ವರ. ನಾನು ಇಲ್ಲಿಗೆ ಬಂದ ಮೇಲೆ ನಮ್ಮಣ್ಣನ ವಿಷಯದಲ್ಲಿ ಇಷ್ಟು ವಿವರ ಸಿಕ್ಕಿದ್ದು ನಿಮ್ಮೊಬ್ಬರಿಂದಲೇ... ನಾನು ಬೊಂಬಾಯಿಗೆ ಬಂದಿದ್ದು ಇದಕ್ಕೇ."

ಪಕ್ಕದಲ್ಲಿ ನೋಡಿ, ಒಕ್ಕಾಯಿಸಿದಳು.

"ಮಾರನೆ ದಿನ ನನಗೆ ಹಮ್ಮಯಿಂದ ಹೇಳ್ದ, ಅವಳು ಚಿತ್ರಕ್ಕೆ ಎರಡು ತಾಸುಗಳಷ್ಟು ಕಾಲ ಕೊಡ್ತೀನಿ ಅಂತ ಒಪ್ಪಿದ್ಲು. ಮುಖ ಪರದೆ ಇಲ್ಲ.ರೊ ಹಾಗೆ ಚಿತ್ರ ಬರೆಯೊ ಯೋಜನೆ...ಅವಳು ಸಿಂಹಳಿ ತಂದೆ, ಮದ್ರಾಸಿ ತಾಯಿಯ ಮಗ ಳಂತೆ."

ಮಾತು ಮುಗಿಸಿದಂತೆ ಕೈ ಕೊಡವಿ ಕನಸು ಕಾಣುವಂತೆ ನಿಂತ. ಅವಳ ಸಹ ನೆಗೆ ಕಚಗುಳಿ ಇಟ್ಟಂತಾಗಿತ್ತು.

"ದೀಪಕ ಮತ್ತೇನೂ ಹೆಚ್ಚಿಗೆ ಹೇಳಲಿಲ್ಲವೆ?"

ಅವಳೂ ಮಾತಿನ ಪೂರೈಕೆಗೆ ಬಂದು ಕೇಳಿದಳು.

ಪ್ರೊಫೆಸರ್ ಕನಸಿನಿಂದ ಎಚ್ಚೆತ್ತ.

"ಹಾಂ! ಮಿಸ್ ಪಾವನ್...ನನಗೆ ಆ ಡ್ಯಾನ್ಸ್ ಹುಡುಗಿ ಹೆಸರು ನೆನಪಿಗೆ ಬರ್‍ತಿದೆ. ಅವಳ ಹೆಸರು...ಕಾಮಿನಿ ರತ್ನ! ಅದೇ ಹೆಸರಲ್ಲಿ ಅವಳು ಕ್ಲಬ್ ಗಳಲ್ಲಿ ನೃತ್ಯ ನಡೆಸ್ತಾ ಇದ್ದಿದ್ದು. ಬಹುಶಃ ಈ ವಜ್ರದ ಕೊಂಬು ಅವಳಿಗೆ ಕಾಣಿಕೆ ಕೊಡೋದಿಕ್ಕೆ ತೆಗೆದಿರಬಹುದು...ದೀಪಕ ತೀರಿ ಹೋದ ಒಂದು ವಾರದ ಮೇಲೆ ಯಾರೊ ಹೇಳಿದ್ದು ಕಾಮಿನಿ ರತ್ನ ಯಾವನೊ ಇಟಾಲಿಯನ್‌ನೊಂದಿಗೆ ಮದುವೆ ನಿಶ್ಚಯ ಮಾಡಿಕೊಂಡಳು ಅಂತ."

ಕಾಮಿನಿ ರತ್ನ! ಎರಡು ಸಾರಿ ತನ್ನಲ್ಲೇ ಆ ಹೆಸರು ಹೇಳಿಕೊಂಡು ವಜ್ರದ ಕೋಡು ಕುತ್ತಿಗೆಗೆ ಹೊಂದಿಸಿದಳು.

ನವೀನ ಅಲ್ಲಿರಲಿಲ್ಲ. ತಲೆಯಲ್ಲಿ ಗೊಂದಲ ಎದ್ದಿತ್ತು. ಪ್ರೊಫೆಸರ್ ಹೇಳಿದ್ದು ಅವನು ಕೇಳಿಸಿಕೊಂಡಿರುವುದು ನಿಜ...

ಸುಲೋಚನಾ ಗಟ್ಟಿಯಾಗಿ ಹೇಳುತ್ತಿದ್ದಳು.

"ಯಾರೂ ನೆಪ ಹೇಳಿ ಹೋಗಕೂಡದು. ಬಫೆ ಊಟ ಸಿದ್ಧವಾಗಿದೆ."

ಅರ್ಚನಾ ತಲೆಭಾರದಲ್ಲಿ ಯಾಚಿಸಿದಳು.

"ನಾನು ಹೋಗ್ತೀನಿ ಶ್ರೀಮತಿಜಿ..."

"ಸಾಧ್ಯವೇ ಇಲ್ಲ. ಯಾರು ಬೇಕಾದ್ರು ಹೋಗಬೋದು. ನೀವು ಮಾತ್ರ ಇರಲೇ ಬೇಕು."

ಉಂಗುರಗಳ ಹಸ್ತ ಅವಳ ಭುಜ ಒತ್ತಿ ಕೂಡಿಸಿತು.

ಅರ್ಚನಾ ಎಲ್ಲರಿಂದ ದೂರವಾಗಿ ಬೆತ್ತದ ಕುರ್ಚಿಯಲ್ಲಿ ಕುಳಿತಳು. ಮಲ್ಹೋತ್ರ ಹೇಳಿದ ವಿವರಗಳು ತಲೆಯಲ್ಲಿ ಸುರುಳಿ ಹಾಕುತ್ತಿದ್ದವು.

ನವೀನ ಅತಿಥಿಗಳೊಂದಿಗೆ ಹರಿದಾಡುತ್ತಿದ್ದ. ಹೊರಕ್ಕೆ ಹೋಗಿ ಬರುತ್ತಿದ್ದ. ಅರ್ಚನಾ ತಲೆಗೆ ಕೈ ಹಚ್ಚಿದಳು.

ನವೀನ ಶ್ರೀಮಂತ! ತನಗಿಂತಲೂ ಅಧಿಕ ಅಂತಸ್ತಿನವ! ಇಬ್ಬರಿಗೂ ಮಧ್ಯೆ ಅಗಾಧ ಅಂತರ.

ಅಂತರದ ಪ್ರಮಾಣ ಕಲ್ಪಿಸಿಕೊಳ್ಳುವ ಚಪಲವೇಕೆ? ತನಗೆ ಅವನಲ್ಲಿ ಪ್ರೀತಿಯೆ?

* *

ನವೀನ ವಾಚ್ನಲ್ಲಿ ಗಡಿಯಾರ ನೋಡಿದ. ಹನ್ನೊಂದು ದಾಟಿತ್ತು. ಸುಲೋಚ ನಾಳ ಉಲ್ಲನ್ ಕೋಟು ತಂದು ಅರ್ಚನಾಳ ಹೆಗಲಿಗೆ ಹಾಕಿ ಹೇಳಿದ.

"ಚಳಿ ಜಾಸ್ತಿ ಆಗ್ತಿದೆ. ಹೊರಡೋಣ?"

ಇಬ್ಬರೂ ಹೊರ ಬಂದರು. ಯಾವುದೊ ಕಾರಿನಲ್ಲಿ ಅವಳನ್ನು ಕೂಡಿಸಿ ವೀಲ್ ಹಿಡಿದ. ಮುಖದಲ್ಲಿ ಉತ್ಸಾಹ, ನಗೆ ಇರಲಿಲ್ಲ...ಪೂರ್ಣ ಗಂಭೀರತೆ!

"ಪ್ರೊಫೆಸರ್ ಮಲ್ಹೋತ್ರನ ಜೊತೇಲಿ ಬಹಳ ಮಾತಾಡ್ತಿದ್ರಿ. ಬಹುಶಃ ನಿಮಗೆ ತೃಪ್ತಿ ಆಗಿರಬೋದು."

"ತೃಪ್ತಿ ಅಂದ್ರೆ?"

"ನನ್ನ ಮಾತನ್ನು ನೀವು ಎರಡನೆ ಸಾರಿಗೆ ಗಾಳಿಗೆ ತೂರಿದ್ದು. ...ಮತ್ತೆ ಹೇಳ್ತೀನಿ ಆ ವಿಷಯ ಅಲ್ಲಿಗೆ ಬಿಡಬಾರದೆ?"

ಅವಳ ಕಡೆಗೆ ಬಿರುಸಾಗಿ ನೋಡಿದ. ಅರ್ಚನಾ ಮೈ ಸೆಟೆಸಿದಳು. ಉತ್ತರ ಸಿಡಿದು ಬಂತು.

"ಅದು ನಿಮಗೆ ಸಂಬಂಧಿಸಿದ ವಿಷಯ ಅಲ್ಲ...ಪ್ರೊಫೆಸರ್ ನನ್ನ ಅಣ್ಣನ್ನ ಬೋರಿವಿಲಿಯಲ್ಲಿ ಭೇಟಿ ಆಗಿದ್ದು, ಅವರೊಂದಿಗೆ ಅವನು ಮಾತಾಡಿದ್ದು, ವ್ಯವ ಹಾರ ಮಾಡಿದ್ದು, ಇವೆಲ್ಲಾ ನನಗೆ ಆಸಕ್ತಿ ತರೊ ವಿಷಯಗಳು. ನಾನು ಧರಿಸಿರೊ ಕಂಠಹಾರದ ವಜ್ರದ ಕೊಂಬನ್ನು ಅವರು ಗುರುತು ಹಿಡಿದ್ರು. ಇದನ್ನು ಅಣ್ಣ ಸಿಂಹಳಿ ನರ್ತಕಿಗೆ ತಂದಿದ್ದ ಅಂತ ಅವರ ಅಭಿಪ್ರಾಯ.

"ಇವೆಲ್ಲಾ ಹೇಳ್ಬೇಡಿ ಅಲ್ಲೇ ಕೇಳಿಸಿಕೊಂಡಾಗಿದೆ."

ಅವಳ ಮಾತನ್ನು ಅಡಗಿಸುವಂತೆ ಸರಕ್ಕನೆ ತಿರುವಿನಲ್ಲಿ ಕಾರು ಹಾಯಿ ಸಿದ. ಮುಖದ ಬಣ್ಣ ಇಳಿದಿತ್ತು. ರಸ್ತೆಯ ಮೇಲೆ ಗಮನವಿಟ್ಟು ಮತ್ತೆ ಗಡು ಸಾಗಿ ನುಡಿದ.

"ಈ ಕೆಟ್ಟ ನಗರದಲ್ಲಿ ನಿಮಗೆ ಏನಾದ್ರು ತೊಂದರೆ ಆದೀತು ಅನ್ನೋದಿಕ್ಕೆ ಇಷ್ಟು ಹೇಳ್ತಿದೀನಿ...ಪ್ರೊಫೆಸರ್ ಕೊಟ್ಟ ವಿವರದಿಂದ ಒಂದು ಕಥೆ ಕಲ್ಪನೆ ಮಾಡ್ಕೊಳ್ಳಿ. ನಿಮ್ಮಣ್ಣ ಕನಸುಗಾರ ಇರಬೋದು. ಅವನೂ ನಿಮ್ಮ ಹಾಗೇ ಅವತ್ತು ಬೊಂಬಾಯಿಗೆ ಪ್ರಥಮ ಬಾರಿಗೆ ಬಂದಿದ್ದ. ಅವನು ಕಲಾಕಾರ. ಸೌಂದರ್ಯಕ್ಕೆ ಮಾರು ಹೋಗೊ ಜಾತಿ ಅದು. ಡಾನ್ಸಿಂಗ್ ಹುಡುಗಿಯರಲ್ಲಿ ಹೆಚ್ಚು ಮಂದಿಗೆ ಶೀಲ, ನೀತಿ ಇರೋದಿಲ್ಲ. ನಿಮ್ಮಣ್ಣ ಆಳ, ಪರಿಣಾಮ ತಿಳಿಯದೆ ಪ್ರಣಯದ ಹೊಂಡದಲ್ಲಿ ಕಾಲಿಟ್ಟಿರಲಿಕ್ಕೆ ಸಾಧ್ಯ."

ಅಶ್ಲೀಲ ನರ್ತಕಿಯೊಂದಿಗೆ ಅಣ್ಣನ ಪ್ರಣಯ!

ಕೋಪದ ಸ್ವರದಲ್ಲಿ ಬುಸುಗುಟ್ಟಿದಳು.

"ಹಾಗೆಂದಿಗೂ ಇಲ್ಲ! ನೀವು ಹೇಳಿದ ಮಾತಿನಿಂದ ನಾನು ತಲೆ ಕೆಡಿಸಿಕೊಳ್ಳೋ ದಿಲ್ಲ...ಬೇಗ ಹೊಟೇಲಿಗೆ ಬಿಡಿ ಸಾಕು."

ಅವನಿಗೆ ತಾಳ್ಮೆ ಉಳಿದಿತ್ತು. ಕಾರು ರಸ್ತೆಯ ಅಂಚಿಗೆ ನಿಲ್ಲಿಸಿದ.

"ನಿಮಗೆ ಯಾವ ತೊಂದರೆಯೂ ಆಗಬಾರದು ಅನ್ನೋ ಉದ್ದೇಶದಿಂದ ಹಾಗೆ ಹೇಳ್ದೆ. ನಿಮ್ಮಣ್ಣನ ಮೇಲೆ ನಿಮಗೆ ಒಳ್ಳೆ ಅಭಿಪ್ರಾಯ ಇರೋದು ಸ್ವಾಭಾವಿಕ. ನಿಮಗೆ ಮತ್ತಷ್ಟು ಬೇಸರ, ಕೋಪ ಬಂದ್ರೂ ಸರಿ. ನಿಮ್ಮ ಹಿತ ದೃಷ್ಟಿಯಿಂದ ಹೇಳ್ತಿ ದೀನಿ......ದೀಪಕನ ವಿಷಯ ತಲೆಯಿಂದ ದೂರ ಮಾಡಿ ಸಂತೋಷವಾಗಿರಿ. ಬೊಂಬಾ ಯಿಗೆ ಭೇಟಿ ಕೊಟ್ಟ ಸಂತೋಷದ ನೆನಪು ನಿಮ್ಮ ಪಾಲಿಗೆ ಬಹಳ ದಿನ ಉಳಿಯೊ ಹಾಗೆ ಆಗಲಿ."

ಅವಳು ಸಿಡಿಯಲಿಲ್ಲ. ತಲೆ ತಗ್ಗಿಸಿದಳು.

"ಆಡಿದ ಮಾತುಗಳಿಗೆ ವಿಷಾದ ಪಡ್ತೀನಿ."

ಅವಳ ಕುತ್ತಿಗೆಯಲ್ಲಿ ಅಳು ಎದ್ದಿತು. ಆ ಮುಖದಲ್ಲಿ ಆಕರ್ಷಕವಾಗಿ ಕಂಡಳು. ಅವಳ ಭುಜಗಳನ್ನು ತೋಳಿನಿಂದ ಬಳಸಿದ. ಕೆನ್ನೆಗೆ ಕೆನ್ನೆ ಒತ್ತಿತು. ತುಟಿಗಳು ತುಟಿಗಳನ್ನು ಅರಸಿದವು. ಆ ಚುಂಬನ ಎಲ್ಲವನ್ನೂ ಮರೆಸಿತು.

ಅವನು ನೀಳವಾಗಿ ಉಸಿರೆಳೆದುಕೊಂಡ.

"ಕ್ಷಮಿಸಿ, ನಾನು ಹೀಗೆ ಮಾಡಬಾರದಿತ್ತು...ತಾಳ್ಮೆಯಿಂದ ಕಾಯ ಬೇಕೂಂತ ಇದ್ದೆ...ಆದರೆ ನಿಮ್ಮ ಚೆಲುವಿನ ಸೆಳೆತ!"

ಅವಳಿಗೆ ರೋಮಾಂಚನದಲ್ಲಿ ಅಚ್ಚರಿ. ಕುಸುಮಾಕರನೂ ಹಾಗೆಯೇ ಹೇಳಿದ್ದ.

ನಿಂತಿದ್ದ ಕಾರಿನ ಯಂತ್ರಕ್ಕೆ ಜೀವ ಕೊಟ್ಟು ಸಾವಧಾನವಾಗಿ ಹೇಳಿದ ನವೀನ.

"ನಿಮ್ಮಂತ ಹುಡುಗಿಗೆ ನಾನು ಸರಿಯಾದ ಹುಡುಗ ಅಲ್ಲ. ನಾನು ಮದುವೆ ಆಗೊ ಮನೋವೃತ್ತಿಯ ಮನುಷ್ಯ ಅಲ್ಲ. ನನ್ನ ಆಂಟಿನ ಕೇಳಿದ್ರೆ ಹೇಳ್ತಾಳೆ."

ಕಾರು ಮುಂದಕ್ಕೆ ಚಿಮ್ಮಿತು.

* *

ಚೀಣಿ ಸಂಪ್ರದಾಯದ "ಥೌಸಂಡ್ ಅಂಡ್ ಒನ್" ರೆಸ್ಟೋರೆಂಟಿನಲ್ಲಿ ನೀರವತೆ ಹರಡಿತ್ತು. ಸನ್ನಿವೇಶಕ್ಕೆ ವಿರುದ್ಧವಾಗಿ ಅರ್ಚನಾಳ ಹೃದಯದಲ್ಲಿ ಸಮರ ಕೋಲಾಹಲ. ಅಚ್ಚುಕಟ್ಟಾಗಿ ಉಡುಪು ಧರಿಸಿದ ಯೂರೋಪಿಯನ್ನರೇ ಅಧಿಕವಾಗಿ ಕಾಣುತ್ತಿದ್ದ ಹಜಾರ.

"ಸುಮ್ಮನೆ ಕುಳಿತಿದೀರಿ. ನಿಮಗೆ ಊಟದ ಬದಲಾವಣೆ ಇರಲಿ ಅಂತ ಇಲ್ಲಿಗೆ ಕರೆ ತಂದೆ."

ಪಕ್ಕದಲ್ಲಿ ಕುಳಿತ ಕುಸುಮಾಕರ ಅವಳ ಭಾವನೆ, ಯೋಚನೆ ಕೆದಕುವಂತೆ ನಯ ವಾಗಿ ಹೇಳಿದ.

"ಸ್ವಲ್ಪ ತಲೆನೋವು"

ಹಣೆಯ ಮೇಲೆ ಬೆರಳಾಡಿಸಿದಳು. ವೈನ್ ಗ್ಲಾಸ್ ಅವಳ ಕಡೆಗೆ ಸರಿಸಿದ.

"ನಿಮ್ಮ ಕಣ್ಣುಗಳ ತಳದಲ್ಲಿ ನಿಂತಿರೊ ನೆರಳು ಹಾಗೆ ಹೇಳ್ತಾ ಇದೆ...ನಿಮಗೆ ಸೊಗಸಾದ ದುಂಬಿ ಕಣ್ಣುಗಳಿವೆ. ಇಂತಾ ಕಣ್ಣುಗಳು ರಹಸ್ಯ ಕಾಪಾಡಲಾರವು."

ಮಾತಿನ ಅಣಕು ಅವಳನ್ನು ಕಟ್ಟಿ ಎಬ್ಬಿಸಿತು. ಕುಸುಮಾಕರ ತನ್ನ ದೌರ್ಬಲ್ಯಕ್ಕೆ ಬೆರಳು ಮಾಡಿದ್ದ. ಅವನಿಗೆ ತನ್ನ ಅಣ್ಣನ ಸಂಗತಿ ತಿಳಿಸಿಲ್ಲ. ತನ್ನ ಬಗೆಗೆ ಹೆಚ್ಚಾಗಿ ತಿಳಿಸಲೆಂದು ಅವನ ಆಗ್ರಹ. ಅವನ ತೃಪ್ತಿಗಾಗಿ ರೆಸ್ಟೋರೆಂಟಿಗೆ ಬರಲಿಲ್ಲ. ಹೊಟೇಲು ಕೋಣೆಯಲ್ಲಿ ಏಕಾಕಿಯ ಮನ ಹಿಂಡುವ ಯೋಚನೆಗೆ ಹೆದರಿ ಬಂದವಳು.

ಯೋಚನೆ ಅಲ್ಲಿಯೂ ತಪ್ಪದು. ರಾತ್ರಿಯೆಲ್ಲಾ ನಿದ್ರೆಗೆಡಿಸಿ ತಲೆಯಲ್ಲಿ ಪ್ರತಿಧ್ವನಿಸುತ್ತಿರುವ ಮಾತು ಅದು.

"ನಾನು ಮದುವೆ ಆಗೊ ಮನೋವೃತ್ತಿಯ ಮನುಷ್ಯ ಅಲ್ಲ..."

ನವೀನನ ಅಹಂಭಾವದ, ನಿರ್ಲಕ್ಷ್ಯತೆಯ ಹೇಳಿಕೆ!

ಹೃದಯ ಹಿಡಿ ಗಾತ್ರಕ್ಕೆ ಬಂದು ಮುಷ್ಟಿ ಬಿಗಿಯಿತು. ಅವನ ತುಟಿಗಳ ಕಾವು ಇನ್ನೂ ಉಳಿದಿತ್ತು. ಚುಂಬನವನ್ನು ತಾನು ವಿರೋಧಿಸಲಿಲ್ಲವೇಕೆ? ಅವನಿಗದು ಕ್ಷಣಿಕ ಮೋಜು!...

"ಹಾರಿಸೊ ಮಾತಿಗೆ ಎಷ್ಟೊಂದು ಗಲಿಬಿಲಿ ತಂದುಕೊಂಡಿದೀರಿ"

ಅರ್ಚನಾ ಅವನ ಕೆಣಕು ಮಾತಿನಿಂದ ಯೋಚನೆ ಚದುರಿಸಿ ಕೃತಕ ನಗೆ ತೋರಿದಳು.

ಪ್ರವೇಶದ ಎಡ ಪಕ್ಕದಲ್ಲಿ ತಗ್ಗಿನ ವೇದಿಕೆಯ ಮೇಲೆ ನಾಲ್ವರು ವಾದ್ಯಗಾರರು ಕುಳಿತರು. ಲಘು ಸಂಗೀತ ಎರಡು ನಿಮಿಷ ಹರಿದ ಮೇಲೆ ಕರತಾಡನ ಕೇಳಿತು. ಮೇಲಿನ ಕೋಣೆಯಿಂದ ನರ್ತಕಿ ಮೆಟ್ಟಿಲು ಇಳಿಯುತ್ತಾ ಬಂದಳು.

ಪಾಂಗೈನಿಂದ ಬಂದ ನರ್ತಕಿ ಚೆಂದದ ರೂಪಿನಲ್ಲಿ ಕಂಡಳು. ವಾದ್ಯಗಳ ಸ್ವರಕ್ಕೆ ಕೂಡುವಂತೆ ಅವಳ ನಡು, ತೋಳು, ಕಾಲುಗಳು ನಲುಗಿದವು. ಪ್ರೇಕ್ಷಕರು ಪಾನೀಯ, ತಿನಿಸು ಮರೆತು ನೃತ್ಯ ನೋಡುತ್ತಿದ್ದರು.

"ಅವತ್ತಿನ ಆಫ್ರಿಕನ್ ನೃತ್ಯದ ಹಾಗೆ ಇದೂ ನಿಮಗೆ ಹಿಡಿಸಲಾರದು. ಇದನ್ನ ಮೆಚ್ಚುವ ಕಣ್ಣುಗಳೇ ಬೇರೆ." ಎಂದ ಕುಸುಮಾಕರ.

"ನನಗೆ ಹಿಡಿಸಲಿಲ್ಲ, ನಿಜ. ನಿಮ್ಮ ಕಣ್ಣುಗಳಿಗೆ ಮೆಚ್ಚಿಗೆ ಅವರಿಸ್ತಾ ಇದೆ"

"ಹಾಗೇನಿಲ್ಲ. ಯಾರಾದರೂ ಜೊತೆ ಇದ್ದಾಗ ಬದಲಾವಣೆಗೆ ಇದನ್ನ ನೋಡ್ತೀನಿ. ಇಂತಾ ಕುಣಿತಕ್ಕೆ ಅಮೆರಿಕನ್ನರು ಏನಂತಾರೆ ಗೊತ್ತೆ? ಇದು ಪ್ರವಾಸಿಗರಿಗೆ ಹಾಕೋ ಗಾಳವಂತೆ!"

ವಿಶಾಲ ಭುಜ ಏರಿಸಿ ಉದ್ದನೆಯ ಚುಟ್ಟಾ ಹೊತ್ತಿಸಿ ಅರೆ ಮುಚ್ಚಿದ ಕಣ್ಣುಗಳಿಂದ ಹೊಗೆ ನೋಡುತ್ತಾ ಕುಳಿತ.

ಅರ್ಚನಾ ಎಚ್ಚರಿಕೆಯಿಂದ ಹೇಳಿದಳು.

"ಕೆಲವು ನೈಟ್ ಕ್ಲಬ್ ನೃತ್ಯಗಳು ಚೆನ್ನಾಗಿರುತ್ತವೆ. ಅಂತ ಹೇಳ್ತಾರೆ... ನಿನ್ನೆ ಯಾರೊ ಒಬ್ಬ ಪ್ರಸಿದ್ಧ ನರ್ತಕಿಯ ಹೆಸರು ಹೇಳಿದ್ರು...ಅವಳ ಹೆಸರು ಕಾಮಿನಿ ರತ್ನೆ..."

ಅವಳ ನಿರೀಕ್ಷೆ ಮೀರಿತ್ತು ಅವನ ವರ್ತನೆ. ತುಟಿಯ ಕಡೆಗೆ ಸರಿಯುತ್ತಿದ್ದ ಚುಟ್ಟಾ ಹಾಗೆಯೇ ಗಾಳಿಯಲ್ಲಿ ನಿಂತಿತ್ತು. ಮುಖ ಸುಕ್ಕುಗಟ್ಟಿತು. ಕಣ್ಣು ಗುಡ್ಡೆಗಳು ಗೋಲಿಗಳಂತೆ ಆಡಿದವು.

ಮೀಸೆಯ ಅಂಚಿನಲ್ಲಿ ನಗೆ ಮಿಂಚಿತು. ಭುಜವೇರಿಸಿ ಚುಟ್ಟಾ ತುಟಿಗಿಟ್ಟು ಮತ್ತೆ ಕೂಡಲೇ ತೆಗೆದ.

"ಕಾಮಿನಿ ರತ್ನೆ? ಸಿಂಹಳಿ ಹೆಣ್ಣು ಇರಬೇಕು ಕ್ಲಬ್‌ನರ್ತಕಿಯರ ವಿಷಯದಲ್ಲಿ ನನಗೆ ಆಸಕ್ತಿ ಕಡಿಮೆ... ಅವಳ ಹೆಸರು ನಿನ್ನೆ ಕೇಳಿದೆ ಅಂದ್ರಾ?... ಎಲ್ಲಿ?"

"ಕಾಕ್‌ಟೈಲ್ ಪಾರ್ಟಿಯಲ್ಲಿ"

ಅವಳನ್ನು ಇರಿಯುವಂತೆ ನೋಡಿದ.

"ಬೆಳಗ್ಗೆ ಬೀಚ್‌ನಲ್ಲಿ ನನಗೆ ಕಾಕ್‌ಟೈಲ್ ಪಾರ್ಟಿಯ ವಿಷಯ ಹೇಳ್ಲಿಲ್ಲಾ!... ನಿಮಗೆ ಈ ಸಿಟಿಯಲ್ಲಿ ನನ್ನ ಹೊರತೂ ಯಾರೂ ಗೊತ್ತಿಲಾಂತ ತಿಳಿದಿದ್ದೆ."

"ಕೇವಲ ಒಬ್ಬ ವ್ಯಕ್ತಿಯ ಪರಿಚಯ... ನವೀನ ದಾಮ್ಲೆ ಅಂತ. ನಾನು ದೆಲ್ಲಿಯಿಂದ ಬರೋವಾಗ ನನ್ನ ಜೊತೆಯಲ್ಲೇ ಬಂದೋರು."

ನಿರರ್ಗಳವಾಗಿ ಹತೋಟಿ ಮೀರಿ ಬಂದಿತ್ತು ವಿಷಯ. ತಾನು ಒಂಟಿಯಾದರೂ ತನ್ನಲ್ಲಿನ ಒಂದು ಆಯುಧ ಎಂಬಂತೆ ನವೀನನ ಹೆಸರು ತಿಳಿಸಿದ್ದಳು. ಪಕ್ಕದಲ್ಲಿ ಕುಳಿತ ಬಲಶಾಲಿಯನ್ನು ಹತೋಟಿಯಲ್ಲಿಡಲು ಆತ್ಮರಕ್ಷಣೆಗಾಗಿ ಬಳಸಿದ ಪದ... ನವೀನ ದಾಮ್ಲೆ!

ಪ್ರಯೋಗಿಸಿದ ಅಸ್ತ್ರ ತನ್ನ ಕಡೆಗೇ ತಿರುಗಿದಂತಾಯಿತು,

ಇರಿತದ ಕಣ್ಣುಗಳನ್ನು ವಿಶಾಲಗೊಳಿಸಿದ್ದ

"ನವೀನ ದಾವ್ಳೆ!"

"ಹುಂ, ನಿಮಗೆ ಅವರ ಪರಿಚಯ ಇದೆಯೆ?"

ಕುಸುಮಾಕರ ಗಹಗಹಿಸಿದ.

"ಆ ಹೆಸರು ಕೇಳಿದೀನಿ. ಪರಿಚಯ ಇಲ್ಲ...ಆ ಹೆಸರಿನಲ್ಲಿ ಒಬ್ಬ ಸ್ಮಗ್ಲರ್ ಕೂಡ ಇದಾನೆ...ಇವನು ಅವನು ಬೇರೆ ಇರಬಹುದು... ಸರಿ, ಪಾರ್ಟಿಯಲ್ಲಿ ಬೇರೆ ಯಾರು ಭೇಟಿ ಆದ್ರು? ನರ್ತಕಿಯ ಹೆಸರು ಹೇಳಿದ್ದು ಯಾರು?"

"ನೆನಪಿಲ್ಲ."

ಭೀತಿಯಿಂದ ಪ್ರೊಫೆಸರ ಹೆಸರು ಹೇಳಲಾಗದೆ ಮುಖ ತಿರುಗಿಸಿದಳು. ಸಂಮೋಹನದ ಆ ಕಣ್ಣುಗಳನ್ನು ಎದುರಿಸದಾದಳು.

ಕುಸುಮಾಕರ ತನ್ನ ಭಾರವಾದ ಕೈ ಅವಳ ಕೈ ಮೇಲೆ ಇಟ್ಟ.

"ಸಂಬಂಧವಿಲ್ಲದ ವಿಷಯಕ್ಕೆಲ್ಲಾ ನಾವು ತಲೆ ಕೆಡಿಸಿಕೊಳ್ಳೋದು ಬೇಡ. ಕ್ಲಬ್‌ನರ್ತಕಿ, ಸ್ಮಗ್ಲರ್ ಇವರ ಹೆಸರು ಎತ್ತೋದು ನಮ್ಮ ಘನತೆಗೆ ತಕ್ಕದ್ದಲ್ಲ. ನಮ್ಮಿಬ್ಬರ ವಿಷಯ ಮಾತ್ರ ಪರಸ್ಪರರಿಗೆ ಬೇಕಾಗಿರೋದು."

ಮುಖ ಎತ್ತಿದಳು. ಪುನಃ ಪಕ್ಕಕ್ಕೆ ತಿರುಗಿಸಿದಳು. ಅವನಿಂದ ಆಕರ್ಷಿತಳಾಗಿದ್ದಳು....ಭೀತಳೂ ಆಗಿದ್ದಳು.

ನೃತ್ಯದ ಹಂತ ಏರಿತ್ತು. ಆರ್ಚನಾ ದೃಷ್ಟಿ ತಿರುಗಿಸಿದಾಗ ದ್ವಾರಪಾಲಕ ಯಾರನ್ನೋ ಸ್ವಾಗತಿಸಲು ಬಾಗಿಲಿಗೆ ನಡೆದಿದ್ದ.

ನರಗಳಿಗೆ ಶಾಕ್ ತಟ್ಟಿತು... ಕನಸಲ್ಲ, ನವೀನ! ಅವನ ಹೆಸರು ಇಲ್ಲಿ ಎತ್ತಿದ್ದರಿಂದ ಅವನು ಅದ್ಭುತ ರೀತಿಯಲ್ಲಿ ಬಂದನೆ!

ನವೀನ ಸ್ವಾಗತಕ್ಕೆ ಪ್ರತಿಕ್ರಿಯೆ ತೋರಿ ನಿಶ್ಶಬ್ದವಾಗಿ ಒಳ ಬಂದ. ಮೇಜುಗಳ ಮಧ್ಯೆ ಚಲಿಸಿ ಬಾರ್ ಕಡೆಗೆ ನಡೆದ. ಕುಸುಮಾಕರ ಅವನನ್ನು ಗಮನಿಸಿರಲಿಲ್ಲ.

ನವೀನ ತನ್ನನ್ನ ನೋಡಿದನೆ? ಚಿಂತೆ ಇಲ್ಲ...ರಾತ್ರಿ ಅವನ ಹಾಗೆ ವರ್ತಿಸಿದ ಮೇಲೆ ತಾನು ಅವನಿಗೆ ಹೆದರುವುದೇನಿದೆ? ತಾನು ಕುಸುಮಾಕರನೊಂದಿಗೆ ಕುಳಿತಿರುವುದನ್ನು ನವೀನ ನೋಡಲಿ!

"ಮಹಾಬಲೇಶ್ವರದಲ್ಲಿರೊ ನನ್ನ ಮನೆ ನೋಡಬೇಕು ನೀವು. ಆಗ ನನ್ನ ಮೇಲೆ ನಿಮಗೆ ಅಭಿಪ್ರಾಯ ಬದಲಾಯಿಸುತ್ತೆ."

"ಅರ್ಥ ಆಗ್ಲಿಲ್ಲ."

"ನಿಮ್ಮಂತ ಚುರುಕಿ ಹುಡುಗಿ ಅರ್ಥ ವಿವರಣೆ ಪಡೆಯಬಾರದು."

ಆರ್ಚನಾಗೆ ಅರ್ಥವಾಗಿತ್ತು.... ಪ್ರಣಯದ ದೃಢ ಹೆಜ್ಜೆ!

ವೈಟರ್ ಅವರ ಮೇಜು ಖಾಲಿ ಮಾಡಿ ಎರಡು ಗ್ಲಾಸ್ ಬ್ರಾಂದಿ ತಂದಿಟ್ಟ. ಮಾತಿಲ್ಲದೆ ಎರಡು ಗುಟುಕು ಸೇವಿಸಿದಳು .

ನವೀನ ಯಾವ ಗಳಿಗೆಯಲ್ಲಾದರೂ ತನ್ನ ಮುಂದೆ ನಿಲ್ಲಬಹುದು! ಭಯವಿಲ್ಲ... ಅಣ್ಣನ ವಿಷಯದ ಶೋಧನೆಗೆ ಧೃತಿಗೆಡಿಸುವ ನಿರುತ್ಸಾಹದ ಗೆಳೆಯ. ಕುಸುಮಾಕರನ ಸ್ನೇಹದಲ್ಲಿ ಕಾಮಿನಿ ರತ್ನೆಯನ್ನು ಕಾಣುವ ಸಂಭವವಿದೆ....

"ನನ್ನ ಮಾತಿಗೆ ಏನೂ ಹೇಳ್ಲಿಲ್ಲ ನೀವು."

ಪಿಸು ಸ್ವರದಲ್ಲಿ ಕೇಳಿದ.

ಹೇಳುವುದೇನು? ತನ್ನ ರಕ್ಷಣೆ ತನಗೆ ಕಷ್ಟವಲ್ಲ.

ವೈಟರ್ ಕುಸುಮಾಕರನತ್ತ ವಿನಯದಿಂದ ಬಾಗಿ ಕಿವಿಯಲ್ಲಿ ಏನೊ ಹೇಳಿದ. ಸಂಗಾತಿಯ ಮುಖ ಮ್ಲಾನಗೊಂಡು ಎದ್ದು ನಿಂತ.

"ಎರಡು ನಿಮಿಷದಲ್ಲಿ ಬರ್‍ತೀನಿ, ಕ್ಷಮಿಸಿ... ಫೋನ್ ಕರೆ...ವ್ಯವಹಾರದ ತುರ್ತು ವಿಷಯ."

ವೇಗವಾಗಿ ಬಾಗಿಲು ಸರಿಸಿ ಹೋದವನನ್ನು ನೋಡಿ ಮತ್ತೆ ಬಾರ್ ಕಡೆಗೆ ನೋಟ ತಿರುಗಿಸಿದಳು.

ನವೀನ ನೇರವಾಗಿ ಅವಳನ್ನೇ ನೋಡುತ್ತಿದ್ದ!

ದೃಷ್ಟಿಗಳು ಕೂಡಿದಾಗ ಯಾವುದೊ ಬಲವಾದ ಪಂಜ ಅವಳ ಹೃದಯವನು ಹರಿದಂತಾಯಿತು.

ಮುಖ ಇಳಿಸಿದಳು. ಮೇಜಿನ ಮೇಲೆ ಕುಸುಮಾಕರ ಇರಿಸಿ ಹೋದ ಬೆಲೆಬಾಳುವ ಚಿನ್ನದ ಲೈಟರ್‌ಗೆ ಕೈ ಹಾಕಿದಳು. ಅದನ್ನು ಎತ್ತುವ ಮೊದಲೇ ಕುಸುಮಾಕರ ಅವಳ ಕೈ ಹಿಡಿದ.

"ನಾನು ತಡ ಮಾಡಲಿಲ್ಲಾಂತ ಭಾವಿಸ್ತೀನಿ. ಈ ರಾತ್ರಿ ನನಗೆ ಬಹಳ ಕೆಲಸ ಇದೆ" ಎಂದು ಕುಳಿತ.

ರೆಸ್ಟೋರೆಂಟಿಗೆ ಜನ ಬರತೊಡಗಿದರು. ನಾಲ್ಕು ಮಂದಿಯ ಗುಂಪಿನ ಹಿಂದೆ ಪಿಳಿಪಿಳಿ ಕಣ್ಣಾಡಿಸುತ್ತಾ ಬಕ್ಕತಲೆಯವ ಬರುತ್ತಿದ್ದ... ಪ್ರೊಫೆಸರ್ ಮಲ್ಹೋತ್ರ!

ಸುತ್ತಲೂ ನೋಡಿದವನಿಗೆ ದೃಷ್ಟಿದೋಷ ಇರಬೇಕು. ಆರ್ಚನಾಳ ನರಗಳು ಸೆಟೆಯುತ್ತಿದ್ದಂತೆ ಅವನು ಬಾರ್ ಕಡೆಗೆ ನಡೆದ. ನವೀನನಿಗೆ ಹೇಳುತ್ತಿದ್ದುದು ಕೇಳಿಸಿತು.

"ನಿನ್ನ ಕಾಯಿಸ್ತಾ ನಿಲ್ಲಿಸಿದ್ದಕ್ಕೆ ಸಾವಿರ ಕ್ಷಮೆ ಇರಲಿ, ಮೈ ಡಿಯರ್ ಬಾಯ್."

ಕುಸುಮಾಕರ ಅವಳ ತೋಳಿಗೆ ಕೈ ಹಚಿ ಬಾಗಿಲಿಗೆ ಒಯ್ದ. ಡೋರ್‌ಮನ್ ಕಾರಿನ ಬಾಗಿಲು ತೆರೆದು ನಿಂತಿದ್ದ. ಬಂದ ರಸ್ತೆಯಲ್ಲಿ ಹಿಂದಕ್ಕೆ ಸಾಗಿತು ಕಾರು.

ಅವಳ ತಲೆಯಲ್ಲಿ ನವೀನ ಹರಡಿಕೊಂಡಿದ್ದ. ಕನಸಿನಲ್ಲಿ ಬಂದವನಂತೆ...ಮತ್ತೆ ಸರಿದು ಹೋದವನಂತೆ.

ಸಿಕ್ಕಿದವ!...ಕಳೆದು ಹೋದವ!

ಕುಸುಮಾಕರ ಹೇಳಿದಂತೆ ಈ ರಾತ್ರಿಯಲ್ಲಿ ಅವನಿಗಿರುವ ಬಹಳ ಕೆಲಸ ಯಾವುದು?

ಅರ್ಧ ರಾತ್ರಿ ಮೀರಿತ್ತು. ಕಾರು ಹೋಟೆಲ್ ಮುಂದೆ ನಿಂತಿತು.

"ನಾನು ಡೆಸ್ಕ್‌ವರೆಗೆ ಬರೋದು ಬೇಡ. ಬೆಳಗೆ ಭೇಟಿ ಆಗೋಣ... ಆಗ ನನ್ನ ಮಹಾಬಲೇಶ್ವರದ ಮನೆಗೆ ಬರೋ ವಿಷಯದಲ್ಲಿ ನಿಮ್ಮ ಉತ್ತರ ಸಿದ್ಧವಾಗಿರಲಿ"

ಕುಸುಮಾಕರ ಅವಳ ಕೈ ಎತ್ತಿ ಮೃದು ಬೆರಳುಗಳನ್ನು ಚುಂಬಿಸಿದ. ಜೊರಗುಟ್ಟಿ ಹೋದ ಕಾರಿನ ಸದ್ದಿನೊಂದಿಗೆ ಮತ್ತೊಂದು ಸದ್ದು ಕೇಳಿತು.

ಪಕ್ಕಕ್ಕೆ ತಿರುಗಿದಳು. ಉದ್ದನೆಯ ವಿದೇಶೀ ಕಾರು ತಗ್ಗಿಗೆ ಇಳಿಯಿತು. ಅದರಲ್ಲಿ ಇಬ್ಬರು ಕುಳಿತುದು ಕಾಣಿಸಿತು.

ಯಾರೊ ಸೆರಗು ಹಿಡಿದು ಎಳೆದರು!

ಆರ್ಚನಾ ಪಕ್ಕದಲ್ಲಿ ನಿಂತ ಭಿಕ್ಷುಕಿಯನ್ನು ಒಮ್ಮೆಗೇ ನೋಡಿ ಬೆಚ್ಚಿದಳು. ಹಣಕ್ಕಾಗಿ ಭಿಕ್ಷುಕಿಯ ಕೈ ಮುಂದೆ ಬಂತು.




ಈ ವರ್ಷದ ದೀಪಾವಳಿ ನಿಮಗೆ ತುಂಬಾ ಕ್ರೂರವಾಗಿದೆ, ಎಲ್ಲಾ ಅಳಿಯಂದಿರೂ ಬರುವ ಎಲ್ಲಾ ಸಾಧ್ಯತೆ ಕಾಣ್ತಾ ಇದೆ ಪಂಚಾಂಗದಲ್ಲಿ...



ನಲಿವುಗೆಲವು ಹರಡಿಸಿ
ಬೆಳಗುತ್ತಿವೆ ದೀಪಗಳು...
ಈಗ ಧರಿಸಲು ಬೇಕು

# ಕರೋನಾ

ಪಾದರಕ್ಷೆಗಳು






ತಯಾರಕರು
**ಕರೋನಾ ಸಾಹು ಕಂ. ಲಿ.**
ರಜಿಸ್ಟರ್ಡ್ ಆಫೀಸ್: 221 ದಾದಾಭಾಯಿ ನವರೋಜಿ ರೋಡ್, ಮುಂಬಯಿ 400 001

CHAITRA-CS-87 KAN

ಬ್ಯಾಗ್‌ನಲ್ಲಿ ಕೈ ಹಾಕಿ ಅವಳನ್ನೇ ಆಳವಾಗಿ ನೋಡಿದಳು.

ಹೆಂಗಸಿನ ತಲೆ ಬಾಗಿತ್ತು. ಮುಖ ಮುಚ್ಚಿತ್ತು. ನುಣುಪಾದ ಯುವತಿಯ ಕೈ... ಶುದ್ಧವಾದ ಬಿಳುಪು ಹಸ್ತ!

ಮರುಕ್ಷಣ ಕೈ ಉಡುಪಿನ ಮಡಿಕೆಗಳಲ್ಲಿ ಸೇರಿಹೋಯಿತು. ಹೋಟೇಲಿನ ಪೋರ್ಟರ್ ಕೋಪದಿಂದ ಗದರಿಸಿದ. ಭಿಕ್ಷುಕಿ ಹಣ ಪಡೆಯದೆ ವೇಗದ ನಡಿಗೆಯಲ್ಲಿ ಸರಸರ ಹೊರಟು ಹೋದಳು. ಪೋರ್ಟರ್ ಕೈ ಹಿಸುಕಿ ಹೇಳುತ್ತಿದ್ದ.

"ಭಿಕ್ಷುಕರೆಲ್ಲಾ ಕಳ್ಳರು..."

ಅರ್ಚನಾ ನಿಧಾನವಾಗಿ ಡೆಸ್ಕ್ ಕಡೆಗೆ ಬಂದಳು. ಅವಳ ತಲೆಯಲ್ಲಿ ನಿಂತುದು ಯುವತಿಯ ಶುದ್ಧ ಹಸ್ತ... ಭಿಕೆ ಬೇಡುವ ಹೆಂಗಸರು ಸಾಮಾನ್ಯವಾಗಿ ತರುಣಿಯರಲ್ಲ. ಅವರ ಕೈ ಕೊಳಕಾಗಿರಬೇಕು.

ಆ ಹೆಂಗಸನ್ನು ಮೊದಲೊಮ್ಮೆ ನೋಡಿದ ನೆನಪು. ಅವಳು ಬೇರೆಯೆ? ನಿನ್ನೆ ರಾತ್ರಿ ನವೀನ ತನ್ನನ್ನು ಇಲ್ಲಿ ಬಿಟ್ಟು ಹೋದಾಗ ಇದೇ ಸ್ಥಳದಲ್ಲಿ ಕುಳಿತಿದ್ದಳು.

ಡೆಸ್ಕ್‌ನಲ್ಲಿದ್ದವ ಚೀಟಿ ಎತ್ತಿ ಕೊಟ್ಟ. ತೆರೆದು ಓದಿದಳು. ಸುರಭಿಯ ಬರಹ:

"ನಾಳೆ ಬೆಳಗ್ಗೆ ನಮ್ಮ ತಾಯಿ ಗೀತಾಬೇನ್ ಒಂದು ಪಾರ್ಟಿಕೊಡ್ತಾಳೆ... ಸಿಟಿಯಿಂದ ದೂರ ತಪ್ಪದೆ ಬರಬೇಕು. ಕಡೇ ಹೊತ್ತಿನಲ್ಲಿ ಹೇಳ್ತಿದೀನಿ. ಕ್ಷಮಿಸಿ. ನಾನು ಬೆಳಗ್ಗೆ ಬಂದು ನಿಮ್ಮನ್ನು ಕರಕೊಂಡು ಹೋಗ್ತೀನಿ"

ಬೆಳಗ್ಗೆ ಹೊತ್ತಿನ ಪಾರ್ಟಿ... ಸಿಟಿಯಿಂದ ದೂರ.

ಸುರಭಿ! ನವೀನನ ಕುಟುಂಬ ಸ್ನೇಹಿತೆ. ಅವಳ ಪಾರ್ಟಿಗೆ ನವೀನ ಬರ್ತಾನೆ!

ಮಲಗುವವರೆಗೆ ಅವಳಿಗೆ ಅದೇ ಯೋಚನೆ. ಬೆಳಗ್ಗೆಯ ಪಾರ್ಟಿಗೆ ಹೋಗುವುದೆ? ಅಲ್ಲಿಗೆ ನವೀನ ಹಾಜರು. ನಿನ್ನೆಯ ಅವನ ಅಲಕ್ಷ್ಯದ ಮಾತಿನ ನಂತರ ಅವನನ್ನು ಮತ್ತೆ ನೋಡುವುದೆ?

ಪಾರ್ಟಿಗೆ ಹೋಗುವುದಿಲ್ಲವಾದರೆ ಇಲ್ಲಿಗೆ ಕುಸುಮಾಕರ ಹಾಜರು. ಮತ್ತೆ ಅವನದು ಅದೇ ಪ್ರಶ್ನೆ. ಅವನ ಮಹಾಬಲೇಶ್ವರದ ಮನೆಗೆ ಹೋಗುವ ಬಗೆಗೆ ತನ್ನ ಉತ್ತರ?

ಅವನು ತನ್ನನ್ನು ಮದುವೆಯಾಗುವ ಇಚ್ಛೆ ಪ್ರಕಟಿಸುತ್ತಾನೆ! ಯಾವ ಹುಡುಗಿಗೂ ಅಂತಹ ಬೇಡಿಕೆ ಹೆಮ್ಮೆ ಹುಟಿಸುವ ಸಂಗತಿ... ನವೀನ ಮದುವೆ ವಿಷಯದಲ್ಲಿ ಅಹಂಭಾವದ ಮಾತು ಆಡಿದ!

ಬೇಸರ ತನ್ನ ಬಗೆಗೇ ಬಂತು. ಮದುವೆಯ ವಿಷಯದಲ್ಲಿ ತಾನು ಯಾರಿಗೂ ಉತ್ತರಿಸಲು ಬದ್ಧಳಲ್ಲ. ಪ್ರಣಯ, ಮದುವೆ ಅಸಂಬದ್ಧ! ಅಣ್ಣ ದೀಪಕನ ಮರಣದ ವಿವರ ಅರಿಯಲು ಬಂದವಳಿಗೆ ಇವೆಲ್ಲಿಯ ಕೋಟಲೆ?

ದೀಪಕನ ವಿಷಯದಲ್ಲಿ ಕುಸುಮಾಕರನಿಗೆ ಏನೊಂದೂ ಹೇಳಿಲ್ಲವಾದರೂ ಅವನಿಂದ ತನಗೆ ಸಹಾಯ ದೊರೆಯಲಿದೆ...ಕಾಮಿನಿ ರತ್ನಳ ಹೆಸರು ಕೇಳುತ್ತಲೇ ಗರಬಡಿದು ಕುಳಿತ. ಅವನಿಗೆ ಆ ನರ್ತಕಿಯ ಪರಿಚಯವಿದೆ. ಇಲ್ಲವೆ, ಅವಳ ಹೆಸರು ಕೇಳಿರಬೇಕು.

ಪ್ರೊಫೆಸರ್ ಮಲ್ಹೋತ್ರ ತಡವಾಗಿ ಬಂದುದಕ್ಕೆ ರೆಸ್ಟೊರೆಂಟ್‌ನಲ್ಲಿ ನವೀನನ ಕ್ಷಮೆ ಕೇಳಿದ. ನವೀನ ಅವನನ್ನು ಅಲ್ಲಿಗೆ ಕರೆಸಿದುದೇಕೆ? ಇಬ್ಬರಲ್ಲೂ ನಡೆದಿರುವುದೇನು? ತಾನು ಕುಸುಮಾಕರನೊಂದಿಗೆ ಕುಳಿತಿರುವದನ್ನು ಅವರು ನೋಡಿರಬೇಕು.

ಕವಲು ಯೋಚನೆ ಅವಳನ್ನು ಕುಟುಕಿತು. ಅರ್ಧ ತಾಸಿಗೆ ಮೊದಲು ಕುಸುಮಾಕರ ತನ್ನಿಂದ ಬೀಳ್ಕೊಂಡಾಗ ಮತ್ತೊಂದು ಕಾರು ತಗ್ಗಿಗೆ ಹರಿಯಿತು. ಅದರಲ್ಲಿದ್ದವರಿಬ್ಬರು ಅಸ್ಪಷ್ಟ ಆಕಾರದವರು. ಅತ್ತ ಸರಿಯಾಗಿ ಕಣ್ಣು ಹೂಡುವುದರಲ್ಲಿ ಭಿಕ್ಷುಕಿ ತನ್ನ ಸೆರಗು ಹಿಡಿದು ಎಳೆದಿದ್ದಳು... ಆ ಕಾರಿನ ಚಾಲಕ ನವೀನ, ಅವನ ಪಕ್ಕದಲ್ಲಿದ್ದವನು ಪ್ರೊಫೆಸರ್ ಆಗಿರಬಹುದು. ತನ್ನನ್ನು ಹಿಂಬಾಲಿಸಿ ಗಮನಿಸುವ ಸಂಚು!

ಬಹು ಹೊತ್ತಿನ ಮೇಲೆ ನಿದ್ರೆಯ ಜೋಂಪಿನಲ್ಲಿ ದೂರದ ಮನೆಯ ಚಾವಣಿಯಿಂದ ಹುಂಜದ ಕುಕೂರವ ಕೇಳಿತು.

• • •

ಕೊಲ್ಲಿಯಲ್ಲಿ ಸೇರಿದ್ದ ಸಣ್ಣ ಅತಿಥಿ ಗುಂಪಿನ ಕಡೆಗೊಮ್ಮೆ ಸಮುದ್ರದ ಕಡೆಗೊಮ್ಮೆ ನೋಡಿ ನಡುವಿಗೆ ಕೈಯಿಟ್ಟು ನಿಂತಳು ಗೀತಾಬೇನ್.

"ನವೀನ, ಸುಲೋಚನಾ ಇಬ್ಬರು ಮಾತ್ರ ಬರಬೇಕು. ಲಂಚ್‌ಗೆ ಮೊದಲು ಸಮುದ್ರ ಸ್ನಾನ ಹೇಗೆ ಅಂತ."

ಅವಳು ಕೊಟ್ಟ ಸಲಹೆಗೆ "ಓಕೆ" ಎಂದಿತು ಗುಂಪು.

ಸುರಭಿ ಸ್ಪ್ರಿಂಗ್‌ನಂತೆ ಎದ್ದು ನಿಂತಳು.

"ಅಜಿತ್, ಏಳು... ಅರ್ಚನಾ, ನೀವೂ ಅಷ್ಟೆ. ಅಲೆಗಳು ಸೊಗಸಾಗಿ ಕಾಣ್ತಿವೆ." ಎಂದು ಪಕ್ಕದವರನ್ನು ಎಬ್ಬಿಸಿದಳು.

"ನೀರಿನಲ್ಲಿ ದೂರ ಹೋಗ್ಬೇಡ... ಈ ಕೊಲ್ಲಿಯಲ್ಲಿ ಅಪಾಯ"

ಓಡುತ್ತಿದ್ದ ಮಗಳಿಗೆ ಕೂಗಿ ಹೇಳಿದಳು ಗೀತಾಬೆನ್.

ಅರ್ಚನಾ ನಿಧಾನವಾಗಿ ನೀರಿನಲ್ಲಿ ಹೆಜ್ಜೆ ಸರಿಸಿದಳು. ದೃಷ್ಟಿ ಹಾಯುವವರೆಗೆ ಹರಡಿತ್ತು ಅರಬ್ಬಿ ಸಮುದ್ರದ ಬಿರುಸಿನ ಜಲಪದರ. ಕಪ್ಪು ಬಂಡೆಗಳಿಗೆ ಅಪ್ಪಳಿಸಿದ ಅಲೆಗಳು ಬಿಳುಪು ನೊರೆಯ ಮೇಲೆ ತುಂತುರು ಬಲೆಯಲ್ಲಿ ಕಾಮನಬಿಲ್ಲನ್ನು ಸೃಷ್ಟಿಸಿದ್ದವು. ಹಿಂದಕೆ ಬಂಡೆಗಳ ಗುಡ್ಡದ ಸಾಲಿನ ರಸ್ತೆ. ಅತ್ತಲಿಂದಲೇ ನಾಲ್ಕು ಕಾರುಗಳು ಕೊಲ್ಲಿಗೆ ಬಂದಿದ್ದವು... ಒಂದು ತಾಸಿನ ಹಿಂದೆ ಬಿಟ್ಟುಬಂದ ನಗರ ಬಹುದೂರವೆಂಬ ಪ್ರತ್ಯೇಕತೆಯ ನಿರ್ಜನ ವಾತಾವರಣ ಪಸರಿಸಿತ್ತು.

ಬಿಸಿಲಿನ ಪರಿವೆ ಇಲ್ಲದೆ ನಡೆದಳು ಅರ್ಚನಾ. ಸುರಭಿಯ ಫೋನು ಕರೆಯಂತೆ ಬೆಳಗ್ಗೆ ಎಂಟೂವರೆಗೆ ಹೋಟೆಲು ಹಜಾರಕ್ಕೆ ಇಳಿದಾಗ ಕುಸುಮಾಕರ ಅವಳಿಗಾಗಿ ಕಾದು ನಿಂತಿದ್ದ.



ಇಷ್ಟು ನೆಮ್ಮದಿಯಾಗಿ ಮನೆಗೆ ಹೋಗಿ ರಾಯ್ರೇ, ಹಬ್ಬಕ್ಕೆ ಬಂದ ಅಳಿಯ ನಿಮ್ಮನ್ನು ಇಲ್ಲಿ ನೋಡಿ ವಾಪಸ್ ಹೋಗಿಬಿಟ್ಟಿದ್ದಾನೆ...

ಪರಿಸ್ಥಿತಿಯಿಂದ ಪಾರಾಗುವುದು ಹೇಗೆಂದು ತಲೆ ಕೆಡಿಸಿದಳು:

"ನಾನು ಪುಣೆಗೆ ಜರೂರು ಪ್ರಯಾಣ ಮಾಡಬೇಕಾಗಿದೆ. ಈ ರಾತ್ರಿ ಅಲ್ಲೇ ಇದ್ದು ನಾಳೆ ಬರ್ತೀನಿ. ತಪ್ಪಿದರೆ ನಾಡದ್ದು... ಅದು ಹೇಳಲಿಕ್ಕೆ ಬಂದೆ. ನಮ್ಮ ಮಹಾಬಲೇಶ್ವರದ ಭೇಟಿ ಮುಂದಕ್ಕೆ ಹೋಯ್ತು."

ತೊಡಕಿನಿಂದ ಅವಳು ಪಾರಾಗಿದ್ದಳು.

"ಆ ಭೇಟಿ ಇನ್ನೂ ಯೋಚನೆ ಮಾಡಿಲ್ಲ" ಎಂದಳು.

"ಅದನ್ನು ತಪ್ಪಿಸೋಹಾಗಿಲ್ಲ ನಾನು ಬೇಗ ಬಂದು ಬಿಡ್ತೀನಿ" ಆಸೆ ತುಂಬಿದ ಕಣ್ಣುಗಳಿಂದ ನೋಡಿ ಹೊರಟು ಹೋಗಿದ್ದ...

ಅಲೆಗಳು ಅವಳ ಮೊಳಕಾಲುಗಳನ್ನು ಅಪ್ಪಳಿಸಿ ಹೋಗುತ್ತಿದ್ದವು.

ಕುಸುಮಾಕರನ ಸ್ನೇಹ ತಾನು ಗಳಿಸಿಕೊಳ್ಳಬೇಕು. ದೀಪಕ ರಚಿಸಿದ ಅವ ಕುಂತನವತಿಯನ್ನು ಅವನಿಂದಲೇ ಶೋಧಿಸುವೆ...

ನಡುಹುಟ್ಟದ ನೀರಿನಲ್ಲಿ ತೂರಾಡಿ ನಿಂತಳು. ಅವಳಿಂದ ತುಸು ದೂರಕ್ಕೆ ಸುರಭಿ, ಅವಳ ಗೆಳೆಯ ನೀರು ಎರಚಾಡುತ್ತಿದ್ದರು.

"ಹುಷಾರ್, ಅರ್ಚನಾ!... ಮುಂದೆ ಹೋಗ್ಬೇಡಿ ಗಾಳಿ ಜೋರಾಗಿ ಬೀಸ್ತಿದೆ... ದೊಡ್ಡ ಅಲೆಗಳು ಬರ್‍ತಾ ಇವೆ."

ಸುರಭಿ ಕೂಗಿ ಹೇಳಿದಳು ಅರ್ಚನಾ ತಾನು ಸುರಕ್ಷಿತಳೆಂದು ಅವರಿಗೆ ಕೈ ಬೀಸಿದಳು. ತಣ್ಣನೆಯ ನೀರಿನ ಬಡಿತ ಭುಜಗಳಿಗೆ ಸೂರ್ಯನ ಇರಿತ.

ನೀರು ಬಿಟ್ಟು ದಂಡೆಗೆ ಬಂದಾಗ ಕಾರು ಗುಡ್ಡದ ರಸ್ತೆಯಲ್ಲಿ ಇಳಿದು ಬಂತು.

"ಓ, ಸುಲೋಚನಾ! ಅವಳೊಬ್ಬಳೇ ಬರ್‍ತಾ ಇರೋದು"

ಗುಡ್ಡದತ್ತ ಬೆರಳು ಮಾಡಿ ನಿರಾಶೆಯಲ್ಲಿ ಕೂಗಿದಳು. ಸುರಭಿ. ಸುಲೋಚನಾ ಎಚ್ಚರಿಕೆಯಿಂದ ಮರಳು ರಸ್ತೆಯಲ್ಲಿ ಕಾಲಿಟ್ಟಳು. ಬೀಚ್ ಛತ್ರಿಯನ್ನು ಸರಿಪಡಿಸಿ ಗೀತಾಬೇನ್ ಅವಳ ಬಳಿಗೆ ಹೋದಳು.

ಸುರಭಿ ಮತ್ತೆ ಮುದ್ದಾಗಿ ಹೇಳಿದಳು;

"ನವೀನ ಬರಲಿಲ್ಲ ಫೋನ್ ಮಾಡಿದಾಗ ಒಪ್ಪಿದ್ರು. ಇವತ್ತು ಸೋಮವಾರ ಯಾವುದೊ ಆಫೀಸಿಗೆ ಹೋಗಲೇಬೇಕಂತೆ. ಸ್ವಲ್ಪ ಬೇಗ ಕೆಲಸ ಮುಗಿಸಿದರೆ ಚೆಂದ."

ಅರ್ಚನಾಗೂ ನಿರಾಶೆಯಾಗಿತ್ತು. ಅವನನ್ನು ಕಾಣಬೇಕೆಂಬ ಹಂಬಲ. ಈ ಚೆಂದದ ವಾತಾವರಣದಲ್ಲಿ ತಮ್ಮಿಬ್ಬರ ಸ್ನೇಹಕ್ಕೆ ಹೊಸ ತಿರುವು ಬಂದೀತೆಂಬ ಆಸೆ.

ಸುರಭಿಯ ಕಡೆಗೆ ಕಣ್ಣು ಹೊರಳಿತು. ಸಣ್ಣ ಬಿಕಿನಿಯಲ್ಲಿ ಅವಳ ಸುಂದರ ದೇಹದ ಪ್ರತಿ ಭಾಗ ಕೊರೆದು ಕಾಣುತ್ತಿತ್ತು. ಬೆಳಗ್ಗೆ ಕೊಲ್ಲಿಗೆ ಇಳಿದಾಗ ಅವಳು ತನ್ನ ವಯಸ್ಸು ಹದಿನೆಂಟು ಎಂದು ಹೇಳಿದಳು. ಈ ಚುರುಕಿನ ಚೆಲುವೆಗೆ ನವೀನನ ಮೇಲೆ ಪ್ರೀತಿ? ನವೀನನ ಹೆಸರು ಕೇಳಿದಾಗ ಅವಳ ತೆಳು ಧ್ವನಿ ಆಳವಾಗುತ್ತಿತ್ತು.

ಅರ್ಚನಾಗೆ ತಲೆ ಸುತ್ತಿತು... ಹೆಣ್ಣು ಮತ್ಸರ!

ಸುರಭಿಗೆ ಅಂಕುಶವಿಲ್ಲ. ಅವಳ ಸ್ವಚ್ಛಂದಕ್ಕೆ ತಡೆ ಇಲ್ಲ. ಡೆಲ್ಲಿಗಿಂತಲೂ ಸೊಗಸಾದ ಬೊಂಬಾಯಿನಲ್ಲಿ ನಲಿದವಳು. ನವೀನನ್ನು ಮದುವೆಗೆ ಒಪ್ಪಿಸಬಲ್ಲಳು!

ಸುರಭಿ ಬಾಲೆಯಂತೆಯೇ ತುಂಟ ನಡಿಗೆ ಹಾಕಿದ್ದಳು. ಕಾಲಿನಿಂದ ಮರಳು ತೂರಿದಳು...

ಸುಲೋಚನಾ ದೊಡ್ಡ ಛತ್ರಿಯ ಕೆಳಗೆ ಕ್ಯಾನ್ವಾಸ್ ಕುರ್ಚಿಯಲ್ಲಿ ಕುಳಿತು ಬ್ಯಾಗ್‌ನಿಂದ ಬಣ್ಣದ ಬೀಸಣಿಗೆ ತೆಗೆದು ಗಾಳಿ ಹಾಕಿಕೊಂಡಳು. ಬೆರಳುಗಳ ಉಂಗುರಗಳು ಫಳಫಳ ಹೊಳೆದವು.

"ಡಾರ್ಲಿಂಗ್..." ಎಂದು ಸುರಭಿಗೆ ಕೈ ಬೀಸಿ, ಅರ್ಚನಾಗೆ ಕೂಗಿದಳು.

"ಮಿಸ್ ಪಾವನ್, ಹೇಗಿದೆ ಪಿಕ್ನಿಕ್ ತಾಣ?"

"ಸೊಗಸಾಗಿದೆ"

ಅವಳ ಉತ್ತರದಿಂದ ತೃಪ್ತಳಾಗಿ ಎದ್ದು ಗೀತಾಬೇನ್ ಜೊತೆ ಸೇರಿದಳು.

ಬಂಡೆಯ ನೆರಳಿನಲ್ಲಿ ಕುಳಿತ ಅರ್ಚನಾ ಹಿಂದಕ್ಕೆ ಒರಗಿದಳು. ಅವಳ ಹೃದಯದಲ್ಲಿ ಸೀಸ ತುಂಬಿದಷ್ಟು ಭಾರ. ತಲೆಯ ಮೇಲೆ ನೇರವಾಗಿ ನಿಂತಿದ್ದ ಸೂರ್ಯ. ಆ ಸಣ್ಣ ಗುಂಪಿನ ಹೊರತಾಗಿ ಕೊಲ್ಲಿ ನಿರ್ಜನವಾಗಿತ್ತು.

ಬಂಡೆ ಗುಡ್ಡಗಳ ಇಳಿಜಾರು ರಸ್ತೆಯಿಂದ ಸದ್ದು ಬಂತು. ಚಾಕಲೇಟು ರಂಗಿನ ಕಾರು ಇಳಿಯಿತು... ನವೀನ!

ಅರ್ಚನಾ ತಲೆ ಎತ್ತಿ ನೋಡಿದಳು. ನೀಲಿ ಆಕಾಶದ ಹಿನ್ನೆಲೆಗೆ ನೇರನಂತೆ ನಡೆದು ಬರುತ್ತಿದ್ದ ನವೀನ. ಮೈಯಲ್ಲಿ ನವಿರೆದ್ದಿತು.

"ನಿಮ್ಮನ್ನೆಲ್ಲಾ ಕಾಯಿಸ್ದೆ... ಕ್ಷಮಿಸಿ, ಮೇಡಮ್ ಗೀತಾಬೇನ್...ಹಲೊ. ಸುರಭಿ. ನೀನು ಜಲಕನ್ಯೆ ಹಾಗೆ ಕಾಣ್ತಿದೀಯ... ಓ, ಅರ್ಚನಾ..."

ಮುಂದೆ ಅರ್ಚನಾಗೆ ಏನೊ ಹೇಳಿದ. ಅವಳಿಗೆ ಅದು ಕೇಳದು.

ಐದು ನಿಮಿಷಗಳ ತರುವಾಯ ನೀಲಿ ರಂಗಿನ ಈಜು ಉಡುಗೆಯಲ್ಲಿ ಕಾಣಿಸಿಕೊಂಡು ಸಮುದ್ರದಲ್ಲಿ ಮುಳುಗಿದ. ಹಿಂದಕ್ಕೆ ಬಂದು ಸುರಭಿ ನೀಡಿದ ತಂಪು ಪಾನೀಯ ಹೀರಿ ಮರಳಿನ ಮೇಲೆ ಸೂರ್ಯನಿಗೆ ಬೆನ್ನು ಮಾಡಿ ದೇಹ ಹರಡಿದ.

ಪಿಕ್ನಿಕ್ ಸೊಗಸಾಗಿತ್ತು. ಎಲ್ಲರಿಗೂ ಮೆಚ್ಚಿಗೆಯಾಗಿದ್ದ ಊಟ... ಸುರಭಿ ಹಾಗೂ ಸುಲೋಚನಾಳ ಮಧ್ಯೆ ಕುಳಿತ ನವೀನ ಅರ್ಚನಾಳ ದೃಷ್ಟಿಗೆ ಪ್ರಧಾನವಾಗಿದ್ದ. ಮೋನಚಾಗಿ ನಿಂತ ತಲೆಗೂದಲಿನಲ್ಲಿ ಅವನು ಸಣ್ಣ ಹುಡುಗನಂತೆ ಕಾಣುತ್ತಿದ್ದ. ಸುರಭಿ ಅವನ ತಲೆ ಸರಿಪಡಿಸಿ ಭುಜಗಳ ಮೇಲೆ ಬೆರಳು ಹರಿಸುತ್ತಿದ್ದಳು. ನಗೆ ತರಂಗ ಏಳುತ್ತಿತ್ತು.

ಮದುವೆಯಾಗುವ ಮನೋವೃತ್ತಿಯ ಮನುಷ್ಯನಲ್ಲ! ಹದಿನೆಂಟರ ಸುರಭಿ ಅವನನ್ನು ಬದಲಿಸುವುದು ಕಷ್ಟವಲ್ಲ.

ಊಟದ ಗಲಾಟೆ ಮುಗಿದಿತ್ತು. ಸುಲೋಚನಾ, ಗೀತಾಬೇನ್ ಮೆಲ್ಲನೆಯ ಸ್ವರದಲ್ಲಿ ಹರಟುತ್ತಾ ಛತ್ರಿಯ ನೆರಳಿನಲ್ಲಿ ಕುಳಿತಿದ್ದರು. ನವೀನ ಆರಾಮವಾಗಿ ಎದ್ದು ಅರ್ಚನಾ ಬಳಿಗೆ ಬಂದ. ಅವನ ಚಾಚಿದ ಹಸ್ತದಲ್ಲಿ ಅಡಿಕೆ ಸುತ್ತಿದ ವೀಳೆಯದೆಲೆ.

"ಥ್ಯಾಂಕ್ಸ್" ಎಂದು ನಿರಾಕರಿಸಿ ಮುಖ ತಿರುವಿದಳು. ಅವನು ಸಿಗರೇಟು ತುಟಿಗಿಟ್ಟ. ಲೈಟರ್ ಉರಿಯಿತು. ಸೂರ್ಯನ ಬೆಳಕಿನಲ್ಲಿ ಅದರ ಉರಿ ವಿಲೀನವಾಯಿತು.

ಅವಳ ಪಕ್ಕದಲ್ಲಿ ತೋಳಿಗೆ ತೋಳು ಒತ್ತುವಂತೆ ಕುಳಿತು ಅವಳಿಗಷ್ಟೇ ಕೇಳುವಂತೆ ಮೆಲ್ಲನೆ ಬೇಡಿಕೆಯಲ್ಲಿ ನುಡಿದ.

"ನಿಮ್ಮೊಂದಿಗೆ ಮಾತಾಡಬೇಕು... ಸ್ವಲ್ಪ ದೂರ ಹಾಗೇ ಹೆಜ್ಜೆ ಹಾಕೋಣ. ತಲೆಗೆ ಏನಾದ್ರೂ ಧರಿಸಿ. ಹಾಗೇ ಚಪ್ಪಲಿ ಮರೆಯಬೇಡಿ."

ಪಕ್ಕದಲ್ಲಿ ಬಿಟ್ಟಿದ್ದ ಚಪ್ಪಲಿ ಹಾಕಿಕೊಂಡು ತಾಳೆಗರಿಯ ಹ್ಯಾಟ್ ತಲೆಗೇರಿಸಿದಳು. ಮರಳಿನ ಮೇಲೆ ಇಬ್ಬರೂ ನಡೆದು ಹೋದುದನ್ನು ಯಾರೂ ಗಮನಿಸಲಿಲ್ಲ.

ನೇರವಾಗಿ ಮಾತಿಗಿಳಿದ ನವೀನ.

"ಮೊದಲು ಕ್ಷಮೆ ಬೇಡ್ತೀನಿ. ಆ ಸಂಜೆ ಹಾಗೆ ವರ್ತಿಸಲಿಕ್ಕೆ ನನಗೆ ಏನಾಗಿತ್ತೊ ಗೊತ್ತಿಲ್ಲ"

ಅವಳಿಗೆ ಕುತ್ತಿಗೆ ಬಿಗಿದು ಬಂತು. ಅವನಿಂದ ಅಂತಹ ಮಾತು ಬೇಕು ಎನಿಸಿತು.

"ಅದನ್ನು ಮರೆತು ಬಿಡೋಣ" ಮತ್ತೆ ಹೇಳಿದ.

ಅವಳು ಮರೆಯುವಂತಿಲ್ಲ, ಆ ತುಟಿಗಳ ಸ್ಪರ್ಶ!

ನೊರೆಗಟ್ಟಿದ ಜಲವನ್ನು ಕಾಲಿನಿಂದ ಹಾರಿಸಿದ. ಬಂಡೆಯ ಮತ್ತೊಂದು ಪಾರ್ಶ್ವಕ್ಕೆ ಸರಿದು ಇತರರ ದೃಷ್ಟಿಯಿಂದ ಮರೆಯಾದರು.

ನವೀನ ಅವಳನ್ನೇ ನಿಟ್ಟಿಸಿದ್ದ. ಅವಳು ನೇರವಾಗಿ ಮುಂದಕ್ಕೆ ನೋಡುತ್ತಿದ್ದಳು. ಮಧ್ಯಾಹ್ನದ ಉರಿ ಬಿಸಿಲಿನೊಂದಿಗೆ ಕಲೆತ ವಿಶಾಲ ಮರಳು ಹಾಸು.

"ಮತ್ತೆ ನಾವಿಬ್ಬರು ಸ್ನೇಹಿತರು ತಾನೆ?" ನಮ್ರವಾಗಿ ಕೇಳಿದ.

"ಮತ್ತೆ ಸ್ನೇಹಿತರು."

ಮನಸ್ಸು 'ಬೇಡ' ಎಂದು ಕೂಗಿದರೂ ನಯವಾಗಿ ಹೇಳಿದ್ದಳು.

ಅವನ ದೊಡ್ಡ ನಡಿಗೆಯೊಂದಿಗೆ ಹೆಜ್ಜೆ ಹೊಂದಿಸಲು ಅವಳಿಗೆ ಶ್ರಮವಾಯಿತು.

"ನಿನ್ನೆ ರಾತ್ರಿಯ ವಿಷಯದಲ್ಲಿ ಸ್ವಲ್ಪ ಹೇಳಬೇಕಾಗಿದೆ."

ಚಕ್ಕನೆ ನಿಂತಳು.

"ನಿನ್ನೆ ರಾತ್ರಿ?... ಏನು ಹಾಗಂದ್ರೆ?"

ಅವನು ಗಂಭೀರತೆ ಇಳಿಸಲಿಲ್ಲ.

"ನಿಮಗೇ ಗೊತ್ತು... ನೀವು 'ಥೌಸಂಡ್ ಅಂಡ್ ಒನ್' ರೆಸ್ಟೋರೆಂಟ್‌ನಲ್ಲಿದ್ರಿ..."

"ಹೌದು. ನನ್ನ ಸ್ನೇಹಿತನೊಂದಿಗೆ ಅಲ್ಲಿ ಊಟಕ್ಕೆ ಹೋಗಿದ್ದೆ. ನನ್ನ ನೋಡ್ಲಿಲ್ಲ ನೀವು ಅಂತ ಭಾವಿಸಿದ್ದೆ."

ಸ್ವಾಭಾವಿಕ ಧ್ವನಿ ಮೂಡಿಸಲು ಯತ್ನಿಸಿದಳು.

"ನಾನು ಅಲ್ಲಿ ನಿಮ್ಮನ್ನ ಮಾತಾಡಿಸ್ಲಿಲ್ಲ. ನಿಮ್ಮ ಸ್ನೇಹಿತರನ್ನ ಭೇಟಿ ಆಗೋ ಇಚ್ಛೆ ನನಗಿರಲಿಲ್ಲ."

"ಯಾಕೆ? ಅವರಿಗೆ ನಿಮ್ಮ ಪರಿಚಯ ಇಲ್ಲ."

ಕೋಪದಿಂದ ಹೇಳಿದಳು. ಅವಳ ತೋಳು ಹಿಡಿದ.

"ನಾನು ಅಲ್ಲಿ ನಿಂತಿದ್ದನ್ನ ನೀವು ಅವನಿಗೆ ಹೇಳಿರಬೇಕು"

"ಹೇಳ್ಲಿಲ್ಲ. ನಿಮ್ಮನ್ನು ಭೇಟಿಯಾಗಿದ್ದು ಮಾತ್ರ ಅವರಿಗ ಹೇಳ್ದೆ. ಅವರು 'ನವೀನ' ಅನ್ನೊ ಹೆಸರು ಕೇಳಿದೀನಿ. ಅಂದ್ರು... ನೀವು ಸಣ್ಣ ವಿಷಯಾನ ದೊಡ್ಡದು ಮಾಡ್ತಿದೀರಿ"

"ದೊಡ್ಡ ವಿಷಯ ಅಂತಲೇ ಭಾವಿಸ್ತೀನಿ... ನನ್ನ ವಿಷಯದಲ್ಲಿ ಅವನು ಏನು ಹೇಳಿದ ಅನ್ನೋದು ತಿಳಿಸಿ"

ನವೀನ ಬಿಗಿ ಬಿಡದೆ ಕೇಳಿದ. ಅವಳೂ ಬಿಗಿ ತಪ್ಪಿಸದೆ ಉತ್ತರಿಸಿದಳು.

"ಅದು ಅಷ್ಟು ಪ್ರಾಮುಖ್ಯವಾದದ್ದು ಅಂತ ನಾನು ಭಾವಿಸಿಲ್ಲ. ಶನಿವಾರ ಸಂಜೆ ಎಲ್ಲಿದ್ರಿ ಅಂತ ಕೇಳಿದ್ರು. ನಿಮ್ಮ ಕಾಕ್‌ಟೈಲ್‌ಗೆ ಹೋಗಿದ್ದು ಹೇಳ್ದೆ. ನೀವು ಡೆಲ್ಲಿಯಿಂದ ಬಾಂಬೆಯವರೆಗೆ ಸಹ ಪ್ರಯಾಣಿಕರಾಗಿ ಬಂದಿದ್ದೂ ತಿಳಿಸ್ದೆ..."

ಕುಸುಮಾಕರ ಮಹಾಬಲೇಶ್ವರಕ್ಕೆ ಆಹ್ವಾನಿಸಿದ್ದು ನೆನಪಿಗೆ ಬಂತು.

"ಅಷ್ಟೇನೆ?"

ಅವಳ ಯೋಚನೆ ಕತ್ತರಿಸಿತು ಪ್ರಶ್ನೆ.

"ನಿಮ್ಮ ವಿಷಯದಲ್ಲಿ ಅಷ್ಟೆ."

ಥಕ್ಕನೆ ತಲೆಯಲ್ಲಿ ಮಿಂಚಿತು ಮಾತು. ನವೀನನ ಹೆಸರಿನಲ್ಲಿ ಒಬ್ಬ ಸ್ಮಗ್ಲರಾ!

ನವೀನ ಏಕಾಏಕಿ ಕೇಳಿದ.

"ಏನು ಆ ನಿಮ್ಮ ಸ್ನೇಹಿತನ ಹೆಸರು?"

"ಕುಸುಮಾಕರ"

ಪರಿಚಯ ಹಿಡಿಯದವನಂತೆ ತಲೆ ಅಲುಗಿಸಿದ. ತೀರ್ಪು ಕೊಡುವಂತೆ ಮೊನಚಾಗಿ ಹೇಳಿದ.

"ಅರ್ಚನಾ, ನನ್ನ ಮಾತು ಕೇಳಿ... ಕುಸುಮಾಕರನಿಂದ ದೂರ ಇರಿ. ಅವನು ನಿಮ್ಮ ಸ್ನೇಹಕ್ಕೆ ಅರ್ಹ ಅಲ್ಲ."

ಮೃದುವಾಗಿ ವಿರೋಧಿಸಿದಳು.

"ಅದಕ್ಕೆ ಕಾರಣ ಹೇಳಿ... ಕುಸುಮಾಕರ ನಿಮ್ಮ ಬಗ್ಗೆಯೂ ಹಾಗೆ ಹೇಳಬೋದು. ಅವರ ವಿಷಯ ನಿಮಗೆ ಸಂಬಂಧಿಸಿದ್ದಲ್ಲ"

ಅವನು ಸೋಲಿನ ಕಡೆಗೆ ಜಾರುತ್ತಿದ್ದ.

"ಸಂಬಂಧಿಸಿಲ್ಲ, ನಿಜ. ನೀವು ಆಮೇಲೆ ಪಶ್ಚಾತ್ತಾಪ ಪಡೋದು ನನಗೆ ಇಷ್ಟವಿಲ್ಲ."

ಒಬ್ಬರನ್ನೊಬ್ಬರು ನೋಡಿದರು. ಇಬ್ಬರ ನಡುವೆ ಕೋಪ ತೂಯ್ದಾಡಿತು.

ನವೀನ ತನ್ನನ್ನು ಪ್ರೀತಿಸುವುದಿಲ್ಲವೆಂದು ಪರೋಕ್ಷವಾಗಿ ನಿರೂಪಿಸಿದ್ದಾಗಿದೆ. ಅವನಿಗೆ ತನ್ನ ಮತ್ತೊಬ್ಬ ಸ್ನೇಹಿತನ ಬಗೆಗೆ ಕಾರಣವಿಲ್ಲದ ಈರ್ಷೆ! ನವೀನ ತನ್ನ ಸ್ವಂತ ವಿಷಯದಲ್ಲಿ ತಲೆ ಹಾಕಿದ್ದಾನೆ!

"ನಿಮಗೆ ನನ್ನ ಎರಡನೆ ಸ್ನೇಹಿತನ ಪರಿಚಯ ಇಲ್ಲ. ನಾನು ಅವರೊಂದಿಗೆ ಸ್ನೇಹ ಹೊಂದಿರೋದು ನೀವು ಸಹಿಸೋದಿಲ್ಲ. ನನ್ನ ಎಚ್ಚರಿಕೆಯಲ್ಲಿ ನಾನಿದ್ದೀನಿ... ಅವರು ಮಹಾಬಲೇಶ್ವರಕ್ಕೆ ನನ್ನ ಆಹ್ವಾನಿಸಿದ್ದಾರೆ... ನಾನು ಅದಕ್ಕೆ ಒಪ್ಪಿದೀನಿ"

ದಿಟ್ಟತನದಿಂದ ಹಾಗೆ ಹೇಳಿದುದು ಅವಳಿಗೇ ಅಚ್ಚರಿ. ಅವನು ಅವಳನ್ನು ಗಾಯಗೊಳಿಸಿದ್ದ. ಅವಳಿಗೂ ಅವನನ್ನು ಗಾಯಗೊಳಿಸುವ ಹುಚ್ಚು ಇಚ್ಛೆ!

ಹಾಗೆ ಹೇಳಬಾರದಿತ್ತೆಂದು ಕ್ಷಣ ಮರುಗಿದಳು.

ಅವನ ಮುಖ ನಿಸ್ತೇಜವಾಯಿತು. ಸೋಲು, ಗಾಬರಿಯಲ್ಲಿ ಕೇಳಿದ.

"ನೀವು ಅವನೊಂದಿಗೆ ಮಹಾಬಲೇಶ್ವರಕ್ಕೆ ಹೋಗ್ತೀರಾ? ನಿಮಗೆ ಹುಚ್ಚು!"

"ಹುಚ್ಚಲ್ಲ! ನೀವು ಹೇಳಿದ್ರಿ ಅಣ್ಣ ದೀಪಕನ ವಿವರ ಇಲ್ಲಿ ಸಿಗೋದಿಲ್ಲಾಂತ. ಆ ವಿಷಯ ಮರೆಯೋದಿಕ್ಕೂ ಹೇಳಿದ್ರಿ. ನನಗೆ ಸಹಾಯ ಮಾಡೋದಿಕ್ಕೆ ನೀವು ತಯಾರಿಲ್ಲ... ಆದರೆ ನನಗೆ ಸ್ವಲ್ಪ ವಿವರ ಸಿಕ್ಕಿದೆ. ಇನ್ನಷ್ಟು ಸಿಗುವ ಸಂಭವ ಇದೆ."

"ಪ್ರೊಫೆಸರ್ ಹೇಳಿದ್ದಕ್ಕಿಂತ ಹೆಚ್ಚಾಗಿ ಏನೂ ನಿಮಗೆ ಸಿಗಲಾರದು. ಸಿಂಹಳೀ ನರ್ತಕಿಯ ಹೆಸರು ಕೇಳಿ ನಿಮ್ಮಲ್ಲಿ ಕಲ್ಪನೆ ಸಾಗ್ತಿದೆ. ಭೊಂಬಾಯಿನಲ್ಲಿ ಸಾವಿರ ನರ್ತಕಿಯರು"

"ನನಗೆ ಬೇಕಾಗಿರೋಳು ಒಬ್ಬಳೇ ನರ್ತಕಿ... ಕಾಮಿನಿ ರತ್ನೆ! ಕುಸುಮಾಕರನಿಗೆ ಅವಳ ವಿಷಯ ತಿಳಿದಿದೆ"

"ಹಾಗಂತ ಅವನು ಹೇಳಿದ್ನೆ ?"

"ಇಲ್ಲ. ಅವರಿಗೆ ಗೊತ್ತಿದೆ ಅಂತ ನಾನು ಗ್ರಹಿಸಿದೆ"

"ನರ್ತಕಿಯ ಹೆಸರು ನೀವೇ ಅವನಿಗೆ ಹೇಳಿರಬೇಕು"

"ಹೌದು"

"ನಿಮ್ಮಣ್ಣನ ವಿಷಯ ತಿಳಿಸಿದ್ರಾ?"

ಮುಖ ಕಾತರದಿಂದ ಮುಂದೆ ತಂದ.

"ಅದು ಮಾತ್ರ ಹೇಳ್ಲಿಲ್ಲ. ದೀಪಕನ ಹೆಸರೇ ಎತ್ತಲಿಲ್ಲ. ಅವರು ನನ್ನ ಮಹಾಬಲೇಶ್ವರಕ್ಕೆ ಒಯ್ದಾಗ ಅವರಿಗೇ ಗೊತ್ತಾಗದ ಹಾಗೆ ಮುಂದಿನ ವಿವರ ನಾನು ಗೊತ್ತು ಮಾಡಿಕೊಳ್ತೀನಿ."

ಅವನು ಕುಚೋದ್ಯದ ನಗೆ ನಕ್ಕ. ಅವಳಿಗೆ ಸುಡು ಬಿಸಿಲಿನಲ್ಲೂ ಚಳಿ ತಟ್ಟಿತು.

ಸ್ನೇಹ ಹೀಗೇಕಾಯಿತು? ಇಬ್ಬರೂ ಭೇಟಿಯಾದಾಗ ಬಿಸಿ ಚರ್ಚೆ ಇಬ್ಬರ ಮಧ್ಯೆ ದೀಪಕ ಪಾವನ್‌ನ ಮರಣದ ವಿಷಯ ನೆರಳಾಗಿ ಉಳಿದಿದೆ.

ನವೀನ ಹಣೆ ಬೆವರು ಒರೆಸಿದ.



"ಆ ನಿಮ್ಮ ಸ್ನೇಹಿತನಿಗೇ ವಿಷಯ ಗೊತ್ತಿಲ್ಲದಿರೋವಾಗ ನೀವು ಶೋಧನೆಯಲ್ಲಿ ಒಂದು ಹೆಜ್ಜೆಯೂ ಮುಂದಕ್ಕೆ ಇಡದ ಹಾಗೆ ಆಗುತ್ತೆ."

"ನಾವು ಈ ವಿಷಯದಲ್ಲಿ ಇನ್ನೇನೂ ಮಾತಾಡೋದು ಬೇಡ"

ಕಣ್ಣೀರು ಮಿಡಿಸುವ ಹಂತದಲ್ಲಿ ಅಳುಕಿದಳು.

ನವೀನನಿಗೆ ತನ್ನಲ್ಲಿ ಆಸ್ಥೆ ಇದೆಯೆ ಎಂಬ ಜಿಜ್ಞಾಸೆ. ಅವನು ತನ್ನಿಂದ ದೂರ... ಅವನು ಸುರಭಿಗೆ ಸಮೀಪ! ಊಟಕ್ಕೆ ಅವಳ ಪಕ್ಕದಲ್ಲಿ ಕುಳಿತಾಗ ಚಕ್ಕಂದ, ನಗೆ... ಅವರಿಬ್ಬರೂ ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡಿದ್ದಾರೆ ಒಂದು ದಿನ ಅವರಿಬ್ಬರೂ... ಏನು?

ಮದುವೆ ಆಗುವ ಮನೋವೃತ್ತಿಯ ಮನುಷ್ಯನಲ್ಲ!

ಅವಳ ಕಣ್ಣುಗಳಿಂದ ಹೊಮ್ಮುವ ನೋವು, ಈರ್ಷೆ, ಸ್ವಾರ್ಥದ ಜಲ ಅವನು ನೋಡುವುದು ಬೇಡ...

ಅರ್ಚನಾ ಅವನಿಂದ ಸರಿದು, ಭ್ರಮಾಧೀನಳಂತೆ ಅಲೆಗಳ ದಿಕ್ಕಿಗೆ ಧಾವಿಸಿದಳು.

ಮರಳು ಹಾರಿಸಿದ ಚಪ್ಪಲಿಗಳು ಪಾದಗಳಿಂದ ಕಳಚಿ ಹೋದವು. ತಾಳೆಗರಿಯ ಹ್ಯಾಟ್ ಗಾಳಿಗೆ ತೂರಿ ಹೋಯಿತು.

ದೇಹ ಎಳೆಯುತ್ತಾ, ನಡು ಮಟ್ಟದ ನೀರಿನಲ್ಲಿ ಸರಿದಳು. ಗಾಳಿಯ ಹೊಡೆತದೊಂದಿಗೆ ಭಿಮ್ಮನೆ ಬಂದ ಮೊದಲನೆ ಅಲೆಯನ್ನು ಸಿಡಿದು ಬಾರಿಸಿದಳು... ಎರಡನೆಯದಕ್ಕೂ ಅದೇ ಬಿರುಸು ಹೊಡೆತ... ಮೂರನೆಯ ಅಲೆ ಭೋರಿಟ್ಟು ಬಂದಾಗ ನಿಲುಗಡೆಯ ಸಮತೋಲ ತಪ್ಪಿ ಉರುಳಿದಳು.

ನಿಲ್ಲಲು ಪ್ರಯತ್ನಿಸಿದಂತೆ ಜಲಶಕ್ತಿ ಏರಿತು. ಅಲೆಗಳು ಅವಳನ್ನು ಒತ್ತಿ ಹಾಕಿದವು. ಉಸಿರಾಟಕ್ಕೆ ಹಾತೊರೆದಳು.

ಹತಾಶಳಂತೆ ಕೈಗಳನ್ನು ಬಡಿದಳು. ಬಲಿಷ್ಠ ಜಲ ತರಂಗಗಳು ಅವಳನ್ನು ಮುಂದಕ್ಕೆ ಸೆಳೆದವು... ಹಿಂದಕ್ಕೆ ತಳ್ಳಿದವು.

ಭುಜಗಳು ಮರಗಟ್ಟಿ ಶ್ವಾಸಕೋಶಗಳು ಹರಿದು ಹೋದಂತಾದವು.

"ಕೈ ಕಾಲು ಆಡಿಸ್ಬೇಡಿ!... ಅಲ್ಲಾಡದೆ ನಿಲ್ಲಿ!"

ನವೀನ ಅವಳಿಗೆ ಅರಚಿ ಹೇಳಿದ. ಅವಳಿಗದು ಕೇಳಿಸಲಿಲ್ಲ.

ಕೈಕಾಲು ಆಡಿಸಿದಳು. ನಿಲುಗಡೆ ದೊರೆಯದೆ ದೇಹ ಹೊರಳಿಸಿದಳು.

ಅಲೆಗಳು ಬೃಹತ್ ಗಾತ್ರದಲ್ಲಿ ಏರಿದವು. ನೀರಿನ ಮೇಲೆ ಕಾಣುತ್ತಿದ್ದ ಅವಳ ದೇಹ ಭಾಗ ಒಮ್ಮೆಗೇ ಕಣ್ಮರೆಯಾಯಿತು.

* * *

ಅರ್ಚನಾಗೆ ಅರಿವು ಹತ್ತಿದಾಗ ನೆತ್ತಿ ಮೇಲಿನ ಬೆಂಕಿ ಸೂರ್ಯ ಕಣ್ಣು ಇರಿಯುತ್ತಿತ್ತು. ನಿಧಾನವಾಗಿ ಎಲ್ಲಿಗೊ ಸರಿಯುತ್ತಿರುವಂತೆ ಭಾಸವಾಯಿತು... ನವೀನನ ಬಲಿಷ್ಠ ತೋಳುಗಳಲ್ಲಿ ತೂಗಿ ಹೋಗುತ್ತಿರುವೆ !

ನವೀನ ಮೊಳಕಾಲು ಆಸರೆಯಲ್ಲಿ ಅವಳನ್ನು ಬಿಸಿ ಮರಳಿನ ಮೇಲೆ ಇಳಿಸಿದ.

ತಲೆಗೂದಲಿಗೆ ತುಟಿಯಿಟ್ಟು ಅವನು ಹಾಗೆಂದುದು ಕೇಳಿಸಿತು. ಕಣ್ಣು ತೆರೆಯಲು ಕಷ್ಟವಾಗಿತ್ತು. ಅವನನ್ನು ಒರಗಿ ಹಾಗೆಯೇ ಇನ್ನಷ್ಟು ಕಾಲ ಕಣ್ಣು ಮುಚ್ಚುವಷ್ಟು ಜಡತ್ವ.

"ಹುಚ್ಚು ಹೆಣ್ಣು!... ಹಠವಾದಿ ಹುಡುಗಿ!"

ತಲೆಗೂದಲನ್ನು ತುಟಿಗಳು ಹೂವಿನಂತೆ ಮತ್ತೆ ಸ್ಪರ್ಶಿಸಿದಾಗ ಅವಳು ಕಣ್ಣು ಬಿಚ್ಚಿ ನಿಟ್ಟುಸಿರು ಹಾಕಿದಳು.

"ನನ್ನ ಗಾಬರಿಗೊಳಿಸಿ ಬಿಟ್ರಿ... ನಿಮಗೆ ಯಾರೂ ಎಚ್ಚರಿಕೆ ಕೊಟ್ಟಿರಲಿಲ್ಲವೆ?" ಮೃದು ಸಿಡುಕಿನಲ್ಲಿ ಕೇಳಿದ.

"ಗೀತಾಬೇನ್ ಹೇಳಿದ್ರು. ನನಗೆ ಏನಾಯ್ತೊ, ಗೊತ್ತಿಲ್ಲ. ಹುಚ್ಚಳ ಹಾಗೆ ಅಲ್ಲಿಗೆ ಹೋದೆ."

ಮರಳಿನಲ್ಲಿ ಬೆರಳಾಡಿಸುತ್ತಾ ಕುಳಿತು ನಸುನಗಲು ಪ್ರಯತ್ನಿಸಿದಳು. ಅವನು ಎದ್ದು ನಿಂತ.

"ನಡೆದು ಬರೋದಿಕ್ಕೆ ಸಾಧ್ಯವೇ ನೋಡಿ ಇಲ್ಲವಾದ್ರೆ ಮತ್ತೆ ಹೊತ್ತುಕೊಂಡು ಹೋಗ್ತೀನಿ"

"ಓ, ಬೇಡ... ನಾನು ಸರಿಹೋಗಿದೀನಿ"

ಗಾಬರಿಯಿಂದ ತೂರಾಡುತ್ತಾ ನಿಂತು ಅವನ ಕೈ ಹಿಡಿದು ನಡೆದಳು. ಕಳಚಿ ಹೋಗಿದ್ದ ಅವಳ ಚಪ್ಪಲಿ ಹುಡುಕಿ ತಂದುಕೊಟ್ಟ. ತಿಳಿಗರಿಯ ಹ್ಯಾಟ್ ತಲೆಗೆ ಹಾಕಿದ.

"ಹೆಣ್ಣುಗಳ ಸ್ವಭಾವ ಹೀಗೇ. ಸಣ್ಣ ವಿಷಯಕ್ಕೆ ಅತೃಪ್ತಿ. ಅಸಮಾಧಾನ... ಕೋಪ ನನ್ನ ಮೇಲೊ ಅಥವಾ ನಿಮ್ಮ ಆ ಬಾಯ್‌ಫ್ರೆಂಡ್ ಮೇಲೊ?"

ಉಕ್ಕಿದ ಕೋಪ ತಡೆದಳು.

"ಅವರು ಬಾಯ್‌ಫ್ರೆಂಡ್ ಅಲ್ಲ. ನಿಮ್ಮ ಹಾಗೇ ಒಬ್ಬ ಸಂಗಾತಿ. ನನ್ನ ಜೊತೇಲಿ ನಿಮ್ಮನ್ನು ನೋಡಿದರೆ ಅವರೂ ನಿಮ್ಮ ಹಾಗೇ ಹೇಳಬಹುದು... ನನ್ನ ಒಂಟಿತನ ತಪ್ಪಿಸೋದಕ್ಕೆ ಅವರೊಂದಿಗೆ 'ಥೌಸಂಡ್ ಅಂಡ್ ಒನ್' ರೆಸ್ಟೋರೆಂಟಿಗೆ ಹೋದೆ."

"ಧಾರಾಳವಾಗಿ ಹೋಗಿ ಅಂದೆ."

ಅರ್ಧ ಗಂಟೆಯ ನಂತರ ಅವಳು ವ್ಹೀಲ್ ಹಿಡಿದ ನವೀನನ ಪಕ್ಕದಲ್ಲಿ ಕುಳಿತು ನಗರದ ಕಡೆಗೆ ಸಾಗಿದ್ದಳು. ದೈಹಿಕ ದಣಿವಿನೊಂದಿಗೆ ಮಾನಸಿಕ ವೇದನೆ. ಸೋದರನ ಸಲುವಾಗಿ ನಡೆಸಿರುವ ಒಂಟಿ ಹೋರಾಟಕ್ಕೆ ಮತ್ತೊಬ್ಬನ ಸಹಾಯವಿಲ್ಲ. ಕುಸುಮಾಕರನ ಸಹಾಯ ಹಸ್ತಕ್ಕೆ ನವೀನನ ಮೆದುವಾದ ಆಕ್ಷೇಪಣೆ... ಅವನು ಸ್ನೇಹಕ್ಕೆ ಅರ್ಹನಲ್ಲವೆಂಬ ಅಭಿಪ್ರಾಯ! ಪರಿಚಯವಿಲ್ಲದ ಕುಸುಮಾಕರನ ಬಗೆಗೆ ನವೀನನಿಗೆ ಅತೃಪ್ತಿ ಏಕೆ? ರಕ್ತ ಸಂಬಂಧಿಯ ಸಾವಿನ ವಿವರಕ್ಕೆ ಹಾತೊರೆಯುವ ತನ್ನ ಮೇಲೂ ಅಸಡ್ಡೆ!

ಹೊಟೇಲಿನ ಮುಂದೆ ಅವಳನ್ನು ಬಿಟ್ಟು ಹೊರಟಾಗ ನವೀನ ಮತ್ತೆ ಕಾಣುವೆನೆಂಬ ಮಾತು ಬಳಸಲಿಲ್ಲ. ವಿಶ್ರಾಂತಿ ಪಡೆಯುವಂತೆ ಎರಡು ಸಾರಿ ಹೇಳಿ ಹಿಂದಕ್ಕೆ ನೋಡದೆ ಸರಿದು ಹೋದ.

ನಿದ್ರೆಯಿಂದ ಎಚ್ಚರಗೊಂಡಾಗ ಆರು ಗಂಟೆ ಆಗಿತ್ತು. ಅರೆ ತಾಸಿನ ಹೊರ ಗಾಳಿ ಬೇಕೆನಿಸಿತು. ಮುಖ ತೊಳೆದು ಸೀರೆ ಬದಲಿಸಿ ಹೊರಟಳು... ನಡೆಯ ಬೇಕೆನಿಸಿತು. ಮಾತುಂಗಾದಲ್ಲಿ ಟ್ಯಾಕ್ಸಿಯಿಂದ ಇಳಿದು ಅಂಗಡಿಯ ಶೋಕೇಸ್‌ನಲ್ಲಿ ಸೀರೆಗಳ ಪ್ರದರ್ಶನ ಕಂಡು ಒಳ ಹೊಕ್ಕಳು. ಭಾರಿ ವ್ಯಾಪಾರದ ವಿಶಾಲ ಅಂಗಡಿ. ಮಾರಾಟದ ವಿಭಾಗಗಳ ಮಧ್ಯೆ ನಡೆದು ಕನ್ನಡಿಯಲ್ಲಿ ನೋಡಿಕೊಂಡಳು. ಗುಲಾಬಿ ರಂಗಿನ ಸೀರೆ, ಕುಪ್ಪಸದಲ್ಲಿ ತನಗೇ ವಿನೂತನವಾಗಿ ಕಾಣುವ ಚೆಲುವು, ಕಣ್ಣು ಚೆಲುವಿನಿಂದ ತುಸು ಪಕ್ಕಕ್ಕೆ ಅಲುಗಿತು...

ಬಲ ಭುಜದ ಹಿಂದೆ ಹತ್ತು ಅಡಿಗಳಷ್ಟು ದೂರದಲ್ಲಿ ನಿಂತು ತನ್ನನ್ನೇ ಗಮನಿಸುತ್ತಿರುವ ಬಿಳುಪು ತಲೆಗೂದಲಿನ ಮನುಷ್ಯ! ಸಿಡುಬಿನ ಕಲೆಗಳ ಮುಖ!

ಮೆಲ್ಲನೆ ಹಿಂದಕ್ಕೆ ತಿರುಗಿದಳು. ಅರ್ಚನಾ. ಅವನು ಮೆಟ್ಟಿಲು ಇಳಿದು ಹೋಗುತ್ತಿದ್ದ. ಅಂಗಡಿಯ ಸಹಸ್ರಾರು ಸೀರೆಗಳು ನಿಸ್ಸಾರವಾಗಿ ಕಂಡವು.

ಹೋಟೆಲಿಗೆ ಹಿಂತಿರುಗಿದಳು. ಡೆಸ್ಕ್‌ನಲ್ಲಿದ್ದ ಹುಡುಗ ಸುಗಂಧ ಲೇಪಿತ ಸಣ್ಣ ಚೀಟಿ ನೀಡಿದ. ಕುಸುಮಾಕರನ ಬರೆಹ:

'ಸಮುದ್ರ ದಂಡೆಯ ಪಾರ್ಟಿ ಹರ್ಷದಾಯಕವಾಗಿತ್ತೆಂದು ಭಾವಿಸುವೆ. ನಾಳೆ ಸಂಜೆಗೆ ತಪ್ಪದೆ ಹಾಜರಾಗುವೆ'.

ಚೀಟಿಯ ಪರಿಮಳ ಕೋಣೆಯೆಲ್ಲಾ ತುಂಬಿತು. ಕರ್ಟನ್ ಸರಿಸಿ ಕಿಟಕಿ ತೆರೆದಳು. ಚೀಟಿ ಚೂರಾಗಿ ಬುಟ್ಟಿ ಸೇರಿದರೂ ಸುಗಂಧದ ಪ್ರಭಾವ ಇಳಿಯಲಿಲ್ಲ.

ಕುಸುಮಾಕರ ತನ್ನ ಕಾರ್ಯಕ್ಕೆ ಸಹಾಯ ನೀಡಲು ಸಂತೋಷದಿಂದ ಸರಿದು ಬರುತ್ತಾನೆ. ಅವನಿಗೆ ದೀಪಕನ ಹೆಸರನ್ನೂ ತಾನು ತಿಳಿಸಿಲ್ಲ! ಅವನ ನೆರವು ಪಡೆದು ವಿವರ ಪಡೆದ ಮೇಲೆ ಅವನೊಂದಿಗೆ ಭೇಟಿ ಸಾಕು. ಕನಸಿನಲ್ಲಿ ಬಂದವನಂತೆ ಸರಿದುಹೋಗುವ ವ್ಯಕ್ತಿ... ಸಂಮೋಹನದ ಕಣ್ಣುಗಳ ಮನುಷ್ಯ, ಅಷ್ಟು ಸುಲಭವಾಗಿ ಸ್ಮೃತಿಯಿಂದ ಕಳಚಿ ಹೋಗುವನೆ?

ರಾತ್ರಿಯ ಊಟಕೆ, ತಳಭಾಗಕ್ಕೆ ಬಂದಾಗ ಕಂಡುದು ಬಹುತೇಕ ಹೊಸ ಮುಖಗಳು. ಅವಳ ಕಡೆಗೆ ನಗೆ ಕಣ್ಣು ಆಡಿಸುತ್ತಿದ್ದ ಉತ್ಸಾಹಿ ಪಂಜಾಬಿ ದಂಪತಿಗಳು ಇರಲಿಲ್ಲ. ಮದ್ರಾಸಿನ ನಾಲ್ಕು ಮಂದಿಯ ಕುಟುಂಬದವರು ತಮ್ಮ ಸ್ಥಾನ ತಪ್ಪಿಸಿರಲಿಲ್ಲ.

ಅರ್ಚನಾ ಸುತ್ತಲೂ ಕಣ್ಣು ಹೊರಳಿಸಿದಳು. ಎದುರಿನ ಬಲ ಪಾರ್ಶ್ವದ ಮೇಜಿನ ಮೇಲೆ ದೃಷ್ಟಿ ನೆಟ್ಟಿತು. ಅವಳು ಹೋಟೇಲಿಗೆ ಬಂದ ದಿನ ಮಧ್ಯಾಹ್ನ ಕುಸುಮಾಕರನನ್ನು ಅಲ್ಲಿಯೇ ಕಂಡುದು...

ಅದೇ ಸ್ಥಾನದಲ್ಲಿ ಈಗ ಕುಳಿತ ವ್ಯಕ್ತಿಯ ನೋಟ ಅವಳ ಉಸಿರಿಗೆ ತಡೆ ಹಾಕಿತು. ತೆಳು ದೇಹದ, ಬಿಳುಪು ತಲೆಗೂದಲಿನ, ಸಿಡುಬು ಕಲೆ ಮುಖದವ!

ಹಾಂ! ಮರೆಯುವಷ್ಟು ಹೆಚ್ಚು ಸಮಯ ಕಳೆದಿಲ್ಲ. ಮೂರು ತಾಸುಗಳ ಹಿಂದೆ ಸೀರೆ ಅಂಗಡಿಯ ನಿಲುವುಗನ್ನಡಿಯಲ್ಲಿ ಆ ಮುಖ ಪ್ರತಿಫಲಿತವಾಗಿತ್ತು... ತನ್ನನ್ನು ಹಿಂಬಾಲಿಸುತ್ತಿರುವುದು ನಿಸ್ಸಂಶಯ!

"ಓಹ್, ತನ್ನದೂ ವಿಪರೀತದ ಕಲ್ಪನೆ. ಸೀರೆಯ ಅಂಗಡಿಯಲ್ಲಿ ಕಂಡವನು, ಈ ಹೊಟೇಲಿನ ಅತಿಥಿಯಾಗಿ ಊಟಕ್ಕೆ ಬರುವುದು ಸೋಜಿಗವೆ?

ಬೇರು ಬಿಟ್ಟ ಚಿಂತೆ ದೂರವಾಗದು. ಕೋಣೆ ಸೇರಿ ಬಾಗಿಲು ಮುಚ್ಚುವವರೆಗೆ ಅವನ ಕಣ್ಣುಗಳು ತನ್ನ ಬೆನ್ನಿಗೆ ಅಂಟಿರುವಂತೆ ಭಾಸವಾಯಿತು... ಫೋನ್ ಸದ್ದು ಮಾಡಿ ಮೈ ಚಳಿ ಬಿಡಿಸಿತು.

"ನಿಮ್ಮ ರಜೆ ಒಂದು ವಾರದಷ್ಟು ಮುಂದುವರಿಸೋದಿಕ್ಕೆ ಸಾಧ್ಯವೆ?"

ನವೀನ ಬೇರಾವ ವಿಷಯವೂ ಎತ್ತದೆ ನೇರವಾಗಿ ಆ ಪ್ರಶ್ನೆ ಹಾಕಿದ್ದ.

"ಸಾಧ್ಯವಿಲ್ಲ... ಬೊಂಬಾಯಿನಲ್ಲಿ ಇನ್ನು ಹೆಚ್ಚಾಗಿ ಉಳಿಯೋ ಅಗತ್ಯ ನನಗೆ ಕಾಣ್ತಾ ಇಲ್ಲ... ಆಸಕ್ತಿಯೂ ಇಲ್ಲ."

ಬಿಗುಮಾನ ಅವಳಿಗೆ ಇನ್ನೂ ತಪ್ಪಿರಲಿಲ್ಲ.

"ನಿಮ್ಮ ಉದ್ದೇಶ ಇಲ್ಲಿ ನೆರವೇರಲಿಲ್ಲಾಂತ ನಗರ, ನಗರದ ಜನ ಎಲ್ಲರ ಮೇಲೆ ಜಿಗುಪ್ಸೆ ಬಂದ ಹಾಗೆ ಕಾಣತ್ತೆ. ...ಆಲ್‌ರೈಟ್. ಎರಡು ದಿನ ಮುಖ್ಯವಾದ ಕೆಲಸದ ಮೇಲೆ ಹೋಗ್ತಿದೀನಿ. ಇಲ್ಲದಿದ್ರೆ ಸುರಭಿ ನನ್ನ ಸಂಗಡ ಮಾತು ನಿಲ್ಲಿಸಿ ಬಿಡ್ತಾಳೆ."

ಸುರಭಿ! ಅವಳಿಗೆ ಕೋಪ ಉಮ್ಮಳಿಸಿ ಅದು ಒಡನೆ ಅಳುವಿಗೆ ತಿರುಗಿತು. ಸುರಭಿಗೆ ನವೀನನ್ನು ಸೆಳೆದು ತನ್ನ ಕಾರ್ಯ ಪೂರೈಸಿಕೊಳ್ಳುವ ಸ್ವಾರ್ಥ! ನವೀನನನ್ನೇ ಸೆಳೆದುಕೊಂಡಾಗಿದೆ... ತನಗೆ ಸಂಬಂಧಿಸದ ವಿಷಯ ಇದು.



ಮೊದಲನೆ ದೀಪಾವಳಿಗೆ ಅತ್ತೇ ಮನೆಗೆ ಹೋಗ್ತಾ ಇದೀನಿ., ಭಾವ ಮೈದುನ ನಾದಿನಿಯರ ಪಟಾಕಿ ಹಾವಳಿಯಿಂದ ರಕ್ಷಿಸಿಕೊಳ್ಳಲು ಈ ವಿಶೇಷ ಅಗ್ನಿ ನಿರೋಧಕ ಉಡುಪು...


ಪ್ರಕಾಶದಿಂದ
ಝುಳವನ್ನು
ತೆಗೆಯಿರಿ
ಕೆಲಸ ಮಾಡುವುದಕ್ಕೂ, ಓದುವುದಕ್ಕೂ,
ಹೊಲಿಯುವುದಕ್ಕೂ, ಅಧ್ಯಯನ
ಮಾಡುವುದಕ್ಕೂ, ಹೆಚ್ಚೇನು, ವಿಶ್ರಾಂತಿ
ತೆಗೆದುಕೊಳ್ಳುವುದಕ್ಕೂ ಸಹ ನಿಮಗೆ
ಫಿಲಿಪ್ಸ್ ಆರ್ಜೆಂಟಾ ಬೇಕಾಗುತ್ತದೆ. ಬಿಳಿ
ಲೇಪನವುಳ್ಳ ಈ ಬಲ್ಬ್ ಉಜ್ವಲವಾಗಿದ್ದರೂ
ಸೌಮ್ಯ ಪ್ರಕಾಶವನ್ನೀಯುತ್ತದೆ. ಕಣ್ಣು
ಕುಕ್ಕುವುದಿಲ್ಲ, ಗಾಢ ಛಾಯೆಗಳಿರುವುದಿಲ್ಲ.


Argenta
PHILIPS
ಫಿಲಿಪ್ಸ್
ಆರ್ಜೆಂಟಾ
ಹಾಲಿನ ಬಣ್ಣದ ಬಲ್ಬ್
ನಿಮ್ಮ ಹಣಕ್ಕೆ ಪೂರ್ತಿ
ಮೌಲ್ಯ ನೀಡುತ್ತದೆ.
ಫಿಲಿಪ್ಸ್
ಫಿಲಿಪ್ಸ್ ಇಂಡಿಯಾ ಲಿಮಿಟೆಡ್


PHILIPS

"ಮಾತು ಯಾಕೆ ನಿಲ್ಲಿಸಿದ್ರಿ?"

ಅತ್ತಲಿಂದ ನವೀನ ಅವಳನ್ನು ಕದಲಿಸಿದ.

"ಎರಡು ದಿನ ಯಾಕೆ, ಎರಡುವಾರ ಹೋಗಿ ಬನ್ನಿ... ನಾನು ಯಾವ ದೊಡ್ಡ ವ್ಯಕ್ತಿ ಅಂತ ನಿಮ್ಮ ಸ್ವಂತ ವಿಷಯ ಇಲ್ಲಿ ಹೇಳ್ತಾ ಇದೀರಿ"

ಅತ್ತಲಿಂದ ನಿಟ್ಟುಸಿರು ಬಂತು.

"ನಾನು ಯಾವ ದೊಡ್ಡ ವ್ಯಕ್ತಿ ಅಂತ ರೈಲಿನಲ್ಲಿ ನಿಮ್ಮ ಸ್ವಂತ ಸಂಗತಿ ಹೇಳಿದ್ರಿ?... ನೋಡಿ, ಅರ್ಚನಾ. ನಾನು ಬರೋವರೆಗೆ ನೀವು ಎಲ್ಲೂ ತಿರುಗಾಡದೆ ಇರೋದು ಒಳ್ಳೇದು. ಮಹಾಬಲೇಶ್ವರಕ್ಕೆ ಹೋಗೋದೂ ಬೇಡ. ನಿಮ್ಮ ಬಗ್ಗೆ ನನಗೆ ಆಸ್ಥೆ, ಆಸಕ್ತಿ, ಆತಂಕ ಎಲ್ಲಾ ಇದೆ."

"ಸಾಕು, ಬಣ್ಣದ ಮಾತು... ಗುಡ್ ಬೈ"

ಫೋನ್ ಟಪ್ಪನೆ ಅಡಿಗಿಟ್ಟಳು.

ಆಸ್ಥೆ, ಆಸಕ್ತಿ, ಆತಂಕ... ಸೋಗಿನ ಪದಗಳು. ತನ್ನ ಮೇಲೆ ಅಧಿಕಾರ! ಸ್ವಾರ್ಥ!

ಅತ್ತಲಿಂದ ಮತ್ತೆ ಫೋನ್ ಕರೆ ಬರಲಿಲ್ಲ. ಒಳದನಿ ತಟ್ಟಿ ಹೇಳಿತು. ತನ್ನ ಅತೃಪ್ತಿಯಲ್ಲಿ ಸೌಜನ್ಯದ ರೇಖೆ ದಾಟುತ್ತಿರುವೆ.

ಬೆಳಗ್ಗೆ ಎಂಟು ದಾಟುತ್ತಲೇ ತಲೆ ಹಗುರಗೊಳಿಸಲು ಗುರಿ ಇಲ್ಲದೆ ಟ್ಯಾಕ್ಸಿಯಲ್ಲಿ ಹೊರಟಳು. ಬೈಕುಳ ಬ್ರಿಡ್ಜ್ ದಾಟಿ ರುಸ್ತುಮ್ ಬಾಗ್ ಸಮೀಪಿಸಿದಾಗ ಕಾರಣವಿಲ್ಲದೆ ಇಳಿದಳು. ಆ ಸಣ್ಣ ಉದ್ಯಾನದಲ್ಲಿ ಹತ್ತು ನಿಮಿಷಗಳ ವಿರಾಮ ಬೇಕೆನಿಸಿತು.

ಹುಲ್ಲುಹಾಸಿನ ಮೇಲೆ ಕಾಲು ಚಾಚಿ ಮುಖ ಎತ್ತಿದಳು. ಮೇಲೆ ಎಳೆಬಿಸಿಲು ಸುರಿಯುವ ನೀಲಿ, ಬಿಳುಪು ಮಚ್ಚೆಗಳ ಆಕಾಶ. ಸುತ್ತಲೂ ವಾಹನಗಳ ದಾಂಧಲೆ. ವೇಗದ ಬದುಕಿನ ನಗರದಲ್ಲಿ ಬೆಳಗಾಗುತ್ತಲೇ ಬುದ್ಧಿಗೆಟ್ಟವಳಂತೆ ಜಡತ್ವದಲ್ಲಿ ಪಾರ್ಕ್‌ಗೆ ಬಂದಿರುವ ತನ್ನ ಹೊರತಾಗಿ ಅಲ್ಲಿ ಮತ್ತೊಂದು ಬೇರೆ ವ್ಯಕ್ತಿ ಇಲ್ಲ.

ತಲೆ ಬಿರಿಯುವಂತೆ ತುಂಬಿ ನಿಂತ ದೀಪಕ ಪಾವನ್. ತುಟಿ ಬಿಗಿಸಿ ಮೈ ಮುದುರಿಕೊಂಡಳು.

ಅಪ್ರಮಾಣಿಕ ಸೋದರಿ! ಅಣ್ಣನಿಗೆ ವಂಚನೆ ಮಾಡುತ್ತಿರುವೆ. ಸಮುದ್ರ, ಸಂತಸ, ಕೂಟ, ರಾತ್ರಿಯ ಕ್ಲಬ್ ನೃತ್ಯಗಳ ಸಡಗರದಲ್ಲಿ ಮರಣಿಸಿದವನ ನೆನಪು ದೂರ ಮಾಡಿರುವೆ...

"ಮೇಮ್ ಸಾಬ್, ಆ ಹೆಂಗಸು ನಿಮ್ಮನ್ನು ನೋಡಬೇಕು ಅಂತಾಳೆ"

ಹನ್ನೆರಡು ವರ್ಷದ ಬಾಲಕನ ಮಾತು ಅವಳ ಯೋಚನೆ ಚದುರಿಸಿತು. ಸಾವರಿಸಿಕೊಂಡು ಕುಳಿತಳು.

"ಹೆಂಗಸು!... ಎಲ್ಲಿ?"

ಗಾಬರಿಯಿಂದ ಪಕ್ಕಗಳಿಗೆ ನೋಡಿದಳು.

"ಆ ಮರದ ಪಕ್ಕದಲ್ಲಿ ನಿಂತಿರೋಳು. ಹೆಸರು ಹೇಳಲಿಲ್ಲ"

ಮರದ ದಿಕ್ಕಿಗೆ ಕೈ ತೋರಿ ಹೊರಟು ಹೋದ. ಅರ್ಚನಾ ಎದ್ದು ನಿಂತಳು. ಅತ್ತ ಅಚಲವಾಗಿ ನಿಂತ ನೋಟ ಶರೀರದಲ್ಲಿ ಭೀತಿ ತುಂಬಿಸಿತು ಕಾಲುಗಳು ಸರಿಯಲಿಲ್ಲ.

ಯುವತಿ ಹಿಂದಕ್ಕೆ ನೋಡುತ್ತ, ಅವಳತ್ತಲೇ ಬಂದಳು. ಸರಿ ಸುಮಾರು ಅರ್ಚನಾಳ ವಯಸ್ಸಿನ, ತಲೆಯ ಹಿಂಭಾಗಕ್ಕೆ ಸೆರಗು ಹೊದ್ದ, ಕಪ್ಪು ಸೀರೆ, ಕಪ್ಪು ಕನ್ನಡಕ ಧರಿಸಿದ ಅಪರಿಚಿತೆ... ನರ್ತಕಿಯ ನಡಿಗೆ.

ಸಮೀಪಕ್ಕೆ ಬರುತ್ತಲೇ ಬಿಸಿಲು ಕನ್ನಡಕ ತೆಗೆದಳು. ಬಾದಾಮಿ ಆಕಾರದ ಚೆಂದದ ಮುಖದಲ್ಲಿ ತುಟಿ ಅರಳಿತು.

ಅರ್ಚನಾ ಸೆಳೆತಕ್ಕೆ ಸಿಕ್ಕಿದಳು.

ಆಕರ್ಷಕ ತೀಕ್ಷ್ಣ ಕಣ್ಣುಗಳು. ತೀಡು ಹುಬ್ಬು. ನೀಳ ನಾಸಿಕ. ಅವಕುಂಠನವಿಲ್ಲದ ಮರೆಯದ ಮುಖ!

ಸಂಶಯವಿಲ್ಲ. ಅಣ್ಣ ದೀಪಕ ಪಾವನ್ ಚಿತ್ರಿಸಿದ ಮುಸುಕು ಮುಖದ ಹೆಣ್ಣು!

"ಕಾಮಿನಿ ರತ್ನೆ...!" ಬಾಯಾರಿದವಳಂತೆ ಉದ್ಗರಿಸಿದಳು.

"ನೀನೇ ಗುರುತಿಸಿದ್ದು ಒಳ್ಳೇದಾಯ್ತು... ನೀನು ಹೋಟೆಲ್ ಅಮರ್‌ಗೆ ಬಂದ ಕೂಡಲೇ ನಾನು ನಿನ್ನ ಗುರ್ತಿಸಿಕೊಂಡೆ. ದೀಪಕ ನಿನ್ನ ಫೋಟೋ ತೋರಿಸಿದ್ದ... ನಿನ್ನ ಭೇಟಿ ಮಾಡೋದಿಕ್ಕೆ ಎಷ್ಟು ಸಾರಿ ಪ್ರಯತ್ನಪಟ್ಟೆ. ಅಬ್ಬಾ! ದಿಲ್ಲಿ ಹುಡುಗೀರು ರಾತ್ರಿಯೂ ಬಿಡುವಿಲ್ಲದೆ ಇಷ್ಟೊಂದು ಸುತ್ತಾಡ್ತಾರೆ ಅಂತ ನಾನು ತಿಳಿದಿರಲಿಲ್ಲ: ನೀನು ಹೋಟೆಲ್ಲಿನಲ್ಲಿ ಯಾವ ಹೊತ್ತಿನಲ್ಲೂ ಸಿಗ್ಲಿಲ್ಲ. ಭಿಕ್ಷುಕಿ ಹಾಗೆ ಬಂದು ಕಾಣಸ್ದೆ. ಆಮೇಲೆ ಎರಡು ಸಾರಿ ಎಚ್ಚರಿಕೆ ಕೊಡೋಣಾಂತ ಬಂದೆ. ಸಾಧ್ಯವೇ ಆಗ್ಲಿಲ್ಲ. ಏನಾದರೂ ಒಂದು ಅಡಚಣೆ. ಆ ಇಬ್ಬರಲ್ಲಿ ಯಾರಾದ್ರೂ ಒಬ್ಬರು ನಿನ್ನ ಜೊತೇಲಿ ಇರ್ತಿದ್ರು..."

ಅರ್ಚನಾ ಮಂತ್ರ ಮುಗ್ಧಳಂತೆ ಅವಳ ಸವಿಯಾದ ಮಾತು ಕೇಳಿದಳು. ನಸು ಚುಕ್ಕೆ, ಎಳೆ ರೇಖೆಯೂ ಇಲ್ಲದೆ ಕಾಣುತ್ತಿತ್ತು. ನರ್ತಕಿಯ ಸುಂದರ, ನುಣುಪು ಮುಖ.

"ನನಗೆ ಎಚ್ಚರಿಕೆ?... ಯಾರಿಂದ?"

ಅವಳಲ್ಲಿ ಆಸಕ್ತಳಾದವಳು ಆತಂಕ ತೋರದೆ ಕೇಳಿದಳು.

ಕಾಮಿನಿ ರತ್ನೆ ಉತ್ತರಿಸುವ ಬದಲು ಅವಳ ಕುತ್ತಿಗೆಯ ಮೇಲೆ ಕಣ್ಣಾಡಿಸಿದಳು.

"ಎಲ್ಲಿ ಆ ವಜ್ರದ ಕೊಂಬಿನ ನೆಕ್‌ಲೇಸ್?"

"ಹೋಟೇಲು ಕೋಣೆಯಲ್ಲಿದೆ... ನಮ್ಮಣ್ಣ ಅದನ್ನ ನಿನಗೆ ಕಾಣಿಕೆ ಕೊಡಬೇಕೂಂತ ಇದ್ದಿರಬೇಕು"

ನರ್ತಕಿ ನೊಂದವಳಂತೆ ಕಣ್ಣು ಮುಚ್ಚಿ ತೀವ್ರವಾಗಿ ಉಸಿರು ಹಾಕಿದಳು.

"ವಜ್ರದ ಕೊಂಬು ನನ್ನ ಸ್ವತ್ತು. ನನಗೆ ಒಪ್ಪಿಸಿ ಬಿಡು"

ಅವಳಲ್ಲಿ ಆಸಕ್ತಿ ನಶಿಸಿ ಮೈ ಕಾವು ಏರಿತು.

"ನಮ್ಮಣ್ಣನ್ನ ನಾನು ಚೆನ್ನಾಗಿ ಬಲ್ಲೆ. ಅವನಿಗೆ ಪ್ರಣಯ, ಪ್ರೇಮ, ಒಂದೂ ಗೊತ್ತಿರಲಿಲ್ಲ. ದಿನಕ್ಕೆ ಹನ್ನೆರಡು ತಾಸು ದುಡೀತಾ ಇದ್ದ ಅಧಿಕಾರಿ. ನೀನು ಮೋಡಿ ಹಾಕಿ ಅವನ್ನ ಬಲೆಗೆ ಸೇರಿಸ್ದೆ... ಆಮೇಲೆ ವಂಚನೆ ಮಾಡಿದೀಯ. ಅವನು ಭಗ್ನ ಪ್ರೇಮಿ ಆಗಿದಾನೆ. ನೀನು ಅವನ ಆತ್ಮಹತ್ಯೆಗೆ ಕಾರಣ ಆದೋಳು!... ರೂಪ ರಾಕ್ಷಸಿ!"

ಆವರಣ ಮರೆತು ತುಸು ಗಟ್ಟಿಯಾಗಿ ಒದರಿದಳು.

"ಯಾಕೆ ಕೂಗ್ತೀಯಾ? ಇದು ಡೆಲ್ಲಿಯ ಹಾಗೆ ಸತ್ತ ನಗರ ಅಲ್ಲ... ಸದಾ ಕುದಿತದಲ್ಲಿರೊ ಸಣ್ಣ ಪ್ರಪಂಚ... ದೀಪಕನ ಆತ್ಮಹತ್ಯೆಗೆ ನಾನು ಕಾರಣ ಅಲ್ಲ... ಆದದ್ದೇ ಬೇರೆ..."

ಅವಳ ಮಾತು ತಟಕ್ಕನೆ ನಿಂತಿತು. ನೀಳ ಶರೀರ ಹಿಂದಕ್ಕೆ ಸರಿದು, ದೃಷ್ಟಿ ಅರ್ಚನಾಳ ಬೆನ್ನು ದಿಕ್ಕಿಗೆ ಬಾಣದಂತೆ ತೂರಿತು.

"ಮೋಪ್ಲ...!"

ಹಿಸುಕಿದ ಕುತ್ತಿಗೆಯಿಂದ ಹೊರಡುವ ಕ್ಷೀಣ ಚೀತ್ಕಾರದಂತೆ ಸ್ವರ ಬಂತು. ಯುವತಿ ಹಾವಿನಂತೆ ಸರಿದು ಹೋದಳು.

ಅರ್ಚನಾ ಏನೊಂದೂ ಅರ್ಥವಾಗದೆ ಹಿಂದಕ್ಕೆ ನೋಡಿದಳು. ಪೊದೆಯ ಪಕ್ಕದಲ್ಲಿ ಪದೇ ಪದೆ ಹಿಂದಕ್ಕೆ ನೋಡುತ್ತಾ ಸಿಡುಬಿನ ಕಲೆ ಮುಖದವನು ನಿಂತಿದ್ದ! ದುಃಸ್ವಪ್ನದಂತೆ ಕಾಡಿದವನು!

"ಮೋಪ್ಲ!" ಅವನ ಹೆಸರು ಎರಡು ಸಾರಿ ತನ್ನಲ್ಲೇ ಹೇಳಿಕೊಂಡಳು.

ಎರಡು ಕ್ಷಣ ಅವನನ್ನು ನಿರುಕಿಸಿದ ಅರ್ಚನಾ ಯುವತಿಯನ್ನು ನೆನೆಸಿಕೊಂಡು ಓಡಿದಳು. ರಸ್ತೆ ತಲುಪುವುದರಲ್ಲಿ ಕಾಲ ಮಿಂಚಿತ್ತು. ಮೆದು ಚಲನೆಯಲ್ಲಿದ್ದ ಕೆಂಪು ಕಾರಿಗೆ ತೂರಿ ಕುಳಿತಳು ಕಾಮಿನಿ ರತ್ನೆ. ವಾಹನಗಳ ಸರಿದಾಟ, ಜನ ಸಂದಣಿಯಲ್ಲಿ ಆ ಕಾರು ಮಾಯವಾಯಿತು.

ಬೆಳಕಿನ ಹಾದಿಗೆ ಬಂದಿದ್ದ ಪ್ರಕರಣ ಮತ್ತೆ ಕತ್ತಲಿಗೆ ಸರಿದಿತ್ತು.

ಅರ್ಚನಾ ಅತೀವ ನಿರಾಶೆಯಲ್ಲಿ ಹಿಂದಕ್ಕೆ ತಿರುಗಿದಳು.

ಪಾರ್ಕಿನ ಪ್ರವೇಶದಲ್ಲಿ ನಿಂತ ಮೋಪ್ಲ!

ಚೀರುವಂತೆ ಮುಖ ಕೆಡಿಸಿ ಬಾಯಿಗೆ ಕೈ ಹಚ್ಚಿದಳು. ಅವನು ಎರಡು ಕೈ ಎತ್ತಿ ಧೈರ್ಯ ನೀಡಿದ.

"ಮೇಡಾಂ. ಕೂಗ್ಬೇಡಿ!... ನನ್ನಿಂದ ತೊಂದರೆ ಇಲ್ಲ. ಓಡಿ ಹೋದ ಆ ಹೆಂಗಸು ಖತರ್‌ನಾಕ್!"

ಅರ್ಚನಾ ಎರಡು ಸಾರಿ ನೀಳವಾಗಿ ಉಸಿರೆಳೆದುಕೊಂಡು ಶಕ್ತಿ ಗೂಡಿಸಿಕೊಂಡಳು.

"ಅವಳು ಖತರ್‌ನಾಕ್ ಅಂತ ಗೊತ್ತಾಯ್ತು. ನೀನು ಅಪಾಯಕಾರಿ ಅಲ್ಲಾಂತ ಹೇಗೆ ನಂಬೋದು?"

ಆಯಾಸದಲ್ಲೇ ಗಡಸಾಗಿ ಕೇಳಿದಳು.

"ನನ್ನ ಈ ಕೆಟ್ಟ ಮುಖ ನೋಡಿದ್ರೆ ಯಾರಿಗೂ ಅದೇ ಭಾವನೆ ಬರೋದು. ಅದು ನನ್ನ ದುರಾದೃಷ್ಟ."

ಸಿಡುಬಿನ ಮುಖ ಅರ್ಧ ಮುಚ್ಚುವಂತೆ ಕರವಸ್ತ್ರ ಹರಡಿಕೊಂಡ ಪೋಪ್ಲ.

"ನನ್ನಿಂದ ಏನಾಗ್ಬೇಕು? ನನ್ನ ಹಿಂಬಾಲಿಸ್ತಾ ಇರೋದು ಯಾಕೆ?" ಅಧಿಕಾರಯುತವಾಗಿ ಕೇಳುವಷ್ಟು ಕೆಚ್ಚು ಮೈಗೂಡಿತ್ತು.

"ಆ ಹೆಂಗಸಿನ ಹಾಗೆ ನಾನೂ ನಿಮ್ಮನ್ನ ಭೇಟಿ ಆಗೋದಿಕ್ಕೆ ಒಂದೇ ಸಮ ಕಾಯ್ತಾ ಇದೀನಿ. ನೀವು ನನಗೆ ಹೆದರಿ ಹೋಗ್ತಾ ಇದೀರಿ. ಈಗ ನೀವು ಮಾತಾಡೋದಿಕ್ಕೆ ಅವಕಾಶ ಕೊಡದೆ ಇದ್ರೆ ಬಹುಶಃ ಇನ್ನು ಭೇಟಿ ಸಾಧ್ಯವೇ ಇಲ್ಲಾಂತ ತೋರುತ್ತೆ... ನಿಮಗೆ ಅಪಾಯ ಕಾದಿದೆ ಅಂತ ತಿಳಿಸೋದಿಕ್ಕೆ, ನಿಮ್ಮಣ್ಣನ ವಿಷಯದಲ್ಲಿ ನನಗೆ ತಿಳಿದಿರೊ ಸಂಗತಿ ಹೇಳೋದಿಕ್ಕೆ ಒಪ್ಪಿಗೆ ಕೊಡ್ತೀರಾ?... ನನ್ನಲ್ಲಿ ವಿಶ್ವಾಸ ಇಡಿ"

"ನಮ್ಮಣ್ಣ?... ನಿನಗೆ ಅದೆಲ್ಲಾ ಹೇಗೆ ಗೊತ್ತು?"

"ಅವೆಲ್ಲಾ ಹೇಳೋದಿಕ್ಕೆ ಇಷ್ಟು ಸಾಹಸ ಪಟ್ಟಿದ್ದು"

ಮುಖದಿಂದ ಕರವಸ್ತ್ರ ಸರಿಸಿ ಬಿಳುಪು ಕೂದಲು ಸವರಿಕೊಂಡ ಪೋಪ್ಲ. ಅವಳಿಗೆ ಭೀತಿ, ಸಂಶಯ ದೂರವಾಗಿ ಕುತೂಹಲ ಕೆರಳುತ್ತಿತ್ತು. ದೀಪಕನ ವಿವರ ತಿಳಿಯುವ ಅವಕಾಶ ಅನಿರೀಕ್ಷಿತವಾಗಿ, ಅದಾಗಿ ಬಂದಿತ್ತು. ಪೋಪ್ಲನ ಮಾತು ಬೇಕಿತ್ತು.

ಸುತ್ತಲೂ ನೋಡಿದಳು.

"ಈ ಜನದ ದೊಂಬಿಯಿಂದ ದೂರ ಹೋಗ್ಬೇಕು... ಬೋರಿವಿಲಿಗೆ ಹೋದರೆ ಹೇಗೆ?"

ಅವನು ಕೇಳಿಕೆಗೆ ಎದುರು ಹೇಳಲಿಲ್ಲ. ಮುಂದಕ್ಕೆ ನಡೆದು ಬರುವಂತೆ ಅವಳಿಗೆ ವಿನಯವಾಗಿ ಕೈ ತೋರಿದ.

"ನೀವು ಬೋರಿವಿಲಿ ಅಂದಿದ್ದು ಉದ್ದೇಶಪೂರ್ವಕವೋ, ಅಥವಾ ಆಕಸ್ಮಿಕವೋ ಹೇಳಲಾರೆ. ನಾನೂ ಅಲ್ಲಿಗೇ ಹೋಗೋಣಾಂತ ಹೇಳೋದ್ರಲ್ಲಿದ್ದೆ... ನಿಮ್ಮಣ್ಣನ್ನ ನಾನು ಕಂಡಿದ್ದು ಬೋರಿವಿಲಿಯಲ್ಲಿ. ಕನ್ಹೇರಿ ಗುಹೆಗಳಿಗೆ ಅವರನ್ನು ಕರೆದೊಯಿದ್ದು ನನ್ನ ವಾಹನದಲ್ಲಿ."

ಅವಳು ನಿಂತಳು. ಗಾಳಿಗೆ ಹಣೆಯ ಮೇಲೆ ಸರಿದಾಡಿದ ಮುಂಗುರುಳು ತಿದ್ದಿಕೊಂಡಳು.

"ನಿನಗೆ ಕಾರು ಇದೆಯೆ?"

ಅವನ ಸಾಮಾನ್ಯ ಉಡುಪಿನ ಮೇಲೆ ಶಂಕೆಯ ಕಣ್ಣು ಹರಿಸಿದಳು.

"ನಾನು ಟ್ಯಾಕ್ಸಿ ಡ್ರೈವರ್..."

ಎಂದು ಅವಳ ಸಂಶಯ ನಿರ್ಮೂಲವಾಗುವಂತೆ ವಿಕಾರ ಮುಖದಲ್ಲಿ ಒಣ ನಗೆ ಹರಡಿಕೊಂಡ. ಅರ್ಚನಾ ಹಸನ್ಮುಖದಲ್ಲಿ ಮತ್ತೊಮ್ಮೆ ಸಮಾಧಾನದ ಉಸಿರು ಎಳೆದುಕೊಂಡಳು,

• • •

ಬೋರಿವಿಲಿ ರೈಲು ನಿಲ್ದಾಣದ ಹಿಂದೆ ಮೂರು ನಿಮಿಷಗಳ ನಡೆ ದೂರದಲ್ಲಿದ್ದ ಸಾಮಾನ್ಯ ದರ್ಜೆಯ 'ಬೋರಿವಿಲಿ ಲಾಡ್ಜ್' ಮುಂದೆ ಟ್ಯಾಕ್ಸಿ ನಿಂತಿತು. ಪೋಪ್ಲ ಅವಳಿಗೆ ಕುಳಿತಲ್ಲಿಂದಲೇ ತೋರಿದ.

"ದೀಪಕ ಪಾವನ್ ಅದೇ ಹೋಟೇಲಿನಲ್ಲಿ ಇಳಕೊಂಡಿದ್ದು. ಅವರ ಜೊತೇಲಿ ಇನ್ನೊಬ್ಬ ವಯಸ್ಸಾದೋರು ಇದ್ರು... ನುಣ್ಣನೆಯ ತಲೆ"

"ಪ್ರೊಫೆಸರ್ ಮಲ್ಹೋತ್ರ...?" ಆತುರದಿಂದ ಕೇಳಿದಳು.

"ಹೆಸರು ಗೊತ್ತಿಲ್ಲ... ಕನ್ಹೇರಿ ಗುಹೆಗಳಿಗೆ ಭಾನುವಾರ ಮಾತ್ರ ಸರ್ಕಾರಿ ಬಸ್ ಇದೆ. ಬಾಕಿ ದಿನ ಟ್ಯಾಕ್ಸಿಯಲ್ಲೇ ಹೋಗ್ಬೇಕು. ನನಗೆ ಚೆನ್ನಾಗಿ ನೆನಪಿದೆ. ಅವತ್ತು ಗುರುವಾರ. ಪ್ರವಾಸಿಗರು ಒಬ್ಬರೂ ಇರಲಿಲ್ಲ. ಅವರಿಬ್ಬರೂ ನನ್ನ ಟ್ಯಾಕ್ಸಿ ಗೊತ್ತು ಮಾಡಿಕೊಂಡ್ರು"

"ದೀಪಕನ ಜೊತೇಲಿ ಆ ಪ್ರೊಫೆಸರ್?"

"ಹೌದು, ಪ್ರೊಫೆಸರ್ ಕೈಲಿ ಒಂದು ನೋಟುಬುಕ್ ಇತ್ತು. ದೀಪಕ್ ಒಯ್ದಿದ್ದು ಒಂದು ಬ್ರೀಫ್‌ಕೇಸ್, ಪೇಪರ್ ಸುತ್ತಿದ ಒಂದು ದೊಡ್ಡ ರಟ್ಟು"



"ಅವು ಚಿತ್ರ ಬರೆಯೋ ಕ್ಯಾನ್ವಾಸ್, ವಸ್ತುಗಳು"

ಟ್ಯಾಕ್ಸಿ ಪೂರ್ವದಿಕ್ಕಿಗೆ ಚಲಿಸಿತು. ವಿಶಾಲ ಬೇಲಿಯ ಹೆಬ್ಬಾಗಿಲು ದಾಟಿ ಸಣ್ಣ ಮನೆಯ ಮುಂದೆ ನಿಂತಿತು. ಪೋಪ್ಲ ಇಳಿದು ಹೋಗಿ ಎರಡು ನಿಮಿಷಗಳಲ್ಲಿ ಹಿಂತಿರುಗಿದ.

"ಅದು ಗೇಟ್ ಮನೆ. ಇಲ್ಲಿಗೆ ಬಂದು ಹೋಗೋ ವಾಹನಕ್ಕೆ ಎರಡು ರೂಪಾಯಿ ಪ್ರವೇಶ ಧನ ತೊಗೊಳ್ತಾರೆ. ವಾಹನದ ನಂಬರು ಗುರುತು ಹಾಕಿ ಕೊಳ್ತಾರೆ....ಅವತ್ತು ನಾನು ಬೇರೆ ಟ್ಯಾಕ್ಸಿ ತಂದಿದ್ದೆ. ಅದರ ನಂಬರು ಅಲ್ಲಿ ದಾಖಲೆ ಆಗಿದೆ. ವಾಪಸ್ ಬರೋವಾಗ ಅವತ್ತಿನ ತಾರೀಖು ಗುರುತು ಹಾಕ್ಕೊಳ್ಳಿ. ಟ್ಯಾಕ್ಸಿ ನಂಬರು ನಾನು ಹೇಳ್ತೀನಿ."

ಅವನು ಹಾಗೆ ಹೇಳಿದುದೇಕೆಂಬುದು ಅರ್ಥವಾಗಲಿಲ್ಲ. ತನಿಖೆಯ ಉತ್ಸಾಹ ಅವಳಲ್ಲಿ ಏರಿತು. ಏನೂ ಹೇಳದೆ ಕುಳಿತಳು.

ನ್ಯಾಷನಲ್ ಪಾರ್ಕಿನ ಮರಗಳ ಗುಂಪಿನ ಮಧ್ಯೆ ಸಿಮೆಂಟ್ ಹಾದಿಯಲ್ಲಿ ವಾಹನ ಗುಡ್ಡ ಏರಿತು. ಪೋಪ್ಲ ಹೇಳುತ್ತಿದ್ದ.

"ಅವರಿಬ್ಬರೂ ಬಹಳ ಮಾತಾಡ್ತಾ ಇದ್ರು. ನಾನು ಸುಮ್ಮನೆ ಡ್ರೈವ್ ಮಾಡ್ತಿದ್ದೆ. ದೀಪಕ ಯಾವುದೂ ಹೆಂಗಸಿನ ವಿಷಯ ಹೇಳ್ತಿದ್ರು. ಜೇಬಿನಿಂದ ಭಾರಿ ಬೆಲೆಯ ಒಂದು ಸರ ತೆಗೆದು ಪ್ರೊಫೆಸರ್‌ಗೆ ತೋರಿಸಿದ್ರು...ಹೊಳಪಾದ ನೀಲಿ ವಜ್ರದ ಸರ. ನನ್ನ ಮುಂದಿನ ಕನ್ನಡಿಯಲ್ಲಿ ಅದು ಚೆನ್ನಾಗಿ ಕಾಣಿಸ್ತು."

"ವಜ್ರದ ಕೊಂಬಿನ ನೆಕ್‌ಲೇಸ್ ಅದು"

"ಇರಬೇಕು...ಗುಡ್ಡದ ಮೇಲು ಭಾಗದಲ್ಲಿ ಅವತ್ತು ಒಬ್ಬನೇ ಒಬ್ಬ ಸರ್ಕಾರಿ ನೌಕರ ಇದ್ದದ್ದು...ಅವರಿಬ್ಬರೂ ಗುಹೆಗಳ ಕಡೆಗೆ ಹೋದ್ರು...ಪ್ರೊಫೆಸರ್ ಎರಡು ನಿಮಿಷದಲ್ಲಿ ಹಿಂದಕ್ಕೆ ಬಂದ್ರು...ಆಗ ಮೇಲಿನ ಕಾಟೇಜ್‌ನಿಂದ ಒಬ್ಬ ಹೆಂಗಸು, ಒಬ್ಬ ಗಂಡಸು ಇಳಿದು ಬಂದು ಪ್ರೊಫೆಸರ್ ಜೊತೆ ಮಾತಾಡಿದ್ರು...ಆ ಹೆಂಗಸೇ ರುಸ್ತುಮ್ ಬಾಗ್‌ನಲ್ಲಿ ಬೆಳಗ್ಗೆ ನನ್ನ ನೋಡಿ ಓಡಿ ಹೋದೋಳು."

"ಕಾಮಿನಿ ರತ್ನ!...ಆ ಗಂಡಸು ಯಾರು?"

ಅತೀವ ತವಕದಲ್ಲಿ ಅವನ ಭುಜ ಒತ್ತಿದಳು. ಪೋಪ್ಲ ವಾಹನದ ವೇಗ ಇಳಿಸಿದ. ಟ್ಯಾಕ್ಸಿ ಗುಡ್ಡದ ಮೇಲು ಭಾಗ ತಲುಪಿತು.

ತೆರೆದ ಭಾಗದಲ್ಲಿ ವಾಹನ ನಿಲ್ಲಿಸಿ ಬಿಳಿ ತಲೆಯಲ್ಲಿ ಕೈ ಆಡಿಸಿ ಪೋಪ್ಲ ಕಾತರಿಸಿದವಳಿಗೆ ಮರು ನುಡಿದ.

"ಆ ಗಂಡಸಿನ ಹೆಸರು ಗೊತ್ತಿಲ್ಲ. ನೋಡಿದರೆ ಗುರುತು ಹಿಡಿತೀನಿ. ಮಿಂಚಿನ ಹಾಗೆ ಸುಳಿದು ಹೋಗ್ತಾನೆ. ಪ್ಲೇನ್‌ನಲ್ಲಿ ಸುತ್ತಾಡೋ ರಹಸ್ಯದ ಮನುಷ್ಯ. ...ನಿಮಗೆ ಅವನ ಪರಿಚಯ ಇದೆ, ಮೆಡಾಂ..." ತುದಿಗಣ್ಣಲ್ಲಿ ಅವಳನ್ನು ನೋಡಿದ.

"ನನಗೆ ಪರಿಚಯ ?"

ಅನಿಶ್ಚಿತ ಸ್ಥಿತಿಯ ಪರಮಾವಧಿಯಲ್ಲಿ ಕೈ ಹಿಸುಕಿಕೊಂಡಳು.

ಲಕ್ಷಣವಾದ ಯುವಕ... ಸಯಾನ್‌ನಲ್ಲಿ ಅವನದೊಂದು ಮನೆ ಇದೆ... ಆ ಮನೆಯ ಕಾಕ್‌ಟೈಲ್ ಪಾರ್ಟಿಗೆ ನೀವು ಹೋಗಿದ್ರಿ..."

ತವಕ, ಕುತೂಹಲಗಳ ಸಂಗ್ರಹ ಕೋಶ ಸಿಡಿದು ಹೋಯಿತು, ಅರ್ಚನಾ ತಲ್ಲಣಿಸಿದಳು...ನವೀನ ದಾಮ್ಲೆ !

ತಲೆಯಲ್ಲಿ ನಕ್ಷತ್ರಗಳು ಸಿಡಿದೇಳುತ್ತಿದ್ದವು.

ಮಲ್ಹೋತ್ರ...ಕಾಮಿನಿರತ್ನ...ನವೀನ.

"ಆ ಮೇಲೆ ?" ಪ್ರಶ್ನೆಯ ಸ್ವರ ಕ್ಷೀಣಿಸಿತು.

"ಆ ಹೆಂಗಸು ಕೈ ಚೀಲದಿಂದ ಕಪ್ಪು ವಸ್ತು ತೆಗೆದು ತೋರಿದಳು. ಬಹುಶಃ ಅದು ರಿವಾಲ್ವರ್ ಅಂತ ತಿಳಿತೀನಿ... ಮೂವರೂ ಗುಹೆಗಳ ಕಡೆ ಹೋಗಿ ದೀಪಕನ್ನ ಸೇರಿದ್ರು..."

"ಆಮೇಲೆ ?...ಆ ಮೇಲೆ ?"

ಮುಳ್ಳಿನ ಮೇಲೆ ನಿಂತವಳಂತೆ ನೆಮ್ಮದಿಗೆಟ್ಟು ಕೇಳಿದಳು.

"ಆಮೇಲೆ ಹೇಳ್ತೀನಿ...ಅಲ್ಲಿ ನೌಕರ ಸಿಂತಿದಾನೆ"

ಪ್ರವಾಸಿಗರಿಲ್ಲದ ಆ ದಿನವೂ ಉಸ್ತುವಾರಿಯ ಒಬ್ಬನೇ ಮನುಷ್ಯ ಅಲ್ಲಿ ನಿಂತಿದ್ದ. ಕುತೂಹಲ ಘಟ್ಟದಲ್ಲಿ ಮಾತು ನಿಲ್ಲಿಸಿದ ಪೋಪ್ಲ ಬೀಡಿಹಚ್ಚಿ ಹೇಳಿದ.

"ನೀವು ಕನ್ಹೇರಿ ನೋಡಿ ಬನ್ನಿ, ಮೆಡಾಂ. ಅರ್ಧ ಗಂಟೆ ಸಾಕು. ಗೈಡ್ ಬೇಕಿಲ್ಲ. ಗುಹೆಗಳ ಮೇಲೆ ನಂಬರ್ ಇದೆ.

ಅರ್ಚನಾ ಕೀಲುಗೊಂಬೆಯಂತೆ ಹಜ್ಜೆ ಹಾಕಿದಳು. ನೂರಾರು ವಿಹಂಗಮಗಳ ಸಾಮೂಹಿಕ ಕರ್ಕಶ ಸದ್ದು ಒಮ್ಮೆಗೇ ಕೇಳಿದಂತಾಗಿ ಬೆಚ್ಚಿ ನಿಂತಳು. ಪ್ರವೇಶಿಸಲು ಅಸಾಧ್ಯವೆನಿಸಿತ್ತು. ಮೊದಲನೆಯ ವಿಶಾಲ, ಕತ್ತಲು ಗುಹೆ. ಅಪೂರ್ಣವಾಗಿ ಕಡೆದ ಗುಹೆಯ ಒಳ ಸೇರಿದ ಸಹಸ್ರಾರು ಬಾವಲಿ, ಕಪಟಗಳ ಭೀಷಣ ಶಬ್ದ ಕಠೋರವಾಗಿ ಕೇಳುತ್ತಿತ್ತು. ಹೊರಕ್ಕೆ ತಳ್ಳುವಂತೆ ಮೂಗು ಅಡರುತ್ತಿತ್ತು, ಅಸಹ್ಯ ದುರ್ವಾಸನೆ.

ಬೃಹತ್ ಕಂಬಗಳ ಬುದ್ಧನ ಸ್ತೂಪಗಳ ಎರಡು ಗುಹೆಗಳ ಹೊರತಾಗಿ ಉಳಿದೆಲ್ಲವೂ ನಿಸ್ಸಾರ ಶಿಲ್ಪಗಳು. ಅಜಂತಾ, ಎಲ್ಲೋರಾ ಗುಹೆಗಳನ್ನು ನೋಡಿದವಳಿಗೆ ಅವೆಲ್ಲವೂ ಅತಿ ಸಾಧಾರಣ, ಸತ್ವ ಹೀನ ಶಿಲಾ ರಚನೆ. ನೂರ ಒಂಬತ್ತು ಗುಹೆಗಳಲ್ಲಿ ಬಹುತೇಕ ಅಪೂರ್ಣ.

ನಿರ್ಜನ, ಹಾಳು ಸುರಿಯುವ ಶಿಲೆಯ ಗೂಡುಗಳ ಸಮುದಾಯದಲ್ಲಿ ನಿಧಾನವಾಗಿ ಸಾಗುತ್ತಿದ್ದಂತೆ ಕಲ್ಪನೆಯ ಕಣ್ಣು ಆ ತಾಣ ಅರಸುತ್ತಿತ್ತು....ದೀಪಕ ಮರಣಿಸಿದ ತಾಣ ಎಲ್ಲಿ ?

ಮರೆಯಾದ ಬಂಡೆ ಗೋಡೆಗಳ ಮಧ್ಯೆ ದಿಣ್ಣೆ ಏರಿದಳು. ತಗ್ಗಿಗೆ ಇಳಿದಳು. ಮಧ್ಯೆ ಇಕ್ಕಟ್ಟಾದ ಹಾದಿ. ಅಡಿಯಲ್ಲಿ ಹೆಸರಿಲ್ಲದ ಮರಗಳ ಸಣ್ಣ ಕಾಡು... ಮೃತನ ಸುಳಿವೂ ಅಲ್ಲಿ ದೊರೆಯಲಾರದು.

ಅರ್ಚನಾ ಹಿಂತಿರುಗಿದಳು. ಅವಳಿಗೆ ಪೋಪ್ಲನ ಮುಂದಿನ ಹೇಳಿಕೆ ಬೇಕಿತ್ತು.

ಕನ್ಹೇರಿಯಿಂದ ವಾಹನ ಇಳಿತದಲ್ಲಿ ಸಾಗಿದಾಗ ಅವಳ ತಲೆಯಲ್ಲಿ ಸಾಲು ಚಿತ್ರ ನಿಂತಿತು.

ಕಾಮಿನಿ ರತ್ನೆ...ಮಲ್ಹೋತ್ರ...ನವೀನ....

ಆ ಮೂವರು ಧೂರ್ತರಲ್ಲಿ ಯಾರಲ್ಲೊ ಅಡಗಿದ ತುಂಬಿದ ರಿವಾಲ್ವರ್ ! ಮೂವರಿಗೂ ಬೆನ್ನು ಹಾಕಿ ಕೃತ್ರಿಮ ಅರಿಯದೆ ಮುಂದೆ ನಡೆದ ದೀಪಕ ಪಾವನ್ !

ಪೋಪ್ಲ ಹೇಳುತ್ತಿದ್ದ.

"ಬಹುಶಃ ಆ ಮೂವರಲ್ಲಿ ಯಾರಿಗೂ ಗುಹೆಗಳ ಮೇಲೆ ಆಸಕ್ತಿ ಇರಲಿಲ್ಲ. ಸುಮಾರು ಒಂದು ತಾಸು ಕಳೆದ ಮೇಲೆ ಅದೇ ಮೂವರು ಮಾತ್ರ ಹಿಂದಕ್ಕೆ ಬಂದರು...ದೀಪಕ ಬರಲಿಲ್ಲ! ಆ ಹೆಂಗಸು, ಗಂಡಸು ಕಾಟೇಜ್‌ಗೆ ಹಿಂದಿರುಗಿ ಹೋದ್ರು. ನುಣ್ಣನೆ ತಲೆಯ ಪ್ರೊಫೆಸರ್ ಮಾತ್ರ ಟ್ಯಾಕ್ಸಿಗೆ ಬಂದ್ರು. ಇನ್ನೊಬ್ಬರು ಎಲ್ಲಿ ಅಂತ ನಾನು ಕೇಳ್ಳಿಲ್ಲ...ನಾಲ್ಕು ದಿನ ಆದ ಮೇಲೆ ಪೇಪರ್‌ನಲ್ಲಿ ಸುದ್ದಿ ನೋಡ್ದೆ. ಕನ್ಹೇರಿ ಗುಹೆಗಳ ತಳದ ಜಂಗಲ್‌ನಲ್ಲಿ ದೀಪಕ ಪಾವನ್ ರಿವಾಲ್ವರ್‌ನಿಂದ ಆತ್ಮಹತ್ಯೆ ಮಾಡಿಕೊಂಡರು. ಅಂತ...ಅದು ಆತ್ಮಹತ್ಯೆ ಅಲ್ಲಾಂತ. ಬಲ್ಲೆ. ಆದರೆ ತುಟಿ ಬಿಚ್ಚೋ ಹಾಗಿಲ್ಲ. ಆ ಮೂವರೂ ಒಳ್ಳೆ ಶ್ರೀಮಂತರು ಅಂತ ತಿಳಿದೀನಿ. ಪೋಲೀಸ್‌ಗೆ ಏನಾದ್ರು ಹೇಳಿದ್ರೆ ನನ್ನ ಮೇಲೆ ತನಿಖೆ ಶುರು ಆಗುತ್ತೆ. ಆ ಮೂವರು ನನ್ನ ಮುಗಿಸಿ ಬಿಡ್ತಾರೆ...ನಾನು ಗರೀಬ, ಮೆಡಾಂ."

ಬಿಗಿ ಹಿಡಿದ ಉಸಿರು ಹೊರ ಹಾಕಿದಳು.

"ನಿನಗೆ ಇನ್ನೂ ಹೆಚ್ಚಿನ ವಿಷಯ ಗೊತ್ತಿದೆ, ಪೋಪ...ನನಗೆ ಹೇಳ್ತಾ ಇಲ್ಲ ನೀನು...ದೀಪಕ ನನ್ನ ಅಣ್ಣ ಅನ್ನೋದು ನಿನಗೆ ಯಾರು ಹೇಳಿದ್ದು, ಅದು ಹೇಳು..."

ಪೋಪ್ಲ ವಾಹನದ ವೇಗ ಹೆಚ್ಚಿಸಿದ. ಎರಡು ನಿಮಿಷಗಳ ಮೌನದ ನಂತರ ಉತ್ತರಿಸಿದ.

"ಅದೆಲ್ಲಾ ನಿಧಾನವಾಗಿ ಹೇಳಬೇಕು...ನೀವು ಹೇಳಿದ್ದು ಸರಿ...ನನಗೆ ಸ್ವಲ್ಪ ಹೆಚ್ಚಿನ ವಿಷಯ ಗೊತ್ತಿದೆ. ದೀಪಕ ಆತ್ಮಹತ್ಯೆ ಮಾಡ್ಕೊಳ್ಳೋ ಮನುಷ್ಯ ಆಗಿರಲಿಲ್ಲ...ಕ್ಷಮಿಸಿ, ಮೇಮ್ ಸಾಬ್. ನಾನು ಮುಂದೆ ಹೇಳೋದಿಕ್ಕೆ ಹೆದರ್ತೀನಿ. ನನಗೆ ನನಗೆ ರಕ್ಷಣೆ ಇಲ್ಲ. ಈಗ ಮೂರು ತಿಂಗಳು ಕಳೆದ ಮೇಲೆ ಪೋಲೀಸ್‌ಗೆ ತಿಳಿಸೋದು ನನಗೆ ಅಪಾಯ. ನಾನು ವಿಪರೀತ ಬಡವ. ನನ್ನ ಸ್ಥಿತಿ ಹೇಳಿ ನಿಮಗೆ ಬೇಸರ ತರೋದು ಬೇಡ."

"ನಾನು ಹಣ ಕೊಡ್ತೀನಿ. ಎಷ್ಟು ಬೇಕು ಅಂತ ಹೇಳು. ಇದನ್ನ ನಾನು ಪೋಲೀಸ್‌ಗೆ ತಿಳಿಸೋದಿಲ್ಲ. ನಾನು ಯಾರನ್ನೂ ಪ್ರಶ್ನೆ ಮಾಡೋದಿಲ್ಲ...ನನಗೆ ಬೇಕಾಗಿರೋದು ಒಂದೇ ಸಂಗತಿ. ಕನ್ಹೇರಿಯಲ್ಲಿ ದೀಪಕನಿಗೆ ಏನಾಯ್ತು ಅನ್ನೋ ನಿಜವಾದ ವಿವರ. ಈಗ ಹೇಳು. ಅದು ತಿಳಿಸೋದಿಕ್ಕೆ ನೀನು ಕೇಳೊ ಹಣ ಎಷ್ಟು?"

ಪೋಪ್ಲ ಕಸಿವಿಸಿಯಲ್ಲಿ ಪೆದ ಬಿಡಿಸಿದ.

"ಕೆಲವು ಸಾವಿರ...ಸಂಜೆಗೆ ನಿಮ್ಮ ಹೊಟೇಲಿಗೆ ನಾನೇ ಫೋನ್ ಮಾಡಿ ಬರ್ತೀನಿ. ನನಗೆ ಇನ್ನೂ ಭಯ ತಪ್ಪಿಲ್ಲ. ಪೋಲೀಸ್‌ಗೆ ಹೇಳಿ ನನ್ನ ಬಿಡಿಸಿ ಬಿಡ್ತೀರಿ ನೀವು."

ಅವನ ಭುಜ ಮುಟ್ಟಿ ಆಶ್ವಾಸನೆ ನೀಡಿದಳು.

"ನನ್ನ ಮಾತು ನಂಬು...ಹಣ ಕೊಡ್ತೀನಿ. ಯಾರಿಗೂ ಇದರ ಸೂಚನೆ ನಾನು ಕೊಡೋದಿಲ್ಲ. ಇವತ್ತು ಸಂಜೆ ನಿನ್ನ ಫೋನ್ ಕರೆಗೆ ಕಾದಿರ್ತೀನಿ....ಇದು ನಿನ್ನಲ್ಲಿರಲಿ".

ನೂರರ ಎರಡು ನೋಟು ನೀಡಿ, ಹೊಟೇಲಿನ ಫೋನ್ ನಂಬರು; ತನ್ನ ಕೋಣೆಯ ನಂಬರು ಬರೆದು ಕೊಟ್ಟಳು.

* *

ಅರ್ಚನಾ ಹೊಟೇಲು ಪೋರ್ಟರ್ ಕಡೆ ಮುಗುಳು ನಗೆ ಬೀರಿ ಡೆಸ್ಕ್ ಬಳಿಗೆ ಬಂದು ಕೇಳಿದಳು.

"ನನಗೆ ಯಾವುದಾದರೂ ಚೀಟಿ, ಸೂಚನೆ ಇದೆಯೆ?"

ಕ್ಲರ್ಕ್ ಹಿಂದಕ್ಕೆ ತಿರುಗಿ ಗೂಡಿನ ರಂಧ್ರಗಳಲ್ಲಿ ನೋಡಿ ತಲೆ ಆಡಿಸಿದ.

"ಚೀಟಿ ಯಾವುದೂ ಇಲ್ಲ....ಆದರೆ ಏನೊ ಇತ್ತು..." ಎಂದು ತಲೆಗೆ ಬೆರಳು ಬಡಿದು ಜ್ಞಾಪಿಸಿಕೊಂಡ.

"ಒಬ್ಬ ಹೆಂಗಸು ನಿಮ್ಮನ್ನ ಕೇಳಿಕೊಂಡು ಬಂದಿದ್ರು... ಸುಮಾರು ಒಂದು ಗಂಟೆ ಹಿಂದೆ. ಹೆಸರು ಹೇಳಲಿಲ್ಲ."

ಹುಬ್ಬೇರಿಸಿದಳು. ಅರ್ಚನಾ.

"ಒಂದು ಗಂಟೆ ಹಿಂದೆ ಇರಲಾರದು. ಬಹುಶಃ ನಿನ್ನೆ ಇರಬೇಕು... ನಾನು ಅವಳನ್ನು ಈ ಬೆಳಗ್ಗೆ ಭೇಟಿ ಮಾಡಿದ್ದೆ"

"ಚೆನ್ನಾಗಿ ನೆನಪಿದೆ ಮೆಡಾಂ. ಆ ಹೆಂಗಸು ಎರಡನೆ ಸಾರಿ ಇಲ್ಲಿ ಬಂದು ವಿಚಾರಿಸಿದ್ರು"

ಬೆಳಗ್ಗೆ ಕಾಣಸಿಕೊಂಡ ಕಾಮಿನಿ ರತ್ನೆ ಮತ್ತೆ ಬಂದಿದ್ದಾಳೆ.! ಅವಳಿಗೆ ಏನೋ ಹೇಳುವುದಿದೆ. ಬೆಳಗೆ ಅದನ್ನು ಹೇಳಲಾಗಲಿಲ್ಲ...ಅವಳಿಗೆ ತನ್ನಲ್ಲಿರುವ ವಜ್ರದ ಕೊಂಬು ಬೇಕಾಗಿದೆ !

ಕೋಣೆ ಸೇರಿದ ಐದು ನಿಮಿಷಗಳಲ್ಲಿ ಫೋನ್ ಸದ್ದು ಮಾಡಿತು. ಅವಳಿಗೆ ಬೇಸರ. ತಾನು ಕೋಣೆ ಸೇರುವುದನ್ನೇ ಕಾದಿರುವುದರಿಂದ ಕರೆ.

ಫೋನ್ ಎತ್ತಿದಳು. ನಿಧಾನವಾಗಿ ಪರಿಚಯಕ್ಕೆ ನವೀಕರಣ ಕೊಟ್ಟ ಧ್ವನಿ.

"ಹಲೋ ನಾನು ಮಲ್ಹೋತ್ರ. ಯಾರಿಗೂ ಸಾಮಾನ್ಯವಾಗಿ ರಿಂಗ್ ಮಾಡೋದಿಲ್ಲ ನಾನು. ಈಗ ಕರೆದ ಕಾರಣ ಇಷ್ಟೆ. ನಿಮ್ಮಣ್ಣನ ವಿಷಯದಲ್ಲಿ ನಾನು ಆ ದಿನ ಎಷ್ಟು ಹೇಳಿದೆನೋ ಅಷ್ಟೇ ನನಗೆ ಗೊತ್ತಿರೋದು. ಅವೆಲ್ಲಾ ನಾನು ಹೇಳ್ದೆ ಅಂತ ಯಾರಿಗೂ ತಿಳಿಸಬೇಡಿ."



ಮಲ್ಹೋತ್ರ! ದೀಪಕನ ವಿವರಣೆಗೆ ಬೆಳಕು ಹಾಕಿದ ಪ್ರಥಮ ವ್ಯಕ್ತಿ. ದೀಪಕ ನೊಂದಿಗೆ ಕನ್ಹೇರಿ ಗುಹೆಗಳಿಗೆ ಹೊರಟವನು. ಅವನ ಮರಣಕ್ಕೆ ಮೊದಲು ಓಂದೆಸಿ ನಡೆದವನು !

"ಯಾಕೆ ಈ ಮಾತು ಹೇಳ್ತಿರೋದು?"

ಒರಟಾಗಿ ಕೇಳಿದಳು.

"ನವೀನ ದಾವ್ಲೆ ಹಾಗಂತ ಸೂಚನೆ ಕೊಟ್ರು"

"ನವೀನ ಸಿಟಿಯಲ್ಲಿಲ್ಲ"

ವಕೀಲಳಂತೆ ಮಾತು ಒಗೆದಳು.

"ಅವರು ಹೋಗೋದಿಕ್ಕೆ ಮೊದಲು ತಿಳಿಸಿದ್ದು...ನೀವು ಸ್ವಲ್ಪ ಎಚ್ಚರಿಕೆಯಲ್ಲಿರಬೇಕು, ಮಿಸ್."

"ಎಚ್ಚರಿಸ್ತಾ ಇರೊ ನಿಮ್ಮಲ್ಲಿ ನನಗೆ ವಿಶ್ವಾಸ ಇಲ್ಲ"

"ಹಾಂ!"

"ತಬ್ಬಿಬ್ಬಾಗಬೇಡಿ, ಮಿಸ್ಟರ್ ಮಲ್ಹೋತ್ರ. ನಾನು ತುಂಬಾ ಸೀರಿಯಸ್ ಆಗಿ ಹೇಳ್ತಿದೀನಿ. ನೀವು ಕಾಕ್‌ಟೈಲ್ ಪಾರ್ಟಿಯಲ್ಲಿ ದೀಪಕನ ವಿಷಯ ಹೇಳಿದ್ರಲ್ಲ ನಿಮ್ಮಿಬ್ಬರ ಉದ್ದೇಶ ಏನೋ ಇದೆ. ಇಲ್ಲವಾದ್ರೆ ನೀವು ಹೇಳ್ತಲೇ ಇರ್ಲಿಲ್ಲ."

"ನಮ್ಮಿಬ್ಬರ ಉದ್ದೇಶ? ಯಾವ ಇಬ್ಬರು?"

ಗಾಬರಿಗೊಂಡು ಕೇಳಿದ ಪ್ರೊಫೆಸರ್.

"ನಮ್ಮಣ್ಣನ ಮರಣದ ವಿಷಯ ಕೂಲಂಕಶವಾಗಿ ತಿಳಿದಿರೋರು. ಬಹುಶಃ ಅವನ ಮರಣವನ್ನು ಸಮೀಪದಿಂದ ಪ್ರತ್ಯಕ್ಷವಾಗಿ ನೋಡಿದ ಇಬ್ಬರು...ನೀವು ಮತ್ತು ನವೀನ."

"ಮೈ ಗಾಡ್!" ಗಟ್ಟಿಯಾಗಿ ಉಸಿರಿದ.

"ನಾಟಕ ಬೇಡ."

"ಮಿಸ್ ಅರ್ಚನಾ...!" ಗದರು ಕಂಠ ಬಂತು.

"ನನಗೆ ಮುಂದೆ ಮಾತಾಡೋ ಇಷ್ಟವಿಲ್ಲ...ನಿಲ್ಸಿ ಮಾತು!"

ಅವನ ಗದರಿಕೆ ಅಪ್ಪಳಿಸುವಂತೆ ಗಡುಸಾಗಿ ಹೇಳಿ ಫೋನ್ ಅಡಿಗಿಟ್ಟಳು.

ತಲೆಯಲ್ಲಿ ಭಯ ಚಿಂತೆಗಳ ದಾಳಿ ಇರಲಿಲ್ಲ. ಹಾಸಿಗೆಯಲ್ಲಿ ಮೈ ಚೆರಡಿದಾಗ ಬೇಸರ, ಜಿಗುಪ್ಸೆ.

ನವೀನ, ಮಲ್ಹೋತ್ರ; ನಯ ವಂಚಕರು.!

ಮತ್ತೆ ಎಚ್ಚರಗೊಳಿಸಿದುದು ಅದೇ ಫೋನ್ ಶಬ್ದ. ಸಂಜೆಯ ಆರು ಗಂಟೆ ಸಮೀಪಿಸಿತ್ತು. ಗಂಟೆ ಮತ್ತೆ ಬಾರಿಸಿತು.

"ಹಲೋ, ಎರಡು ಸಾರಿ ರಿಂಗ್ ಮಾಡ್ದೆ. ಉತ್ತರವೇ ಇಲ್ಲ. ನೀವು ನಿದ್ರೆ ಮಾಡ್ತಿರಬಹುದು ಅಂತ ಡೆಸ್ಕ್ ಕ್ಲರ್ಕ್ ಹೇಳ್ದ...ನಿದ್ರಾಭಂಗ ಮಾಡಿದ್ರೆ ಕ್ಷಮೆ ಇರಲಿ."

ಕುಸುಮಾಕರನ ಧ್ವನಿ. ಅಲ್ಲಗಳೆದು ತಪ್ಪಿಸುವ ಧ್ವನಿ ಅಲ್ಲ ಅದು...ಫೋಪ್ಸನ ಕರೆ ಇನ್ನೂ ಬಂದಿಲ್ಲ!

"ಹೌದು, ಗಾಢ ನಿದ್ರೆ...ಬೋರಿವಿಲಿಗೆ ಹೋಗಿದ್ದೆ. ಕನ್ಹೇರಿ ಗುಹೆಗಳನ್ನು ನೋಡಿ ಬಂದೆ."

"ಅದು ಗೊತ್ತಾಯ್ತು"

"ಯಾರು ಹೇಳಿದ್ರು?" ಚಕಿತ ಪ್ರಶ್ನೆ.

"ಅದೊಂದು ಆಕಸ್ಮಿಕ ಸಂಗತಿ. ನಾನೇ ಬಂದು ಹೇಳ್ತೀನಿ. ನಿನ್ನೆ ಹೇಳಿದ್ದೆ. ಈ ಸಂಜೆಗೆ ನಮ್ಮ ಭೇಟಿ ಅಂತ. ನೆನಪು ಮಾಡಿ ಕೊಡ್ತಾ ಇದೀನಿ. ನಾನು ಕಾಲ, ಕೆಲಸ ಕರಾರುವಾಕ್ಕಾಗಿ ನಿರ್ವಹಿಸೊ ಮನುಷ್ಯ."

"ಹೌದು ಮಿಸ್ಟರ್ ಕುಸುಮಾಕರ. ಅದನ್ನ ಅಲ್ಲಗಳೆಯೋ ಹಾಗಿಲ್ಲ. ನಾನೂ ನಿಮ್ಮ ಭೇಟಿಗೆ ಸಿದ್ಧವಾಗಿದೀನಿ."

ನಿರಾತಂಕವಾಗಿ ಹೇಳಿದಳು.

"ಈಗ ಹೇಳಿ. ನಿಮಗೆ ನನ್ನಲ್ಲಿ ವಿಶ್ವಾಸ ಇದೆಯೆ?"

"ಇದೆ, ಈ ಪ್ರಶ್ನೆ ಯಾಕೆ?"

"ನನ್ನಲ್ಲಿ ಬಹಳ ಮುಚ್ಚು ಮರೆ ಮಾಡಿದ್ರಿ"

"ಬಿಡಿಸಿ ಹೇಳಿ."

"ಇನ್ನೇನು ಕೇಳುವ ಅಗತ್ಯವಿರಲಿಲ್ಲ. ತಪ್ಪಿನ ಅರಿವಾಗಿತ್ತು. ನಂಬಿಕ್ಕೆ ದ್ರೋಹ ಮಾಡಿರುವುದರ ಬಗೆಗೆ ತನ್ನ ಮೇಲೆ ಬೇಸರ ಬಂತು.

"ಫೋನ್‌ನಲ್ಲಿ ಅವೆಲ್ಲಾ ಹೆಚ್ಚಾಗಿ ಹೇಳೋದಲ್ಲ...ನಾನೂ ಬೋರಿವಿಲಿಗೆ ಹೋಗಿದ್ದೆ. ನಿಮಗೆ ಗೊತ್ತಿಲ್ಲ ನನ್ನದೊಂದು ಹಳೆ ಮನೆ ಅಲ್ಲಿದೆ ಅಂತ...ಆಕಸ್ಮಿಕವಾಗಿ ಪೋಲೀಸ್ ಅಧಿಕಾರಿನ ಕಂಡೆ. ನಿಮ್ಮ ವಿಷಯ ಹೇಗೊ ಬಂತು. ನೀವು ದೀಪಕ ಪಾವನ್‌ನ ಸೋದರಿ ಅಂತ ಕೇಳಿ ಆಶ್ಚರ್ಯ, ನೋವು ಒಂದೇ ಸಾರಿ ಆಯಿತು. ನೀವು ಹಾಗಂತ ಒಂದು ಮಾತೂ ನನ್ನಲ್ಲಿ ಹೇಳಲಿಲ್ಲ!... ಅಣ್ಣನ ಮರಣ ಆತ್ಮಹತ್ಯೆ ಅಲ್ಲಾಂತ ಸಂಶಯಪಟ್ರಿ ಅನ್ನೋದೂ ಆಫೀಸರ್ ಹೇಳ್ದ."

"ನಿಜ."

"ನೀವು ಅದರ ವಿವರಣೆ ಪಡೆಯಲಿಕ್ಕೆ ಡೆಲ್ಲಿಯಿಂದ ಬಂದ್ರಿ ಅಂತ ಭಾವಿಸ್ತೀನಿ"

"ನಿಜ" ಪಿಸುಗಿತು ಉತ್ತರ.

"ನನ್ನಲ್ಲಿ ನೀವು ವಿಶ್ವಾಸ ಹೊಂದಿರೂ ರೀತಿ ಇದು...ನೀವು ದೂರದಿಂದ ಬಂದಿರೂ ಹೆಣ್ಣು. ಇಂತಾ ದೊಡ್ಡ ವಿಷಯದಲ್ಲಿ ಒಂಟಿಯಾಗಿ ಪ್ರಯತ್ನ ಪಡ್ತಿರೋದು ಸಾಹಸವೇ ಸರಿ....ನನ್ನ ಸಹಾಯ ಬೇಕಿಲ್ಲವೆ ನಿಮಗೆ?"

ತುಟಿ ಕಚ್ಚಿದಳು.

"ಸಹಾಯ ಬೇಕಿತ್ತು...ಆದರೆ ಅದನ್ನ ಪಡೆಯೋದಿಕ್ಕೆ ತಪ್ಪು ವ್ಯಕ್ತಿನ ಆರಿಸಿಕೊಂಡೆ.

ನೊಂದು ಹೇಳಿದಳು.

"ನನ್ನ ಸಹಾಯ ಬೇಕೆ? ಸಂಕೋಚ ಪಡದೆ ಹೇಳಿ"

"ಬೇಕು."

ಹಾರ್ದಿಕವಾಗಿ ಬೇಡಿಕೆ ಹೊರ ಹಾಕಿದಳು.

"ನಾನು ಬಹಳ ಹೇಳೋದಿದೆ...ನಮ್ಮಿಬ್ಬರ ಭೇಟಿ, ತಿರುಗಾಟಗಳ ಮೇಲೆ ಯಾರೊ ಹೊಂಚಿನ ಕಣ್ಣು ಹೂಡಿದಾರೆ. ನಿಮ್ಮ ಹೋಟೆಲಿಗೆ ಬಂದು ಕರೆದೊಯ್ಯುವದು ಸಂಶಯಕ್ಕೆ ಆಸ್ಪದ. ನಿಮಗೆ ಇಷ್ಟವಿಲ್ಲದ ಮಹಾಬಲೇಶ್ವರದ ಪ್ರವಾಸ ನನಗೂ ಬೇಡ...ಈಗ ಆರು ಗಂಟೆ ಹತ್ತು ನಿಮಿಷ. ಇನ್ನೊಂದು ತಾಸಿಗೆ ಸರಿಯಾಗಿ ನೀವು ದಾದರ್‌ನ ಪಾರ್ಕ್‌ವೆ ಹೊಟೇಲಿಗೆ ಬನ್ನಿ. ಶಿವಾಜಿ ಪಾರ್ಕ್ ಹತ್ತಿರದ ಪಂಚತಾರಾ ಹೊಟೇಲು. ಸ್ವಾಗತದ ಹಜಾರದಲ್ಲಿರಿ. ನೀವು ಕಾಯೋದಿಕ್ಕೆ ಅವಕಾಶ ಕೊಡದ ಹಾಗೆ ಏಳು ಹತ್ತಕ್ಕೆ ಸರಿಯಾಗಿ ಬರ್ತೀನಿ...ಬೈ ಬೈ."

* *

ಪಾರ್ಕ್‌ವೇ ಹೊಟೇಲಿನ ಭವ್ಯ ಸ್ವಾಗತ ಹಜಾರದ ವಿದ್ಯುತ್ ಗಡಿಯಾರದ ಮುಳ್ಳು ಚಕ ಚಕನೆ ಸಿಡಿದು ಹಾರುತ್ತಿದ್ದಂತೆ ಅರ್ಚನಾಳ ಹೃದಯದ ಬಡಿತವೂ ಏರುತ್ತಿತ್ತು.

ಸಂಜೆಗೆ ಫೋನ್ ಮಾಡಿ ಬರುವೆನೆಂದಿದ್ದ ಫೋಪ್ಸನ ಸುಳಿವಿರಲಿಲ್ಲ!

ಗಡಿಯಾರದ ಮುಳ್ಳು ಏಳು ಗಂಟೆ ಹತ್ತು ನಿಮಿಷ ಮುಟ್ಟುವ ಹೊತ್ತಿಗೆ ಸರಿಯಾಗಿ ಕುಸುಮಾಕರ ಬಾಗಿಲಲ್ಲಿ ಕಾಣಿಸಿಕೊಂಡ. ಕಂದುಗಪ್ಪಿನ ಅಚ್ಚುಕಟ್ಟಾದ ಸೂಟು. ತೀಡಿ ಕೂಡಿಸಿದ ತಲೆಗೂದಲು. ಮಂದಹಾಸ ಬೀರುವ ಮುಖ.

ಸಮವಸ್ತ್ರದ ಆಳು ಅವನ ಸೂಚನೆ ಹಿಡಿದು ಅರ್ಚನಾಳನ್ನು ಗೌರವದಿಂದ ಎಡ ಪಾರ್ಶ್ವದ ಹಜಾರಕ್ಕೆ ಕರೆತಂದ. ಇಬ್ಬರೂ ಮೂಲೆಯ ಮೇಜು ಹಿಡಿದರು.

ಉತ್ಸಾಹದಲ್ಲಿದ್ದ ಕುಸುಮಾಕರ.

"ನಾನು ಕಾಲದ ವಿಷಯದಲ್ಲಿ ಮಾತ್ರ ಕರಾರುವಾಕ್ ಅಂತ ಭಾವಿಸಬೇಡಿ, ಅರ್ಚನಾ.. ಕೊಟ್ಟ ಮಾತು, ಆಶ್ವಾಸನೆ ಉಳಿಸಿಕೊಳ್ಳೋದರಲ್ಲೂ ಅಷ್ಟೇ ನಿಷ್ಠಾವಂತ. ಅವೆರಡರಲ್ಲಿ ಸ್ವಲ್ಪ ಏರುಪೇರು ಕಂಡರೂ ನನ್ನ ವ್ಯವಹಾರಗಳಿಗೆ ತೊಂದರೆ..."

ಮುಂದೆ ಹೇಳುವುದು ಥಟ್ಟನೆ ನಿಲ್ಲಿಸಿ ಅವಳ ಕುತ್ತಿಗೆಯ ಮೇಲೆ ಕಣ್ಣು ನಾಟಿದ. ನೀಲಿ ವಜ್ರಗಳ ಕೊಂಬಿನ ನೆಕ್‌ಲೇಸ್ ಥಳ ಥಳಿಸಿತು.

"ಅದ್ಭುತವಾಗಿ ಕಾಣಂತ್ತೆ ಅಲ್ಲವೆ?"

ಅರಳಿದ ನಗೆಯಲ್ಲಿ ಅರ್ಚನಾ ಹಾರದ ಕೊಂಬು ಮುಂದಕ್ಕೆ ಎಳೆದು ತೋರಿದಳು.

"ನಿಜಕ್ಕೂ ಅದ್ಭುತ! ಹೆಂಗಸರು ಕೊಂಬು ಧರಿಸೋದಿಲ್ಲ. ಆದರೂ ಫ್ಯಾಶನ್ ಅಲ್ಲವೆ? ಇದು ಯಾವ ಲೋಕದಿಂದ ಬಂತು?"

ಅವನು ಅಚ್ಚರಿಯಿಂದ ಪಾರಾಗಿರಲಿಲ್ಲ.

"ದೀಪಕ ಅವನ ಚಿತ್ರಕ್ಕೆ ರೂಪದರ್ಶಿಯಾಗಿ ಕುಳಿತೋಳಿಗೆ ಇದನ್ನ ಕಾಣಿಕೆಯಾಗಿ ತಂದಿದ್ದ. ಅವನು ಹೋದ ಮೇಲೆ ಇದು ನನ್ನ ಡೆಲ್ಲಿ ವಿಳಾಸಕ್ಕೆ ಬಂತು."

ಆಭರಣಗಳ ಅಂಗಡಿ

"ಒಂದು ಕೇಜಿ ಚಿನ್ನ ಎಷ್ಟಾಗ ಬೋದ್ರಿ? ನನ್ನನ್ನು ನೀವು ಕಟ್ಟಿಕೊಂಡ ಲಾಗಾಯ್ತು ಒಂದು ಒಡವೆ ಮಾಡಿಸಿಕೊಟ್ಟಿಲ್ಲ!" ಈ ದೀಪಾವಳಿಗಾದ್ರೂ ಒಂದು ಒಡವೆ ಮಾಡಿಸಿಕೊಡಿ!

ಕುಸುಮಾಕರ ಮಾತಿಲ್ಲದೆ ಕೋಟಿನ ಒಳ ಜೇಬಿನಿಂದ ಕೆಂಪು ರೇಷ್ಮೆಯ ಪ್ಯಾಕೆಟ್ ತೆಗೆದು ಅದರಿಂದ ಎಳೆದ ಹೊಳಪಿನ ಆಭರಣ ಅವಳ ಮುಂದೆ ಹಿಡಿದು ತೂಗಾಡಿಸಿದ. ಕೆಂಪು ವಜ್ರಗಳ ಕಂಠಹಾರ...ಮಧ್ಯ ತೂಗಿದ ವಜ್ರದ ಕೊಂಬು!

ಅರ್ಚನಾ ಅವಾಕ್ಕಾದಳು. ತನ್ನದರ ಹಾಗೆಯೇ ಇರುವ ನೆಕ್‌ಲೇಸ್. ಆದರೆ ಕೊಂಬಿನ ವಿಶಾಲತೆ ತುಸು ಚಿಕ್ಕದು. ಕೆಂಪು ವಜ್ರಗಳ ಕೊಂಬು!

"ಇದು ಯಾವ ಲೋಕದಿಂದ ಬಂತು?"

ಅವನ ಪ್ರಶ್ನೆ ಹಿಂತಿರುಗಿಸಿದಳು. ಅವನ ಕಣ್ಣುಗಳಲ್ಲಿ ನಿರಾಸೆ ನೆಲೆಸಿತು.

"ನಾಲ್ಕು ತಿಂಗಳ ಹಿಂದೆ ಸಿಲೋನ್‌ನಿಂದ ಒಬ್ಬ ನರ್ತಕಿ ಬಂದಳು..."

"ಕಾಮಿನಿ ರತ್ನ" ಸರಕ್ಕನೆ ಮುಖ ಮುಂದೆ ತಂದು ಕೇಳಿದಳು.

ಅವಳ ಮುಖ ದಿಟ್ಟಿಸಿ ತಲೆ ಕೊಡವಿದ. ವಜ್ರದ ಕೊಂಬಿನ ಸರ ಮತ್ತೆ ಜೇಬಿಗೆ ಸೇರಿಸಿದ.

ಎರಡು ನೀಳ ಗ್ಲಾಸ್‌ಗಳಲ್ಲಿ ವಿಸ್ಕಿ ಬಂತು.

"ಅವಳ ಹೆಸರು ಗೊತ್ತಿಲ್ಲ. ನರ್ತಕಿಯರ ವಿಷಯದಲ್ಲಿ ನಾನು ತಲೆ ಕೆಡಿಸಿಕೊಳ್ಳೋದಿಲ್ಲ. ಶ್ರೀಲಂಕಾದಲ್ಲೂ ಹೆಂಗಸರು ಸರದಲ್ಲಿ ಕೊಂಬು ಧರಿಸೋದಿಲ್ಲವಂತೆ ಅವಳು ದಂತದ ಕೊಂಬು ಧರಿಸಿಕೊಂಡಿದ್ಳು. ಅವನ ನೃತ್ಯ ಪ್ರದರ್ಶನಕ್ಕೆ ಬೊಂಬಾಯಿನಲ್ಲಿ ಬೇಡಿಕೆ ಏರಿ ಬಿಡ್ತು. ಅದು ಕೊಂಬಿನಿಂದ ಬಂದ ಅದೃಷ್ಟ ಅಂತ ಅವಳ ನಂಬಿಕೆ...ನನ್ನ ಸ್ನೇಹಿತನ ನೈಟ್ ಕ್ಲಬ್‌ನಲ್ಲಿ ಅವಳು ಭಾರಿ ನೃತ್ಯದ ಕಾರ್ಯಕ್ರಮಕ್ಕೆ ಒಪ್ಪಿದ್ಳು. ಅವಳಿಗೆ ಕಾಣಿಕೆ ಕೊಡೋದಿಕ್ಕೆ ಕಿಂಬರ್ಲೆಯಿಂದ ಕೆಂಪು ವಜ್ರ ತರಿಸಿ ಸರ, ಕೊಂಬು ಮಾಡಿಸ್ದೆ. ಆ ದಿನ ಅವಳು ಕ್ಲಬ್‌ಗೆ ಬರಲೇ ಇಲ್ಲ!...ಎಲ್ಲಿಗೆ ಹೋದಳು ಅಂತ ಈ ವರೆಗೆ ಪತ್ತೆ ಆಗಿಲ್ಲ. ಇದು ನನ್ನಲ್ಲೇ ಉಳಿದುಹೋಯ್ತು... ಬಿಡಿ, ಇದು ನಿಮಗೆ ಸಂಬಂಧವಿಲ್ಲದ ವಿಷಯ. ನಿನ್ನೆ ಬೋರಿವಿಲಿ ಪೊಲೀಸ್ ಠಾಣೆಗೆ ಹೋಗೊವರೆಗೆ ನಿಮ್ಮಣ್ಣನ ವಿಷಯ ಗೊತ್ತಿರಲಿಲ್ಲ. ದೀಪಕ ಆತ್ಮಹತ್ಯೆ ಮಾಡಿ

ಕೊಂಡಿದ್ದು, ನೀವು ಅದರ ವಿವರಣೆ, ಶೋಧನೆಗೆ ಬಂದಿರೋದು ಅಲ್ಲೇ ಗೊತ್ತಾಗಿದ್ದು......ಅದರ ಮೇಲೆ ಈ ದಿನ ಮಧ್ಯಾಹ್ನ ಏನಾಯ್ತು! ಒಬ್ಬ ಟ್ಯಾಕ್ಸಿ ಡ್ರೈವರ್ ಏಕ್‌ದಂ ಬಂದು ಭೇಟಿ ಆದ. ಬಿಳುಪು, ಕೂದಲು, ಅರಳು ಕಣ್ಣು, ಮುಖದಲ್ಲಿ ಸಿಡುಬಿನ ಕಲೆ..."

"ಅವನ ಹೆಸರು ಪೋಪ್ಲ"

"ಗಂಭೀರವಾಗಿ ನುಡಿದರೂ ಎದೆ ಬಡಿತ ತಪ್ಪಲಿಲ್ಲ. ಅವನು ನಗೆ ಮಿಂಚಿಸಿದ. ಗ್ಲಾಸ್ ಎತ್ತಿ ಅವಳನ್ನು ನೋಡುತ್ತಾ ಎರಡು ಗುಟುಕು ಹೀರಿದ.

"ನಾವಿಬ್ರೂ ಸುತ್ತಾಡಿದ್ದು ನೋಡಿದಾನೆ ಪೋಪ್ಲ. ನೀವು ಬೆಳಗ್ಗೆ ಅವನ ಟ್ಯಾಕ್ಸಿಯಲ್ಲಿ ಕನ್ಹೇರಿ ಗುಹೆಗಳಿಗೆ ಹೋಗಿದ್ದು ತಿಳಿಸ್ದ...ದೀಪಕ ಪಾವನ್‌ನ ಕನ್ಹೇರಿಗೆ ಕರೆದೊಯ್ದು ಮನುಷ್ಯ ಅವನು. ದೀಪಕನೊಂದಿಗೆ ಸೇರಿದ್ದ ವ್ಯಕ್ತಿಗಳನ್ನು ನೋಡಿದಾನೆ. ಗುಹೆಗಳ ಕಡೆಯಿಂದ ದೀಪಕ ಹಿಂತಿರುಗದೆ ಇದ್ದದ್ದೂ ಗಮನಿಸಿದಾನೆ... ಆ ಮರಣದ ವಿಷಯದಲ್ಲಿ ಅವನಿಗೆ ಸತ್ಯಾಂಶ ತಿಳಿದಿದೆ. ಅದನ್ನ ಸಾಧಿಸುವಂತ ಎರಡು ಪುರಾವೆಗಳು ಅವನ ಹತ್ರ ಇವೆಯಂತೆ...ಅದು ತಿಳಿಸಲಿಕ್ಕೆ ನಿರ್ಗತಿಕ ಹಣ ಕೇಳೋದು ಸ್ವಾಭಾವಿಕ."

ಪೋಪ್ಲ ಬರಲಿಲ್ಲವೆಂಬ ಚಿಂತೆ ಇನ್ನೂ ಕುಟುಕುತ್ತಿತ್ತು. ಅರ್ಚನಾ ಮುಖ ಮುಂದೆ ತಂದಳು.

"ನಾನು ಹಣ ಕೊಡಲಿಕ್ಕೆ ಒಪ್ಪಿದ್ದೆ. ನನಗೆ ಫೋನ್ ಮಾಡಿ ಬರ್ತೀನಿ ಅಂದೋನು ಸಂಜೆ ಆರೂ ಮುಕ್ಕಾಲು ಕಳೆದರೂ ಬರ್ಲಿಲ್ಲ"

ಕೈಲಿದ್ದ ಗ್ಲಾಸ್ ಮೇಲೆ ಶೂನ್ಯ ನೋಟ ಹಾಕಿದಳು.

"ಬಹುಶಃ ನನ್ನ ಭೇಟಿ ಮಾಡಿದ್ರಿಂದ ನಿಮ್ಮ ಭೇಟಿ ತಪ್ಪಿಸಿದ್ದಾನೆ...ನೀವೇ ಯೋಚನೆ ಮಾಡಿ. ಒಬ್ಬ ಯುವತೀನ ಹೊಟೇಲಿನಲ್ಲಿ ಭೇಟಿ ಮಾಡಿ ರಹಸ್ಯದ ಮಾತು ಆಡೋದು ಕಷ್ಟದ ಕೆಲಸ. ನಿಮ್ಮಿಂದ ಹಣ ದೊರೆಯಲಾರದು ಅಂತ ಸಂಶಯ ಕಟ್ಟಿರಬೇಕು. ನೀವು ಅವನ್ನ ಪೊಲೀಸರಿಗೆ ಒಪ್ಪಿಸಬಹುದು ಅಂತ ಬೆದರಿರಬಹುದು..."

ಪ್ರತಿಮೆಯಂತೆ ಕುಳಿತವಳ ಕೈ ತಟ್ಟಿ ಕದಲಿಸಿ ಮತ್ತೆ ಮೆಲ್ಲನೆ ಹೇಳಿದ.

"ನಾನು ಅವನಿಗೆ ಹಣ ಕೊಟ್ಟಿದೀನಿ...ಐದು ಸಾವಿರ! ಈ ವಿಷಯಕ್ಕೆ ಅದು ಹೆಚ್ಚಲ್ಲ...ಈ ರಾತ್ರಿ ಹನ್ನೊಂದು ಗಂಟೆಗೆ ಮಲಬಾರ್‌ಹಿಲ್ ಕೊನೆಯಲ್ಲಿರೊ ಮನೆಯ ವಿಳಾಸ ಕೊಟ್ಟು ಅಲ್ಲಿಗೆ ನನ್ನ ಬರಲಿಕ್ಕೆ ಹೇಳಿದಾನೆ. ಅರ್ಚನಾ, ನಿಮ್ಮ ಸಲುವಾಗಿ ನಿಮ್ಮ ಪರವಾಗಿ ಅವನಿಂದ ಸತ್ಯಾಂಶ, ಪುರಾವೆ ಪಡೆದು ಬರ್ತೀನಿ. ನಿಮಗಾಗಿ ಏನು ಮಾಡೋದಕ್ಕೂ ಸಿದ್ಧವಾಗಿದೀನಿ. ನಮ್ಮ ಸ್ನೇಹಕ್ಕೆ ನಾನು ಕೊಟ್ಟಿರೊ ಐದು ಸಾವಿರ ಒಂದು ಕ್ಷುಲ್ಲಕ ಸಹಾಯ."

ಅವಳಿಗೆ ಮಾತು ಹೊರಡಲಿಲ್ಲ. ಕಣ್ಣುಗಳಲ್ಲಿ ಕೃತಜ್ಞತೆ, ಸಂಕೋಚ ಹೊರಳಿತು.

"ಐದು ಸಾವಿರ ದೊಡ್ಡ ಹಣ...ನಾನು ಅಷ್ಟು ದೊಡ್ಡ ಶ್ರೀಮಂತಿಕೆ ಅಲ್ಲದಿದ್ರೂ ನಿಮಗೆ ಹಣ ಹಿಂತಿರುಗಿಸ್ತೀನಿ... ನನ್ನ ಸಲುವಾಗಿ ನೀವು ಪೋಪ್ಲನಿಂದ ವಿವರಣೆ ಪಡೆಯೋದು ದೊಡ್ಡ ಸಹಾಯವೇ ಆಗಿದ್ರೂ..."

ಮಾತು ನಿಲ್ಲಿಸಿದಳು. ಅವಳಲ್ಲಿ ಕೂಗು ಎದ್ದಿತ್ತು.

"ಅಣ್ಣನ ಮರಣ ಆತ್ಮಹತ್ಯೆ ಅಲ್ಲ...ಕೊಲೆ!"

"ಹೇಳಿ" ಗ್ಲಾಸ್ ಇಳಿಸಿದ.

"ನಾನೂ ನಿಮ್ಮೊಂದಿಗೆ ಬರ್ತೀನಿ..."

"ಪೋಪ್ಲನ ಬಾಯಿಂದ ನೀವೇ ಸತ್ಯಾಂಶ ಕೇಳಬೇಕು ಅನ್ನೋ ಹಠ... ಚಪಲ."

"ಎರಡೂ ಅಲ್ಲ. ನನ್ನ ಅಣ್ಣನ ಮೇಲಿರೊ ಪ್ರೀತಿ. ನಿಮ್ಮಲ್ಲಿ ವಿಶ್ವಾಸವಿಲ್ಲಾಂತ ತಪ್ಪು ತಿಳೀಬೇಡಿ."

"ನಿಮ್ಮ ಇಚ್ಛೆಗೆ ಎದುರು ಹೇಳೋದಿಲ್ಲ. ನಮ್ಮ ಮೇಲೆ ಹೊಂಚು ಹಾಕ್ತಿರೊ ಹದ್ದುಗಳು ಇದಾರೆ ಅನ್ನೋದು ಮನಸ್ಸಿನಲ್ಲಿರಲಿ. ಒಂಬತ್ತೂವರೆಗೆ ಸರಿಯಾಗಿ ದಾದರ್ ಪಶ್ಚಿಮ ರೇಲ್ವೆ ಸ್ಟೇಶನ್ ಹಿಂಭಾಗಕ್ಕೆ ಬನ್ನಿ. ಅಲ್ಲಿಂದ ನನ್ನ ಕಾರಿನಲ್ಲಿ ಹೋಗೋಣ. ಊಟ ಎಲ್ಲಾದ್ರೂ ಮಾಡಿದರಾಯ್ತು."

ಹೊರ ಬಂದವರು ಎರಡು ಟ್ಯಾಕ್ಸಿ ಹಿಡಿದು ವಿರುದ್ಧ ದಿಕ್ಕುಗಳಲ್ಲಿ ಸರಿದು ಹೋದರು.

* * *

ದಾದರ್ ಪಶ್ಚಿಮ ರೇಲ್ವೆ ನಿಲ್ದಾಣದ ಹಿಂದೆ ಅರ್ಚನಾ ಟ್ಯಾಕ್ಸಿಯಿಂದ ಇಳಿದಾಗ ಹತ್ತು ನಿಮಿಷದ ಮಳೆ ಸುರಿದು ಧಗೆಯ ವಾತಾವರಣ ಹರಡಿತ್ತು. ಕಾರಿನಲ್ಲಿ ವೀಲ್ ಹಿಡಿದು ಕುಳಿತಿದ್ದ ಕುಸುಮಾಕರ ಕೈ ಎತ್ತಿದ. ಕತ್ತಲಿಗೆ ಕೂಡುವಂತೆ ಕಪ್ಪು ಸೀರೆ ಉಟ್ಟು. ವಜ್ರದ ಕೊಂಬಿನ ಕಂಠಹಾರ ಸೆರಗಿನಿಂದ ಮುಚ್ಚಿದವಳು ಸರ್‍ರನೆ ನಡೆದು ಕಾರು ಏರಿದಳು.

"ರಸ್ತೆಯಲ್ಲಿ ಯಾವ ಕಾರೂ ನಿಮ್ಮನ್ನ ಹಿಂಬಾಲಿಸಲಿಲ್ಲಾಂತ ಭಾವಿಸ್ತೀನಿ" ಕಾರು ಚಾಲನೆಗೆ ತಂದು ಕೇಳಿದ.

"ಇಲ್ಲ" ನಿಖರವಾಗಿ ಹೇಳಿದಳು.

"ಇನ್ನೂ ಒಂದೂವರೆ ಗಂಟೆ ಕಾಲ ಇದೆ. ಎಲ್ಲಾದ್ರೂ ಅರ್ಧ ತಾಸು ಕಳೆದರೆ ಸರಿ ಹೋಗುತ್ತೆ."

ಕಾರು ವರ್ಣರಂಜಿತ ರಸ್ತೆಗಳಲ್ಲಿ ಸಾಗಿತು.

"ಬಹಳ ಯೋಚನೆಯಲ್ಲಿರೊ ಹಾಗೆ ಕಾಣುತ್ತೆ."

ಎಚ್ಚರಿಕೆಯಿಂದ ವೀಲ್ ಆಡಿಸಿದ.

"ಏನೂ ತಿಳಿಯಂದ ಒಬ್ಬ ಚಿತ್ರಕಲಾವಿದನ ಮೇಲೆ ಮೂವರು ಕೈವಾಡ ನಡೆಸುವಂತ ಸಮಸ್ಯೆ ಏನಿತ್ತು ಅಂತ ತಲೆ ಕಾಡ್ತಿದೆ."

"ಅವಳನ್ನು ಸುಮ್ಮನಾಗಿಸಿ ಮೆಲ್ಲನೆ ಹೇಳಿದ.

"ಆ ಮೂವರ ವಿಷಯ ಸದ್ಯಕ್ಕೆ ಮರೆತುಬಿಡೋಣ. ಈಗಿನ ಕೆಲಸವೊಂದೇ ನಮ್ಮ ಗುರಿ...ದೀಪಕನ ಸಾವಿನ ವಿಷಯದಲ್ಲಿ ನೀವು ತಲೆ ಕೆಡಿಸಿಕೊಂಡಿದ್ದು ನನಗೆ ಯಾಕೆ ಹೇಳ್ಲಿಲ್ಲ?"

ಎರಡನೆಯ ಸಾರಿ ಬಂದಿದ್ದ ಪ್ರಶ್ನೆ ಅದು."

"ಯಾಕೇಂತ ಈಗಲೂ ಗೊತ್ತಿಲ್ಲ. ಬುದ್ಧಿಗೆ ಆಗಾಗ ಮಂಪರು ಹತ್ತುತ್ತೆ."

ಸಾವಿನ ಪ್ರಕರಣದಲ್ಲಿ ತಲೆ ಹಾಕ ಬೇಡವೆಂದು ನವೀನ ಹೇಳಿದುದನ್ನು ಯಾರಿಗೂ ಹೇಳುವಂತಿಲ್ಲ.

"ಆತ್ಮಹತ್ಯೆ ಅಂತ ನೀವು ನಂಬಲಿಲ್ಲ ಯಾಕೆ?"

"ಕಾರಣ ಹೇಳಲಾರೆ. ಸಂಶಯ ತಲೆ ಹೊಕ್ಕಿತ್ತು."

"ಸಂಶಯಕ್ಕೆ ಕಾರಣ?" ಛೇಡಿಸುವಂತಿತ್ತು ಪ್ರಶ್ನೆ.

"ಕಾರಣವಿಲ್ಲದ ಸಂಶಯ...ಹೆಣ್ಣಿನ ಸಚ್ಛಿದ್ರ ಮಿದುಳು."

ನಗೆ ಮುಖದಲ್ಲಿ ತಪ್ಪಿನ ಒಪ್ಪಿಗೆ ಕಂಡಿತ್ತು.

"ಅದು ಆತ್ಮಹತ್ಯೆ ಇರಲಾರದು ಅಂತ ನಾನೂ ಹೇಳ್ತೀನಿ. ಹವ್ಯಾಸಿ ಕಲಾವಿದನಿಗೆ ಚಿಂತೆ, ನಿರಾಶೆ ಇವೆಲ್ಲಾ ದೂರದ ಪದಗಳು. ನೆಚ್ಚಿನ ನರ್ತಕಿಗೆ ಬೆಲೆ ಬಾಳುವ ವಜ್ರದ ಕೊಂಬಿನ ಕಾಣಿಕೆ ಮಾಡಿಸಿದ ದಿಲ್‌ದಾರ್ ಮನುಷ್ಯನ ಆತ್ಮಹತ್ಯೆ ಮಾಡಿಕೊಳ್ಳೋದುಂಟೆ? ಹಾಗೆ ಆತ್ಮಹತ್ಯೆ ಮಾಡಿಕೊಳ್ಳೋನಾಗಿದ್ರೆ ಅದಕ್ಕೆ ಮೊದಲು ಪ್ರೀತಿಯ ಸೋದರಿಗೆ ಒಂದು ಅಂತಿಮ ಪತ್ರ ಬಿಟ್ಟು ಹೋಗ್ತಿದ್ದ."

ಅವನ ಮಾತು ಅರ್ಥಬದ್ಧವಾಗಿತ್ತು. ಕುತ್ತಿಗೆಯ ಕೊಂಬಿನ ಮೇಲೆ ಬೆರಳು ಆಡಿತು.

"ನೀವು ಹೇಳ್ತಿರೋದು ಸರಿ. ಅದು ಆತ್ಮಹತ್ಯೆ ಅಲ್ಲ. ನನಗೆ ಆಕಸ್ಮಿಕವಾಗಿ ಸ್ವಲ್ಪ ವಿವರ ಸಿಕ್ತು...ನಿಮಗೆ ವಿಳಂಬವಾಗಿ ಹೇಳ್ತಿದೀನಿ ಅಂತ ಬೇಸರವಾಗಿದೆ... ಕಾಕ್‌ಟೈಲ್ ಪಾರ್ಟಿಯಲ್ಲಿ ನನ್ನ ವಜ್ರದ ಕೊಂಬನ್ನ ಪ್ರೊಫೆಸರ್ ಮಲ್ಹೋತ್ರಾ ಗುರ್ತಿಸಿದ್ರು. ಅವರು ದೀಪಕನ ಹೊಟೇಲಿನಲ್ಲೇ ಪಕ್ಕದ ಕೋಣೆಯಲ್ಲಿ ಇದ್ದೋರು. ನರ್ತಕಿಯನ್ನು ಬಲ್ಲೋರು."

"ನರ್ತಕಿಯ ಸಹಾಯದಿಂದ ಶೋಧ ನಡೆಸೋದಿಕ್ಕೆ ಡೆಲ್ಲಿಯಿಂದ ಬಂದ ಹಾಗೆ ಕಾಣುತ್ತೆ."

"ನರ್ತಕಿಯನ್ನು ಕಾಣೊ ಆಸೆ, ಉದ್ದೇಶ ಇತ್ತು ನಿಜ. ಇಲ್ಲಿ ಒಂದು ತಿರುವು ಸಿಕ್ತು...ನರ್ತಕಿಯ ಮೇಲೆ ತಿರಸ್ಕಾರ ಬಂದು ಬಿಡ್ತು. ಪೋಪ್ಲನ ಹೇಳಿಕೆಗೆ ಕಾದಿದೀನಿ. ಅವನಿಂದ ಕಾರ್ಯಸಾಧನೆ ಆಗ್ಬೇಕು."

ಕಾರು ಮಹಾಲಕ್ಷ್ಮಿ ವಿಭಾಗದ ರೆಸ್ಟೋರೆಂಟ್ ಪಕ್ಕದಲ್ಲಿ ನಿಂತಿತು. ಹತ್ತು ಗಂಟೆ ದಾಟಿತ್ತು. ಲಘು ತಿನಿಸು, ಪಾನೀಯ ಮುಗಿಸಿ ಅರ್ಧ ತಾಸು ಸವೆಸಿ ಹೊರ ಬಂದರು.

ನಿಶ್ಶಬ್ದವಾಗಿ ಹರಿದು ಹೋದ ಕಾರಿನ ದಿಕ್ಕಿಗೆ ದೃಷ್ಟಿ ನಾಟಿ ನಿಂತಳು ಅರ್ಚನಾ.

"ಏನು ನೋಡ್ತಾ ನಿಂತ್ರಿ?"

ಸಿಗರೇಟು ಹೊತ್ತಿಸಿ ಲೈಟರ್ ಜೇಬಿಗೆ ಸೇರಿಸುತ್ತಾ ಕೇಳಿದ.

"ಅಲ್ಲಿ ಹೋದ ಉದ್ದನೆ ವಿದೇಶಿ ಕಾರು! ಅವತ್ತು 'ಥೌಸಂಡ್ ಅಂಡ್ ಒನ್' ರೆಸ್ಟೋರೆಂಟಿನಿಂದ ಬಂದು, ನನ್ನ ಹೊಟೇಲಿನ ಮುಂದೆ ನಿಮ್ಮನ್ನು ಬೀಳ್ಕೊಂಡಾಗ ಅದನ್ನ ನೋಡ್ದೆ. ಅವತ್ತು ಇಬ್ಬರು ಇದ್ರು. ಇವತ್ತು ಒಂದೇ ವ್ಯಕ್ತಿ. ಬಹುಶಃ ಹೆಂಗಸು!"

ತುಟಿಯಿಂದ ಸಿಗರೇಟು ತೆಗೆದು ಹಣೆಯಲ್ಲಿ ಸುಕ್ಕು ತಂದುಕೊಂಡ.

"ನೀವು ಗಮನಿಸಿದ್ದು ಒಳ್ಳೇದಾಯ್ತು. ನಮಗೆ ಯಾರಿಂದಲೂ ತೊಂದರೆ ಇಲ್ಲ. ...ಹೊಂಚು ಹಾಕೋರಿಂದ ಪ್ರೋಷ್ನ ಒಬ್ಬನಿಗೆ ಮಾತ್ರ ಅಪಾಯ."

ಮಹಾಲಕ್ಷ್ಮಿಯಿಂದ ಕಾರು ಲೋಅರ್ ಪರೇಲ್ ಮೂಲಕ ಹಾದು ಹೋಯಿತು. ಮಲಬಾರ್ ಹಿಲ್‌ಗೆ ವಿರುದ್ಧ ದಿಕ್ಕಿನಲ್ಲಿ ಹೋಗುತ್ತಿದ್ದುದರ ಕಾರಣ ಅವಳು ಪ್ರಶ್ನಿಸಲಿಲ್ಲ. ಉದ್ದೇಶ ಅರ್ಥವಾಗಿತ್ತು. ಹಿಂಬಾಲಿಸಬಹುದಾದ ವಾಹನದ ಗತಿ ತಪ್ಪಿಸಲು ಕಾರು ಬಳಸು ದಾರಿಯ ಹರಿದಾಟ ನಡೆಸಿತ್ತು ...ವಿಕ್ಟೋರಿಯಾ ಗಾರ್ಡನ್ ರಸ್ತೆಯಲ್ಲಿ ಹಿಂತಿರುಗಿ, ಎರಡು ಅಡ್ಡ ರಸ್ತೆ ಹಾದು, ಗಿಬ್ಸ್ ರೋಡ್‌ನಿಂದ ಮಲಬಾರ್ ಹಿಲ್‌ಗೆ ಏರಿದರು.

ಇಕ್ಕಟ್ಟಾದ ಎರಡು ಗೋಡೆಗಳ ಮಧ್ಯೆ ಸಾಗಿ ಚಿಕ್ಕ ಬಯಲು ಭಾಗದ ಕತ್ತಲಿನಲ್ಲಿ ಕಾರು ನಿಲ್ಲಿಸಿದ.

"ಇಲ್ಲಿಂದ ಮುಂದಕ್ಕೆ ಕಾರು ಚಲಿಸುವಂತ ರಸ್ತೆ ಇಲ್ಲ. ನಡೆದು ಹೋಗ್ಬೇಕು."

ಕಾರಿನ ಕಿಟಕಿ ಮೇಲಕ್ಕೆ ಎಳೆಯುತ್ತಾ ಹೇಳಿದ.

ಕತ್ತಲಿನಲ್ಲಿ ನುಣುಪಾದ ಕಲ್ಲು ಹಾಸುಗಳ ಕಿರು ಹಾದಿಯಲ್ಲಿ ನಡೆದು ಹೋಗುವಾಗ ಅವಳಿಗೆ ಎದೆಯಲ್ಲಿ ತಳಮಳ.

ಈ ಶೋಧನೆ ಕಾರ್ಯ ಅಗತ್ಯವೆ? ತನಿಖೆ ಇಲಾಖೆಯಲ್ಲಿ ಮುಗಿದು ಹೋದ ಪ್ರಕರಣವನ್ನು ತಾನು ತೋಡುವುದು ಬೇಡ. ಹಿಂತಿರುಗುವುದು ಸರಿ...ದೀಪಕನ ಕೊಲೆ?

"ಆ ದಿನ ನಾವು ಇದೇ ರಸ್ತೆಯಲ್ಲಿ ಬಂದಿದ್ದು, ಅಲ್ಲವೆ?" ಪಿಸುಗಿ ಕೇಳಿದಳು.

"ನೆನಪು ಶಕ್ತಿ ಚೆನ್ನಾಗಿದೆ ನಿಮಗೆ...ನಾವು ಭೇಟಿ ಕೊಟ್ಟ, ಹೆಸರಿಲ್ಲದ ಆ ಸ್ಟೈಪ್ಲಾನ ಕೆಫೆ ಅಲ್ಲೇ ಇರೋದು. ಅದರ ಪಕ್ಕದ ಹಾದಿಯಲ್ಲಿ ಎರಡು ನಿಮಿಷ ನಡೆದರೆ ಪ್ರೋಷ್ನ ಬರ ಹೇಳಿರುವ ಮನೆ".

ಕತ್ತಲು ಮತ್ತಷ್ಟು ಗಾಢವಾಗಿತ್ತು. ಅವಳಿಗೆ ತಲೆಯಲ್ಲಿ ಶಂಕೆ, ಜಿಜ್ಞಾಸೆಗಳ ಮುತ್ತಿಗೆ.

ಪ್ರೋಷ್ನ ಆ ಮನೆಗೆ ಬರದೆ ಹೋದರೆ ? ಅವನಲ್ಲಿ ಹೇಳುವ ವಿಷಯ ಹೆಚ್ಚಿನದು ಇಲ್ಲವಾದಲ್ಲಿ ?... ತನ್ನ ಸಲುವಾಗಿ ಬಂದಿರುವ ಕುಸುಮಾಕರನಿಗೆ ಪ್ರಾಣಾಪಾಯ !

ಅವನನ್ನು ಅನುಸರಿಸಿ ನಡೆದಳು. ಕಬ್ಬಿಣದ ಹಳೆಯ ಲಾಂದ್ರದ ತಳದಲ್ಲಿದ್ದ ಹಸಿರು ಬಾಗಿಲಿನ ಮೂಲಕ ಇಬ್ಬರೂ ಸರಿದರು. ಅದಕ್ಕೆ ಮುಂದೆ ಮತ್ತೊಂದು ಸಣ್ಣ ಬಾಗಿಲು. ತಳ್ಳುತ್ತಲೇ ತೆರೆಯಿತು.

"ನಿಧಾನವಾಗಿ ಮೆಟ್ಟಿಲು ಹತ್ತಬೇಕು."

ಅವಳ ಕಿವಿಯಲ್ಲಿ ಹೇಳಿದ.

ಮೇಲಿನಿಂದ ಕೂಗಾಡಿದ ಸಣ್ಣ ದೀಪದ ನಸು ಬೆಳಕಿನಲ್ಲಿ ಅವನ ಹಿಂದೆ ಇಕ್ಕಟ್ಟಾದ ಮೆಟ್ಟಿಲು ಏರಿದಳು.

ದಪ್ಪನೆಯ ಕರ್ಟನ್ ಸರಿಸಿ ಒಳ ಬಂದರು. ಮೇಲಿನ ಕೋಣೆಯಲ್ಲಿ ಸ್ಮಶಾನ ನೀರವತೆ ಹರಡಿತ್ತು. ನೆಲದ ಮೇಲೆ ಗೋಡೆಯ ಪಕ್ಕಕ್ಕೆ ದಪ್ಪನೆಯ ಮೆತ್ತ ಹಾಸು. ಅದರ ಮುಂದಿನ ತಗ್ಗು ಮೇಜಿನ ಮೇಲೆ ತಿನಿಸು ತಟ್ಟೆಗಳು, ಮೂರು ಕೊಳವೆ ಕಪ್‌ಗಳು, ಮುಂಚಿದ ನೀಳ ಪಿಂಗಾಣಿ ಕಾಫಿ ಪಾತ್ರೆ.

"ಕಾಫಿ ಸಿದ್ಧವಾಗಿಡಲಿಕ್ಕೆ ನಾನೇ ತಿಳಿಸಿದ್ದೆ."

ಎಂದು ಅವಳ ಕೈ ಹಿಡಿದು ಮೆತ್ತೆಯ ಮೇಲೆ ಕುಳಿತ. ಅವಳ ಪ್ರಶ್ನೆಗೆ ಮೊದಲು ತಾನೇ ಹೇಳಿದ.

"ಪ್ರೋಷ್ನ ಬರಲಿಕ್ಕೆ ಹೇಳಿರೂ ಮನೆ ಅಲ್ಲ ಅದು...ಇದರ ಪಕ್ಕದಲ್ಲಿದೆ ಆ ಮನೆ"

"ಪ್ರೋಷ್ನನಿಗೆ ಇನ್ನೂ ಹದಿನೈದು ನಿಮಿಷ ಕಾಯಬೇಕು"

ಕೈ ಗಡಿಯಾರ ನೋಡಿ ಗೊಣಗಿದ ಅರ್ಚನಾ ಕೋಣೆಯ ಕೆಂಪು ಚಾವಣಿಗೆ, ಸುತ್ತಲೂ ಕಣ್ಣು ಹರಿಸಿದಳು.

"ಆ ವರ್ಗದ ಜನಕ್ಕೆ ಸಮಯದ ಪ್ರಜ್ಞೆ ಎಲ್ಲಿ ಬರಬೇಕು? ಅವನು ಬಸ್ ಹಿಡಿದು ಬರೋದಾದ್ರೆ ಈ ಹೊತ್ತಿನಲ್ಲಿ ಬಸ್ಸು ಸಿಗೋದು ಕಷ್ಟ."

ಅವಳ ಮೂಗು ಅರಳಿತು. ಕೋಣೆಯಲ್ಲಿ ಸುಗಂಧ ಪಸರಿಸಿತ್ತು. ಕುಸುಮಾಕರ ಕಪ್‌ಗೆ ಕಾಫಿ ಬಗ್ಗಿಸಿದ.

"ಪ್ರೋಷ್ನನ ಸಂಗಡ ಮಾತು ಮುಗಿದ ಕೂಡಲೇ ಸ್ಟೈಪ್ಲಾನ ಕೆಫೆಯಲ್ಲಿ ಏನಾದ್ರೂ ತಿನ್ನಬೇಕು. ನಾನು ಹಾಗೇ ಬಂದು ಬಿಟ್ಟೆ. ನೀವೂ ಏನೂ ತೆಗೆದುಕೊಂಡಿಲ್ಲ."

ಅರ್ಚನಾ ತಟ್ಟೆಯಲ್ಲಿದ್ದ ಪಿರಮಿಡ್ ಆಕಾರದ ಸಿಹಿ ತಿನಿಸು ಎತ್ತಿ ನೋಡಿದಳು.

"ಅದು ಇಜಿಪ್ಷಿಯನ್ ಸಿಹಿ. ರುಚಿಯಾಗಿದೆ. ...ಹೆಚ್ಚಾಗಿ ತಿನ್ನಬೇಡಿ ಹಸಿವು ಅಡಗಿ ಹೋಗುತ್ತೆ."

ತಾನೊಂದು ಸಿಹಿ ಎತ್ತಿದ.

ಬಾದಾಮಿಯ ಚೂರುಗಳಿಂದ ತುಂಬಿದ ಸಿಹಿ ರುಚಿಯಾಗಿತ್ತು. ಒಂದು ಪೂರ್ತಿಯಾಗಿ ಮುಗಿಸಿದಳು....ಮತ್ತೊಂದು...ಮೂರು...

ಅವಳಿಗೆ ಆತಂಕ, ಭೀತಿ, ಏಕಾಕಿ ಸರಿದು ಹೋಗಿತ್ತು. ಮೈಯಲ್ಲಿ ಲವಲವಿಕೆ ತುಂಬಿತ್ತು...ಸಂಬೋಧನೆಯ ಪರಿಜ್ಞಾನ ತೂರಿ ಹೋಗುವಷ್ಟು ಉದ್ರೇಕ.

"ನೀನು ಹೇಳಿದ್ದೇನು...ಪ್ರೋಷ್ನ ಬಸ್‌ನಲ್ಲಿ ಬರಬೇಕು ಅಂತ? ಅವನು ಟ್ಯಾಕ್ಸಿ ಇಟ್ಟಿದ್ದಾನೆ ಅಲ್ಲವೆ ?"

ಅರೆಗಣ್ಣಿನಲ್ಲಿ ಗೊಣಗು ಪ್ರಶ್ನೆ ಹಾಕಿದಳು.

"ನೀನು!" ಅವನು ತುಚ್ಛ ಸಂಬೋಧನೆಯಿಂದ ಅಚ್ಚರಿಗೊಳ್ಳುವ ಬದಲು ಹರ್ಷಗೊಂಡ.

"ಅವನು ಟ್ಯಾಕ್ಸಿ ಡ್ರೈವರ್ ಅಲ್ಲ...ನನ್ನ ಸಹಾಯಕ. ವೈರ್‌ಲೆಸ್, ಟೇಪ್ ರೆಕಾರ್ಡರ್‌ಗಿಂತ ಚುರುಕು ಅವನು. ನಿನಗೆ ಕಾಕ್‌ಟೈಲ್ ಪಾರ್ಟಿಯಲ್ಲಿ ಆ ಪ್ರೊಫೆಸರ್ ಹೇಳಿದ್ದನ್ನೆಲ್ಲಾ ಗ್ರಹಿಸಿ ಚಾಚೂ ತಪ್ಪದ ಹಾಗೆ ನನಗೆ ಒಪ್ಪಿಸಿದ ನಿಷ್ಠಾವಂತ. ಆ ಡ್ರೈವರುಗಳ ಮಧ್ಯೆ ನೀನು ಅವನ್ನ ಗುರ್ತಿಸಲಿಲ್ಲ"

ಮೆಲ್ಲನೆ ಅವಳ ಕೆನ್ನೆ ತಟ್ಟಿದ. ಕತ್ತಿನಲ್ಲಿದ್ದ ನೀಲ ವಜ್ರದ ಕೊಂಬಿನ ಮೇಲೆ ಬೆರಳು ಸವರಿದ. ಅವನ ಮಾತು ಅರೆಬರೆ ಕೇಳಿಸಿಕೊಂಡು ಸೋಲುಗಣ್ಣು ಎತ್ತಿದಳು.

"ಪರಿಚಯ ಆಗ್ಲಿಲ್ಲ...ಆದರೆ ನನ್ನ ಪ್ರೇಮಿಸಿದ್ಲು. ಮದುವೆ ಆಗ್ತೀನಿ ಅಂದ್ಲು

"ಕಾಮಿನಿ ರತ್ನೆ ನಿನಗೆ ಯಾಕೆ ಪರಿಚಯ ಆಗ್ಲಿಲ್ಲ?"

ಓರೆಗಣ್ಣಿನಲ್ಲಿ ನೋಡಿ ವ್ಯಂಗ್ಯದಲ್ಲಿ ಹೇಳಿದ. ಅವಳಿಗೆ ಮಂಪರು ಏರಿತ್ತು. ಮಾತಿನ ಅಣಕು ಅರ್ಥವಾಗದೆ ಕಣ್ಣು ಕಿರಿದು ಮಾಡಿದಳು.

"ಅವಳು, ಆ ಪ್ರೊಫೆಸರ್, ಮತ್ತೆ ನವೀನ ಒಟ್ಟಾಗಿ ಸೇರಿ ನನ್ನ ಅಣ್ಣನ ಜೀವಕ್ಕೆ ಸಂಚಕಾರ ತಂದ್ರು ಅಂದರೆ ನೀನು ನಂಬ್ತೀಯಾ ?"

ಅವನ ಎದೆಗೆ ಬೆರಳು ಒತ್ತಿ ಕೇಳಿದಳು. ಅವನು ನಕಾರದಲ್ಲಿ ತಲೆ ಒದರಿದ.

"ನಂಬೋದಿಲ್ಲ...ಸತ್ತು ಬಿದ್ದಿರೋ ಒಂದು ಮೀನನ್ನ ಕೋಲಿನಿಂದಲೂ ಮುಟ್ಟಲಾರದಷ್ಟು ನರಸತ್ತ ಜನ ಅವರು"

ನಿದ್ರೆಗಣ್ಣು ತೇಲಿಸಿ ಮುಖ ಎತ್ತಿದಳು. ಮತ್ತೆ ತಲೆ ಪಕ್ಕಕ್ಕೆ ವಾಲಿಸಿದಳು. ವಜ್ರದ ಕೊಂಬು ಕತ್ತು ಒತ್ತಿತು. ನಿಶ್ಶಕ್ತ ಬೆರಳುಗಳಿಂದ ಅದನ್ನು ಸರಿಪಡಿಸಿದಳು.



ನೋಡಯ್ಯ, ನನ್ನ ಹೆಂಡತಿ ಮುಖ ಚೆನ್ನಾಗಿ ಬರದೆ ಇದ್ದರೂ ಪರವಾಗಿಲ್ಲ ಸೀರೆ ಮತ್ತು ಒಡವೆಗಳು ಚೆನ್ನಾಗಿ ಫೋಟೋದಲ್ಲಿ ಬಂದರೆ ಸಾಕಂತೆ...

ನಮ್ಮೆಲ್ಲ ಗ್ರಾಹಕರಿಗೂ ಹಾಗೂ ಹಿತೈಷಿಗಳಿಗೂ

ದೀಪಾವಳಿಯ ಹಾರ್ದಿಕ ಶುಭಾಶಯಗಳು



# ಜನತಾ ಬಜಾರ ವಿಜಾಪೂರ

ಫೋನ್ : 272

## ದಿ ವಿಜಾಪೂರ ಸೆಂಟ್ರಲ್ ಕೋ-ಆಪರೇಟಿವ್ ಹೋಲಸೇಲ್ ಸ್ಟೋರ್ಸ್

## ನಿಯಮಿತ, ಅಂಗ ಸಂಸ್ಥೆ, ವಿಜಾಪೂರ.

**ತನ್ನದೇ ಆದ ಸ್ವಂತ ಕಟ್ಟಡದಲ್ಲಿ ಮಾರಾಟ ಪ್ರಾರಂಭಿಸಲಾಗಿದೆ.**

## ಗ್ರಾಹಕರ ಕಾಮಧೇನು

**ಯೋಗ್ಯ ದರದಲ್ಲಿ ಉತ್ತಮ ತರಗತಿಯ ವಸ್ತುಗಳು ದೊರೆಯುವ**

**ಏಕಮೇವ ಸಹಕಾರಿ ಸಂಸ್ಥೆ**

ಇಲ್ಲಿ ನಿತ್ಯ ಬಳಕೆಗೆ ಬೇಕಾಗುವ ಸಕಲ ವಸ್ತುಗಳನ್ನು ಯೋಗ್ಯ ದರದಲ್ಲಿ ಪಡೆದು ನಿಮ್ಮ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಿ ಕೊಳ್ಳಿ. ನಯನ ಮನೋಹರ ಚಿತ್ತಾಕರ್ಷಕ ಸೀರೆಗಳು ಧೋತರ ಜೋಡಿಗಳು, ಹಾಗೂ ಶರ್ಟಿಂಗ, ಕೋಟಿಂಗ, ಹೊಸ ಭರಪೂರ ಸ್ಟಾಕ್, ಥಳ ಥಳಿಸುವ ಸ್ಟೇನಲೆಸ್ ಸ್ಟೀಲ್ ಗೃಹೋಪಯೋಗಿ ವಸ್ತುಗಳು ಅಲ್ಲದೇ ಇತರ ನಾಲ್ಕು ಸಾವಿರಕ್ಕೂ ಹೆಚ್ಚು ನಮೂನೆಯ ವಿವಿಧ ವಸ್ತುಗಳ ಆಗರ.

# ಜನತಾ ಬಜಾರ

**ಅಗ್ಗ ದರದ (Controlled) ಬಟ್ಟೆಗಳ ಬಗ್ಗೆ ಹಾಗೂ ಜನತಾ ಸೀರೆಗಳಿಗಾಗಿ**

**ಇಂದೇ ನಿಮ್ಮ ಜನತಾ ಬಜಾರಕ್ಕೆ ಸಂದರ್ಶಿಸಿರಿ.**

| | | |
|---|---|---|
| ಶ್ರೀ ಟಿ. ಎಸ್. ಪಾಟೀಲ<br>ಬಿ. ಎ.<br>ಮ್ಯಾನೇಜರ | ಶ್ರೀ ಬಿ. ಎಸ್. ಹಿರೇಮಠ<br>ಬಿ. ಎ., ಬಿ. ಕಾಂ.<br>ಜನರಲ್ ಮ್ಯಾನೇಜರ | ಶ್ರೀ ಎಸ್. ಡಿ. ಕುಮಾನಿ<br>ಪ್ರೆಸಿಡೆಂಟ |

## ಕಾರ್ಯನಿರ್ವಾಹಕ ಮಂಡಳಿಯ ಸದಸ್ಯರು

| | |
|---|---|
| ೧) ಶ್ರೀ ಎಸ್. ಡಿ. ಕುಮಾನಿ | ಅಧ್ಯಕ್ಷರು |
| ೨) ಶ್ರೀ ಆರ್. ಎಂ. ಪಾಟೀಲ | ಡಾಯರೆಕ್ಟರ |
| ೩) ಶ್ರೀ ಬಿ. ಆರ್. ಪಾಟೀಲ | " |
| ೪) ಶ್ರೀ ಎಸ್. ಎಸ್. ಪಾಟೀಲ | " |
| ೫) ಶ್ರೀ ವಿ. ಜಿ. ಹಗರಗೊಂಡ | " |
| ೬) ಶ್ರೀ ಎಚ್. ಎಂ. ಅಂಬಿಗೇರ | " |
| ೭) ಶ್ರೀ ವಿ. ಬಿ. ತಾಳಿಕೋಟಿ | " |
| ೮) ಶ್ರೀ ಎಂ. ಎಚ್. ಅಲೂರ | " |
| ೯) ಶ್ರೀ ಎಸ್. ಎನ್. ಹೇರಲಗಿ | ಡಾಯರೆಕ್ಟರ |
| ೧೦) ಶ್ರೀ ಎಸ್. ಆರ್. ಹೇರಲಗಿ | " |
| ೧೧) ಶ್ರೀಮತಿ ಎ. ಆರ್. ಬ್ಯಾಕೋಡ | " |
| ೧೨) ಶ್ರೀ ಎ. ಎಂ. ಕಲಾದಗಿ | " |
| ೧೩) ಶ್ರೀ ವಿ. ಆರ್. ಘೋರ್ಪಡೆ | " |
| ೧೪) ಡೆಪ್ಯೂಟಿ ರಜಿಸ್ಟ್ರಾರ ಸಹಕಾರಿ ಸಂಘಗಳು ವಿಜಾಪೂರ | " |
| ೧೫) ಜನರಲ್ ಮ್ಯಾನೇಜರ | |

"ನನಗೆ ಗೊತ್ತು...ನೀನು ಕೆಂಪು ವಜ್ರದ ಕೊಂಬು ಕಾಮಿನಿ ರತ್ನೆಗೆ ಮಾಡಿಸಿದ್ದು" ಗಹಗಹಿಸಿದಳು.

"ಸರಿಯಾಗಿ ಹೇಳ್ದೆ. ನಿಮ್ಮಣ್ಣ ಅವಳಿಗೆ ನೀಲಿ ವಜ್ರದಲ್ಲಿ ಮಾಡಿಸ್ದ. ನಾನು ಸ್ಪರ್ಧೆ ಮೇಲೆ ಕೆಂಪು ವಜ್ರದ್ದು ಮಾಡಿಸ್ದೆ."

ತರಂಗಗಳಲ್ಲಿ ನಗೆ ತೂರಿದಳು.

"ನಮ್ಮಣ್ಣನ ಹಾಗೆ ನೀನೂ ಅವಳನ್ನು ಪ್ರೀತಿಸಿದೆಯೇನು?"

ಅವನ ಎದೆಗೆ ಮೆಲ್ಲನೆ ಬಾರಿಸಿದಳು. ಅವಳ ಕೈ ಹಿಡಿದು ಚುಂಬಿಸಿದ.

"ಅವಳನ್ನ ನಾನೇ ಮೊದಲು ಪ್ರೀತಿಸಿದೋನು...ಅವಳಿಗೋಸ್ಕರ ಹಣ ನೀರಿನ ಹಾಗೆ ಸುರಿದೆ. ಆಮೇಲೆ ನಿಮ್ಮಣ್ಣ ಧೂಮಕೇತು ಹಾಗೆ ಬಂದ. ಒಬ್ಬ ಸಾಮಾನ್ಯ ಚಿತ್ರಕಾರನಿಗೆ ಕಾಮಿನಿ ರತ್ನೆ ಅಷ್ಟೊಂದು ಸೋತು ನನ್ನ ದೂರ ಮಾಡ್ತಾಳೇಂತ ಭಾವಿಸ್ಲಿಲ್ಲ."

ಕಣ್ಣಿನ ಸಮೀಪಕ್ಕೆ ಕೈಗಡಿಯಾರ ಹಿಡಿದು ನೋಡಿದಳು. ಎಲ್ಲವೂ ಮಂಜು. ಸಂಖ್ಯೆಗಳ, ಮುಳ್ಳುಗಳ ಗಲಿಬಿಲಿ.

"ಪೋಪ್ಲ ಬರೊ ಹೊತ್ತು ಮೀರಿದೆ..."

"ಪೋಪ್ಲ ಇಲ್ಲಿಗೆ ಈಗ ಬರೋದೇ ಇಲ್ಲ...ಯಾಕೆ ಅಂತ ಕಷ್ಟಪಟ್ಟು ಕೇಳಬೇಡ...ಪೋಪ್ಲ ನಿನಗೆ ಬೋರಿವಲಿಯಲ್ಲಿ ಹೇಳಿದ್ದೆಲ್ಲಾ ಒಂದು ಭಾರೀ ಕಟ್ಟುಕಥೆ. ಅವನು ಹೇಳಿದ ಹಾಗೆ ದೀಪಕ, ಮಲ್ಹೋತ್ರ, ನವೀನ, ಕಾಮಿನಿ ರತ್ನೆ ಕನ್ಹೇರಿಯಲ್ಲಿ ಸೇರ್‍ಲಿಲ್ಲ...ನಿನ್ನ ಇಲ್ಲಿಗೆ ಬರೋ ಹಾಗೆ ಮಾಡೋದಿಕ್ಕೆ ನಾನು ಅವನಿಂದ ಹೇಳಿಸಿದ ಸುಳ್ಳು ಕಥೆ ಅದು..."

ಅವನ ವಿಕಟ ನಗೆ ಕೇಳಿತು. ಗೋಡೆಯ ದಿಂಬಿಗೆ ತಲೆ ಒರಗಿಸಿ ಕೊರಗಿದಳು.

"ಆ ಸ್ಮಗ್ಲರ್ ನವೀನ ನಿನ್ನ ಸ್ನೇಹಿತನೆ?... ಫೂಲ್!" ಸ್ವರ ಕ್ಷೀಣಿಸುತ್ತಿತ್ತು. ಹಲ್ಲು ಕಚ್ಚಿದಳು.

"ನವೀನ ಸ್ಮಗ್ಲರ್ ಅಲ್ಲ...ನಾನು ಸುಪ್ರಸಿದ್ಧ ಸ್ಮಗ್ಲರ್: ಅವನು ಕೇಂದ್ರದ ಕೆಂಗೆ ಕಟ್ಟೆ ಇಲಾಖೆಯೋನು..."

ಅಗಾಧ ನಿಶ್ಶಕ್ತತೆಯಲ್ಲಿ ಭಾರವಾದ ತಲೆ ಎತ್ತಿದಳು.

"ಯಾರು?...ಯಾಕೆ ಹೀಗೆ?"

ಶಕ್ತಿ ಮೀರಿ ಬಂತು ಪ್ರಶ್ನೆಗಳ ಸ್ವರ.

"ಯಾಕೇಂದ್ರೆ ನೀನು ವಿಪರೀತ ಪ್ರಶ್ನೆ ಕೇಳ್ತಿದೀಯ."

ದೂರದಿಂದ ಬಂದ ಹಾಗೆ ಕೇಳಿತು. ಕುಸುಮಾಕರನ ಬಿರುಸು ಕಂಠ. ಅವನ ವಿಕೃತ ನಗೆ ಕೋಣೆಯೆಲ್ಲಾ ಹೊಗೆಯಂತೆ ಆವರಿಸಿತು.

ಅವಳ ಕಿವಿಗೆ ತುಟಿ ಸ್ಪರ್ಶಿಸಿ ಹೇಳಿದ.

"ಯಾಕೇಂದ್ರೆ... ಅವತ್ತು ನಿಮ್ಮಣ್ಣ ದೀಪಕನೊಂದಿಗೆ ಕನ್ಹೇರಿ ಗುಹೆಗಳ ಕಡೆಗೆ ಹೋಗೋದು ಒಬ್ಬನೇ ಮನುಷ್ಯ... ಆ ಮನುಷ್ಯ ನಾನೇ!"

ಅವಳು ತಲೆ ಎತ್ತಲು ಸೆಣಸಿದಳು. ಉಸಿರಾಟಕ್ಕೆ ಹಾತೊರೆದಳು. ಕಣ್ಣುಗಳ ಮುಂದೆ ಕಪ್ಪು ತೆರೆ ಹರಡಿತ್ತು. ತೆರೆಯ ಮೇಲೆ ಬಣ್ಣದ ಸಹಸ್ರ ನಕ್ಷತ್ರಗಳು ಸಿಡಿದೇರಿದವು.

* * *

ತೆಳುಗಾಳಿ 'ಸುಂಯ್'ಗುಟ್ಟಿತು. ತಲೆಯಲ್ಲಿ ಸಿಡಿತದ ನೋವು. ಅರ್ಚನಾ ಮೆಲ್ಲನೆ ನರಳಿ ಕಣ್ಣು ತೆರೆದಳು. ಕಿಟಕಿಯ ಸೀಳಿನಿಂದ ಬೆಳ್ಳಿ ಬೆಳಕು ತೂರಿ ಬಂದಿತ್ತು. ತಗ್ಗಿನ ಹೆಂಚು ಚಾವಣಿಯ ವಿಶಾಲ ಕೋಣೆ.

ಉಸಿರಾಟಕ್ಕೆ ಭೀತಿ ತಡೆ ಹಾಕಿತ್ತು. ಎದೆಯಲ್ಲಿ ಸುತ್ತಿಗೆ ಬಡಿತ... ತಾನೆಲ್ಲಿರುವೆ?

ನೆನಪಿನ ಮೇಲೆ ತೆಳು ಹೊದಿಕೆ... ಹೊದಿಕೆ ನಿಧಾನವಾಗಿ ಸರಿಯಿತು

ಮಲಬಾರ್ ಹಿಲ್ ಏರಿದ ಕಾರು... ನುಣುಪು ಹಾಸುಗಲ್ಲಿನ ಮೇಲೆ ನಡಿಗೆ... ಮುಹಡಿ ಮೆಟ್ಟಲು... ಪಿರ್‌ಮಿಡ್ ಆಕಾರದ ಸಿಹಿ ತಿನಿಸು.........

ಸಿಹಿಯಲ್ಲಿನ ನಿದ್ರೆಯ ಮದ್ದು! ಮಿದುಳಿನ ಮೇಲೆ ಹರಡಿದ ಮಂಪರು!

ಎದುರು ಬಾಗಿಲಿನ ಬೀಗ 'ಕಟ್' ಎಂದು ತೆರೆಯಿತು. ಹೊರಗಿನ ಕತ್ತಲು ಆವರಣ ಕಾಣಿಸಿತು. ಲಾಂದ್ರ ಹಿಡಿದ ಕೈ ಒಳ ಬಂತು. ಪರಿಚಿತ ಕೈ!

ಪುನಃ ಬಾಗಿಲು ಮುಚ್ಚಿತು. ಲಾಂದ್ರ ಮುಂದಕ್ಕೆ ಚಲಿಸಿ ಮೇಲೆದ್ದಿತು.

"ಸ್ವಲ್ಪ ಮುಂಚಿತವಾಗಿ ಪ್ರಜ್ಞೆ ಪಡೆದಿದೀಯ"

ಕುಸುಮಾಕರ ಲಾಂದ್ರ ನೆಲಕ್ಕಿಟ್ಟು ಅವಳ ಪಕ್ಕ ಕುಳಿತ.

"ನಾನು ಹೋಗ್ಬೇಕು"

ಅದು ತನ್ನ ಧ್ವನಿಯೇ ಎಂಬ ಅಚ್ಚರಿ ಅವಳಿಗೆ.

"ಆತುರ ಯಾಕೆ? ಇದು ನನ್ನ ಸ್ವಂತದ ಮನೆ... ನೀನು ಇಲ್ಲಿಂದ ಹೋಗೋ ಹಾಗಿಲ್ಲ... ನೀನು ಅಪಾಯಕಾರಿ!"

ಅವನ ಗಂಭೀರ ಹೇಳಿಕೆ ಅವಳಲ್ಲಿ ಚಳಿ ಹತ್ತಿಸಿತು.

"ಅಪಾಯಕಾರಿ? ನಾನು ಬೊಂಬಾಯಿಗೆ ಬಂದಿದ್ದು..."

"ಹಾಗೆ ನೀನು ಬಂದಿದ್ದು ನನ್ನ ಅದೃಷ್ಟ... ನವೀನ ದಾಮ್ಲೆ ಡೆಲ್ಲಿಯಿಂದ ಪಂಜಾಬ್ ಮೈಲ್‌ನಲ್ಲಿ ಹೊರಟ ಕೂಡ್ಲೆ ನನ್ನ ಕಡೆಯೋರು ಸುದ್ದಿ ಕೊಟ್ರು. ಅವನು ವಿ.ಟಿ. ಸ್ಟೇಷನ್‌ನಲ್ಲಿ ಇಳಿದ. ನಾನು ಬಂದಿದ್ದು ನವೀನನ ಮೇಲೆ ಗಮನ ಇಡೋದಿಕ್ಕೆ. ಅವನ ಜೊತೆಯಲ್ಲಿ ನೀನಿದ್ದೆ. ಹೋಟೇಲ್ ಅಮರ್‌ನಲ್ಲಿ ನಿನ್ನ ಬಿಟ್ಟು ಹೋದ. ನಿನ್ನ ಉಸಾಬರಿ ಯಾಕೇಂತ ನಿರ್ಲಕ್ಷಿಸಿ ಹೋಗೋದ್ರಲ್ಲಿದ್ದೆ. ಅದೆಂತಹ ಆಕಸ್ಮಿಕ! ನೀನು ಡೈನಿಂಗ್‌ಹಾಲ್‌ನಲ್ಲಿ ಚರ್ಮದ ಕೈಚೀಲ ಮರೆತು ಹೋದೆ. ಅದರಲ್ಲಿ ಕಂಡಿದ್ದು ನಿನ್ನ ಅಣ್ಣ ಬರೆದ ಕಾಮಿನಿ ರತ್ನೆಯ ಚಿತ್ರದ ಫೋಟೋ! ನನ್ನ ಬದುಕು ಕೆದಕಿದ ದೀಪಕ ಪಾವನ್‌ನ ಸಹೋದರಿ ನೀನು ಅಂತ ಗೊತ್ತು ಮಾಡಿಕೊಳ್ಳೋದು ಕಷ್ಟ ಆಗ್ಲಿಲ್ಲ."

"ನನ್ನ ಅಣ್ಣ ಬೇರೆಯೋರ ವಿಷಯದಲ್ಲಿ ತಲೆ ಹಾಕದ ಮನುಷ್ಯ." ಏದುಸಿರಿನಲ್ಲಿ ಹೇಳಿದಳು.

"ನನ್ನ ಸೊತ್ತಿಗೆ ಕೈ ಹಾಕ್ದ"

## ಕೈ ಹಚ್ಚಿ ಕೆಣಕಬೇಡಿ



ನಿನ್ನ ನಡಿಗೆಯಲಿ ನವಿಲಿನ ಬೆಡಗು
ನಿತಂಬ ಮದಗಜದ ಗಂಡಸ್ಥಳ
ಕಟಿ ನೋಡೆ ಸಿಂಹದ ನೆನಪು
ಎದೆಯಲಿ ಜೊತೆ ಪಾರಿವಾಳ
ಕಂಠದಲಿ ಕೋಗಿಲೆ
ಕಣ್ಣೆವೆಯ ಚಲನ, ಕಮಲದ ಸುತ್ತಲಿನ
ಭೃಂಗಗಳ ಸ್ಮರಣ
ನಿನ್ನ ವೇಣಿ ಕಾಳ ಸರ್ಪದ ಗುರುತು
ಒಟ್ಟಿನಲಿ ನೀನೊಂದು zoo ಎಂದೆ ನಾನು.
"ಪಕ್ಷಿ ಪ್ರಾಣಿಗಳಿಗೆ ಕೈಹಚ್ಚಿ ಕೆಣಕಬೇಡಿ."
ಎಂಬ zooದ ನೋಟಿಸು ಮಾತ್ರ
ನೆನಪಾಗುವುದಿಲ್ಲವೇನು? ಎಂದು
ಕೇಳಿದಳು ಆ ಬೆಡಗಿ ತಾನು.

ಅನಂತ ಕಲ್ಲೋಳ

"ನಿನ್ನ ಸೊತ್ತು?" ಜಿಗುಪ್ಸೆಯಿಂದ ಹೂಂಕರಿಸಿದಳು.

"ನನ್ನ ಪ್ರೇಮದ ಸೊತ್ತು... ಕಾಮಿನಿ ರತ್ನ! ನಾನು ಪ್ರೇಮಿಸಿದ ನರ್ತಕಿ ನಿನ್ನ ಅಣ್ಣನ ತೋಳಿಗೆ ಹೊರಟು ಹೋದ್ಲು, ನನ್ನ ಹಣಕ್ಕೆ ತಿರಸ್ಕಾರ! ನಾನು ಅಲ್ಲಾಡಿಸದ ಹಾಗೆ ಬೆಳೆದು ಹೋಯ್ತು ಅವರ ಪ್ರೇಮ... ಅವರಿಬ್ಬರೂ ಡೆಲ್ಲಿಗೆ ಹೋಗಿ ಮದುವೆ ಆಗುವ ತೀರ್ಮಾನಕ್ಕೆ ಬಂದ್ರು..."

ಅರ್ಚನಾಗೆ ತಟ್ಟನೆ ನೆನಪಿಗೆ ಬಂತು ಅಣ್ಣ ತನಗೆ ಬರೆದ ಅಂತಿಮ ಪತ್ರದಲ್ಲಿ, ಡೆಲ್ಲಿಗೆ ಇಳಿಯುತ್ತಲೇ ತನಗೆ ಸೋಜಿಗ ಕಾದಿರುವುದಾಗಿ ತಿಳಿಸಿದ್ದ... ಡೆಲ್ಲಿಯಲ್ಲಿ ಕಾಮಿನಿ ರತ್ನಯೊಂದಿಗೆ ಮದುವೆ!

"ದೀಪಕ ತಪ್ಪು ಮಾಡ್ಲಿಲ್ಲ" ತಡವರಿಸಿದಳು.

ಕತ್ತಲಿನಲ್ಲಿ ಬೆಂಕಿ ಚರ್ರನೆ ಹೊತ್ತಿತ್ತು. ಅವನು ಸಿಗರೇಟು ಹೊತ್ತಿಸಿದ್ದ.

"ತಪ್ಪು ಮಾಡದಿದ್ರೂ, ಕೆಲವರಿಗೆ ಶಿಕ್ಷೆ ತಪ್ಪೋದಲ್ಲ. ಅಪ್ರತ್ಯಕ್ಷವಾಗಿ ಅವನು ನನ್ನ ಪ್ರೇಮದ ವ್ಯವಹಾರದಲ್ಲಿ ತಲೆ ಹಾಕಿದ್ದ. ದೀಪಕ ಬೋರಿವಿಲಿ ಹೋಟೆಲಿನಲ್ಲಿದ್ದ. ಮಲ್ಹೋತ್ರ ಅವನ ಪಕ್ಕದ ಕೋಣೆಯಲ್ಲಿದ್ದ. ಅವನು ಇಲ್ಲದ ಸಮಯದಲ್ಲಿ ನಾನು ದೀಪಕನ್ನ ಕಪ್ಪು ಗಾಜಿನ ಕಾರಿನಲ್ಲಿ ಕನ್ಹೇರಿ ಗುಹೆಗಳಿಗೆ ಒಯ್ದೆ. ಜೊತೆಯಲ್ಲಿ ನಂಬರು ಅಳಿಸಿದ ಒಂದು ಹಳೆಯ ರಿವಾಲ್ವರ್ ತೊಗೊಂಡು ಹೋದೆ. ಅವತ್ತು ಒಬ್ಬ ಪ್ರವಾಸಿಯೂ ಇರ್ಲಿಲ್ಲ... ನಿರ್ಜನವಾದ ಕಡೇ ಗುಹೆಯ ಹತ್ತಿರ ಅವನ ಮೇಲೆ ರಿವಾಲ್ವರ್ ಪ್ರಯೋಗಿಸ್ದೆ. ಹೆಚ್ಚು ಶಬ್ದ ಆಗದ ಹಾಗೆ- ರಿವಾಲ್ವರ್‌ನಳಿಕೆ ಮುಂದೆ ಬಟ್ಟೆ ಬಳಸಿದ್ದೆ. ಗುಹೆಯ ಪಕ್ಕದ ಮರಗಳ ಗುಂಪಿನಲ್ಲಿ ದೇಹ ಸೇರಿಸ್ದೆ. ರಿವಾಲ್ವರ್ ಚೆನ್ನಾಗಿ ಒರೆಸಿ ಸತ್ತವನ ಕೈಯಲ್ಲಿ ಚೆನ್ನಾಗಿ ಒತ್ತಿಟ್ಟು ಬಂದೆ... ಅದು ದೀಪಕನ ಆತ್ಮಹತ್ಯೆ!"

ಅವನು ಎದ್ದು ನಿಂತು ನಿಕಾರವಾಗಿ ಗಹಗಹಿಸಿದ. ಅರ್ಚನಾ ಮೆಲ್ಲನೆ ಚೀರಿದಳು.

"ನನ್ನ ಯಾಕೆ ಇಲ್ಲಿಗೆ ಕರೆತಂದಿದ್ದು?"

ಥರಗುಟ್ಟುತ್ತಾ ಗೋಡೆಗೆ ಒರಗಿ ನಿಂತಳು.

ಕತ್ತಲಿನಲ್ಲಿ ಸಿಗರೇಟಿನ ತುದಿ ಹೆಚ್ಚು ಕೆಂಪಾಗಿ ಕಾಣಿಸಿತು.

"ಪ್ರಕರಣ ಮುಗೀತು ಅಂತ ನಾನು ನಿಶ್ಚಿಂತನಾಗಿದ್ದೆ. ಮೂರು ತಿಂಗಳಾದ ಮೇಲೆ ನೀನು ಡೆಲ್ಲಿಯಿಂದ ಬಂದೆ. ನಿನ್ನ ಕೈಚೀಲದಲ್ಲಿ ಕಾಮಿನಿಯ ಫೋಟೋ ನೋಡಿದಕೂಡಲೇ ನಿನ್ನಿಂದ ತೊಂದರೆ ಇದೆ ಅಂತ ತಿಳಿದೆ.... ನನ್ನ ಸಹಾಯಕ ಮೋಪ್ಲನ್ನ ನಿನ್ನ ಮೇಲೆ ಕಣ್ಣಿಡಲಿಕ್ಕೆ ನೇಮಿಸ್ದೆ... ಅಣ್ಣನ್ನ ದಫನ್ ಮಾಡಿದ ನೆಲ ನೋಡ್ತೀನಿ ಅಂತ ಬೋರಿವಿಲಿಗೆ ಹೋದೋಳು ಪೋಲೀಸ್ ಠಾಣೆಯಲ್ಲಿ ವಿಪರೀತವಾಗಿ ವಿಚಾರಿಸ್ದೆ. ಆತ್ಮಹತ್ಯೆ ಅನ್ನೋ ವಿಷಯದಲ್ಲಿ ಸಂಶಯ ವ್ಯಕ್ತಪಡಿಸ್ದೆ.... ಆಮೇಲೆ ಸದಾ ನನ್ನ ಮೇಲೆ ಕಣ್ಣಿಟ್ಟಿರೊ ನವೀನನ ಜೊತೇಲಿ ಓಡಾಡೋಕೆ ಪ್ರಾರಂಭ ಮಾಡ್ದೆ...ನಿನ್ನ ಕುತ್ತಿಗೆಯಲ್ಲಿ ನೀಲಿ ವಜ್ರದ ಕೊಂಬು! ನಿನ್ನ ಪ್ರತಿಕ್ರಿಯೆ ತಿಳಿಯೋದಿಕ್ಕೆ ನನ್ನ ಕೈಮೇಲೆ ಹಸಿರು ಕೊಂಬಿನ ಚಿತ್ರ ಬರೆಸಿಕೊಂಡೆ. ನೀನು ವಿಷಯನ ನನ್ನ ಮುಂದೆ ಬಿಚ್ಚಲೇ ಇಲ್ಲ... ಆ ಶತ್ರು ನವೀನ ನನ್ನ ಬಗ್ಗೆ ಏನೂ ಗೊತ್ತಿಲ್ಲ ಅನ್ನೋ ತರಹ ನಿನ್ನಲ್ಲಿ ನಟಿಸಿ ಕಾದು ಕುಳಿತ. ಕಾಮಿನಿ ರತ್ನ ನಿನಗೆ ಕಾಣಿಸಿಕೊಂಡ್ಲು. ನಿನಗೇ ಗೊತ್ತಿಲ್ಲದ ಹಾಗೆ ಈ ಪ್ರಕರಣ ಅಂತಿಮ ಘಟ್ಟಕ್ಕೆ ಏರ್ತು... ನಿನ್ನ ಇಲ್ಲಿಗೆ ಬರೊ ಹಾಗೆ ಮಾಡಲೇ ಬೇಕಾಯ್ತು"

"ಅದು ಯಾಕೆ?" ಚೀರು ಕಂಠದಲ್ಲಿ ಕೇಳಿದಳು.

ಉತ್ತರಿಸುವ ಬದಲು ಅವಳ ಭುಜಗಳ ಮೇಲೆ ಕೈಯಿಟ್ಟು ಸಮೀಪದಿಂದ ಮುಖ ನೋಡಿದ. ಸಂಮೋಹನ ದೃಷ್ಟಿ ಅವಳನ್ನು ಇರಿಯಿತು. ಅವಳ ಹಣೆ, ಕೆನ್ನೆ, ಕತ್ತಿನ ಮೇಲೆ ಚುಂಬನದ ಮಳೆಗರೆದ.

"ಬಿಡು ನನ್ನ..."

ಬಂಧನದಿಂದ ಸರಿದು ಏದುಸಿರು ಹಾಕಿದಳು. ಅವಳ ಕೈ ಬಿಗಿಯಾಗಿ ಹಿಡಿದು ಹಿಂದಿನ ಬಾಗಿಲು ನೋಡಿ ಹೇಳಿದ.

"ನಿನ್ನ ಪ್ರೇಮಿಸೋದಕ್ಕೆ, ನಿನ್ನ ಮೇಲೆ ಅತ್ಯಾಚಾರ ನಡೆಸೋದಿಕ್ಕೆ ಇಲ್ಲಿಗೆ ಕರೆತರಲಿಲ್ಲ, ಹುಡುಗಿ. ರೂಪದಲ್ಲಿ ನಿನ್ನ ಮೀರಿಸಿದ ನೂರು ಹೆಣ್ಣುಗಳಿವೆ ನನ್ನ ವಶದಲ್ಲಿ... ಈಗ ನಾನು ಅಪಾಯದಲ್ಲಿದೀನಿ... ಆ ಹಿಂದಿನ ಬಾಗಿಲು ತೆಗೆದರೆ ಕಾಣೋದು ಕಲ್ಲು, ಬಂಡೆಗಳ ಪ್ರಪಾತ... ಇನ್ನೂರು ಅಡಿಗಳ ತಳಕ್ಕೆ ನಿನ್ನ ದೇಹ ಬಿದ್ದು ಹೋಗತ್ತೆ!... ಆಗ ನಿನ್ನ ಮರಣವೂ ಆತ್ಮಹತ್ಯೆ ಅಂತ ಆಗಿ ಹೋಗುತ್ತೆ..."

"ರಾಕ್ಷಸ!"

ಭೀಕರವಾಗಿ ಚೀತ್ಕರಿಸಿ ಅವನ ಹಿಡಿತದಿಂದ ಬಲವಾಗಿ ಕೈ ಕೊಡವಿದಳು. ಮುಂಬಾಗಿಲಿಗೆ ಹಾರಿ ಹಿಡಿ ಹಿಡಿದು ಜಗ್ಗಿದಳು. ಸಡಿಲಗೊಂಡ ಬಾಗಿಲು ಎಳೆಯುವ ಮೊದಲೇ ಕುಸುಮಾಕರ ಮಿಂಚಿನ ವೇಗದಲ್ಲಿ ಜಿಗಿದು ಅವಳನ್ನು ಮತ್ತಷ್ಟು ಬಲವಾಗಿ ತಬ್ಬಿ ಹಿಡಿದು ಬಾಗಿಲಿಗೆ ಬೆನ್ನು ಒತ್ತಿದ.

ಇಬ್ಬರೂ ಪಕ್ಕದಿಂದ ಪಕ್ಕಕ್ಕೆ ಹೊರಳಿ ಸೆಣಸಾಟ ನಡೆಸುತ್ತಿದ್ದಂತೆ ಬಾಗಿಲು ನಿಧಾನವಾಗಿ ತೆರೆಯಿತು.

ಹೋರಾಟದ ಭರದಲ್ಲೂ ಅರ್ಚನಾಗೆ ನಸುಗತ್ತಲೆಯಲ್ಲಿ ಬಾಗಿಲಿನಿಂದ ಒಳಕ್ಕೆ ಸರಿದು ಬಂದ ಮಾಸಲು ಆಕೃತಿ ಕಾಣಿಸಿತು!

ಆಕೃತಿಯ ಕೈ ಏರಿತು. ವಸ್ತುವೊಂದು ಚಳಕ್ಕನೆ ಮಿಂಚಿತು.

ಅರ್ಚನಾ ಭ್ರಾಂತಿಗೊಳ್ಳುವಂತೆ ಕುಸುಮಾಕರನ ಉಕ್ಕಿನ ಹಿಡಿತ ಸಡಿಲಗೊಂಡಿತು. ಸದ್ದಿಲ್ಲದೆ ದೇಹ ಮುಂದಕ್ಕೆ ಬಾಗಿಸಿ ಕುಸಿದ... ಮುಖವಡಿಯಾಗಿ ದೇಹ ಹರಡಿ ಅಚಲನಾದ.

ಅವಳಿಗೆ ದೃಶ್ಯದ ಭೀಕರತೆ ಸ್ಫುಟವಾಗಿ ಕಂಡಿತು. ಕುಸುಮಾಕರನ ಬೆನ್ನಲ್ಲಿ ನಾಟಿ ನಿಂತ ಚೂರಿ!

"ಸತ್ತು ಹೋಯ್ತು ನಾಯಿ!"

ಕಾಲು ತುದಿಯಿಂದ ದೇಹ ಅಲುಗಿಸಿದ ಹೆಣ್ಣು ಆಕೃತಿ ತೀಕ್ಷ್ಣದೃಷ್ಟಿ ಕಣ್ಣುಗಳನ್ನು ಅರ್ಚನಾಳ ಕಡೆ ತಿರುಗಿಸಿತು.

"ಕಾಮಿನಿ ನನ್ನೆ!... ಏನಂ?"

ಒತ್ತು ಕಂಠ ಕಂಪಿಸಿತು.



"ನನ್ನ ಪ್ರೇಮಿ ದೀಪಕ ಕಾರಣವಿಲ್ಲದೆ, ಅನ್ಯಾಯವಾಗಿ ಇವನಿಂದ ಕೊಲೆ ಆದ... ನಾನು ಇವನ್ನ ನಿರ್ದಾಕ್ಷಿಣ್ಯವಾಗಿ ತೀರಿಸಿಬಿಟ್ಟೆ! ನನ್ನ ಕೆಲಸ ಪೂರೈಸ್ತು. ಪೋಲೀಸ್ನವರ ಕಣ್ಣು ತಪ್ಪಿಸಿ ಏನಗೆ ಎಚ್ಚರಿಕೆ ಕೊಡಲಿಕ್ಕೆ ಆಗ್ಲಿಲ್ಲ. ಜೊತೆಗೆ ಆ ನಮ್ಮ ಉದ್ದನೆಯ ವಿದೇಶಿ ಕಾರು ಎಲ್ಲಾ ಕಡೆಯೂ ಎದ್ದು ಕಾಣತ್ತೆ... ನಿನ್ನ ಕುತ್ತಿಗೆಯಲ್ಲಿರೋ ನೀಲಿ ವಜ್ರದ ಕೊಂಬು ನನಗೆ ಒಪ್ಪಿಸಿ ಬಿಡು. ಅದನ್ನ ನೀನು ಧರಿಸಬಾರದು. ಅದು ಏನ ಕೃತ್ಯ."

ಕೃತಜ್ಞವಾಗಿ ಅರ್ಚನಾ ಸೂಕ್ಷ್ಮತ್ತದ ಕಂಠಹಾರ ತೆಗೆದು ಅವಳ ಕೈಗಿತ್ತಳು.

"ನೀನು ನನ್ನ ಪ್ರಾಣ ಉಳಿಸ್ದೆ"

ಕಳಕಳಿಯಿಂದ ಉಸಿರಿದಳು. ಕಾಮಿನಿ ತಲೆ ಅಲುಗಿಸಿದಳು.

"ಮಾತಾಡೋದಿಕ್ಕೆ ವೇಳೆ ಇಲ್ಲ... ನೀನು ಈ ಸ್ಥಳದಲ್ಲೇ ಇರು. ಓಡ್ಬೇಡ... ಹೆದರ್ಬೇಡ. ನಾನು ಹೋಗ್ತಾ ಪೋಲೀಸ್‌ಗೆ ಫೋನ್ ಮಾಡ್ತೀನಿ. ಅವರು ನಿನ್ನ ಹುಡುಕೋದಿಕ್ಕೆ ಪ್ರಾರಂಭ ಮಾಡೋದ್ರಲ್ಲಿ ನನ್ನ ಇಟಾಲಿಯನ್ ಗಂಡನ ಜೊತೇಲಿ ಬಹಳ ದೂರ ಹೋಗ್ಬಿಟ್ಟಿರ್ತೀನಿ. ನಾನು ಮತ್ತೆ ನಿನ್ನ ಭೇಟಿ ಮಾಡೋದಿಲ್ಲ."

ಕಾಮಿನಿ ರತ್ನೆಯ ಮಾಸಲು ಆಕೃತಿ ಕತ್ತಲಿನಲ್ಲಿ ಕರಗಿ ಹೋಯಿತು. ತೆರೆದ ಬಾಗಿಲಿನಿಂದ ಭರ್ರನೆ ಗಾಳಿ ಬೀಸುತ್ತಿತ್ತು.

* * *

ಸೋಫಾದಲ್ಲಿ ಚಿತ್ರಾರ್ಪಿತಳಂತೆ ಕುಳಿತ ಅರ್ಚನಾಳ ಕೆನ್ನೆಗಳಿಗೆ ಹಿತವಾಗಿ ಎರಡು ಕೈಗಳಿಂದ ತಟ್ಟಿ ಮುಖದ ಹತ್ತಿರ ಮುಖ ತಂದು ಧೈರ್ಯ ನೀಡಿದ ನವೀನ.

"ಯಾಕೆ ಮಂತ್ರಕ್ಕೆ ಸಿಕ್ಕಿದವರ ಹಾಗೆ ಕೂತಿದೀರಿ. ಪೋಲೀಸ್ ನಿಮ್ಮನ್ನು ಹಿಡಿಯೋದಿಲ್ಲ. ಕುಸುಮಾಕರನ್ನ ತೀರಿಸಿದ ಹೆಣ್ಣು ಪೋಲೀಸ್‌ಗೆ ಫೋನ್ ಮಾಡಿ, ವಿವರ ಸಂಕ್ಷೇಪವಾಗಿ ಕೊಟ್ಟು ಹಾರಿ ಹೋಗಿದ್ದಾಳೆ. ಚೂರಿ ಹಿಡಿಯ ಮೇಲೆ ಅವಳ ಬೆರಳು ಗುರುತೇ ಸಿಕ್ಕೋದು... ಕುಸುಮಾಕರ ನಮಗೆಲ್ಲಾ ಬಹಳ ದಿನಗಳಿಂದ ಹಿಡಿತಕ್ಕೆ ಸಿಗಬೇಕಾಗಿದ್ದ ಕಳ್ಳವಸ್ತು ಸಾಗಣೆದಾರ... ಸ್ಮಗ್ಲರ್!"

ತನಗೆ ಸಂಬಂಧಿಸದ ವಿಷಯ ಅದು ಎಂಬಂತೆ ಅವನತ್ತ ಕೋಪದ ಕಣ್ಣು ಹರಿಸಿದಳು. ತಲೆ ಕೆರೆದು ಹೇಳಿದ.

"ನಿಮ್ಮಣ್ಣನ ಮರಣ ಆತ್ಮಹತ್ಯೆ ಅಂತ ಪೋಲೀಸ್ ಇಲಾಖೆ ಪ್ರಕರಣ ಮುಗಿಸಿ ಕುಳಿತರೆ ನನ್ನ ತಪ್ಪೇನು? ನಮ್ಮ ಇಲಾಖೆ ಸುಮ್ಮನೆ ಕೂಡ್ಲಿಲ್ಲ. ಕಾಮಿನಿ ರತ್ನೆಯ ಜೊತೇಲಿ ಒಂದು ಸಾರಿ ಕುಸುಮಾಕರನ್ನ, ಮತ್ತೊಂದು ಸಾರಿ ದೀಪಕನ್ನ ಗಮನಿಸಿದ ನಾವು ಮೂವರನ್ನೂ ಗಮನದಲ್ಲಿಟ್ಟಿದ್ವಿ. ದೀಪಕ ಹೋದ ಮೇಲೆ ನಾನು ಡೆಲ್ಲಿಗೆ ಬಂದೆ. ಮೂರು ತಿಂಗಳು ಸುಮ್ಮನೆ ಇದ್ದು ಏಕ್‌ದಂ ಬೊಂಬಾಯಿಗೆ ಹೊರಟ್ರಿ ನೀವು. ಜೊತೇಲಿ ನಾನೂ ಬರಬೇಕಾಯ್ತು... ಮಲ್ಹೋತ್ರನಿಂದ ನಿಮ್ಮ ಶೋಧನೆ ಕಾರ್ಯಕ್ಕೆ ರೊಚ್ಚು, ಸ್ಫೂರ್ತಿ ಸಿಕ್ತು. 'ಥೌಸಂಡ್ ಅಂಡ್ ಒನ್" ರೆಸ್ಟೋರೆಂಟ್‌ನಲ್ಲಿ ನಿಮ್ಮನ್ನು ಕುಸುಮಾಕರನೊಂದಿಗೆ ನೋಡಿದ ಮೇಲೆ ನಿಮ್ಮ ಮೂಲಕವೇ ನಿಧಾನವಾಗಿ ನನ್ನ ಕಾರ್ಯ ಸಾಗ್ತು. ಆದರೆ ಕಾಮಿನಿ ರತ್ನೆ ಅವನ್ನ ಕೊನೆಗಾಣಿಸಿಬಿಡ್ತಾಳೆ ಅಂತ ಗೊತ್ತಿರಲಿಲ್ಲ... ನೀವು ಇನ್ನೂ ಮಾತಾಡ್ದೆ ಕುಳಿತಿದೀರಿ. ಮತ್ತೆ ಹೇಳಲೆ? ನಾನು ಸುಗಂಧ ದ್ರವ್ಯಗಳ ಸ್ಮಗ್ಲರ್ ಅಲ್ಲ. ಕಸ್ಟಮ್ಸ್ ಇಲಾಖೆಯೋನು"

ಅವಳು ಮತ್ತೊಮ್ಮೆ ಅವನನ್ನು ನೋಡಿ ಕೋಪದಿಂದ ಗಾಂಭೀರ್ಯಕ್ಕೆ ಇಳಿದ ಮುಖವನ್ನು ಚಾವಣಿಗೆ ಎತ್ತಿದಳು. ಮತ್ತೆ ಅದೇ ಮೌನ. ಅವನು ಕೈ ಕಟ್ಟಿ ನಿಟ್ಟುಸಿರು ಹಾಕಿದ.

"ದೀಪಕನ ಪ್ರಕರಣದಲ್ಲಿ ತಲೆ ಹಾಕಬೇಡಿ ಅಂದೆ. ಆ ಸ್ಮಗ್ಲರ್ ಕುಸುಮಾಕರ ನಮಗೆ ಬೇಕಾಗಿರೋನು ನಿಮ್ಮ ಪ್ರಕರಣದ ಪ್ರಧಾನ ವ್ಯಕ್ತಿ ಅಂತ ನನಗೆ ಕನಸು ಬೀಳ್ಲಿಲ್ಲ... ಹಾಂ! ಬೆಲೆ ಬಾಳೊ ವಜ್ರದ ಕೊಂಬು ಅವಳು ಕಿತ್ತುಕೊಂಡು ಹೋದಳು ಅಂತ ಚಿಂತೆಯೆ? ನಾನು ಗಾಜಿನ ಕೊಂಬು ತೆಗೆದು ಕೊಡ್ತೀನಿ"

ತುಟಿಯಲ್ಲಿ ಮಿಂಚಿದ ನಗೆಯನ್ನು ಕಷ್ಟಪಟ್ಟು ಅಡಗಿಸಿ ಬಿಗುಮಾನ ತಾಳಿದಳು. ಅವನು ಮುಂದುವರಿಸಿದ.

"ನನಗೆ ಈಗ ಅರ್ಥ ಆಯ್ತು. ಹೆಣ್ಣು ಮನಸ್ಸಿನ ರಂಗಿನ ಆಟ ಬಲ್ಲೆ... ನಾನು ಸುರಭಿಯ ಕೆಲಸದ ಮೇಲೆ ಹೊರಟುಬಿಟ್ಟೆ ಅಂತ ನಿಮಗೆ ಈ ಸಿಟ್ಟು, ಬೇಸರ, ಬಿಗಿ... ಸುರಭಿ ನನ್ನ ಪ್ರಿಯತಮೆ ಅಂತ ನಿಮ್ಮ ತಲೆಯಲ್ಲಿ ಜೇನು ಹಿಂಡು ಎದ್ದಿದೆಯಲ್ಲ! ಕೊಲ್ಲಿಯಲ್ಲಿ ಅವತ್ತು ಅವಳ ಜೊತೆ ನೋಡಿದ್ರಲ್ಲ, ಆ ಯುವಕ ಅಜಿತ್... ಅವನಿಗೊಂದು ಇಂಜಿನೀಯರ್ ಕೆಲಸ ಕೊಡಿಸಲಿಕ್ಕೆ ಶಿಫಾರಸು ಮಾಡಿ ಬರೋಕೆ ತುರ್ತಾಗಿ ಹೋದೆ. ಏನು ಮಾಡ್ತೀರಿ? ನನ್ನ ಮಾತು ನಾಲ್ಕು ಜನ ಕೇಳುವಂತ ಹುದ್ದೆ ನನ್ನದು ಸುರಭಿ, ಅಜಿತ ಇಬ್ಬರೂ ಮದುವೆ ಆಗೋಕೆ ಒಪ್ಪಿ ಎರಡು ತಿಂಗಳಾಯ್ತು ಅಂತ ಅಂಟಿಯ ತಗಾದೆ. ಅವನಿಗೆ ಮದುವೆಗೆ ಮೊದಲು ಒಂದು ಕೆಲಸ ಬೇಡವೆ?"

ಅರ್ಚನಾಳ ಕಣ್ಣುಗಳು ಮಿನುಗಿದವು. ಮುಖದಲ್ಲಿ ಬಣ್ಣ ತಿರುಗಿತು. ತುಟಿ ಬಿಚ್ಚಿದಳು. ನವೀನ ಕೈ ಅಡ್ಡ ತಂದ.

"ಅಷ್ಟು ಹೊತ್ತಿನಿಂದ ಬೊಂಬೆ ಹಾಗೆ ಕೂತೋರು ಈಗ ಯಾಕೆ ತುಟಿ ಎರಡು ಮಾಡ್ಬೇಕು? ಅದರಿಂದ ಏನೂ ಪ್ರಯೋಜನ ಇಲ್ಲ... ನಿಮಗೇ ಗೊತ್ತು, ನಾನು ಮದುವೆ ಆಗೊ ಮನೋವೃತ್ತಿಯ ಮನುಷ್ಯ ಅಲ್ಲಾಂತ... ಹೌದು, ಮೆಡಾಂ... ಮೊದಲು ಪ್ರೇಮಿಸೊ ಪ್ರವೃತ್ತಿ, ಅದರಿಂದ ಅನುಭವ ಪಡೆದು ಆಮೇಲೆ ಮದುವೆ ಆಗೊ ಪ್ರವೃತ್ತಿಯ ಪೋಲಿ! ಹೇಳಿ, ನಿಮ್ಮದೂ ಅದೇ ಪ್ರವೃತ್ತಿಯೇನು?"

ಅರ್ಚನಾ ಅವನ ಕೈ ಹಿಡಿದು ಒತ್ತಿದಳು.

"ಹೆಣ್ಣು ಅಂದ್ರೆ ಅದೆಷ್ಟು ಹುಡುಗಾಟ ಆಡ್ತೀರಿ. ದೂರದಿಂದ ಬಂದಿರೊ ಒಂಟಿ ಹುಡುಗಿ ಅಂದ್ರೆ ಇನ್ನಷ್ಟು ಸಲೀಸು ಅಲ್ಲವೆ?... ನವೀನ, ನಾನೂ ನಿಮ್ಮ ಪ್ರವೃತ್ತಿಯೋಳೆ!"

ಅವನ ಕೈಗೆ ತುಟಿ ಒತ್ತಿದಳು.

"ಸ್ವಲ್ಪ ಕೈ ಬಿಡಿ... ನಿಮ್ಮ ಹೇಳಿಕೆ ತೊಗೊಳೋದಿಕ್ಕೆ ಪೋಲೀಸ್ ಅಧಿಕಾರಿ ನೋಟುಬುಕ್ ಹಿಡಿದು ಬರ್ತಿದ್ದಾನೆ"

ಅವಳು ಬೆಚ್ಚಲಿಲ್ಲ. ಹಿಡಿದ ಕೈಮೇಲೆ ಮತ್ತಷ್ಟು ಬಲವಾಗಿ ತುಟಿಗಳ ಮುದ್ರೆ ಒತ್ತಿದಳು.

[ ಮುಗಿಯಿತು ]



# ನಮೋ....ನಮೋ

ನನ ಹೆಂಡತಿ ಉದ್ದಾಮ
ಅಲ್ಲಲ್ಲ...'ಮುದ್ದಾಂ' ಸಾಹಿತಿ.
ಮೊನ್ನಿನ ಮಹಿಳಾ ವರ್ಷ
ನಿರ್ಮಿಸಿದ 'ಏಕ್‌ದಂ' ಸಾಹಿತಿ.
"ಬರಹ ನನ್ನ ಹಣೆಬರಹ
ದಲ್ಲಿಲ್ಲ"ವೆಂದು ಹಣೆ ಹಣೆ
ಬಡಿದುಕೊಳ್ಳುತ್ತಿದ್ದ ಮಹರಾಯಿತಿ,
ಬಂದುದೇ ತಡ ಮಹಿಳಾವರ್ಷ,
ಸಿಪ್ಪುಡುಗಟ್ಟಲೆ ಬರೆದು
ಪಾರ್ಸಲ್ ಮಾಡತೊಡಗಿದಳು.
ನೂರೆಂಟು ಪತ್ರಿಕೆಗಳಿಗೆ,
ನಮ್ಮ ಮನೆಯೇ ಒಂದು ಚಿಕ್ಕ
ಅಂಚೆ ಕಚೇರಿಯಾಯಿತೆನ್ನಿ.
ಸಂಡಿಗೆ ಸಾಂಬಾರಿನಿಂದ ಹಿಡಿದು
ಸಂಯುಕ್ತರಾಷ್ಟ್ರಸಂಘದವರೆಗೆ,
ತನ್ನ ಮಾವನಿಂದ ಹಿಡಿದು
ಚೀನದ ಮಾವೋನವರೆಗೆ
ವೈಕಿಂಗ್ ವೇಗದಿ ಓಡಿತು
ಭೂತ ಬಡಿದಂತಿದ್ದ ಅವಳ ಪೆನ್ನು:
ಬರೆದದ್ದು ಕ್ವಿಂಟಲ್ಲುಗಟ್ಟಲೆ,
ಪ್ರಕಟವಾದದ್ದು ಕೆಲವೇ
ಗ್ರಾಮುಗಳಷ್ಟು ಮಾತ್ರ!
"ಏಕೆ ಬರೆಯುವೆ ಸುಮ್ಮನೆ ಪ್ರಿಯೆ,
ಥ್ಯಾಂಕ್‌ಲೆಸ್ ಕೆಲಸವಲ್ಲವೇನೆ ಅದು?"
ಎಂದೆನ್ನುವ ನನಗೆ ಅವಳ ಉತ್ತರ:
"ಅದೆಂತು ಥ್ಯಾಂಕ್‌ಲೆಸ್ ಕೆಲಸ ಪ್ರಿಯಾ?
ಪತ್ರಿಕೆಯವರು ನಾ ಕಳಿಸಿದುದನು
'ವಿಥ್‌ಥ್ಯಾಂಕ್ಸ್'ಚೀಟಿಯ ಸಂಗಡ ತಿರುಗಿ
ಕಳುಹಿಸುತ್ತಿಲ್ಲವೆ ಪ್ರತಿ ಸಲ ನನಗೆ?"
ಅವಳ ಈ ತತ್ವಜ್ಞಾನದ ಎದುರು
ನನ್ನ ಹಲ್ಕಾ ವಿಚಾರ ಕುಸಿದೇ ಬಿತ್ತು
ನಮೋ ನಮೋ ನಿನಗೆಂದು ಸುಮ್ಮನಾದೆ
ಇಂದಿಗೂ ಇದೆ ಅವಳ ಈ ಕಾರಖಾನೆ
ನಡೆದಿದೆ ನಿರಂತರ ಸಾಹಿತ್ಯದ ಉತ್ಪಾದನೆ.

**ಜಯಾ ಕರಗುದರಿ**

# ಸನ್ಮಾನ



ಅಷ್ಟಾ... ಶೆಟ್ಟರ ಅಂಗಡಿ ಬಾಕಿ ಕೊಡದೇ ಹೋದರೆ, ಮನೆಬಾಗಿಲಿಗೆ ಬಂದು ಸನ್ಮಾನ ಮಾಡ್ತಾರಂತೆ.........




ಇವರು ಸನ್ಮಾನಿತರ ಬಂಧುಗಳಿರಬೇಕು ಅದಕ್ಕೆ ಎರಡು ಗಂಟೆ ಮುಂಚೆಯೇ ಬಂದು ಕೂತಿದ್ದಾರೆ.......

## ವಿ. ಗೋಪಾಲ




ಮಾನ್ಯ ಸನ್ಮಾನಿಗಳು ಮಳೆಯಲ್ಲಿ ನೆಂದು ಬಂದುದರಿಂದ ಶಾಲು ಕೊಡುವುದನ್ನು ರದ್ದು ಮಾಡಿ ಛತ್ರಿ ಕೊಡಲಾಗುತ್ತೆ.



ಇವರು ಪ್ರಶಸ್ತಿ ಪಡೆಯೋ ತನಕ ಅಷ್ಟೋ.....ಇಷ್ಟೋ... ಕೆಲಸ ಮಾಡುತ್ತಿದ್ದರು, ಈಗ ಆರಾಮಾಗಿ ಉಪಾದಿ ಕೊಂಡಿದ್ದಾರೆ.....

* * *

# ಹಾರಿದಳಾ ಆಶಾ….


ಮೂಲ:
ಬಾಲಾ

ಅನುವಾದ:
"ರಾಧಾಪ್ರಿಯ"


ಹಾಸ್ಟಲಿನ ಮಹಡಿಯಿಂದ ನೋಡಿದ ಉಮಾಳಿಗೆ ಹತ್ತು ಲವಂಗಗಳನ್ನು ಒಂದೇ ಬಾರಿಗೆ ಅಗಿದ ಅನುಭವವಾಯಿತು. ಕಾರಣ ಗೇಟ್ ಬಳಿ ಅವಳ ಗೆಳತಿ ಆಶಾಳ ತಂದೆ ಕೈಯಲ್ಲಿ ಪೆಟ್ಟಿಗೆ, ಹಾಸಿಗೆ ಕೂಡಾ ಎಕ್ಸಟ್ರಾ ಎಕ್ಸಟ್ರಾಗಳೊಂದಿಗೆ ನಿಂತು ಹಾಸ್ಟೆಲ್ ವಾಚ್‌ಮನ್‌ನ ಕೂಡ ಮಾತನಾಡುತ್ತಿದ್ದಾರೆ.!

ಖಂಡಿತ ಅವರು ತಮ್ಮ ಮಗಳು ಆಶಾಳನ್ನು ಕುರಿತೇ ವಿಚಾರಿಸುತ್ತಿದ್ದಾರೆ. ಉಮಾಳಿಗೆ ಅದು ತಿಳಿದು ಹೋಯಿತು.

ಸಿನಿಮಾದಲ್ಲಿ ಬರುವ "ಫ್ಲ್ಯಾಷ್ ಬ್ಯಾಕ್"ನಂತೆ ನಡೆದುದೆಲ್ಲಾ ಕಣ್ಣ ಮುಂದೆ ಓಡಾಡಿತು. ಆಶಾಳಿಗೆ ಆಗಾಗ ಬಜೆಟ್ ಖೋತಾ ಆಗುತ್ತಿತ್ತು. ಹಣದ ಮುಗ್ಗಟ್ಟಿನ ಪರಿಣಾಮವಾಗಿ ರಿಲೀಸ್ ಆದ ದಿನವೇ ಏಳೆಂಟು ಪಿಕ್ಚರ್ ನೋಡಲಾಗದೆ ಪರಿತಪಿಸುತ್ತಿದ್ದಳು ಆಶಾ!

× × ×

"ಅಪ್ಪಾ"

ನಾವು ನಮ್ಮ ಕಾಲೇಜಿನಿಂದ ಎಕ್ಸ್‌ಕರ್ಷನ್ ಹೋಗುತ್ತಿದ್ದೇವೆ. ತಕ್ಷಣ ಐವತ್ತು ರೂಪಾಯಿ ಮನಿಯಾರ್ಡರ್ ಮಾಡಿರಿ....ಆಶಾ"

"ಪ್ರೀತಿಯ ಮಗಳೇ—ಆಶಾ,

ಈ ಸಂಗಡ ೫೦ ರೂಪಾಯಿಗಳಿಗೆ ಡ್ರಾಫ್ಟ್ ಕಳುಹಿಸಿರುತ್ತೇನೆ. ಜಾಗ್ರತೆ ಹೋಗಿ ಬಾ....ನಿನ್ನ ತಂದೆ."

ಬರ ಬರುತ್ತಾ ಆಶಾಳಿಗೆ ಬಜೆಟ್ ಇನ್ನೂ ಹೆಚ್ಚು ಕೈ ಕೊಡಲಾರಂಭಿಸಿತು.

"ಅಪ್ಪಾ,

ಎಕ್ಸ್‌ಕರ್ಷನ್‌ಗೆ ಹೋಗಿದ್ದ ಜಾಗದಲ್ಲಿ ಕಾಲು ಮುರಿಯಿತು. ನಡೆಯಲು ಸಾಧ್ಯವಿಲ್ಲ. ನರ್ಸಿಂಗ್ ಹೋಂ ಖರ್ಚಿಗೆ ೫೦೦ ರೂಪಾಯಿ ಬೇಕು. ತಕ್ಷಣವೇ ಕಳುಹಿಸಿ...ಆಶಾ."

"ಕುಸಾ...ಕಟ್ ಕಟ್...ಕಟ್...ಕಡ..."

ತಕ್ಷಣ ಒಂದು ಫ್ಲಾಷ್.

ಟೆಲಿಗ್ರಾಂ ಮನಿಯಾರ್ಡರ್ ಬಂತು. ಸಂಗಡವೇ ಮಗಳನ್ನು ನೋಡಲು ತಂದೆ ಹಾಸ್ಟಲ್‌ಗೆ ಆಗಮಿಸಿ ಬಿಟ್ಟರು.

ಈ ದಿನ ಆಶಾ ಸರಿಯಾಗಿ ಸಿಕ್ಕಿಬಿದ್ದಳು. ಉಮಾಳಿಗೆ ಕೈಕಾಲು ಗೌರ್ನ್‌ಮೆಂಟ್ ಟ್ರಾನ್ಸ್‌ಪೋರ್ಟ್ ಬಸ್ಸಿನಂತಾದವು.

"ಈ ಶನಿ ಹಿಡಿದವಳಿಗೆ ಯಾವ ಕಥೆ ಪುಸ್ತಕ ಬೇಕಾಯಿತು. ಈ ಮನುಷ್ಯನೋ ಬಂದು ನನ್ನನ್ನೇ ನೇರವಾಗಿ ವಿವರ ವಿಚಾರಿಸುತ್ತಾರೆ. ಏನು ಮಾಡುವುದು..." ಎಂದು ಯೋಚಿಸಿದಳು ಉಮಾ.

"ಸ...ರ್‍ರ್...ರ್‍ರ್...ರ್‍ರ್..."

ಹಾಸ್ಟಲ್ ಹಿಂದಿನ ಬಾಗಿಲಿನ ಮೂಲಕ ಪುಸ್ತಕದ ಅಂಗಡಿಗೆ ಬಂದಳು.

"ಲೇ...ಡ್ಯಾಮಿಟ್...ಆಶಾ ನಿನ್ನ ತಂದೆ ಹಾಸ್ಟಲಿಗೆ ಬಂದು ಬಿಟ್ಟಿದ್ದಾರೆ"

"ಅಯ್ಯಯ್ಯೋ ತಂದೆಯೇ ... ಏಕೆ?"

"ಈಡಿಯೆಟ್. ನಿನಗೆ ಕಾಲು ಸರಿಯಾಗಿಲ್ಲವೆಂದು ಲೆಟರ್ ಹಾಕಿದ್ದೆಯಲ್ಲಾ... ಅದಕ್ಕೇ ನೋಡಿ ಹೋಗಲು ಬಂದು ಬಿಟ್ಟರು."

"ಅಯ್ಯಯ್ಯೋ...ಈಗೇನು ಮಾಡುವುದೆ?"

"ಇದೋ ನೋಡು. ಈ ಚಪ್ಪಡಿ ಕಲ್ಲು ಎತ್ತಿಕೋ. ಮೇಲೆ ಬೀಳಿಸಿಕೊಂಡು ಕಾಲು ಮುರಿದುಕೋ."

"ಲೇ ಉಮಾ...ಏನಾದರೂ ಉಪಾಯ ಹೇಳೇ...ಪ್ಲೀಸ್"

ಸರಿಯಾಗಿ ಮೂವತ್ತಾರು ಸೆಕೆಂಡ್ ಅಲ್ಲಿ ಮೌನ ಏರ್ಪಟ್ಟಿತು.

ಉಮಾ ಆಶಾಳ ಕೈ ಹಿಡಿದೆಳೆದಳು "ಬೇಗ ಬಾ...ಮಗ್ಗುಲಿನ ರಸ್ತೆಯಲ್ಲಿ ಪ್ರೈವೇಟ್ ನರ್ಸಿಂಗ್ ಹೋಂ ಇದೆಯಲ್ಲ. ಅಲ್ಲಿ ನನ್ನ ಕ್ಲಾಸ್‌ಮೇಟ್ ರಜೀನಾ ನರ್ಸ್ ಆಗಿದ್ದಾಳೆ. ಅವಳ ಹತ್ತಿರ ಹೋಗಿ ಐಡಿಯಾ ಕೇಳೋಣ ■



ರೆಜೀನಾ ಕಾಲಿಗೆ ಸಾಷ್ಟಾಂಗ ಬಿದ್ದಳು ಆಶಾ. ರೆಜೀನಾ ಭಾವಣ, ಮಹಡಿಗಳನ್ನು ನೋಡಿಕೊಂಡೇ ಹೇಳಿದಳು.

"ಬಹಳ ಸೀರಿಯಸ್ ಕೇಸೇನೋ ಹೌದು...ನರ್ಸಿಂಗ್ ಹೋಂ ಡಾಕ್ಟರ್ ಈಗ ತಾನೇ ಡೆಲ್ಲಿ ಪ್ಲೇನ್ ಹಿಡಿಯಲು ಹೋಗಿದ್ದಾರೆ...ನಾನೇ ಅವರು ಬರುವ ವರೆಗೂ ಇನ್‌ಚಾರ್ಜ್...ಮಹಡಿಯಲ್ಲಿ ಎರಡನೇ ನಂಬರ್ ರೂಂನಲ್ಲಿ ಒಂದು ಮೂಗ ಮುದುಕಿ...ಕಾಲಿನ ದೊಡ್ಡ ಬೆರಳು ಒಡೆದುಕೊಂಡು ಮಲಗಿದ್ದಾಳೆ" ಎಂದು ಗುಣಸುತ್ತಿದ್ದ ವಳೇ "ಉಮಾ, ನೀನು ಹೋಗಿ ಇವಳ ಅಪ್ಪನನ್ನು ಕರೆದುಕೊಂಡು ಬಾ. ಧೈರ್ಯ ಹೆಣ್ಣಿನ ಲಕ್ಷಣ."

ಉಮಾ ವೈ ಹೈ ಎಕ್ಸ್‌ಪ್ರೆಸ್‌ನಂತೆ ಹಾರಿದಳು.

ಆಶಾಳ ತಂದೆ ಸಂಗಡ ಎರಡನೇ ನಂಬರ್ ರೂಂ ಪ್ರವೇಶಿಸಿದ ಉಮಾಳಿಗೆ ನಗು ಹೊಮ್ಮಿಕೊಂಡು ಬಂದಿತು.

ಅಲ್ಲಿ......

ಆಶಾಳ ಒಂದು ಕಾಲು ಮೊಳಕಾಲಿನವರೆಗೂ ಪ್ಲಾಸ್ಟರ್ ಆಫ್ ಪ್ಯಾರಿಸ್ ಹಾಕಲ್ಪಟ್ಟು ಮೇಲಕ್ಕೆ ತೂಗಿ ಹಾಕಲ್ಪಟ್ಟಿದೆ. ಪಕ್ಕದಲ್ಲಿ ಆ ಮೂಗಿ ಮುದುಕಿ-ಕಾಲು ಹೊರಗೆ ಕಾಣಿಸದಂತೆ ಮಂಚದ ಕೆಳಗೆ ಬಿಟ್ಟುಕೊಂಡಿರುವಂತೆ ಹೊಂದಿಸಿ ಸ್ಟೂಲಿನ ಮೇಲೆ ಕೂರಿಸಲ್ಪಟ್ಟಿದ್ದಾಳೆ.

ರೆಜೀನಾ ಆಶಾ ಕಣ್ಣಿಗೆ ಗ್ಲಿಸರಿನ್ ಹಾಕುತ್ತಿದ್ದಾಳೆ.

ಆ ಹಿರಿಯರು ಮಾತನಾಡ ತೊಡಗಿದರು.

"ಏನು ನರ್ಸಮ್ಮಾ...ಕಾಲು ಮುರಿದರೆ ಕಣ್ಣಿಗೇಕೆ ಔಷಧಿ ಹಾಕುತ್ತಿದ್ದೀರಿ."

"ಹೌದೌದು. ಅದಕ್ಕೂ ಅದಕ್ಕೂ ಸಂಬಂಧ ಇದೆ. ಮೂಗಿಗೆ ನೆಗಡಿ ಬಂದರೆ ಬಾಯಿ ತಾನೇ ಸೀನುವುದು. ಅದೇ ರೀತಿ ಇದೂ ಕೂಡ. ಬೇಗನೆ ನೋಡಿಕೊಂಡು ಹೊರಕ್ಕೆ ಹೋಗಿ."

ಆಶಾಳ ಗ್ಲಿಸರಿನ್ ಕಣ್ಣುಗಳು ಉರಿಯಿಂದ ಕೊಳದಂತೆ ತುಂಬಿಕೊಂಡವು. ಕಣ್ಣೀರು ಕೋಡಿ ಹರಿಯಿತು.

"ಅಪ್ಪ..." + ಅಳು."

"ಮಗಳೇ...!" + ವಾತ್ಸಲ್ಯ.

ತಂದೆ ರೋದಿಸಿದರು. "ಒಬ್ಬಳೇ ಮಗಳು, ಮುದ್ದಿನಿಂದ ಸಾಕಿದೆನಲ್ಲಾ ಏನಾಯಿತು?" ಕಸಾಯಿ ಅಂಗಡಿಯಂತೆ ಕಾಲು ತೂಗಿಸಿಕೊಂಡು ಮಲಗಿ ಬಿಟ್ಟಳಲ್ಲಾ"

"ಅಳಬೇಡಿ ಸಾರ್. ನೀವು ಗೋಳಾಡಿದರೆ ನಮಗೂ ಕೂಡ ಅಳು ಬರುತ್ತದೆ." ಎಂದಳು ಉಮಾ.

ಕೆಳಗಿನ ಪೋರ್ಟಿಕೋವಿನಲ್ಲಿ ಕಾರೊಂದು ಬಂದು ನಿಂತ ಶಬ್ದ. "ಡಾಕ್ಟರ್, ಡಾಕ್ಟರ್" ಎಂದು ಹಲವು ಕಂಠಗಳು ಕೆನೆದಂತಾಯಿತು.

ಕೆಳಗಿಳಿದು ಹೋದ ರೆಜೀನಾ ಎರಡೇ ಹಾರಿನಲ್ಲಿ ಮಹಡಿ ಏರಿ ರೂಮಿನೊಳಕ್ಕೆ ಬಂದಳು. "ಉಮಾ ಪ್ಲೇನ್ ಈ ದಿನ ಹೊರಡಲಿಲ್ಲವಂತೆ... ಡಾಕ್ಟರ್ ವಾಪಸ್ಸು ಬಂದು ಬಿಟ್ಟರು."

ಆಶಾ, ಉಮಾ, ರೆಜೀನಾ ಮೂವರ ಮುಖಗಳೂ ಗೋಡೆಗೆ ಸುಣ್ಣ ಬಳಿದಂತೆ ಬಿಳುಚಿದವು. "ಸರಿ, ಇದನ್ನು ಸಮಾಳಿಸಬೇಕು" ಎನ್ನುವಂತೆ ರೆಜೀನಾ ಮುಖಭಾವವನ್ನು ಬೇಗನೆ ಮಾರ್ಪಡಿಸಿಕೊಂಡಳು.

"ಸಾರ್, ನೀವೀಗ ಹಿಂಭಾಗದ ಮಹಡಿ ಮೂಲಕ ಇಳಿದು ತೋಟಕ್ಕೆ ಹೋಗಿರಿ. ಡಾಕ್ಟರ್...ಯಾರಾದರೂ ಗಂಡಸರಿದ್ದರೆ ರೇಗುವರು...ನಾವು ಕರೆದ ನಂತರ ಬರಬಹುದು." ಎಂದು ರೆಜೀನಾ ಆಶಾಳ ತಂದೆಯನ್ನು ಮೊದಲು ಡಿಸ್ಪೋಸ್ ಮಾಡಿದಳು.

"ಅಯ್ಯಯ್ಯೋ, ಡಾಕ್ಟರ್ ಮುದುಕಿಯನ್ನು ನೋಡಲು ಇಲ್ಲಿಗೇ ಬಂದು ಬಿಟ್ಟರೆ....ಏನು ಮಾಡುವುದು"-ಉಮಾ.

"ಒಂದು ಐಡಿಯಾ...! ಸ್ವಲ್ಪ ಹೊತ್ತು ಇದನ್ನು ಮಂಚಕ್ಕೆ ಹಾಕು. ಆಶಾಳನ್ನು ಮಂಚದ ಕೆಳಗೆ ಅವಿತಿಟ್ಟು ಬಿಡೋಣ. ಡಾಕ್ಟರ್ ಹೋದ ಮೇಲ ನೋಡಿಕೊಳ್ಳೋಣ." ರೆಜೀನಾ.

ನಿಮಿಷಾರ್ಧದಲ್ಲಿ ನೆನೆಸಿದಂತೆ ನಡೆದು ಬಿಟ್ಟಿತು. ಡಾಕ್ಟರ್ ಒಳಕ್ಕೆ ಬಂದರು. ಮಂಚದಲ್ಲಿ ಮಲಗಿದ್ದ ಮುದುಕಿಯನ್ನು ಪರೀಕ್ಷಿಸಿದರು. ಮುದುಕಿ "ಮಂಚದ ಕೆಳಗೆ ನೋಡಿ" ಎನ್ನುವಂತೆ ಕೈ ತೋರಿಸಿ ಸಂಜ್ಞೆ ಮಾಡಿತು. ಉಮಾ, ರೆಜೀನಾ ಹಲ್ಲು ಹಲ್ಲು ಕಡಿದುಕೊಂಡರು.

ಡಾಕ್ಟರ್ "ಸಿಸ್ಟರ್ ಮುದುಕಿ ಬೆನ್ನು ನೋವೆಂದು ತೋರುತ್ತೆ. ...ಸನ್ನೆ ಮಾಡುತ್ತಿದೆ. ಎರಡು ತಲದಿಂಬನ್ನು ಇಡಿ. ಮಾತ್ರೆಯನ್ನು ಕೊಡಿ" ಎಂದು ಹೇಳಿ ಹೊರಟು ಹೋದರು.

ಕೆಳಗಿನ ನೆಲದಲ್ಲಿ ಮಲಗಿದ್ದ ಆಶಾಳಿಗೆ ಬೆವರು ಕಿತ್ತುಕೊಂಡಿತ್ತು!

ರೂಂ ಹೊರಗೆ ಇಬ್ಬರು ಮಾತನಾಡುತ್ತಿದ್ದಂತೆ ಕೇಳಿ ಬಂದಿತು.

"ಡಾಕ್ಟರ್ ಈಗ ಕಾಲು ಹೇಗಿದೆ" ಅದು ಆಶಾಳ ತಂದೆಯದೇ ಧ್ವನಿ. ಸಂದೇಹವೇ ಇಲ್ಲ.

"ಎರಡು ದಿನಗಳಲ್ಲಿ ಸರಿಯಾಗಿ


"ಅಪ್ಪಾ...ಇಲ್ನೋಡು ಇವನು ಈ ಪಟಾಕಿ ಪ್ಯಾಕ್‌ನಿಂದ ವಿಮಾನ ಕದ್ದ..."

ಬಿಡುತ್ತೆ." ಡಾಕ್ಟರ್ ಉತ್ತರ.

"ಡಾಕ್ಟರ್ ನನಗೆ ಇವಳೊಬ್ಬಳೇ ಮಗಳು. ಬಹಳ ಪ್ರೀತಿಯಿಂದ ಬೆಳೆಸಿದ್ದೇನೆ."

"ಏನು...ರೂಂನಲ್ಲಿ ಕಾಲೊಡೆದುಕೊಂಡು ಮಲಗಿರುವ ಮುದುಕಿ ನಿಮ್ಮ ಮಗಳೇ?–" ಡಾಕ್ಟರ್ ಪ್ರಶ್ನಿಸಿದರು.

"ಏನದು...ನನ್ನ ಮಗಳು ಮುದುಕಿಯೇ? ಅವಳನ್ನು ನೋಡಿದರೆ ಮುದುಕಿಯಂತೆ ಕಾಣಿಸುತ್ತಾಳೆಯೇ?..." ಏಯ್ ಡಾಕ್ಟರ್...ನಿನ್ನಜ್ಜಿ ಮುದುಕಿ... ನಿನ್ನಮ್ಮ ಮುದುಕಿ..." ಕೋಪದಿಂದ ಕೂಗಾಡಿದರು ಆಶಾಳ ತಂದೆ.

"ಮಿಸ್ಟರ್ ಬಹಳ ಬಹಳ ಕೂಗಾಡಬೇಡಿ. ಅವಳು ಮುದುಕಿಯಲ್ಲದೆ ಕುಮಾರಿಯೇನು?... ಬಾಯಿಯಲ್ಲಿ ಒಂದು ಹಲ್ಲು ಕೂಡಾ ಇಲ್ಲ...!"

"ಅಯ್ಯೋ ಮಗಳೇ ಆಶಾ ನಿನಗೆ ಕಾಲು ಮಾತ್ರ ಒಡೆಯಿತು ಎಂದಿದ್ದೆ. ಹಲ್ಲು ಸಹ ಮುರಿದು ಹೋಯಿತೇ?"

ಡಾಕ್ಟರೂ, ಆಶಾಳ ತಂದೆಯೂ "ದಡಕ್ಕನೇ ರೂಮಿನೊಳಕ್ಕೆ ಬಂದರು. ಅದೇ ಸಮಯದಲ್ಲಿ ಆಶಾ ಏನು ಮಾಡುವುದು ಎಂಬುದನ್ನು ತಿಳಿಯದೆ ಸಿನಿಮಾದಲ್ಲಿ ಮಾಡುವಂತೆ ಕಿಟಕಿಯಿಂದ ಕೆಳಕ್ಕೆ ಹಾರಿದಳು.

ಒಂದೇ ಡೈ...!

ಮೊದಲನೇ ಮಹಡಿಯಿಂದ ಕೆಳಗಿನ ಹುಲ್ಲು ನೆಲದ ಮೇಲೆ ಬಿದ್ದಳು.

ಮುಂದಿನ ದೃಶ್ಯ...!

ಬೇರೊಂದು ಕೋಣೆ! ಆಶಾ ಮಲಗಿದ್ದಳು!! ಪ್ಲಾಸ್ಟರ್ ಆಫ್ ಪ್ಯಾರಿಸ್ ಹಾಕಲ್ಪಟ್ಟ ಕಾಲುಗಳೆರಡೂ ಮೇಲಕ್ಕೆತ್ತಿ ಕಟ್ಟಲ್ಪಟ್ಟಿದ್ದವು.!!! ●



ಕಿರು ನಾಟಕ

• ಎಂ. ಎಸ್. ಕೆ. ಪ್ರಭು

ಕಾಡು–ವಿವಿಧ ಪಕ್ಷಿಗಳ, ಪ್ರಾಣಿಗಳ ಧ್ವನಿ–ಭಯಗೊಂಡ ಆನೆಗಳ ಘೀಂಕಾರ–ಸಿಂಹದ ಘರ್ಜನೆ–ಹೆದರಿ ಓಡುವ ಇತರ ಪ್ರಾಣಿಗಳ ಧ್ವನಿ... ಒಂದು ಆನೆ ಸಿಂಹಕ್ಕೆ ಸಿಕ್ಕಿ ನೆಲಕ್ಕುರುಳಿ ಕೂಗುತ್ತಾ ಸಾಯುತ್ತದೆ.

**ಪಿಂಗಳಕ :–** (ಸಿಂಹ): ಆಹ್! ಇದೀಗ ಬೇಟೆ! ಈ ಕಾಡಿನಲ್ಲಿ ನನ್ನ ಪರಾಕ್ರಮದ ಎದುರು ನಿಲ್ಲಬಲ್ಲ ಧೈರ್ಯ ಬೇರೆ ಯಾವ ಪ್ರಾಣಿಗಿದೆ! (ಘರ್ಜನೆ) ಆನೆಯ ಮಾಂಸ! ಸೊಗಸಾಗಿದೆ(ತಿಂದು ತೇಗಿದ ಶಬ್ದ)... ಸ್ವಲ್ಪ ನೀರು ಕುಡಿದು ಶ್ರಮಿಸಿಕೋತೇನೆ... ಆಹ್!... (ಪಿಂಗಳ ಎದ್ದು ನಿಧಾನವಾಗಿ ಹೆಜ್ಜೆ ಹಾಕುತ್ತಾನೆ.)

ಇದ್ದಕ್ಕಿದ್ದಂತೆ ದೂರದಲ್ಲೆಲ್ಲೊ ಗೂಳಿಯ ಗುಟುರು ಕಾಡಿನಲ್ಲೆಲ್ಲಾ ಪ್ರತಿಧ್ವನಿಸುತ್ತದೆ. ಹಿನ್ನೆಲೆಯ ಶಬ್ದ ತಕ್ಷಣೆ ನಿಲ್ಲುತ್ತದೆ... ಮತ್ತೊಮ್ಮೆ ಭಯಂಕರವಾದ ಗುಟುರು.

**ಪಿಂಗಳಕ:–** (ಭಯ): ಇದೇನು? ನಾನಿದುವರೆಗೂ ಇಂತಹ ಶಬ್ದವನ್ನೇ ಕೇಳಿಲ್ಲವಲ್ಲ! ನನ್ನ ಘರ್ಜನೆಗೆ ಸಮಾನವಾದ... ಅಲ್ಲ, ಅಲ್ಲ, ಅದನ್ನೂ ಮೀರಿಸುವ ಶಬ್ದ! ಸಿಡಿಲೋ ? ಇರಲಾರದು... ಮೋಡಗಳೇ ಇಲ್ಲ...(ಘರ್ಜಿಸಲು ಪ್ರಯತ್ನಿಸುತ್ತಾನೆ. ಆದರೆ ಧ್ವನಿ ಕ್ಷೀಣವಾಗಿರುತ್ತದೆ.)

ಮತ್ತೊಮ್ಮೆ ಗುಟುರು.

**ಪಿಂಗಳಕ:–** ಓಹ್! ಏನೋ ವಿಪತ್ತು ಬಂದಿದೆ ಈ ಕಾಡಿಗೆ–ನನ್ನ ರಾಜ್ಯಕ್ಕೆ ಏನೋ ಭಯಂಕರ ಆಪತ್ತೇ ಬಂದಿದೆ! ಮುಂದೇನು ಗತಿ! ಇನ್ನು ಇಲ್ಲಿರುವುದು ಅಪಾಯ!

ಗುಟುರು. ಪಿಂಗಳಕ ಜೋರಾಗಿ ಓಡುತ್ತಾನೆ.

# ಶಬ್ದಕ್ಕಂಜಿದೊಡೆಂತಯ್ಯಾ

**ಪಿಂಗಳಕ:-** ಪ್ರಜೆಗಳೇ, ನಿಮ್ಮನ್ನೆಲ್ಲಾ ಇಷ್ಟೊಂದು ಆತುರವಾಗಿ ಇಲ್ಲಿ ಸಭೆ ಸೇರಿಸುವ ಉದ್ದೇಶವನ್ನು... ಉದ್ದೇಶವೇನೂಂದರೆ...ನಾನು ಏನು ಹೇಳೋದೂಂದ್ರೆ...(ಕಸಿವಿಸಿ, ಭಯ).

**ಮಂತ್ರಿ :-** ಮಹಾಪ್ರಭುಗಳು ವಿಶ್ರಮಿಸಬೇಕು. ನಾನು ಸಭೆಗೆ ಉದ್ದೇಶ ತಿಳಿಸ್ತೀನಿ.

**ಪಿಂಗಳಕ:-** ಹಾಂ! ಹಾಂ! ಅದೇ ಸರಿ, ಹಾಗೇ ಮಾಡು (ಸಮಾಧಾನ). ಅಬ್ಬಬ್ಬಾ! ನಾನಿದುವರೆಗೂ ಅಂಥಾ ಭಯಂಕರ ಘರ್ಜನೆ ಕೇಳೇ ಇರಲಿಲ್ಲ.

**ಸಭಿಕರು:-** ಘರ್ಜನೆ! ಎಂಥಾ ಘರ್ಜನೆ? ಯಾರು ಮಾಡಿದ್ದು? (ಇತ್ಯಾದಿ ಗುಸುಗುಸು ಮಾತುಗಳು.)

**ಮಂತ್ರಿ:-** ಸದ್ದೂ! ಈಗ ನಮ್ಮ ಕಾಡಿಗೆ ಒಂದು ಅಪಾಯ ಬಂದಿದೆ. ನಾವು ಇದುವರೆಗೂ ಕಂಡು ಕೇಳಿ ಅರಿಯದಂಥ ಒಂದು ಭಯಂಕರ ಪ್ರಾಣಿ...

**ಸಭಿಕರು:-** ಭಯಂಕರ ಪ್ರಾಣಿ ಅತ್ಯಂತ ಧೀರಶೂರರಾದ ಪಿಂಗಳಕ ಮಹಾರಾಜರ ಕಾಡಿಗೆ ಬರುವಂತಹ ಭಯಂಕರ ಪ್ರಾಣಿ ಯಾವುದು?



**ಮಂತ್ರಿ:-** ಹೇಳ್ತೀನಿ, ಹೇಳ್ತೀನಿ! ಕೇಳಿ. ಇವೊತ್ತು ಬೆಳಗ್ಗೆ ನಮ್ಮ ಪಿಂಗಳಕ ಮಹಾರಾಜರು ತಮ್ಮ ಅಪರಿಮಿತ ಶಕ್ತಿಯಿಂದ ಒಂದು ಮದಿಸಿದ ಸಲಗನನ್ನು ಕೊಂದು ಭೋಜನ ಮುಗಿಸಿ ನೀರು ಕುಡಿಯಲು ನದೀತೀರಕ್ಕೆ ಹೋಗಿದ್ದಾಗ—

**ಪಿಂಗಳಕ:-** (ಭಯದಿಂದ ತತ್ತರಿಸುತ್ತಾ): ಅದೇನು ಕೂಗು! ಅದೇನು ಶಬ್ದ! ನೆನೆಸಿಕೊಂಡರೆ ಈಗಲೂ ಮೈಜುಂ ಅನ್ನುತ್ತೆ!

**ಮಂತ್ರಿ:-** —ಹೋಗಿದ್ದಾಗ ಅವರಿಗೆ ಯಾವುದೋ ಒಂದು ಅಪರಿಚಿತ ಪ್ರಾಣಿಯ ಘರ್ಜನೆ ಕೇಳಿಸಿತು. ಅದನ್ನು ಕೇಳಿ ಅವರು ಇಂತಹ ಭಯಂಕರ ಪ್ರಾಣಿಯಿಂದ ನಮ್ಮ ಕಾಡಿಗೂ ಪ್ರಜೆಗಳಿಗೂ ಅಪಾಯ ಖಂಡಿತ ಅಂತ ಚಿಂತಿಸಿ ಈಗ ನಾವು ಇಲ್ಲಿ ಇರುವುದು ನಮಗೆಲ್ಲಾ ಕ್ಷೇಮವಲ್ಲ ಎಂದು ನಿರ್ಧರಿಸಿದ್ದಾರೆ

**ಒಬ ಸಭಿಕ:-** ಶೂರಾಧಿಶೂರ ಪಿಂಗಳಕ ಮಹಾರಾಜರನ್ನೇ ನಡುಗಿಸಿದ ಆ ಪ್ರಾಣಿ ಯಾವುದಿರಬಹುದು?

**ಮಂತ್ರಿ:-** ಆ ಪ್ರಾಣಿಯನ್ನು ನಾವು ಯಾರೂ ಕಂಡಿಲ್ಲ. ಆದರೆ ಅದರಿಂದ ನಮಗೆಲ್ಲಾ ತಪ್ಪದೆ ಅಪಾಯ ಬರುವುದೆಂಬುದರಲ್ಲಿ ಸಂದೇಹವೇ ಇಲ್ಲ.

**ಪಿಂಗಳಕ:-** ಹೌದು, ಹೌದು! ನೀವೂ ಆ ಶಬ್ದ ಕೇಳಿದರೆ ಆ ಪ್ರಾಣಿ ಎಷ್ಟು ಭಯಂಕರ ಅನ್ನೋ ಕಲ್ಪನೆ ಬರುತ್ತೆ. ಇದ್ದಕ್ಕಿದ್ದಂತೆ ಮತ್ತೊಮ್ಮೆ ಗುಟುರಿನ ಶಬ್ದ.

**ಮಂತ್ರಿ:-** ಅಗೋ! ನೋಡಿ!

**ಪಿಂಗಳಕ:-** ಹೌದು. ಅದೇ ಶಬ್ದ! ನಾವೆಲ್ಲರೂ ಈಗಲೇ ಈ ಕಾಡನ್ನು ಬಿಟ್ಟು ಬೇರೆಲ್ಲಾದರೂ ಹೋಗಲೇಬೇಕು.

**ಸಭಿಕರು:-** ಹೌದು! ಹೌದು! ತಕ್ಷಣ ಹೋಗಲೇ ಬೇಕು! ಬೇರೆ ವಿಧಿಯೇ ಇಲ್ಲಾ. ಪ್ರಾಣ ಉಳಿಸಿಕೊಳ್ಳಬೇಕಾದರೆ ಇಲ್ಲಿ ಒಂದು ಕ್ಷಣವೂ ನಿಲ್ಲಬಾರದು!(ಇತ್ಯಾದಿ ಮಾತಾಡಿಕೊಳ್ಳುತ್ತಾ ಚದರುತ್ತಿರುವಾಗ)

**ಕರಟಕ:-** (ನರಿ) ದಮನಕಾ, ನೀನು ಏನಂತೀಯ? ಬೇರೆಲ್ಲಾದ್ರೂ ಹೋಗೋಣವೇ ನಾವೂನು ?

**ದಮನಕ:-** ಯಾವುದೋ ಪ್ರಾಣಿ ಶಬ್ದ ಕೇಳಿಕೊಂಡು ಇವರೆಲ್ಲಾ ಇಷ್ಟೊಂದು ಹೆದರಿರೋದು ನೋಡಿದ್ರೆ ನಗು ಬರುತ್ತೆ

ಕರಟಕ:- ಆದ್ರೆ ನಮ್ಮ ಮಹಾರಾಜರೇ ಹೆದರಿದಾರಲ್ಲಾ!

ದಮನಕ:- ನಾವು ಅವರಿಗೆ ಸರಿಯಾಗಿ ತಿಳುವಳಿಕೆ ಕೊಡಬೇಕು.

ಕರಟಕ:- ಅವರು ನಮ್ಮ ಮಾತು ಕೇಳಬೇಕಲ್ಲ!

ದಮನಕ:- ಮಹಾರಾಜರು ಈಗ ನಮ್ಮನ್ನ ದೂರಮಾಡಿ, ಯಾರೋ ಕುತಂತ್ರಿಗಳನ್ನ ಮಂತ್ರಿಗಳನ್ನಾಗಿ ನೇಮಿಸಿ ಕೊಂಡಿದ್ದಾರೆ, ನಿಜ! ಆದ್ರೂ ನಾವು ನಮ್ಮ ರಾಜನ ಸ್ನೇಹಿತರಾಗೇ ಇದೀವಿ.

ಕರಟಕ:- ಅರಸನೂ ನಮ್ಮನ್ನ ಸ್ನೇಹಿತರು ಅಂತ ನಡೆಸಿಕೊಂಡರೆ, ನಾವೂ ಸ್ನೇಹಿತರಾಗಿರ್ತೀವಿ. ಆದ್ರೆ ನಮ್ಮನ್ನ ದೂರ ಮಾಡಿ ನಮ್ಮ ಮೇಲೆ ವಿಶ್ವಾಸ ಇಲ್ಲಾಂತ ತೋರಿಸಿಕೊಂಡಿರೋವಾಗ ನಾವಾಗೇ ಯಾಕೆ ಮೇಲೆ ಬಿದ್ದು ಹೋಗಬೇಕು? ಅದರಿಂದ ನಮಗೇ ಕೆಡುಕಾದೀತು.

ದಮನಕ:- ನೀ ಹೇಳೋದೇನೋ ಸರಿ, ಆದ್ರೆ ಇಂಥಾ ಆಪತ್ಕಾಲದಲ್ಲಿ ನಾವು ಕಣ್ಣು ಮುಚ್ಚಿಕೊಂಡು ಕೂತಿರೋದು ಧರ್ಮವಲ್ಲ. ನಮ್ಮ ದೊರೆ ಎಷ್ಟೇ ಗುಣಹೀನ ಆಗಿದ್ರೂ ಸೇವಕರಾದ ನಾವು ನಮ್ಮ ಕರ್ತವ್ಯ ತಪ್ಪಬಾರದು. ಆದ್ದರಿಂದ ನಾವು ಅರಸನ ಭಯಕ್ಕೆ ಕಾರಣ ಕಂಡು ಹಿಡಿದು ತಕ್ಕ ಸಮಾಧಾನ ಉಂಟುಮಾಡಬೇಕು.

ಕರಟಕ:- ಬೇಡ ಸುಮ್ಮನಿರು! ಒಂದು ಹೋಗಿ ಮತ್ತೊಂದಾದೀತು. ಈ ಬೇಡದ ರಾಜಕಾರಣದಲ್ಲಿ ಸಿಕ್ಕಿಕೊಂಡು ನಮಗೇನಾಗಬೇಕು? ಹೊರಗಡೆ ನಿಂತು ತಮಾಷೆ ನೋಡೋದೇ ಚೆನ್ನ. ಇಲ್ಲದಿದ್ದರೆ ಕೀಲುಕಿತ್ತ ಕೋಡಗನ ಹಾಗಾದೀತು, ನಮ್ಮ ಗತಿ!

ದಮನಕ:- ಉಹುಂ! ಅರಸನ ಭಯವನ್ನು ಹೋಗಲಾಡಿಸಲೇ ಬೇಕು. ಈ ಕ್ಷಣ ಹೋಗಿ ಮಹಾರಾಜರಿಗೆ ಸಹಾಯ ಮಾಡಲೇಬೇಕು.

ಕರಟಕ:- ನಾನಂತೂ ಬರೋದಿಲ್ಲ. ನಿನ್ನಿಷ್ಟ. ಬೇಕಾದರೆ ಹೋಗು.

ದಮನಕ:- ಮಹಾರಾಜರಿಗೆ ಜಯವಾಗಲಿ!

* * *

ಪಿಂಗಳಕ:- ಯಾರು? ಓಹೋ, ದಮನಕ! ಅಪರೂಪ ಸವಾರಿ! ಏನು ವಿಶೇಷ? ನಾವಲ್ಲಾ ಈ ಕಾಡನ್ನು ಬಿಟ್ಟು ಹೋಗಬೇಕೆಂದು ನಿರ್ಧಾರ ಮಾಡಿದೀವಿ. ನೀನಿನ್ನೂ ತಯಾರಿ ನಡೆಸದೆ ಯಾಕೆ ಹೀಗೆ ವ್ಯರ್ಥ ಕಾಲಹರಣ ಮಾಡ್ತಿದ್ದ. ಬೇಗ ಹೊರಡು! ತಡಮಾಡಿದಷ್ಟೂ ಕೇಡು! ನಡಿ, ನಡಿ!

ದಮನಕ: ಕ್ಷಮಿಸಬೇಕು! ತಾವು ಕೇವಲ ಶಬ್ದ ಕೇಳಿ ಹೆದರಿದ್ದೀರಿ. ಆದರೆ, ಅದು ಯಾವ ಪ್ರಾಣಿ, ಅದರ ಬಲ ಎಷ್ಟು ಇತ್ಯಾದಿ ವಿಚಾರಮಾಡಿಲ್ಲ.

ಪಿಂಗಳಕ:- ಏನು ನೀ ಹೇಳೋದು? ಶಬ್ದ ಕೇಳಿದ್ರೆ ಸಾಲದೆ? ಇದನ್ನ ಕೇವಲ ಶಬ್ದ ಅಂತ ಉದಾಸೀನಮಾಡಿ ತಳ್ಳಿ ಹಾಕೋದು ಮೂರ್ಖತನ. ಏನು ಶಬ್ದ! ನೆನೆಸಿಕೊಂಡ್ರೆ ಈಗಲೂ ಭಯವಾಗುತ್ತೆ. ರಾತ್ರಿ ಎಲ್ಲಾ ನಿದ್ದೆ ಇಲ್ಲಾ, ಆ ಹಾಳಾದ್ದು ಎಲ್ಲಿ ಬಂದು ಮೈಮೇಲೆ ಬೀಳುತ್ತೋ ಅಂತ ಎಚ್ಚರವಾಗೇ ಕೂತಿದ್ದೆ.

ದಮನಕ:- ಆದರೂ ಸ್ವಲ್ಪ ಪರೀಕ್ಷೆ ಮಾಡಿ, ಅದೆಂತಹ ಪ್ರಾಣಿ ಅಂತ ಕಂಡು ಹಿಡೀಬೇಕಾಗಿತ್ತು ಮಹಾಸ್ವಾಮಿ.

ಪಿಂಗಳಕ:- ಪರೀಕ್ಷೆ ಅಂತೆ ಪರೀಕ್ಷೆ! ಪರೀಕ್ಷೆ ಮಾಡೋಕೇನಿದೆ, ಮಣ್ಣು! ಒಂದು ಸಲ ಆ ಶಬ್ದ ಕೇಳಿದ್ರೆ ಸಾಕು- ಅದಕ್ಕೆ ತಕ್ಕ ದೇಹ, ದೇಹಕ್ಕೆ ತಕ್ಕ ಬಲ, ಬಲಕ್ಕೆ ತಕ್ಕ ದರ್ಪ, ದರ್ಪಕ್ಕೆ ತಕ್ಕ ಪರಾಕ್ರಮ ಇದ್ದೇ ಇರುತ್ತೆ.



ಅನುಮಾನವೇ ಇಲ್ಲ. ಸುಮ್ಮಸುಮ್ಮನೆ ಪರೀಕ್ಷೆ ಮಾಡ್ತೀನಿ ಅಂತ ಹೋಗಿ ಪ್ರಾಣ ಕಳಕೊಳ್ಳೋಕೆ ನಂಗೇನೂ ಹುಚ್ಚು ಹಿಡಿದಿಲ್ಲ.

**ದಮನಕ:-** ಯಾವುದನ್ನೂ ಸಂಪೂರ್ಣ ಪರೀಕ್ಷೆಮಾಡದ, ಹೆದರಿ ಪಲಾಯನ ಮಾಡುವುದು ನಂಗೇನೋ ಅಷ್ಟೊಂದು ಸೂಕ್ತವಾಗಿ ಕಾಣೋದಿಲ್ಲ.

**ಪಿಂಗಳಕ:-** ಸರಿ, ಸರಿ, ನಿನ್ನ ಮಾತು ಕೇಳಿಕೊಂಡು ಪರೀಕ್ಷೆ–ಗಿರೀಕ್ಷೆ ಅಂತ ನಾವು ಕಾಲಹರಣ ಮಾಡ್ತಿದ್ರೆ ಆ ಭಯಂಕರ ಪ್ರಾಣಿಗೆ ಊಟಕ್ಕೆ ಕರೆಕೊಟ್ಟ ಹಾಗೇ ಸರಿ!

**ದಮನಕ:-** ಆದರೂ ಆ ಪ್ರಾಣಿಗೆ ನೀವು ಹೆದರಬೇಕಾದ ಕಾರಣ ಉಂಟೋ ಇಲ್ಲವೋ ಪರೀಕ್ಷೆಮಾಡದೆ ಬರೀ ಅದರ ಕೂಗಿಗೆ ಹೆದರಿಕೊಂಡು ತಲೆ ತಲಾಂತರದಿಂದ ನಮ್ಮ ಸ್ವದೇಶವಾದ ಈ ಕಾಡನ್ನು ಬಿಟ್ಟು ಪಲಾಯನ ಮಾಡೋದು ಸರಿಯಲ್ಲ. ಎಷ್ಟೋ ಸಲ ಇಂಥಾ ಶಬ್ದಗಳೆಲ್ಲ ತುಂಬಾ ಹಾಸ್ಯಾಸ್ಪದವಾಗಿರುತ್ತೆ. ನರಿಯೂ ಭೇರಿಯೂ ಅನ್ನೋ ಕತೆ ಕೇಳಿಲ್ಲವೇ ನೀವು, ಸ್ವಾಮಿ?

**ಪಿಂಗಳಕ:-** ನರಿಯೂ ಭೇರಿಯೂ? ಕೇಳಿಲ್ಲ. ಏನದು ಕತೆ?

**ದಮನಕ:-** ಓಹ್! ಅದೊಂದು ತಮಾಷೆ ಕತೆ! ನಗು ಬರುತ್ತೆ! ಹೇಳ್ತೀನಿ, ಕೇಳಿ ಈ ನಮ್ಮ ಕಾಡಿನ ಹಾಗೇ ಒಂದು ದೊಡ್ಡ ಕಾಡು. ಅಲ್ಲೊಂದು ನರಿ ಇತ್ತು. ಆ ನರಿ ಮಹಾ ಪುಕ್ಕಲು ಪ್ರಾಣಿ. ಯಾವಾಗಲೂ ಹೆದರಿ ಹೆದರಿ ಸಾಯ್ತಾ ಇತ್ತು. ಏನಾದ್ರೂ ಶಬ್ದ ಕೇಳಿದ್ರೆ, ಸಾಕು ಬಾಲ ಮುದುರಿಕೊಂಡು ಓಡಿಹೋಗಿ ಬಿಲದಲ್ಲಿ ಅವಿತುಕೊಂಡು ಬಿಡ್ತಿತ್ತು. ಸ್ವಲ್ಪಾನೂ ಧೈರ್ಯ ಇಲ್ಲ, ಛಾತಿ ಇಲ್ಲ. ಅದಕ್ಕೇ ಆ ನರೀಗೆ 'ಮಹಾಭೀರು' ಅನ್ನೋ ಹೆಸರು ಬಂದಿತ್ತು. ಒಂದು ಸಲ ಆ ನರಿ ಹಸಿವಿನಿಂದ ಸಂಕಟಪಡ್ತಾ ಆಹಾರ ಹುಡುಕ್ತಾ ಅಕ್ಕ ಪಕ್ಕ ಹಿಂದೆ ಮುಂದೆ ನೋಡ್ಕೊಂಡು ನೋಡ್ಕೊಂಡು ತುಂಬಾ ಎಚ್ಚರಿಕೆಯಿಂದ ಕಾಡಿನಲ್ಲಿ ಸುತ್ತಾಡ್ತಾ ಇದ್ದಾಗ – ಕಾಗೆ ಕಾಕಾಕಾ–ಎಂದು ಕೂಗಿದ ಶಬ್ದ.

**ಮಹಾಭೀರು:-** ಅಯ್ಯಯ್ಯಪ್ಪೋ, ಇದೇನು ಶಬ್ದ! ನಂಗ್ಯಾಕೋ ತುಂಬಾ ಭಯ ಆಗ್ತಾ ಇದೆ... ಹೊಟ್ಟೆ ಬೇರೆ ತಾಳ ಹಾಕ್ತಾ ಇದೆ... ಏನು ಮಾಡೋದು ದೇವರೇ! ಇಲ್ಲೇ ಈ ಪೊದೇಲಿ ಬಚ್ಚಿಟ್ಕೋತೀನಿ ಸದ್ಯಕ್ಕೆ!

**ಕಾಗೆ:-** ಏ ಮಹಾಭೀರು! ನಿನ್ನಂಥ ಪರಾಕ್ರಮಿಗಳು ಮೂರು ಲೋಕದಲ್ಲೂ ಸಿಕ್ಕೋದಿಲ್ಲ! ಅಹಹಾ! ಏನು ಧೈರ್ಯ! ನಾಚಿಕೆ ಆಗೋದಿಲ್ವಾ, ಥೂ ನಿನ್ನ! ನಾನು ನಿನ್ನ ಸ್ನೇಹಿತ, ನೋಡು. ಹೆದರಬೇಡ.

**ಮಹಾಭೀರು:-** ಓಹ್! ನೀನಾ ಅಬ್ಬಬ್ಬಾ! ಎಷ್ಟೊಂದು ಹೆದರಿಬಿಟ್ಟಿದ್ದೆ. ಅಯ್ಯಾ ಗೆಳೆಯಾ, ಹೊಟ್ಟೆ ಹಸಿವು ತಾಳಲಾರೆ. ಎಲ್ಲಾ ಕಡೇನೂ ಹುಡುಕ್ಕೊಂಡ್ ಬಂದೆ. ಏನೂ ಆಹಾರ ಸಿಗದೆ ಎಷ್ಟೊಂದು ಸೊರಗಿದೀನಿ ನೋಡು!

**ಕಾಗೆ:-** ನಿನ್ನಂಥ ಅಂಜುಕುಳೀನ ನೋಡಿದ್ರೆ, ನಗಬೇಕೋ ಅಳಬೇಕೋ ಗೊತ್ತಾಗುಲ್ಲ. ಹೆಸರಿಗೆ ತಕ್ಕಹಾಗೆ ಇದಿ ಬಿಡು! ನಾಲಕ್ ಹೆಜ್ಜೆ ಆ ಕಡೆ ಹೋಗಿ ನದೀ ದಾಟಿದರೆ ಕಟರಯಾಗೋ ಅಷ್ಟು ಊಟ ಸಿಕ್ಕುತ್ತೆ.

**ಮಹಾಭೀರು:-** ಹೌದಾ! ನಂಗೊತ್ತೇ ಇಲ್ಲ! ಇತ್ತೀಚೆಗೆ ನಂಗೆಯಾರೂ ಸುದ್ದಿ ತಿಳಿಸೋದೇ ಇಲ್ಲ.

**ಕಾಗೆ:-** ಹೋಗು, ನದೀ ಆಚೆ ದಡದಲ್ಲಿ ಯುದ್ಧ ಆಯ್ತು ಮೊನ್ನೆ. ರಾಶಿರಾಶಿ ಹೆಣಗಳು ಬಿದ್ದಿವೆ.

**ಮಹಾಭೀರು:-** ಆಚೆದಡದಲ್ಲಿ! ಹ್ಯಾಗಪ್ಪಾ ಹೋಗೋದು ಅಲ್ಲಿ ತನಕ? ದಾರೀಲಿ ಏನೂ ಅಪಾಯ ಇಲ್ಲವೇ? ನದೀ ದಾಟೋವಾಗ ಮೊಸಳೆ ಗಿಸಳೆ...

**ಕಾಗೆ:-** ಸರಿ, ಬಿಡು... ನೀನು ಹೀಗೇ ಮೀನ ಮೇಷ ಎಣಿಸ್ತಾ ಇದ್ರೆ, ಹೀಗೆ ಹಸಿದುಕೊಂಡು ಸಾಯ್ತೀಯ ಅಷ್ಟೆ.

**ಮಹಾಭೀರು:-** ಇಲ್ಲ, ಇಲ್ಲಾ ಹೋಗ್ತೀನಿ. ನೀನು ಅಷ್ಟೊಂದು ಧೈರ್ಯಕೊಟ್ಟಮೇಲೆ, ನಂಗೇನು ಭಯ!

**ಕಾಗೆ:-** ಹೋಗು, ಹೊಟ್ಟೆತುಂಬಾ ಉಣ್ಣು. ಹೆದರಬೇಡ. ಅಲ್ಲಿರೋ ಹೆಣಗಳೆಲ್ಲಾ ಸತ್ತು ಬಿದ್ದಿವೆ. ನಿನಗೇನೂ ಅಪಾಯ ಇಲ್ಲ.

**ಮಹಾಭೀರು:-** ಹ್ಹೇ! ನಂಗೇನು ಭಯ! ನೋಡ್ತಾ ಇರು. ಎಂಥಾ ಹೆಣ ಇದ್ರೂ, ಜೀವಸಹಿತ ಬಿಡೋದಿಲ್ಲ. ಈ ಮಹಾಭೀರು ಎಂಥಾ ಪರಾಕ್ರಮಿ ಅನ್ನೋದನ್ನ ಈ ಕಾಡಿನಲ್ಲಿ ಯಾರೂ ಮರೀಬಾರದು.

**ಕಾಗೆ:-** ಅದೀಗ ಮಾತು!

* * *

( ನದಿ ಜುಳುಜುಳು ಹರಿಯುವ ಸದ್ದು )

**ಮಹಾಭೀರು:-** ಅಬ್ಬಬ್ಬಾ! ಅಂತೂ ನದಿ ದಡಕ್ಕೆ ಬಂದಾಯ್ತು. ದೇವರ ದಯೆ! ಏನೂ ತೊಂದರೆ ಆಗಲಿಲ್ಲ. ಅಂದ್ರೆ ನಾನು ಅಷ್ಟೊಂದು ಹುಷಾರಾಗಿ ಇದ್ದೀನಿ ಅಂತ ಬದುಕಿಕೊಂಡು ಬಂದೆ. ಹೊಟ್ಟೆ ಪಾಡು! ಏನು ಮಾಡೋದು. ಕಾಡಿನಲ್ಲಿದ್ದು ಮೃಗಗಳಿಗೆ ಅಂಜಬಾರದು ಅಂತ ತತ್ವ ಹೇಳೋ

ದೇನೋ ಸುಲಭ. ಆದ್ರೆ ನಮ್ಮಂಥ ಸಾಮಾನ್ಯರ ಕಷ್ಟ ಸುಖ ಬೇರೆಯವರಿಗೆ ಹೇಗೆ ತಿಳೀಬೇಕು... ಅನುಭವಿಸಿದ್ರೆ ಅರ್ಥವಾದೀತ್ತು... ಓಹ್! ಆಚೆದಡದಲ್ಲಿ ಎಷ್ಟೊಂದು ಹೆಣ ಬಿದ್ದಿವೆ. ನಾ ಒದುಕಿರೋವರೆಗೂ ಆರಾಮವಾಗಿರಬಹುದು. ಆದ್ರೆ ಈ ನದಿ ಒಂದಿದ್ಯಲ್ಲ, ಅನಿಷ್ಟ... ಹೇಗೆ ದಾಟೋದು? ಈಜಂಕ್ಕೇನೋ ಬರುತ್ತೆ. ಆದ್ರೆ ಮಧ್ಯ ಮೀನು ಮೊಸಳೆ... ಒಂದು ಸಲ ಈಜು ಬಿದ್ದು ಆಚೇ ದಡ ಸೇರಿಬಿಟ್ರೆ ಗೆದ್ದೆ! ಆಮೇಲೆ ಈ ಕಡೆ ತಲೆ ಇಟ್ಟು ಮಲಗಿದ್ರೆ ನಮ್ಮ ಪ್ರಾಣ! ಅಂಜುಕಂ ಅಂತ ಹೆದರ್ಸೋರು ಯಾರೂ ಇರೋದಿಲ್ಲ, ಅಲ್ಲಿ. ಹುಂ...ಏನಾದ್ರಾಗ್ಲಿ, ಕಣ್ಮುಚ್ಕೊಂಡು ಧುಮುಕೇ ಬಿಡ್ತೀನಿ!

ಮಹಾ ಭೀರು ನದಿಗೆ ಧುಮುಕಿದ ಸದ್ದು. ಈಜಿ ಆಚೆ ದಡ ಸೇರುತ್ತದೆ.

ಆಹಹ! ಅಂತೂ ಬಂದು ಬಿಟ್ಟೆ. ಸದ್ಯ. ಇಲ್ಲಿ ಯಾರ ಹೆದರಿಕೇನೂ ಇಲ್ಲ! ಓಹೋಹೋ! ಎಷ್ಟೊಂದು ಹೆಣಗಳು... ಮನುಷ್ಯರೂ, ಆನೆ, ಕುದುರೆ! ನನ್ನಂಥಾ ಧರ್ಮಶಾಲಿ, ಅದೃಷ್ಟಶಾಲಿ ಯಾರಿದ್ದಾರೆ ಈ ಲೋಕದಲ್ಲಿ! ಸಮಾನರಾರಿಹರು (ಹಾಡುತ್ತದೆ.) ಮೊದಲು ಏನು ತಿನ್ಲಿ! ಈ ಆನೆ ತಿಂತೀನಿ.. ಬೇಡ ಬೇಡ. ಈ ಕುದುರೆ ಮಾಂಸ ರುಚಿ ನೋಡ್ತೀನಿ... ಉಹುಂ, ಉಹುಂ... ಮೊದಲು ಈ ಸೈನಿಕನ ತೊಡೆಗೆ ಬಾಯಿಹಾಕ್ತೀನಿ. ತುಂಬಾ ರುಚಿ ಇರಬೇಕು ಇದು...

ಇದ್ದಕ್ಕಿದ್ದಂತೆ ನಗಾರಿಯ ಶಬ್ದ ಕೇಳಿಸುತ್ತದೆ.

ಓಹ್ ಇದೇನೋ ಬಂತಲ್ಲಪ್ಪಾ ಭೂತ! ಯಾರೂ ಇಲ್ಲ ಅಂತ ಊಟಕ್ಕೆ ಶುರುಮಾಡ್ತಿದ್ರೆ...

ಮತ್ತೆ ನಗಾರಿ ಬಡಿತ ಶಬ್ದ.

ಅಯ್ಯಯ್ಯೋ! ಏನಪ್ಪಾ ಮಾಡ್ಲಿ ಈಗ... ಎಲ್ಲಿ ಹೋಗಲಿ... ಆನೇನೂ ಬೇಡ, ಕುದುರೇನೂ ಬೇಡ... ಮನುಷ್ಯ... ಹೇಗಪ್ಪಾ ಇಷ್ಟೊಂದು ಊಟ ಬಿಟ್ಟು ಹೋಗೋದು... ಇನ್ನೂ ರುಚಿ ಕೂಡ ನೋಡಿಲ್ಲ. ಈ ಶಬ್ದ ಕೇಳಿದ್ರೆ ಯಾವುದೋ ದುಷ್ಟ ಪ್ರಾಣಿಗೆ ಬಂದಿರಬೇಕು ಅಂತ ಅನಿಸುತ್ತೆ.

ಮತ್ತೆ ನಗಾರಿ ಶಬ್ದ.




ಸದ್ಯ ಪ್ರಾಣ ಉಳಿದ್ರೆ ಸಾಕು... ಓಡಿಹೋಗೋದೇ ಸರಿಯಾದ ಉಪಾಯ!

ಮಹಾಭೀರು ಏದುಸಿರು ಬಿಡುತ್ತಾ ಓಡಿ ಓಡಿಬರುತ್ತಿರುತ್ತದೆ. ನದಿಗೆ ಜಿಗಿದು ಈಚೆ ದಡ ಸೇರುತ್ತದೆ.

ಕಾಗೆ:- ಏನಯ್ಯಾ ಮಹಾಭೀರು, ಊಟ ಆಯ್ತಾ? ಹೊಟ್ಟೆ ತುಂಬಿತೇ?

ಮಹಾಭೀರು:- ಊಟ ಅಂತೆ, ಊಟ! ಸದ್ಯ: ಪ್ರಾಣ ಉಳಿದರೆ ಸಾಕು ಅಂತ ಓಡಿಬಂದೆ. ಸ್ನೇಹಿತ ಅಂತ ನಿನ್ನ ಮಾತು ಕೇಳಿಕೊಂಡು ಹೋಗಿದ್ದಕ್ಕೆ ಒಳ್ಳೇ ಶಾಸ್ತಿ ಆಯ್ತು!

ಕಾಗೆ:- ಏನು ನೀ ಹೇಳೋದು? ಹೆಣಗಳು ಸಿಕ್ಕಲಿಲ್ಲವೆ? ಮೊನ್ನೆ ತಾನೇ ಯುದ್ಧ ಆಯ್ತು. ನಾನೇ ನೋಡಿದ್ದೆ ಸಾವಿರಾರು ಜನ ಸತ್ತು ಬಿದ್ದಿದ್ರು.

ಮಹಾಭೀರು:- ಅದೇನೋ ಸರಿ. ಹೆಣಗಳೇನೋ ಬಿದ್ದಿವೆ. ಆದ್ರೆ...

ಕಾಗೆ:- ಆದ್ರೆ? ಏನು?

ಮಹಾಭೀರು:- ಒಂದು ಒಳ್ಳೇ ಹೆಣನೋಡಿ, ಹತ್ತಿರ ಹೋದೆ ಇನ್ನೇನು ತೊಡೆಗೆ ಬಾಯಿಹಾಕಬೇಕು... ಇದ್ದಕ್ಕಿದ್ದಂತೆ... ಅಬ್ಬಬ್ಬಾ ಅದೇನು ಶಬ್ದ... ಕಿವಿಬಿರಿಯೋ ಹಾಗೆ ಭಯಂಕರವಾಗಿತ್ತು... ಸತ್ತೆನೋ ಕೆಟ್ಟೆನೋ ಅಂತ ಓಡಿ ಬಂದ್ಬಿಟ್ಟೆ... ಉಪವಾಸ ಇದ್ರೂ ಪರವಾಗಿಲ್ಲ. ಮತ್ತೊಂದ್ಸಲ ಈ ನದಿ

ದಾಟಿ ಆ ಕಡೆ ಹೋಗೋಲ್ಲಪ್ಪಾ! ಇದೆ, ನಿನ್ನಂಥ ಸೇಹಿತ್ರೇ ಇರಬೇಕು. ನೋಡು. ಕಂಡೋರ ಮಕ್ಕಳನ್ನ ಬಾವೀಗೆ ತಳ್ಳಿ ಆಳಾನೋಡೋ ಬಂದ್ರು ।

**ಕಾಗೆ:–** ಏನಾ ಶಬ್ದ ಕೇಳಿದ್ದೆ, ಹೇಗಿತ್ತು? ಯಾವ ಪ್ರಾಣೀದು?

**ಮಹಾಭೀರು:–** ಅದನ್ನೆಲ್ಲಾ ಪರೀಕ್ಷೆ ಮಾಡೋಕೆ ಯಾರಿಗೆ ಪುರುಸೊತ್ತಿತ್ತು! ಬದುಕಿದೆಯಾ ಬಡ ಜೀವವೇ ಅಂತ ಈಚೆ ದಡ ಸೇರಿದ್ರೆ, ಸಾಕಾಗಿತ್ತು, ನಂಗೆ.

**ಕಾಗೆ:–** ಅಯ್ಯೋ ಪೆದ್ದೇ! ಕ್ಷಣಕ್ಷಣಕ್ಕೂ ನಿನ್ನ ಹೆಸರು ಸಾರ್ಥಕಪಡಿಸ್ಕೋತಾ ಇದೀಯಲ್ಲ, ನೀನು ಧೈರ್ಯ ಕಲಿಯೋದು ಯಾವಾಗ?

**ಮಹಾಭೀರು:–** ನೀನು ಏನು ಬೇಕಾದ್ರೂ ಹೇಳು ನಂಗಂತೂ ಭಯಾಪ್ಪ!

**ಕಾಗೆ:–** ಹೆದರಬೇಡ. ಬಾ ನನ್ನ ಜೊತೆ. ಅದೇನು ಶಬ್ದಾನೋ ನಾನೂ ಕೇಳ್ತೀನಿ.

**ಮಹಾಭೀರು:–** ಅಯ್ಯಯ್ಯೋ, ನಾ ಬರುಲ್ಲ, ಒಂದು ಸಲ ತಪ್ಪಿಸಿಕೊಂಡು ಬಂದಿದ್ದೇ ಸಾಕು.

**ಕಾಗೆ:–** ಅದ್ಯಾವ ಪ್ರಾಣೀನೋ ನೋಡೋಣ, ಬಾ... ಸುಮ್ಮ ಸುಮ್ಮನೆ ಏನೋ ಶಬ್ದ ಕೇಳಿ ಹೀಗೆ ನಡುಗ್ತಾ ಕೂತಿದಿಯಲ್ಲಾ– ಏನು ಹೇಳಬೇಕು ಇದಕ್ಕೆ. ಬಾ, ಹೋಗೋಣ. ಅದೇನಿದ್ರೂ ನೋಡೇ ಬಿಡೋಣ.

**ಮಹಾಭೀರು:–** ನಿನ್ನ ದಮ್ಮಯ್ಯ! ನಾ ಒಲ್ಲೆ. ನೀನೇ ಹೋಗು. ವಾಪಸ್ ಬಂದ್ರೆ ಅದೇನು ವಿಷಯ ನಂಗೂ ಸ್ವಲ್ಪ ತಿಳಿಸು

**ಕಾಗೆ:–** ಬಾ ಅಂದ್ರೆ ಬರಬೇಕು. ನಡಿ, ನಡಿ ಉಪವಾಸ ಸಾಯೋಕೆ ಇಷ್ಟಾನ?

**ಮಹಾಭೀರು:–** (ಅಳು ಮೋರೆ) ಉಹುಂ...ಹುಂ... ಬರ್ತೀನಿ, ಆದ್ರೆ, ನಾನು ನದಿ ದಾಟಿದ ಮೇಲೆ ದಂಡೆ ಮೇಲೆ ನಿಂತ್ಕೊ ನಿಂಗೆ ಜಾಗ ತೋರಿಸ್ತೀನಿ ನೀನೊಬ್ಬನೇ ಹೋಗಿ ನೋಡಿ ಬರಬೇಕು, ಮತ್ತೆ.

**ಕಾಗೆ:–** ಆಗ್ಲಿ, ಆಗ್ಲಿ ನಡಿ.

* *

(ಕಾಗೆ 'ಕಾಕಾ' ಎಂದು ಹಾರುತ್ತದೆ. ಮಹಾಭೀರು ನದಿಗೆ ಜಿಗಿದು ಈಜುತ್ತದೆ)

**ಕಾಗೆ:–** ಓಹೋಹೋ! ಎಷ್ಟೊಂದು ಹೆಣಗಳು! ಎಲ್ಲಾ ಬಿಟ್ಟು ಓಡಿ ಬಂದಿದೀಯಲ್ಲ! ನಡಿ, ನೀ ಕೇಳಿದ ಶಬ್ದ ಎಲ್ಲಿಂದ ಬಂತು ತೋರಿಸು.



–ನಗಾರಿಯ ಶಬ್ದ–

**ಮಹಾಭೀರು:–** ಅಗೋ! ಕೇಳಿಸ್ತಾ? ನೋಡು... ಆ ಕಡೆ.

–ಮತ್ತೊಮ್ಮೆ ನಗಾರಿಯ ಶಬ್ದ–

ನೀನೇ ಹೋಗಿ ನೋಡ್ಕೊಂಡ್ ಬಾ. ನಾನಿಲ್ಲೇ ಕೂತಿರ್ತೀನಿ. ಬೇಗ ಬಾ. ಜೋಕೆ!

ಕಾಗೆ (ನಗುತ್ತಾ): ಸರಿ, ಸರಿ, ಬಂದ್ಬಿಡ್ತೀನಿ. ಕೂತಿರು.

ಆಗಾಗ್ಗೆ ನಗಾರಿಯ ಶಬ್ದ–

**ಕಾಗೆ:–** ಸಂದ್ಧ ಭೂಮಿಯಿಂದ ಬರ್ತಾ ಇದೆ ಶಬ್ದ. ನೋಡಿದ್ರೆ ಯಾರೂ ಬದುಕಿರೋ ಹಾಗಿಲ್ಲ. ಏನಿರಬಹುದು? ಓಹ್! ಇಲ್ಲೇ ಕೇಳಿಸ್ತಿದೆ... ನೋಡೋಣ ಈ ಮರದ ಮೇಲೆ ಕೂತ್ಕೊಂಡು.

–ನಗಾರಿಯ ಶಬ್ದ– ಗಾಳಿಬೀಸುವ ಸುಯ್ ಶಬ್ದ.

ಏನೂ ಕಾಣೋದಿಲ್ಲ... ಇದೇನು? ಇಷ್ಟೊಂದು ದೊಡ್ಡ ನಗಾರಿ ಬಿದ್ದಿದೆ. ಈ ಮರದ ಕೆಳಗೆ.

ನಗಾರಿ ಮೇಲೆ ಕೂತ್ಕೋತೀನಿ. ಒಳ್ಳೇ ಜೋಕಾಗಿರುತ್ತೆ. ಸಿಂಹಾಸನದ ಮೇಲೆ ಕೂತ್ಕೊಂಡ ಹಾಗೆ!

ಗಾಳಿ–ನಗಾರಿಯಶಬ್ದ.

ಓಹ್! ಈಗ ತಿಳೀತು. ಗಾಳೀಗೆ ಕೆಳಗೆ ಬಗ್ಗಿದ ಕೊಂಬೆ ನಗಾರಿ ಬಡೀತಿದೆ! ಪೆದ್ದು ಮಹಾಭೀರು ಯಾವುದೋ ದುಷ್ಟಮೃಗದ ಕೂಗು ಅಂತ ಭಯಬಿದ್ದು ಓಡಿಬಂದಿದೆ. ಈ ನಗಾರಿ ಚರ್ಮ ಹರಿದು ಹಾಕಿದರೆ ಆಮೇಲೆ ಇದರಿಂದ ಶಬ್ದ ಬರೋದಿಲ್ಲ.

ಕಾಗೆ ಕೊಕ್ಕಿನಿಂದ ನಗಾರಿಯ ಚರ್ಮವನ್ನು ಕುಕ್ಕಿಕುಕ್ಕಿ ಹರಿಯುತ್ತದೆ.

**ಕಾಗೆ:–** ಅಯ್ಯಾ ಮಹಾಭೀರು! ಬಾ, ನಿನ್ನ ಹೆದರಿಸಿದ ಪ್ರಾಣೀನ ಕೊಂದು ಹಾಕಿದೀನಿ. ಹೊಟ್ಟೆ ತುಂಬಾ ಊಟ ಮಾಡು.

**ಮಹಾಭೀರು:–** (ದೂರದಿಂದ ಮಾತಾಡುತ್ತ): ಹೌದೇ? ನಿಜವಾಗಲೂ ಸಾಯಿಸಿದೆಯಾ? ಹತ್ತಿರ ಬರಬಹುದು ತಾನೇ? ಏನೂ ಅಪಾಯ ಇಲ್ಲವಲ್ಲ?

**ಕಾಗೆ:–** ಬಾಬಾ! ನೋಡು. ಇದೇ ನಿನ್ನನ್ನು ಹೆದರಿಸಿದ ಮಹಾಪ್ರಾಣಿ. ಸೈನಿಕರು ಉಪಯೋಗಿಸುತ್ತಿದ್ದ ನಗಾರಿ. ಜೋರಾಗಿ ಗಾಳಿ ಬೀಸಿದಾಗ ಕೊಂಬೆ ತಗಲಿ ಶಬ್ದ ಆಗ್ತಾ ಇತ್ತು. ಇದನ್ನ ಕೇಳೇ ಹೆದರಿಕೊಂಡು ಬಿಟ್ಟಿದ್ದೆಯಲ್ಲಾ!

**ಮಹಾಭೀರು:–** ಈಗೇನೂ ಭಯ ಇಲ್ಲಾ ತಾನೆ?

**ಕಾಗೆ:–** ಏನೇನೂ ಇಲ್ಲ! ನೋಡು ನಗಾರಿ ಚರ್ಮ ಹರಿದುಹಾಕಿದೀನಿ. ಅದರ ಮೇಲೆ ಏನು ಬಡಿದರೂ ಶಬ್ದ ಬರೋದಿಲ್ಲ. ಅದೂ ಅಲ್ಲದೆ, ಇದೊಂದು ಪ್ರಾಣಿ ಅಲ್ಲ, ನಗಾರಿಯಪ್ಪಾ, ಮಹಾಭೀರು. ನಗಾರಿ!

**ಮಹಾಭೀರು:–** ಅಯ್ಯಾ ಮಿತ್ರ, ನಿನ್ನ ಉಪಕಾರ ನಾನು ಸಾಯೋವರೆಗೂ ಮರೆಯೋದಿಲ್ಲ. ಸುಮ್ಮಸುಮ್ಮನೆ ಎಷ್ಟೊಂದು ಹೆದರಿಬಿಟ್ಟಿದ್ದೆ, ನಾನು!

* * *

**(ಹಾಗಾದ್ರೆ ಈ ನಮ್ಮ ಕಾಡಿನಲ್ಲೂ ಒಂದು ನಗಾರಿ ಬಂದಿದೆ ಅಂತಿಯ?)**

**ದಮನಕ:–** ನಗಾರೀನೋ ಮತ್ತೊಂದೋ! ಹೋಗಿ ನೋಡಿ ಪರೀಕ್ಷೆ ಮಾಡಿದ್ರೆ ತಿಳಿಯುತ್ತೆ. ಅದು ಬಿಟ್ಟು ಬರೀ ಶಬ್ದ ಕೇಳಿ ಮಹಾಭೀರು ಥರ ನಡುಗ್ತಾ ಕೂತ್ರೆ ನಮ್ಮ ಪ್ರಜೆಗಳೆಲ್ಲಾ ಉಸ್ಸುಮಾಡಿಕೊಂಡು ನಗ್ತಾರೆ.

**ಪಿಂಗಳಕ:–** ಹ್ಯಾಗೆ ಪತ್ತೆ ಮಾಡೋದು?

ದಮನಕ:- ತಾವು ಅಪ್ಪಣೆ ಕೊಟ್ರೆ ನಾನು ನೋಡಿಕೊಂಡು ಬರ್ತೀನಿ. ಆ ಮೇಲೆ, ನಿಜಸ್ಥಿತಿ ತಿಳಿದ ನಂತರ ಏನು ಮಾಡ ಬೇಕು ಅನ್ನೋದನ್ನ ಯೋಚಿಸಬಹುದು.

ಪಿಂಗಳಕ:- ಹುಂ! ಸರಿ! ನಾನೇನು ಹೇಳಲಿ? ಹೋಗು, ನೋಡಿಕೊಂಡು ಬಾ. ನೀನು ಬುದ್ಧಿವಂತ.

ದಮನಕ:- ತಮ್ಮಂಥ ಧೀರಾಧೀರ ಭುಜಬಲ ಪರಾಕ್ರಮಿಗಳಿಗೆ ಧೈರ್ಯ ಹೇಳುವ ಸೌಭಾಗ್ಯ ನನ್ನದು.

ನನ್ನ ಪುಣ್ಯಕ್ಕೆ ಎಣೆಯೇ ಇಲ್ಲ!

[ಪಿಂಗಳನ ಆಸ್ಥಾನ. ಮಂತ್ರಿ, ಆಸ್ಥಾನಿಕರು (ಮಂಗಗಳು) ಮಂತ್ರಿತ್ರರ ಸಿಬ್ಬಂದಿ.]

ಪಿಂಗಳಕ:- (ಭಯದಿಂದ ಮೆಲ್ಲಗೆ ತಡೆದು ತಡೆದು ಮಾತಾಡುತ್ತಾನೆ.) ದಮನಕ ಇನ್ನೂ ಬರಲಿಲ್ಲವೇ ?

ಮಂತ್ರಿ:- ಇನ್ನೇನು ಬರಬಹುದು.

ಪಿಂಗಳಕ:- ಶ್! ಮೆಲ್ಲಗೆ ಮಾತಾಡು! ಇತ್ತೀಚೆಗೆ ಕಿವಿಗೇನು ಶಬ್ದ ಬಿದ್ದರೂ ಬೆಚ್ಚಿಬೀಳೋ ಹಾಗಾಗುತ್ತೆ.

'ಮಿಯಾಂವ್' ಎಂದು ಬೆಕ್ಕು ಕೂಗಿದ ಶಬ್ದ.

ಅದೇನು ಶಬ್ದ ?

ಮಂತ್ರಿ:- ಬೆಕ್ಕು ಸ್ವಾಮಿ, ಬೆಕ್ಕು, ಬೆಚ್ಚಿಬೀಳೋ ಕಾರಣ ಇಲ್ಲ.

ಪಿಂಗಳಕ:- ಕಾರಣ ಇಲ್ಲಾ! ಅಹಹಾ! ಅದೇನು ಹೇಳಿದಷ್ಟು ಸುಲಭ ಅಂದ್ಕೊಂಡ್ ಬಿಟ್ಯಾ ? ಇಲ್ಲಿ ಕೇಳಿ, ಎಲ್ಲರೂ ಚೆನ್ನಾಗಿ ತಿಳಿದುಕೊಳ್ಳಿ? ಇದು ನನ್ನ ಆಜ್ಞೆ! ಇನ್ನು ಮೇಲೆ ನಮ್ಮ ಈ ರಾಜ್ಯದಲ್ಲಿ ಏನೊಂದೂ ಶಬ್ದ ಇರ ಕೂಡದು. ಯಾರೂ ಮಾತಾಡಬಾರದು...

ಒಬ್ಬ ಆಸ್ಥಾನಿಕನ ಪ್ರವೇಶ. ಅವನ ನಡಿಗೆಯಿಂದ ಪಾದರಕ್ಷೆಗಳ 'ಟಪ್ ಟಪ್' ಸ್ಪಷ್ಟವಾಗಿ ಕೇಳಿಸು ತ್ತದೆ.

ಮತ್ತು ಯಾರೂ ಶಬ್ದ ಮಾಡುವಂತಹ ಪಾದರಕ್ಷೆಗಳನ್ನು ಧರಿಸಬಾರದು

ಆಸ್ಥಾನಿಕ ದಿಗ್ಭ್ರಾಂತನಾಗಿ, ಧರಿಸಿದ್ದ ಪಾದರಕ್ಷೆಗಳನ್ನು ಕಳಚಿ ಎರಡೂ ಕೈಗಳಲ್ಲಿ ಹಿಡಿದು ಕೊಂಡು ಪಿಂಗಳಕನಿಗೆ ನಮಸ್ಕರಿಸುತ್ತಾನೆ. ಶಬ್ದಗಳಿಂದ ನಮಗೆ ಬಹಳ ಅಪಾಯ! ಅದನ್ನು ನಿವಾರಿಸಿ ನಮ್ಮ ಕಾಡಿನಲ್ಲಿ, ಅಂದರೆ, ದೇಶದಲ್ಲಿ ಪ್ರಜೆಗಳು ಸಂರಕ್ಷಿತರಾಗಿರುವಂತೆ ಮಾಡಲು ನಾವು ಈ ಕೂಡಲೆ ಕ್ರಮ ತೆಗೆದುಕೊಳ್ಳಬೇಕು!

ಮಂತ್ರಿ:- ಮಹಾಸ್ವಾಮಿ, ನೈಸರ್ಗಿಕವಾಗಿ ಉಂಟಾಗುವ ಶಬ್ದಕ್ಕೇನು ಉಪಾಯ ?

ಆಸ್ಥಾನಿಕ:- ಮಾತನಾಡದೆ ಬದುಕುವುದು ಹೇಗೆ ?

ಪಿಂಗಳಕ:- ಒಬ್ಬರಾಗಿ ಮಾತಾಡಿ... ಉಹುಂ... ಮಾತಾಡಬೇಡಿ... ಮೆಲ್ಲಗೆ ಮಾತಾಡಿ...ನನ್ನ ಹೃದಯ ಬಡಿದು ಕೊಳ್ಳುತ್ತಿದೆ... ಇನ್ನು ಮೇಲೆ ಶಬ್ದಗಳಿಂದುಂಟಾಗುವ ದುಷ್ಪರಿಣಾಮವನ್ನು ತಡೆಗಟ್ಟಲು ನಮ್ಮ ಯೋಜನೆ ಈ ರೀತಿ ಇದೆ. ಇದನ್ನು ಕಾಡಿನಲ್ಲೆಲ್ಲಾ ಡಂಗುರ ಹೊಡೆದು ಪ್ರಸಿದ್ಧಪಡಿಸುತ್ತೇನೆ. ಉಹುಂ... ಡಂಗುರ ಬೇಡ, ಹಾಗೇ ಪ್ರಸಿದ್ಧಪಡಿಸುತ್ತೇನೆ.

ಚಪ್ಪಲಿ ಹಿಡಿದ ಆಸ್ಥಾನಿಕ:- ಡಂಗುರವಿಲ್ಲದೆ ಹೇಗೆ ಸಾಧ್ಯ?

ಮಂತ್ರಿ:- ತಲೆ ಹರಟೆ! ಅರಸರು ಮಾತಾಡುವಾಗ ಮಧ್ಯ ಬಾಯಿಹಾಕಬಾರದು ಅನ್ನೋ ಆಸ್ಥಾನ ನಿಯಮ ತಿಳಿದಿಲ್ಲವೇ?

ಚ. ಹಿ. ಆಸ್ಥಾನಿಕ:- ಕ್ಷಮಿಸಬೇಕು...

ಚಪ್ಪಲಿಗಳನ್ನು ತಲೆಯಮೇಲಿಟ್ಟುಕೊಂಡು ಒಂದು ಮೂಲೆಯಲ್ಲಿ ಕುಳಿತುಕೊಳ್ಳುತ್ತಾನೆ.

ಪಿಂಗಳಕ:- ನನ್ನ ಸಂಶೋಧನೆಯಲ್ಲಿ ನಾನು ಕಂಡುಹಿಡಿದಿರುವ ಸತ್ಯವೇನೆಂದರೆ ಶಬ್ದ ನಮ್ಮ ಕಿವಿಗಳ ಒಳಹೊಕ್ಕು ನರಗಳನ್ನು ದುರ್ಬಲಗೊಳಿಸಿ ವ್ಯಕ್ತಿಯನ್ನು ದೈಹಿಕವಾಗಿ ಮಾನಸಿಕವಾಗಿ ನಿಶ್ಶಕ್ತನನ್ನಾಗಿ ಮಾಡುತ್ತದೆ. ಆದ್ದರಿಂದ, ಒಂದು, ನಾವು ಯಾವುದೇ ತರಹದ ಶಬ್ದವನ್ನೂ ಮಾಡಕೂಡದು, ಎರಡು, ನೈಸರ್ಗಿಕವಾಗಿ ಉಂಟಾಗುವ ಅಂದರೆ, ಗಾಳಿ, ಗುಡುಗು, ಸಿಡಿಲು, ಮಳೆ ಇತ್ಯಾದಿಗಳಿಂದುಂಟಾಗುವ ಶಬ್ದಗಳಿಂದ ರಕ್ಷಣೆ ಪಡೆಯಲು ಸದಾಕಾಲ ಕಿವಿಮುಚ್ಚಿಕೊಂಡಿರಬೇಕು.

ಒಬ್ಬ ಆಸ್ಥಾನಿಕ:- ನಾವು ಕಣ್ಣು ಮುಚ್ಚಿಕೊಳ್ಳುವಂತ

ಮಂತ್ರಿ:- ಅಲ್ಲ, ನಮ್ಮ ಕಿವಿಗಳಿಗೆ ರೆಪ್ಪೆಗಳಿಲ್ಲ.

ಪಿಂಗಳಕ:- ಆದ್ದರಿಂದ, ನಾವು ಬಿರಡೆಗಳನ್ನು ಧರಿಸಬೇಕು.

ಮಂತ್ರಿ:- ಭೇಷ್! ವಾಹವ್ವಾ! ಏನು ತಲೆ, ನಮ್ಮ ರಾಜರದು.

ಮತ್ತೊಬ್ಬ ಆಸ್ಥಾನಿಕ:- ಬಿರಡೆಗಳು ಸಿದ್ಧವಾಗುವವರೆಗೂ ಕೈ ಬೆರಳುಗಳನ್ನು ಕಿವಿಯಲ್ಲಿಟ್ಟುಕೊಂಡಿರಬಹುದೊ ?



ದೀಪಾವಳಿಯು ಸರ್ವರಿಗೂ ಸುಖದಾಯಕವಾಗಲಿ!!



**ಪಿಂಗಳಕ:-** ಹೌದು. ಅದಕ್ಕೆ ನಮ್ಮ ಅನುಮತಿಯಿದೆ. ಆದರೆ ಆದಷ್ಟು ಬೇಗ ಬಿರಟೆಗಳನ್ನು ಹೊಂದಿಸಿಕೊಂಡು ರಕ್ಷಣೆ ಪಡೆಯುವ ಜವಾಬ್ದಾರಿ ಎಲ್ಲರ ಮೇಲೂ ಇದೆ. ಅವಶ್ಯಕತೆ ಇದ್ದಷ್ಟು ಮಾತ್ರ ಪಿಸುಮಾತಾಡಬಹುದು.

(ಎಲ್ಲರೂ ಪಿಂಗಳಕನ್ನೂ ಒಳಗೊಂಡು ಕಿವಿಯಲ್ಲಿ ಬೆರಳಿಟ್ಟುಕೊಳ್ಳುತ್ತಾರೆ)

ಈ ರಾಜಾಜ್ಞೆಯನ್ನು ಉಲ್ಲಂಘಿಸಿದವರಿಗೆ ಕಠಿಣ ಶಿಕ್ಷೆ! ನೆನಪಿರಲಿ.

**ಆಸ್ಥಾನಿಕರು:-** (ಒಕ್ಕೊರಲಿನಿಂದ): ಏನೂ ಕೇಳಿಸ್ತಾ ಇಲ್ಲ.

**ಪಿಂಗಳಕ:-** ಮೂರ್ಖರು! ನನ್ನ ಮಾತು ಕೇಳಿಸಿಕೊಂಡನಂತರ ಕಿವಿಮುಚ್ಚಿಕೊಳ್ಳಿ.

**ಮಂತ್ರಿ:-** (ಕಿವಿಯಿಂದ ಬೆರಳು ತೆಗೆಯುತ್ತಾ): ಅಂದ್ರೆ, ಅದು ರಾಜಾಜ್ಞೆಯ ಉಲ್ಲಂಘನೆಯಾದೀತೋ ಅಂತ ಅನುಮಾನ.

ಇತರ ಆಸ್ಥಾನಿಕರು ಮಂತ್ರಿಯನ್ನನುಸರಿಸಿ ಕಿವಿಯಿಂದ ಬೆರಳು ತೆಗೆಯುತ್ತಾರೆ.

**ಒಬ್ಬ ಆಸ್ಥಾನಿಕ:-** ಅಂದ್ರೆ ಈ ಸಂವಿಧಾನಾತ್ಮಕ ಬಿಕ್ಕಟ್ಟನ್ನು ಪರಿಹರಿಸೋವರೆಗೆ ಕಿವಿ ಉಪಯೋಗಿಸಬಹುದಾ?

**ಪಿಂಗಳಕ:-** ಕೂಡದು, ಅದು ರಾಜಾಜ್ಞೆಯ ಉಲ್ಲಂಘನೆಯಾಗುತ್ತದೆ!

(ತಕ್ಷಣ ಎಲ್ಲರೂ ಕಿವಿಮುಚ್ಚಿಕೊಳ್ಳುತ್ತಾರೆ. ಪಿಂಗಳಕನೂ ಮುಚ್ಚಿಕೊಳ್ಳುತ್ತಾನೆ.)

**ಮಂತ್ರಿ:-** ಈಗ ನೀವು ಏನು ಹೇಳ್ತೀರೋ ನಮಗೆ ಕೇಳೋದಿಲ್ಲ.

**ಮತ್ತೊಬ್ಬ ಆಸ್ಥಾನಿಕ:-** ನಮಗೆ ಆದಷ್ಟು ಬೇಗ ಬಿರಟೆಗಳನ್ನು ಒದಗಿಸೋದು ಸರಕಾರದ ಕರ್ತವ್ಯ!

**ಪಿಂಗಳಕ:-** ನೀವೆಲ್ಲಾ ಕಪಿಗಳ ಹಾಗೆ ಬಾಯಾಡಿಸಿದರೆ ನನಗೇನೂ ಅರ್ಥವಾಗುವುದಿಲ್ಲ.

**ಮಂತ್ರಿ:-** ನಾವು ಊಟ ಮಾಡೋದು ಹೇಗೆ?

**ಪಿಂಗಳಕ:-** ಆದಷ್ಟು ಬೇಗ ನಮ್ಮ ಆಜ್ಞೆಯನ್ನು ಡಂಗುರಹಾಕಿಸಬೇಕು... ಆದರೆ, ಡಂಗುರದಿಂದ ಸ್ವಲ್ಪವೂ ಶಬ್ದ ಬರಕೂಡದು.

**ಆಸ್ಥಾನಿಕ:-** ತಲೆ ಕಡಿದಾಗ ಕೆರೆದುಕೊಳ್ಳುವ ಸಲುವಾಗಿ ಕಿವಿಯಿಂದ ಬೆರಳು ತೆಗೆಯಲು ವಿನಾಯಿತಿ ದೊರೆಯಬೇಕು.

**ಮತ್ತೊಬ್ಬ ಆಸ್ಥಾನಿಕ:-** ಬಾಲಕ್ಕೆ ಮುಳ್ಳು ಚುಚ್ಚಿಕೊಂಡರೆ ಹೇಗೆ ಬಿಡಿಸಿಕೊಳ್ಳೋದು ?



ಎಲ್ಲರೂ ಒಟ್ಟಿಗೆ ಮಾತಾಡುತ್ತಾ ದಿಕ್ಕೆಟ್ಟು ಪಿಂಗಳಕನ ಸುತ್ತಾ ತಿರುಗುತ್ತಾರೆ.

ಪಿಂಗಳಕ ತನ್ನ ಕಣ್ಣು ಕಿವಿಗಳನ್ನು ಭದ್ರವಾಗಿ ಮುಚ್ಚಿಕೊಂಡು ಮುದುರಿಕೊಂಡು ಕೂತಿದ್ದಾನೆ. ಇಡೀ ರಂಗಸ್ಥಳ ವಿವಿಧ ಪ್ರಾಣಿಗಳ ವಿವಿಧ ಧ್ವನಿಯಿಂದ ಮೊಳಗುತ್ತಿರುವಾಗ ದಮನಕ ಪ್ರವೇಶ.

**ದಮನಕ:-** ಇದೇನು? ಇಷ್ಟೊಂದು ಗದ್ದಲ? ಸದ್ದೂ, ಸದ್ದೂ!

ದಮನಕನನ್ನು ನೋಡಿ ಪ್ರಾಣಿಗಳೆಲ್ಲಾ ಕ್ರಮೇಣ ಶಾಂತವಾಗುತ್ತವೆ. ಪಿಂಗಳಕ ನಿಧಾನವಾಗಿ ಕಣ್ಣುಬಿಟ್ಟು ದಮನಕನನ್ನು ನೋಡುತ್ತಾನೆ. ಸ್ವಲ್ಪ ಮಾತ್ರ ಬೆರಳು ಸಡಿಲಿಸಿ, ಆತಂಕದಿಂದ ದಮನಕನನ್ನು ಎದುರುಗೊಳ್ಳುತ್ತಾನೆ.

**ಪಿಂಗಳಕ:-** ಓಹ್, ದಮನಕ! (ಮೆಲ್ಲಗೆ) ಬಂದ್ಯಾ, ಬಾಬಾ. ಇವೊತ್ತಿನಿಂದ ಹೊಸ ಕಾನೂನು. ಯಾರೂ ಜೋರಾಗಿ ಮಾತಾಡುವಂತಿಲ್ಲ. ಶಬ್ದ ಮಾಡುವಂತಿಲ್ಲ. ಶಬ್ದ ಕೇಳುವಂತಿಲ್ಲ. ಕಿವಿ ಮುಚ್ಚಿಕೋ. ಬೇಗ. ಇಲ್ಲದಿದ್ದರೆ ಅಪರಾಧವಾಗುತ್ತೆ. ಹೂಂ. ಮುಚ್ಕೋ ಬೇಗ! ಆಮೇಲೆ ಮುಂದಿನ ಮಾತು.

**ದಮನಕ:-** ಏನಿದು? ಎಲ್ಲಾ ವಿಚಿತ್ರವಾಗಿ ಕಾಣ್ತಾ ಇದೆ. ನಾನ್ಯಾಕೆ ಕಿವಿಮುಚ್ಕೋಬೇಕು? ನಿಮಗೆಲ್ಲಾ ಏನಾಗಿದೆ.

**ಪಿಂಗಳಕ:-** ಶ್! ಮೆಲ್ಲಗೆ ಮಾತಾಡು... ನನ್ನ ಎದೆ ಡವಡವ ಅಂತಿದೆ. ನೀಹೋದ ಕೆಲಸ ಏನಾಯ್ತು? ಕಿವಿ ಮುಚ್ಕೊಂಡು ಪಿಸುಮಾತಿನಲ್ಲಿ ಹೇಳು.

ದಮನಕ:- ಎಲ್ಲಾರಿಗೂ ಹುಚ್ಚು ಹಿಡಿದಿದೆ ಅಂತ ಕಾಣುತ್ತೆ. ಕಿವಿಮುಚ್ಕೊಂಡ್ ಹೀಗ್ ಮಾತಾಡಬೇಕಂತ ನಂಗೇನೂ ಅರ್ಥವಾಗುಲ್ಲಪ್ಪ!

ಪಿಂಗಳಕ:- ಹಾಂ! ಮೆಲ್ಲಗೆ! ನೀ ಹೋದ ಕಾರ್ಯ ಏನಾಯ್ತು? ನೋಡಿದ್ಯಾ ಆ ಪ್ರಾಣೀನ? ಹೇಗಿದೆ ಅದು? (ಭದ್ರವಾಗಿ ಕಣ್ಣು ಕಿವಿ ಮುಚ್ಚಿಕೊಂಡು) ಭಯಂಕರವಾಗಿರಬೇಕು ಅಲ್ಲವೇ? ನಂಗೊತ್ತು, ನೀನು ಹೆದರಿಕೊಂಡು ಬಾಲ ಮುದುರಿಕೊಂಡು ಓಡಿ ಬಂದ್ಬಿಟ್ಟೆ ತಾನೆ?

ದಮನಕ:- (ನಗುತ್ತಾ) ಏನಂದಿನ್ನೂ ಚಳಿಬಿಟ್ಟಿಲ್ಲ. ನಾನು ಹೋಗಿ ನೋಡಿದೆ. ಆ ಪ್ರಾಣಿ ಭಯಂಕರವಾಗೇನೋ ಇದೆ.

ಪಿಂಗಳಕ:- ನೋಡಿದ್ಯಾ? ನಾ ಹೇಳಲಿಲ್ಲವೇ? ನಂಗೊತ್ತು, ಇದು ಹೀಗೇ ಇರುತ್ತೆ ಅಂತ ನೋಡೋದಾದ್ರೂ ಯಾಕಪ್ಪಾ ಅಂಥಾದ್ದನ್ನ. ನಾವಿನ್ನು ಈ ಕಾಡು ಬಿಟ್ಟು ಹೋಗೋದೊಂದೇ ಉಳಿದಿರೋ ಮಾರ್ಗ

ದಮನಕ:- ಹಾಗೆ ಮಾಡೋ ಅವಶ್ಯಕತೆ ಇಲ್ಲ. ಸಂಜೀವಕ, ಆ ಪ್ರಾಣಿ ಹೆಸರು ಸಂಜೀವಕ ಅಂತ. ನೋಡೋಕೆ ಭಯಂಕರನಾಗಿದ್ರೂ, ಸಿಡಿಲಿನ ಹಾಗೆ ಗುಟುರು ಹಾಕಿದ್ರೂ, ನಾವ್ಯಾರೂ ಹೆದರಬೇಕಾಗಿಲ್ಲ.

ಪಿಂಗಳಕ:- (ಅಣಕಿಸುತ್ತಾ) ಹೆದರಬೇಕಾಗಿಲ್ಲ! ಯಾಕೇಂತ ಕೇಳಬಹುದೇ?

ದಮನಕ:- ಯಾಕೇಂದ್ರ... ಯಾಕೇಂದ್ರ... ಆ ಪ್ರಾಣಿಯಿಂದ ನಮಗೇನೂ ಅಪಾಯವಿಲ್ಲ.

ಪಿಂಗಳಕ:- ಹಾಗಂತ ಹೇಗೆ ನಂಬೋದು?

ದಮನಕ:- ಬೇಕಾದ್ರೆ ಅವನನ್ನೇ ಕೇಳಿ, ಕರಕೊಂಡು ಬಂದಿದೇನೆ.

ಪಿಂಗಳಕ:- (ಭಯಗ್ರಸ್ತನಾಗಿ) ಹಾಂ! ಕರಕೊಂಡು ಬಂದಿದೀಯಾ? ಎಲ್ಲಿ, ಎಲ್ಲಿದೆ ಅದು? ಒಳ್ಳೇ ಪ್ರಾಣಸಂಕಟ ಬಂತಲ್ಲಪ್ಪಾ! ಏನಂಗತಿ, ದೇವ್ರೇ!

ದಮನಕ:- ಧೈರ್ಯಮಾಡಿ, ಮಹಾಸ್ವಾಮಿ. ಇಲ್ಲಿಗೇ ಕರೀತೇನೆ, ನೋಡಿ



ಪಿಂಗಳಕ:- ಬೇಡ, ಬೇಡ, ಬೇಡ!

ದಮನಕ:- ನಾಚಿಕೆಗೇಡು, ಸುಮ್ಮನಿರಿ ಈಗ! ಸಂಜೀವಕಾ, ಪಿಂಗಳಕ ಮಹಾರಾಜರು ಆಸ್ಥಾನಕ್ಕೆ ಬರಲು ನಿನಗೆ ಅಪ್ಪಣೆಯಾಗಿದೆ. ಬಾ,

ಪಿಂಗಳಕ:- ಅಯ್ಯಯ್ಯೋ!

ಸಂಜೀವಕನ ಘೋರಾದ ಗುಟುರು ಕೇಳುತ್ತದೆ. ಒಮ್ಮೆಲೇ ಮೇಲೆರಗಿದ ಶಬ್ದಕ್ಕೆ ಪಿಂಗಳಕ ಎದೆಯೊಡೆದು ಸಿಕ್ಕುರುಳುತ್ತಾನೆ. ಇತರ ಪ್ರಾಣಿಗಳೆಲ್ಲಾ ನಿಧಾನವಾಗಿ ಕವಿಯಿಂದ ಬೆರಳನ್ನು ತೆಗೆದು ಶೋಕಪೂರ್ಣವಾಗಿ ದನಿಮಾಡುತ್ತಾ ಪಿಂಗಳಕನ ಸುತ್ತ ಮಂಡಿಯೂರಿ ಕುಳಿತುಕೊಳ್ಳುತ್ತವೆ.

( ಮುಗಿಯಿತು)

# • ಶ್ರೀ ಶರಣಬಸವೇಶ್ವರ ಪ್ರೌಢ ಶಾಲೆಯ ರಜತ ಮಹೋತ್ಸವ •

ಶ್ರೀ ಬಸವೇಶ್ವರರು ದ್ವಿತೀಯ ಶಂಭುವೆಂದು ಪ್ರತೀತಿ ಪಡೆದಿದ್ದರೆ ಶ್ರೀ ಶರಣ ಬಸವೇಶ್ವರರು ದ್ವಿತೀಯ ಬಸವೇಶ್ವರರೆಂದು ಹೆಸರಾಗಿದ್ದಾರೆ ಬಸವಣ್ಣನವರ ಅನನ್ಯ ಭಕ್ತಿಯ ಮಹಿಮೆಯಿಂದ ಕಲ್ಯಾಣವು ಕೈಲಾಸವಾದಂತೆ ಶ್ರೀ ಶರಣಬಸವೇಶ್ವರರ ದಾಸೋಹ ಧರ್ಮದಿಂದ ಕಲಬುರ್ಗಿಯು ಮಹಾಕಲ್ಯಾಣವಾಯಿತು. ಶರಣರು ಅಷ್ಟಾವರಣನಿಷ್ಠರೂ ತ್ರಿವಿಧದಾಸೋಹಿಗಳೂ ಸಾಂಸಾರಿಕ ಜೀವನದಲ್ಲಿಯೂ ಆತ್ಮತೇಜ ಬೆಳಸಿಕೊಂಡವರೂ ಸಕಲ ಜೀವಾತ್ಮರಲ್ಲಿ ಶಿವನನ್ನು ಕಂಡವರೂ ಬಯಲುರೂಪ ಮಾಡಬಲ್ಲಾತರೂ ಮರಣವ ಜಯಿಸಿದ ಮಹಾಂತರೂ ಪರವನ್ನೊಳಗೊಂಡ ಪರಿಣಾಮಿಗಳೂ ಇಲ್ಲಿಯೂ ಸಲ್ಲಿ ಅಲ್ಲಿಯೂ ಸಲ್ಲಿದವರಾಗಿ ಶಿವಯೋಗ ಜೀವನದಿಂದ ಸಾಧಕರಿಗೆ ಬೋಧಕರಾಗಿದ್ದಾರೆ.

ಈ ಶರಣಪರಂಪರೆಯ ಶ್ರೀ ಚರಣ ಬಸವೇಶ್ವರ ಸಂಸ್ಥಾನದ ಈಗಿನ ಅಧಿಪತಿಗಳಾದ ಪರಮಪೂಜ್ಯ ಶ್ರೀ ದೊಡ್ಡಪ್ಪಾ ಅಪ್ಪಾ ಅವರು ಈ ಶರಣ ಪೀಠಕ್ಕೆ ಏಳನೆಯ ಉತ್ತರಾಧಿಕಾರಿಗಳಾಗಿದ್ದಾರೆ. ಉನ್ನತ ಪರಂಪರೆಯ ಅರಿವು ಶ್ರದ್ಧೆಯಿಂದೊಡಗೂಡಿದ ಉದಾತ್ತ ಜೀವನವನ್ನು ನಡೆಸಿದಾಗ ಮಾತ್ರ ಸಾಧ್ಯ. ಈ ಕ್ರಿಯೆಯಲ್ಲಿ ದೃಢ ನಂಬುಗೆಯನ್ನಿಟ್ಟು ಪೂಜ್ಯ ದೊಡ್ಡಪ್ಪಾಅಪ್ಪಾ ಅವರು ನವಜನಾಂಗದ ಮಹಾಚೈತನ್ಯಕ್ಕೆ ಅನ್ನ, ವಿದ್ಯೆ, ಆಧ್ಯಾತ್ಮ–ಈ ತ್ರಿವಿಧ ಪ್ರಸಾದವನ್ನಿತ್ತು ದಾಸೋಹಗೈಯ್ಯುತ್ತಿದ್ದಾರೆ. ಈಗಿನ ಕಾಲದಲ್ಲಿ ವಿದ್ಯಾದಾನವು ಜನರ ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ಜ್ಞಾನದ ಬೆಳವಣಿಗೆಯಲ್ಲಿ ಅತಿ ಮಹತ್ವದ ಪಾತ್ರವನ್ನು ವಹಿಸಿದೆಯೆಂದು ಅನಿಸದೇ ಇರಲಾರದು. ಈ ದಾಸರ ಮುಖ್ಯ ಗುರಿಯೆಂದರೆ ಮಕ್ಕಳ ನಡವಳಿಕೆಯನ್ನು ಉತ್ತಮ ತಳಹದಿಯ ಮೇಲೆ ಕಟ್ಟುವಂತೆ ಅವರ ಮನಸ್ಸು ಸ್ವತಂತ್ರವಾದ ವಿಚಾರ ಧಾರೆಯಲ್ಲಿ ವಿಚಾರಿಸುವಂತೆ ದೃಢವಾದ ಮನಃಸಂಕಲ್ಪ ವೃದ್ಧಿಯಾಗುವಂತೆ ತಮ್ಮ ನೆರೆಹೊರೆಯವರೊಂದಿಗೆ ಪ್ರೇಮ ಹಾಗೂ ಸಹೃದಯತೆಯಿಂದ ವರ್ತಿಸುವಂತೆ ಸಹಕಾರ ಭಾವನೆಯನ್ನು ಉತ್ತೇಜಿಸುವಂತೆ ಪರಸ್ಪರರು ಅನ್ಯೋನ್ಯ ಆಶ್ರಯದಲ್ಲಿರುವಂತೆ ಭಾತೃಭಾವನೆ ಹುಟ್ಟುವಂತೆ ಪ್ರಾಯೋಗಿಕ ಜೀವನವನ್ನು ನಡೆಸುವದರ ಜೊತೆಗೆ ಜೀವನದಲ್ಲಿ ಬರಬಹುದಾದ ಸಮಸ್ಯೆಗಳನ್ನು ಜಾಣ್ಮೆ ಹಾಗೂ ಧೈರ್ಯದಿಂದ ಎದುರಿಸುವದನ್ನು ಕಲಿಸುವದೇ ಆಗಿದೆ. ಈ ಹಿನ್ನೆಲೆಯಲ್ಲಿ ಪೂಜ್ಯರು ತ್ರಿಕಾಲ ಪೂಜಾನಿಷ್ಠರೂ ತ್ರಿವಿಧ ದಾಸೋಹ ಸಂಪನ್ನರೂ ವಿದ್ಯಾಪ್ರೇಮಿಗಳೂ ಆಗಿರುವ ಇವರ ನೇತೃತ್ವದಲ್ಲಿ ಶರಣರ ಜೀವನ ಮೌಲ್ಯದ ಆದರ್ಶವನ್ನು ಹೊತ್ತು ಅವರ ಕೃಪಾ ಕ್ಷೇತ್ರದಲ್ಲಿ ಬೆಳೆದು ಬಂದ ಸಂಘ ಸಂಸ್ಥೆಗಳಲ್ಲಿ ಶ್ರೀ ಶರಣಬಸವೇಶ್ವರ ವಿದ್ಯಾವರ್ಧಕ ಸಂಘವು ಪ್ರಮುಖವಾಗಿದೆ. ಜೀವನ ಮೌಲ್ಯದ ಬಾಹ್ಯ ಸ್ವರೂಪ, ಕಾಲಕ್ಕನುಗುಣವಾಗಿ ಬದಲಾಗಬಹುದಾದ ಆಂತರಿಕ ಮೌಲ್ಯ ಯಾವ ಕಾಲಕ್ಕೂ ಬದಲಾಗುವದಿಲ್ಲ. ಹಾಗೂ ಮೂಲ ಮೌಲ್ಯದ ಅಂತಃಸ್ಸತ್ವ ಒಂದೇ ಬಗೆಯಾಗಿರುತ್ತದೆ. ಶರಣರ ಅಂತಃಪ್ರೇರಣೆಯೇ ಈ ಮಹಾ ಸಂಘವು ಆಧುನಿಕ ಮೌಲ್ಯವನ್ನು ಅಳವಡಿಸಿಕೊಳ್ಳುವಲ್ಲಿ ತನ್ನ ಗಮನವನ್ನು ಹರಿಸುತ್ತಲಿದೆ. ಹೀಗೆ ಕ್ರಿ.ಶ. ೧೯೧೮ರಲ್ಲಿ ಸ್ಥಾಪಿತವಾದ ಈ ಮಹಾ ಸಂಘವು ೫೭ ವರ್ಷಗಳಿಂದ ಜನತೆಯ ಮಹಾಚೈತನ್ಯಕ್ಕೆ ಜ್ಞಾನ ಪ್ರಸಾದವನ್ನಿತ್ತು ದಾಸೋಹಗೈಯುತ್ತಲಿದೆ. ಈ ಸಂಸ್ಥೆಯ ಮುಖ್ಯ ಗುರಿಯೆಂದರೆ ಇಂದಿನ ಯಾವ ಮಗುವೂ ಆಧುನಿಕ ಶಿಕ್ಷಣ ಸೌಲಭ್ಯಗಳಿಂದ ವಂಚಿತನಾಗಕೂಡದು. ಯುವ ಜನರು ವಿಶ್ವಬಂಧುತ್ವದ ಕಲ್ಪನೆಯೊಂದಿಗೆ ಬಸವ, ಬುದ್ಧ, ಶರಣ ಬಸವ, ವಿವೇಕಾನಂದ, ಗಾಂಧೀಜಿ–ಇತ್ಯಾದಿಯಾಗಿ ಮಹಾ ಮಹಿಮರಿಂದ ಬೋಧಿಸಲ್ಪಟ್ಟ ಆಧ್ಯಾತ್ಮಿಕ ಮೌಲ್ಯದ ಮಹಿಮೆಯನ್ನು ಅರಿತುಕೊಳ್ಳುವದಾಗಿದೆ. ಈ ಸಂಘವು ಕಲಾ ವಿಜ್ಞಾನ ವಾಣಿಜ್ಯ ಮಹಿಳಾ ಮಹಾವಿದ್ಯಾಲಯಗಳು ಪ್ರೌಢಶಾಲೆಗಳುಈ ಮೊದಲಾಗಿ ಹದಿನಾಲ್ಕು ಶೈಕ್ಷಣಿಕ ಸಂಸ್ಥೆಗಳನ್ನು ನಡೆಸುತ್ತಿದ್ದು. ಈ ಎಲ್ಲ ಶಿಕ್ಷಣ ಸಂಸ್ಥೆಗಳಲ್ಲಿ ಸುಮಾರು ೮೦೦೦ಕ್ಕೂ ಮೇಲ್ಪಟ್ಟು ವಿದ್ಯಾರ್ಥಿ–ವಿದ್ಯಾರ್ಥಿನಿಯರು ವಿದ್ಯಾರ್ಜನೆ ಮಾಡುತ್ತಿದ್ದಾರೆ. ಇವರಲ್ಲಿ ಸುಮಾರು ೨೦೦೦ ವಿದ್ಯಾರ್ಥಿನಿಯರೇ ಇದ್ದಾರೆ. ಇವುಗಳ ಜೊತೆಗೆ ಮಹಾ ಶರಣರು ಬೆಳೆಸಿದ ದಾಸೋಹ ಅನಂತರ ನಡೆಯುತ್ತ ಬಂದಿದೆ. ಈ ದಾಸೋಹ ನಿಷ್ಠೆ ಪೂಜ್ಯ ದೊಡ್ಡಪ್ಪಾ ಅಪ್ಪ ಅವರಲ್ಲಿ ಅದ್ವಿತೀಯವಾಗಿದೆ. ಶ್ರಾವಣದಲ್ಲಿ ಉತ್ಸವ ಹಾಗೂ ಫಾಲ್ಗುಣ ಮಾಸದಲ್ಲಿ ಜರುಗುವ ಶರಣರ ಪುಣ್ಯತಿಥಿ (ಜಾತ್ರೆ)ಗಳ ಸಮಯದಲ್ಲಿ ಲಕ್ಷಾವಧಿ ಸದ್ಭಕ್ತರು ಶರಣರ ಪ್ರದರ್ಶನದೊಂದಿಗೆ ಪ್ರಸಾದ ಪಡೆದು ಕೃತಾರ್ಥರಾಗುತ್ತಾರೆ. ನಿತ್ಯವೂ ಈ ಮಹಾಕ್ಷೇತ್ರಕ್ಕೆ ಬಂದು ಹೋಗುವ ಭಕ್ತರಿಗೆ ಲೆಕ್ಕವಿಲ್ಲ. ಅದ್ದರಿಂದ ಕಲಬುರ್ಗಿಯು ಯಾತ್ರಿಕರಿಗೆ ಒಂದು ಮುಕ್ತ ಕ್ಷೇತ್ರವಾಗಿದೆ.

ಈ ಮಹಾನ್ ಸಂಸ್ಥೆಯ ಬಗ್ಗೆ ದೇಶ ವಿದೇಶಗಳ ಪ್ರಮುಖರು ವ್ಯಕ್ತಗೊಳಿಸಿದ ಅಭಿಪ್ರಾಯಗಳು ಹೀಗಿದೆ:

1) The great saint in whose name the colleges have been founded placed noble Gandhian ideals centuries before Gandhi before our people especially the south

Prof. N. G. Ranga

2) It indeed very kind of you to have given me the opportunity to pay a visit at the holy temple in your esteemed company. When I was blessed with the Darshana and Prasada you are indeed doing a good work Spiritualism is the only effective care for the melodies of this age

Dr. M. T. Moqatderi

3) I was impressed by the sanctity of the place and great service being done to Educate our boys and girls.

K. Hanumanthiah
Ex-Railway Minister

4) The idea of the sangha is to combine modern Scientific Education with tne basic values of the land. The effort they have made is praise worthy

M. Y. Ghorpade
Finance Minister, Govt of Karnatak

5) We are very much interested in the good work being done in your several institution.

Stephen E. Palmer
Jr. American Counsel General U.S.A.

6) Mr. Sharanabasavappa Appa, I Congratulate you on the commendeble service you have done to champion the cause of education.

Bauman
German Counsel General

ಶ್ರೀ ಶರಣ ಬಸವೇಶ್ವರ ವಿದ್ಯಾವರ್ಧಕ ಸಂಘದ ವಿದ್ಯಾಸಂಸ್ಥೆಗಳಿಗೆ ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪಾ ಅವರು ಪ್ರೇರಕ ಶಕ್ತಿಯಾಗಿದ್ದರೆ, ಅವರ ಜೇಷ್ಠ ಪುತ್ರರಾದ ಪೂಜ್ಯ ಶ್ರೀ ಶರಣಪ್ಪಬಸಪ್ಪ ಅಪ್ಪಾ ಅವರು ಕ್ರಿಯಾಶಕ್ತಿ ಪರಿಪೂರ್ಣರಾಗಿದ್ದಾರೆ. ತತ್ವಜ್ಞಾನದಲ್ಲಿ ಎಂ.ಎ. ಪದವೀಧರರಾದ ಇವರು ತಮ್ಮ ಶಿಕ್ಷಣವನ್ನು ಮುಗಿಸುತ್ತಲೇ ಈ ಎಲ್ಲ ವಿದ್ಯಾ ಸಂಸ್ಥೆಗಳ ಮೇಲೆ ಪ್ರಧಾನ ಕಾರ್ಯದರ್ಶಿಯ ಹೊಣೆಗಾರಿಕೆಯನ್ನು ಹೊತ್ತು ಈ ಹತ್ತು ವರ್ಷಗಳಲ್ಲಿ ಶೈಕ್ಷಣಿಕ ಕ್ಷೇತ್ರದಲ್ಲಿ ಅದ್ಭುತ ಪ್ರಗತಿಯನ್ನು ಸಾಧಿಸಿದ್ದಾರೆ. ಇವುಗಳಲ್ಲಿ ಪ್ರತ್ಯೇಕಗೊಂಡ ಶ್ರೀ ಶರಣಬಸವೇಶ್ವರ ಆರ್ಟ್ಸ್ ಕಾಲೇಜು, ಬಸವ ಕಲ್ಯಾಣದಲ್ಲಿ ಕಾಲೇಜು ಹೆಣ್ಣು ಮಕ್ಕಳ ಪ್ರೌಢ ಶಾಲೆ ಹಾಗೂ ಕಾಲೇಜು, ಕಾಲೇಜು ಗ್ರಂಥಾಲಯ ರೆಸಿಡೆನ್ಸಿಯಲ್ ಶಾಲೆ ಈ ಆರು ಸಂಸ್ಥೆಗಳ ಸ್ಥಾಪನೆ ಅಥವಾ ಆರಂಭಗೊಳಿಸಿದ್ದು ಮುಖ್ಯವಾದುವುಗಳಾಗಿವೆ. ಇವರ ತಿಳುವಳಿಕೆಯಂತೆ ಶಿಕ್ಷಣದ ಗುರಿ ಸಾಧಿಸಬೇಕಾದರೆ, ಮೊದಲನೆಯದಾಗಿ ತಜ್ಞ ಶಿಕ್ಷಕರು, ಎರಡನೆಯದಾಗಿ ಯೋಗ; ಪುಸ್ತಕ ಭಂಡಾರ ಹಾಗೂ ಇತರ ಸಲಕರಣೆಗಳು, ಮೂರನೆಯದಾಗಿ ವಾತಾವರಣ ನಂತರ ನಿಚ್ಚಳವಾದ ಉದ್ದೇಶ ಇವುಗಳ ವ್ಯವಸ್ಥೆ ಇರಬೇಕು.

ಮಕ್ಕಳಲ್ಲಿ ಶಾರೀರಿಕ, ಬೌದ್ಧಿಕ, ಆಧ್ಯಾತ್ಮಿಕವಾಗಿ ಸಮಗ್ರ ಬೆಳವಣಿಗೆಯುಂಟಾಗುವಂತಹ ವಾತಾವರಣ ಶಿಕ್ಷಣ ಸಂಸ್ಥೆಗಳಲ್ಲಿ ಬೆಳೆದುಬರಬೇಕೆಂಬುದು ಪೂಜ್ಯ ಶರಣಬಸಪ್ಪ ಅಪ್ಪ ಅವರ ಉದ್ದೇಶವಾಗಿದೆ. ಇವರು ಶ್ರೀ ಶರಣ ಬಸವೇಶ್ವರ ವಿದ್ಯಾಸಂಸ್ಥೆಗಳ ಪ್ರಧಾನ ಕಾರ್ಯದರ್ಶಿಗಳಾಗಿ ದಕ್ಷತೆಯಿಂದ ಕೆಲಸ ನಿರ್ವಹಿಸುತ್ತಲಿದ್ದಾರೆ. ಅಲ್ಲದೆ ಕರ್ನಾಟಕ ವಿಶ್ವವಿದ್ಯಾಲಯದ ಸಿಂಡಿಕೇಟ್ ಸದಸ್ಯರಾಗಿ. ಕಲಬುರ್ಗಿ ಸ್ನಾತಕೋತ್ತರ ಕೇಂದ್ರದ ಸ್ಥಳೀಯ ಸಮಿತಿಯ ಅಧ್ಯಕ್ಷರಾಗಿ ಆರ್ಟ್ಸ್. ಸೈನ್ಸ್, ಎಂಜಿನಿಯರಿಂಗ್, ಮೆಡಿಕಲ್ ಲಾ ಮೊದಲಾದ ಮಹಾ ವಿದ್ಯಾಲಯಗಳನ್ನು ನಡೆಸುತ್ತಿರುವ ಹೈದರಾಬಾದ್ ಕರ್ನಾಟಕ ಶಿಕ್ಷಣ ಮಹಾಸಂಸ್ಥೆಯ (ಎಚ್.ಕೆ.ಇ.ಎಸ್. ಸೊಸಾಯಿಟಿಯ) ಅಧ್ಯಕ್ಷರಾಗಿ ಅಖಿಲ ಭಾರತ ವೀರಶೈವ ಮಹಾಸಭೆಯ ಯುವಜನ ಸಮ್ಮೇಲನದ ಅಧ್ಯಕ್ಷರಾಗಿ ಕೆಲಸಮಾಡಿದ ಅಪಾರ ಅನುಭವ ಇವರಿಗೆ ಉಂಟು. ಇವರು ವೀರಶೈವ ವಿದ್ಯಾವರ್ಧಕ ಸಂಘದ ಅಧ್ಯಕ್ಷರಾಗಿ ಕೆಲಸ ನಿರ್ವಹಿಸುತ್ತಿದ್ದಾರೆ.

೧೯೪೯ರಲ್ಲಿ ಸ್ಥಾಪಿತವಾದ ಶ್ರೀ ಶರಣ ಬಸವೇಶ್ವರ ಪ್ರೌಢ ಶಾಲೆಯು ಈಗ ೨೫ನೆಯ ವರ್ಷದಲ್ಲಿ ಪಾದಾರ್ಪಣ ಮಾಡಿರುತ್ತದೆ. ೨೫ ವರ್ಷಗಳ ಕಾಲಾವಧಿ

ಯಲ್ಲಿ ಈ ಶಾಲೆಯು ಸಾಧಿಸಿದ ಪ್ರಗತಿ ಚಿತ್ರವು ಸ್ಮರಣೀಯವಾಗಿದೆ. ಇದರ ನಿಮಿತ್ತವಾಗಿ ಈ ಪ್ರೌಢ ಶಾಲೆಯು ಬೆಳ್ಳಿ ಹಬ್ಬವನ್ನು ಆಚರಿಸಲಾಗುತ್ತಿದೆ. ಈ ಶುಭ ಪ್ರಸಂಗದಲ್ಲಿ ಈ ಶಾಲೆಯ ಪ್ರಗತಿ ಚಿತ್ರವನ್ನು ಉಲ್ಲೇಖಿಸುವದು ಸಮಯೋಚಿತವಾಗಿದೆ.

ಶ್ರೀ ಶರಣ ಬಸವೇಶ್ವರರ ಕೃಪಾಛತ್ರದಲ್ಲಿ ಪೂಜ್ಯದೊಡ್ಡಪ್ಪ ಅಪ್ಪಾ ಅವರ ಪರುಷ ಹಸ್ತದಿಂದ ಶ್ರೀ ಶರಣ ಬಸವೇಶ್ವರ ವಿದ್ಯಾವರ್ಧಕ ಸಂಘದ ವತಿಯಿಂದ ೧. ೧೯-೮-೧೯೪೯ರಂದು ಶ್ರೀ ಶರಣ ಬಸವೇಶ್ವರ ಪ್ರೌಢಶಾಲೆಯ ಪ್ರಾರಂಭೋತ್ಸವವು ವಿಜೃಂಭಣೆಯಿಂದ ನೆರವೇರಿತು. ಪ್ರಾರಂಭದಲ್ಲಿ ೨ ಶಿಕ್ಷಕರು ಹಾಗೂ ೬ ವಿದ್ಯಾರ್ಥಿಗಳು ಇದ್ದರು. ಈ ಶಾಲೆಯ ಪ್ರಥಮ ಆಡಳಿತ ಮಂಡಳಿಯಲ್ಲಿ ಪೂಜ್ಯ ದೊಡ್ಡಪ್ಪ ಅಪ್ಪ ಅವರು ಅಧ್ಯಕ್ಷರಾಗಿಯೂ, ಶ್ರೀ ಬಿ. ಎಸ್. ನಮೋಶಿ ಅವರು ಕಾರ್ಯದರ್ಶಿಗಳಾಗಿಯೂ, ಶ್ರೀ ಜಿ. ಎಸ್. ಮುನೋಳಿ ಅವರು ಮುಖ್ಯ ಅಧ್ಯಾಪಕರಾಗಿಯೂ ಇದ್ದರು. ಈ ಶಾಲೆಯು ಹಂತಹಂತವಾಗಿ ಪ್ರಗತಿ ಪಥದಲ್ಲಿ ಸಾಗುತ್ತಬಂದು ೧೯೫೨-೧೯೫೩ ರಲ್ಲಿ ಪೂರ್ಣಾವಸ್ಥೆಯನ್ನು ಪಡೆದುಕೊಂಡಿತು.

೧೯೫೩-೧೯೫೪ ರಲ್ಲಿ ೬೦೦ ವಿದ್ಯಾರ್ಥಿಗಳು ಹಾಗೂ ೨೦ ಜನ ಶಿಕ್ಷಕರು ಇದ್ದರು. ಈಗ ಒಟ್ಟು ೧೨೦೦ ವಿದ್ಯಾರ್ಥಿಗಳು ಈ ಶಾಲೆಯಲ್ಲಿ ವಿದ್ಯಾಲಾಭ ಪಡೆಯುತ್ತಿದ್ದಾರೆ ಹಾಗು ತರಬೇತಿ ಹೊಂದಿದ, ಅನುಭವಿಕ ೩೬ ಜನ ಶಿಕ್ಷಕರು ಮತ್ತು ನಾಲ್ವರು ಆಫೀಸ್ ಸಿಬ್ಬಂದಿಯವರು ಇರುತ್ತಾರೆ. ಕಲಬುರ್ಗಿ ವಿಭಾಗದಲ್ಲಿರುವ ಒಳ್ಳೆಯ ಪ್ರೌಢಶಾಲೆಗಳಲ್ಲಿ ಇದೂ ಒಂದಾಗಿದೆ.

ಈ ಶಾಲೆಯು ವ್ಯವಸ್ಥಿತವಾಗಿ ಊರ್ಜಿತಾವಸ್ತೆಯನ್ನು ಮುಟ್ಟಲು ದುಡಿದಂತಹ ಶಾಲೆಯ ಆಡಳಿತವರ್ಗದ ಕಾರ್ಯದರ್ಶಿಗಳು.

೧. ೧೯೪೯-೧೯೫೦-೧೯೫೮-೧೯೫೯ ಶ್ರೀ ಬಿ.ಎಸ್. ನಮೋಶಿ.
೨. ೧೯೫೯-೧೯೬೦-೧೯೬೧-೧೯೬೨ ಶ್ರೀ ಶಿವರಾಚಪ್ಪ ಸಂಗಾಪುರೆ.
೩. ೧೯೬೨-೧೯೬೩ -ಇಂದಿನವರೆಗೆ ಶ್ರೀ ನಾರಾಯಣರಾವ ಮುಕ್ಕಾ.

ಶೈಕ್ಷಣಿಕ ಮಟ್ಟವನ್ನು ಎತ್ತರಿಸಲು ಶಿಕ್ಷಕವೃಂದದ ಸಹಕಾರದೊಂದಿಗೆ ಸೇವೆ ಸಲ್ಲಿಸಿದಂತಹ ಪ್ರಿನ್ಸಿಪಾಲರು ಈ ರೀತಿಯಾಗಿ ಇದ್ದಾರೆ.

೧. ೧೯೪೯-೧೯೫೦-೧೯೫೭-೧೯೫೮ ಶ್ರೀ ಜಿ.ಎಸ್. ಮುನೋಳಿ M.sc.B.Ed
೨. ೧೯೫೮-೧೯೫೯-೧೯೬೧-೧೯೬೨ ಶ್ರೀ ಬಿ.ಎಸ್.ಪಾಟೀಲ M.Sc.M.Ed
೩. ೧೯೬೨-೧೯೬೩-ಶ್ರೀ ಸಿ.ಎಸ್. ಹಿರೇಮಠ B A.B.T.
೪. ೧೯೬೩-೧೯೬೪-೧೯೬೪-೧೯೬೫ ಶ್ರೀ ಸಿ.ಎಸ್. ಜಲದೆ B.A.(Hons) B.Ed
೫. ೧೯೬೫-೬೬-೧೯೭೧-೭೨ ಶ್ರೀ ಎಮ್.ಪಿ. ಜಾಲಿ B.A (Hons) B.T.Dip Ed
೬. ೧೯೭೨-೭೩-೧೯೭೪-೭೫. ಶ್ರೀ ಎಸ್.ಆರ್. ಬಿರಾದಾರ B A.(Spl) B.Ed. R.B.V.
೭. ೧೯೭೫-೭೬-ಶ್ರೀ ಎಮ್. ಎಸ್. ದೇವರಕಲ್ B.Sc. B.Ed. M.A.LL.B.
೮. ೧೯೭೬-೭೭ ಶ್ರೀ ಎಮ್.ಎಸ್.ಆರ್. ಮೂರ್ತಿ B.Sc. B.Ed. M.A.R.B.V.
೯. ೧೯೭೭-೭೮ ಎಸ್.ಆರ್. ಬಿರಾದಾರ. B·A.(Spl) B.Ed. R.B.V.

ಈ ಪ್ರೌಢಶಾಲೆಯು ಪ್ರಾರಂಭದಿಂದ ಇಂದಿನವರೆಗೆ ಸಾಧಿಸಿದಂತಹ ಶೈಕ್ಷಣಿಕ ಪ್ರಗತಿಯ ಚಿತ್ರವನ್ನು ಇಲ್ಲಿ ಉಲ್ಲೇಖಿಸಲಾಗಿದೆ. ೧೯೫೨-೫೩ ರಲ್ಲಿ ಮೊಟ್ಟ ಮೊದಲನೆಯ ವಿದ್ಯಾರ್ಥಿವೃಂದವು H. S. C. ಪರೀಕ್ಷೆಯನ್ನು ಕಟ್ಟಿತು. ಆವಾಗ ರಾಜ್ಯದ ಸರಾಸರಿ ಫಲಿತಾಂಶವು ೪೫%ರಷ್ಟಿದ್ದು. ನಮ್ಮ ಶಾಲೆಯ ಫಲಿತಾಂಶವು ೪೫% ಇತ್ತು. ಇದು ಒಂದು ಅಭಿಮಾನಾಸ್ಪದವಾದ ಸಂಗತಿಯಾಗಿದೆ. ಮುಂದೆ ೧೯೫೪-೫೫ರಲ್ಲಿ ನಮ್ಮ ಶಾಲೆಯ H.S.C. ಪರೀಕ್ಷೆಯ ಫಲಿತಾಂಶವು ೮೬%ರಷ್ಟು ಇದೇ ಮೇರೆಗೆ ತಮ್ಮ ಪ್ರೌಢಶಾಲೆಯ ಸ್ಕೂಲ್ ಫೈನಲ್ ಪರೀಕ್ಷೆಯ ಫಲಿತಾಂಶವು ಉತ್ತರೋತ್ತರವಾಗಿ ಹೆಚ್ಚುತ್ತಾ ಬಂದಿದೆ. ೧೯೭೩ರಲ್ಲಿ S.S.L.C. ಪರೀಕ್ಷೆಯ ಫಲಿತಾಂಶವು ೯೦%ರಷ್ಟು ಇದ್ದು ಇಲಾಖೆಯ ಶಿಕ್ಷಣಾಧಿಕಾರಿಗಳ ಪ್ರಶಂಸೆಗೆ ಪಾತ್ರವಾಗಿದೆ. ಆ ಪ್ರಶಂಸೆ ಈ ರೀತಿಯಾಗಿದೆ.

I am extremeby happy to observe that your institution has secured very high percentage of results at the S. S. L. C. Examination of April 1973, and this is really a great achievement on your part. I convey my appreciation in this regard and congratulate you and the members of the staff on their good performance.

Wish you all success.

Your Sincerely
**B. Mariraj D.P.I. B'lore**

ಮತ್ತು ೧೯೭೬-೭೭ರಲ್ಲಿ ನಮ್ಮ ಶಾಲೆಯ S. S. L. C. ಪರೀಕ್ಷೆಯ ಫಲಿತಾಂಶವು ೯೫% ರಷ್ಟು ಆದದ್ದು ನಮ್ಮ ಶಾಲೆಯ ಶೈಕ್ಷಣಿಕ ಪ್ರಗತಿಯ ಪರಮಾವಧಿಯನ್ನು ಸಾರಿಹೇಳುತ್ತಲಿವೆ. ೧೯೫೯-೬೦ರ H. S. C. M. P. ಪರೀಕ್ಷೆಯಲ್ಲಿ ರಾಜ್ಯಮಟ್ಟದ ೧೦ ರ‍್ಯಾಂಕ್‌ಗಳಲ್ಲಿ ನಮ್ಮ ಪ್ರೌಢಶಾಲೆಯ ವಿದ್ಯಾರ್ಥಿಗಳು ಮೂರು ರ‍್ಯಾಂಕುಗಳನ್ನು ಪಡೆದುಕೊಂಡಿದ್ದಾರೆ. ಅವರ ಹೆಸರುಗಳು ಅನುಕ್ರಮವಾಗಿ ಈ ರೀತಿ ಇವೆ:

೧. ಕು.ಜಿ.ಎಮ್. ಪೊಸ್ತಪುರ I Rank
೨. ಕು.ಡಿ.ಎಚ್. ಕುಲಕರ್ಣಿ III Rank
೩. ಕು. ಎಮ್.ಬಿ. ಪಾಟೀಲ. IX Rank

ಕೇಂದ್ರ ಸರಕಾರದವರು ಕೊಡಮಾಡಿದ ಹೊಸದಾದರಿಯ ಪ್ರಗತಿಪರ 'ವಿವಿಧೋದ್ದೇಶ ಶಾಲೆಗಳ (Multipurpose Schools) ಯೋಜನೆಯ ಲಾಭವನ್ನು ಪಡೆದಂಥ ಖಾಸಗಿ ಶಾಲೆಯು ಇಡೀ ಕಲಬುರ್ಗಿ ಜಿಲ್ಲೆಯಲ್ಲಿಯೇ ನಮ್ಮದೊಂದು ಆಗಿದೆ. National Council for Educational Research and Training. Delhi ಇವರು ೧೯೬೯-೧೯೭೦ರಲ್ಲಿ ಏರ್ಪಡಿಸಿದ ಭಾಷಾ ಬಾಂಧವ್ಯ ಶಿಬಿರಕ್ಕೆ Organiser ಆಗಿ ಹೋಗಿದ್ದ ಕೆಲವರಲ್ಲಿ ನಮ್ಮ ಶಾಲೆಯ ಪ್ರಿನ್ಸಿಪಾಲರಾದ ಶ್ರೀ ಎಮ್.ಪಿ. ಜಾಲಿ ಅವರೂ ಒಬ್ಬರಾಗಿದ್ದರು. ಮತ್ತು ಇದೇ ಸಂಸ್ಥೆಯವರು ೧೯೭೨-೧೯೭೩ರಲ್ಲಿ ಏರ್ಪಡಿಸಿದಂಥ ರಾಷ್ಟ್ರೀಯ ಭಾವೈಕ್ಯ ಶಿಬಿರಕ್ಕೆ ನಮ್ಮ ರಾಜ್ಯದಿಂದ ಹೋದ ಐದು ಮಂದಿ ಪ್ರಿನ್ಸಿಪಾಲರಲ್ಲಿ ನಮ್ಮ ಶಾಲೆಯ ಪ್ರಿನ್ಸಿಪಾಲರಾದ ಶ್ರೀ ಎಸ್.ಆರ್. ಬಿರಾದಾರ ಅವರು ಒಬ್ಬರಾಗಿದ್ದರು. ಇದೇ ಮೇರೆಗೆ ಇಂಥ ಮಹತ್ತರವಾದ ಶಿಬಿರಗಳಲ್ಲಿ ನಮ್ಮ ಸಂಸ್ಥೆಯು ಆಗಾಗ ಭಾಗವಹಿಸುತ್ತ ಬಂದಿದೆ.

೨೭ ವರ್ಷಗಳ ಅಭ್ಯುದಯ ಜೀವನವನ್ನು ನಡೆಸುತ್ತ ಬಂದ ಈ ಸಂಸ್ಥೆಯು ಈಗ ಬೆಳ್ಳಿ ಹಬ್ಬವನ್ನು ಆಚರಿಸುತ್ತಲಿದೆ. ಯಾವುದೇ ಒಂದು ಸಂಸ್ಥೆಯ ಗುಣ ಮಟ್ಟವನ್ನು ಕೇವಲ ಆ ಸಂಸ್ಥೆಯಲ್ಲಿಯ ವಿದ್ಯಾರ್ಥಿಗಳು ಸಾಧಿಸಿದ ಪರೀಕ್ಷೆಯ ಫಲಿತಾಂಶಗಳನ್ನಷ್ಟೇ ನೋಡಿ ಅಳೆಯದೆ, ಅವರು ಯಾವುದೇ ಕಾರ್ಯಕ್ಷೇತ್ರದಲ್ಲಿ ಇದ್ದರೂ ಸಹ ಆದರ್ಶ ಜೀವನದೊಂದಿಗೆ ಮುಖಂಡತ್ವವನ್ನು ವಹಿಸಿರುವದರ ಮೇಲಿಂದ ಅಳೆಯಬಹುದಾಗಿದೆ. ಈ ದೃಷ್ಟಿಯಿಂದ ನೋಡಿದಾಗ ನಮ್ಮ ಶಾಲೆಯಿಂದ ಅಭ್ಯಾಸ ಮುಗಿಸಿಕೊಂಡು ಹೋದ ಅನೇಕ ವಿದ್ಯಾರ್ಥಿಗಳು ಇಂದು, ಆದರ್ಶ ಶಿಕ್ಷಕರಾಗಿಯೂ ಇಂಜನಿಯರರಾಗಿಯೂ, ಡಾಕ್ಟರರಾಗಿಯೂ ವಕೀಲರಾಗಿಯೂ, ವರ್ತಕರಾಗಿಯೂ, ಮತ್ತೆ ಬೇಸಾಯಗಾರರಾಗಿಯೂ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಮುಖಂಡತ್ವವನ್ನು ಹೊಂದಿದ್ದಾರೆ.

ಈ ಬೆಳ್ಳಿ ಹಬ್ಬದ ಪ್ರಸಂಗದಲ್ಲಿ ನಮ್ಮ ಸಂಘವು ಹಲವು ಬಗೆಯ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕಾರ್ಯವನ್ನು ಹಮ್ಮಿಕೊಂಡಿದೆ. ಇಂಗ್ಲೀಷ್ ಮಾಧ್ಯಮದ ಶ್ರೀ ಶರಣ ಬಸವೇಶ್ವರ ರೆಸಿಡೆನ್ಸಿಯಲ್‌ಸ್ಕೂಲ್ ಮಾದರಿಯಲ್ಲಿ ಕನ್ನಡ ಮಾಧ್ಯಮದ ರೆಸಿಡೆನ್ಸಿಯಲ್ ಸ್ಕೂಲನ್ನು ತೆರೆಯುವ ಒಂದು ಘನ ಉದ್ದೇಶವನ್ನು ಇರಿಸಿಕೊಳ್ಳಲಾಗಿದೆ. ಈ ಕಾರ್ಯಕ್ಕೆ ಸುಮಾರು ೫ ಲಕ್ಷ ರೂಪಾಯಿ ಹಣದ ಅವಶ್ಯಕತೆ ಇದೆಯೆಂದು ಅಂದಾಜು ಮಾಡಲಾಗಿದೆ. ಈ ರೀತಿ ಈ ನಮ್ಮ ಸಂಸ್ಥೆಗೆ ನಾವು ಹಮ್ಮಿಕೊಂಡಿರುವ ಕಾರ್ಯಗಳನ್ನು ಈಡೇರಿಸಿಕೊಳ್ಳುವುದಕ್ಕಾಗಿ ಅಭಿಮಾನಿಗಳು,ವರ್ತಕರು, ಶ್ರೀಸಾಮಾನ್ಯರೆಲ್ಲರು ತನುಮನಧನದಿಂದ ಸಹಾಯ ಸಲ್ಲಿಸಿ ಉದಾರ ಸೇವೆ ಕೈಕೊಳ್ಳಬೇಕೆಂದು ಕೋರುತ್ತೇವೆ. ತಾವು ಸಲ್ಲಿಸುವ ಉದಾರ ಸೇವೆಯ ಫಲವಾಗಿ ಕನ್ನಡ ಮಾಧ್ಯಮದ ರೆಸಿಡೆನ್ಸಿಯಲ್ ಸ್ಕೂಲ್ ಮತ್ತು ಇತರ ಕಾರ್ಯಗಳು ಶೀಘ್ರದಲ್ಲಿ ಕಾರ್ಯರೂಪಕ್ಕೆ ಇಳಿಯುತ್ತದೆ.

**ಶ್ರೀ ನಾರಾಯಣರಾವ ಮುಕ್ಕಾ, ಕಾರ್ಯದರ್ಶಿ,**
**ಶ್ರೀ ಎಸ್. ಆರ್. ಬಿರಾದಾರ, ಪ್ರಿನ್ಸಿಪಾಲರು,**
**ಶ್ರೀ ಶರಣಬಸವೇಶ್ವರ ಪ್ರೌಢಶಾಲೆ, ಶರಣನಗರ, ಕಲಬುರಗಿ.**



॥ ಶ್ರೀ ಜಗದಂಬಾ ಪ್ರಸನ್ನ ॥

ದೀಪಾವಳಿಯು ನಮ್ಮ ಎಲ್ಲ ಗ್ರಾಹಕರಿಗೆ
ಶುಭದಾಯಕವಾಗಲೆಂದು ಕೋರುತ್ತೇವೆ



**HAPPY NEW YEAR**

ಅಂಗಡಿ ಫೋನ ನಂ. **2449** ಮನೆ : **4249**

# ಎಸ್. ಡಿ. ಮೆಹರವಾಡೆ ಆ್ಯಂಡ್ ಸನ್ಸ್

ಬೆಳಗಾಂವಗಲ್ಲಿ ಹುಬ್ಬಳ್ಳಿ

# S. D. MEHARWADE & SONS

**BELGUM GALLI HUBLI**

● ಭರಜರಿ ಬನಾರಸ ಪಿತಾಂಬರಗಳು ● ಧರ್ಮವರಂ ● ಕಾಂಜಿವರಂ
● ಬೆಂಗಳೂರ ● ಮೊಳಕಾಲ್ಮೂರ ಹಾಗೂ ನಿತ್ಯೋಪಯೋಗಿ ಫ್ಯಾನ್ಸಿ
ಹ್ಯಾಂಡಲೂಮ ಸೀರೆಗಳು ಭರಪೂರ ಸಂಗ್ರಹ

ಇಂದೇ ಸಂದರ್ಶಿಸಿರಿ

---

॥ ಶ್ರೀ ಜಗದಂಬಾ ಪ್ರಸನ್ನ ॥



ನಮ್ಮೆಲ್ಲ ಗ್ರಾಹಕರಿಗೆ ದೀಪಾವಳಿಯ ಹಾರ್ದಿಕ ಶುಭಾಶಯಗಳು !



# ಜಗನ್ನಾಥ ಎಸ್. ಮೆಹರವಾಡೆ ಮತ್ತು ಬ್ರದರ್ಸ

ತುಳಜಾ ಭವಾನಿ ಟೆಂಪಲ್ ರೋಡ, ದಾಜೀಬಾನಪೇಟ, ಹುಬ್ಬಳ್ಳಿ ಫೋನ ನಂ. 524

## ಮನಾಕರ್ಷಕ ಸೌಂದರ್ಯಭರಿತ ಸೀರೆಗಳು

● ಅರವಿಂದ ಹಾಗೂ ಖಟಾವ ಮಿಲ್‌ಗಳ ವುಲ್ ವಾಯಿಲ್, ● ಗೆಜ್ಜಿಶಿಲ್ಕ
● ವುಲಿವುಲಿ ಪ್ರಿಂಟೆಡ್ ● ಟೆರೀನ್ ● ಎಂಬ್ರಾಯಡರಿ ಹಾಗೂ
ಫ್ಯಾಶನೇಬಲ್ ಪ್ರಿಂಟೆಡ್ ಪತ್ತಲಗಳು
ಭರಪೂರ ಸಂಗ್ರಹದಲ್ಲಿ ಬಂದಿವೆ.

---

ಇಂದೇ ಸಂದರ್ಶಿಸಿರಿ

---

# ಭಾವ ಪರಿವಶತೆಯ ಕ್ಷಣಗಳು

ಓರಿಯಂಟಲ್ ಬುಕೆ
ಮತ್ತು ನಂದಿ ಡೈಮೆಂಡ್
ಸುಗಂಧದ ಕಡ್ಡಿಗಳು

**45 ನಿಮಿಷಗಳ ಕಾಲ ಉರಿಯುತ್ತವೆ. ಅದರ ಪರಿಮಳ ಕನಿಷ್ಠ 3 ಗಂಟೆ ಹೆಚ್ಚು ಕಾಲ ಉಳಿಯುತ್ತದೆ.**

ಮತ್ತೊಂದು ವೈಶಿಷ್ಟ್ಯವೆಂದರೆ, ಓರಿಯಂಟಲ್ ಬುಕೆ ಮತ್ತು ನಂದಿ ಡೈಮೆಂಡ್ ಸುಗಂಧ ಕಡ್ಡಿಗಳು ಉರಿದು ಹೋದ ಎಷ್ಟೋ ಹೊತ್ತಿನ ನಂತರವೂ ಕನಿಷ್ಠ 3 ಗಂಟೆಗಳ ಹೆಚ್ಚು ಕಾಲ ಅದರ ಸುವಾಸನೆ ಹರಡಿರುತ್ತದೆ. ಮುಂದಿನ ಸಲ ನೀವು ಸುಗಂಧದ ಊದು ಬತ್ತಿ ಕೊಳ್ಳುವಾಗ, ಇತರ ಅನೇಕ ಕಡ್ಡಿಗಳಿಗಿಂತ ಹೆಚ್ಚು ಬಾಳಿಕೆ ಬರುವ ಓರಿಯಂಟಲ್ ಬುಕೆ ಮತ್ತು ನಂದಿ ಡೈಮೆಂಡ್ ಸುಗಂಧದ ಊದುಬತ್ತಿಗಳನ್ನೇ ಕೊಂಡು ನೋಡಿ.




**ಬಿ.ವಿ. ಅಶ್ವತ್ಥಯ್ಯ ಅಂಡ್ ಬ್ರದರ್ಸ್ (ರಿ.)**
ನಂದಿ ಎಕ್ಸ್‌ಪೋರ್ಟ್ ಹೌಸ್ 183, ನಗರ್ತ ಪೇಟೆ
ಪೋಸ್ಟ್ ಬಾಕ್ಸ್ ನಂ. 6586 ಬೆಂಗಳೂರು 560 002

---



ದೀಪಾವಳಿಯು ನಮ್ಮೆಲ್ಲ
ಗ್ರಾಹಕರಿಗೂ ಹಿತೈಷಿಗಳಿಗೂ
ಶುಭಪ್ರದವಾಗಲಿ

# ಡಬೀರ ಆ್ಯಂಡ ಕಂಪನಿ

ಪೋಸ್ಟ ಬಾಕ್ಸ ನಂ. ೯೩,
ಆಝಾದ ರೋಡ, ಹುಬ್ಬಳ್ಳಿ-೫೮೦೦೨೦.
ಕಿರ್ಲೋಸ್ಕರ ಲೇಥ, ಮೋಟಾರು,
ಶೇಂಗಾ ಒಡೆಯುವ ಯಂತ್ರ, ಬಾಟ್ಲಿಬಾಯ್,
ಎಲ್ಲ ಯಂತ್ರೋಪಕರಣ, ಬೆವ್ಕೊ ಹಿಟ್ಟಿನ ಗಿರಣಿ
ಮತ್ತು ಎಲ್ಲ ತರದ ವರ್ಕಶಾಪ ಉಪಕರಣಗಳು
ಇತ್ಯಾದಿ.



---

**ದೀಪಾವಳಿ ಶುಭಾಶಯಗಳು**

## ದಕ್ಷಿಣ ಕನ್ನಡ ಜಿಲ್ಲಾ ಸಹಕಾರಿ ಕೃಷಿ ಅಭಿವೃದ್ಧಿ ಸಂಘ ನಿಯಮಿತ

**ಮಂಗಳೂರು-575003.**

ಕಳೆದ ೧೫ ವರ್ಷಗಳಲ್ಲಿ
೧೫ ಸಾವಿರಕ್ಕೂ ಮಿಕ್ಕಿ
ಪಂಪ್‌ಸೆಟ್‌ಗಳ ವಿತರಣೆ

ಕಳೆದ ಮೂರು ವರ್ಷಗಳಿಂದ
ಶೇಕಡಾ ೧೨ ಡಿವಿಡೆಂಡ್ ವಿತರಣೆ

ರೈತರಿಗೆ ಹಲವಾರು ಸೇವೆಗಳನ್ನು
ನೀಡುವ ಸಂಸ್ಥೆ

ನೀವೇ ಪ್ರಮಾಣಪಡಿಸಿರಿ!

# ಮಿಂಚಿನಂತಹ ಸುಪರ್ ರಿನ್ ಬಿಳುಪು- ಬೇರೆ ಯಾವುದೇ ಡಿಟರ್ಜಂಟ್ ಬಿಲ್ಲೆ ಅಥವಾ ಬಾರ್‌ಗಿಂತ ಅಧಿಕ ಬಿಳುಪು










**ಬಟ್ಟೆ ಒಗೆತದ ತುಲನಾತ್ಮಕ ಪರೀಕ್ಷೆ ಮಾಡಿರಿ.**

- ಸಮಾನವಾಗಿ ಕೊಳೆಯಾಗಿರುವ ಎರಡು ಬಟ್ಟೆಗಳನ್ನು ತೆಗೆದುಕೊಳ್ಳಿರಿ.
- ಅವುಗಳಲ್ಲೊಂದನ್ನು ಬೇರೆ ಯಾವುದೇ ಡಿಟರ್ಜಂಟ್ ಬಿಲ್ಲೆ ಅಥವಾ ಬಾರ್‌ನಿಂದ ಒಗೆಯಿರಿ.
- ಈಗ ಆ ಇನ್ನೊಂದು ಕೊಳೆಯಾದ ಬಟ್ಟೆಯನ್ನು ಸುಪರ್ ರಿನ್‌ನಿಂದ ಒಗೆಯಿರಿ.
- ಪರಿಣಾಮಗಳನ್ನು ಹೋಲಿಸಿರಿ.

ನಿಮ್ಮ ಬಟ್ಟೆಗಳನ್ನು ಸುಪರ್ ರಿನ್ ಎಷ್ಟು ಹೆಚ್ಚು ಬಿಳುಪುಗೊಳಿಸುತ್ತದೆ ಎಂದು ನೀವು ಪ್ರತ್ಯಕ್ಷ ಕಾಣುವಿರಿ. ಅಷ್ಟು ಬೆಳ್ಳಗೆ ಬೇರೆ ಯಾವುದೇ ಡಿಟರ್ಜಂಟ್ ಬಿಲ್ಲೆ ಅಥವಾ ಬಾರ್ ಒಗೆಯಲಾರದು. ಏಕೆಂದರೆ, ಸುಪರ್ ರಿನ್‌ನಲ್ಲಿ ಅಧಿಕ ಬಿಳುಪುಗೊಳಿಸುವ ಘಟಕವಿದೆ.

**ಬೇರೆ ಯಾವುದೇ ಡಿಟರ್ಜಂಟ್ ಬಿಲ್ಲೆ ಅಥವಾ ಬಾರ್‌ಗಿಂತ ಅಧಿಕ ಬಿಳುಪುಗೊಳಿಸುವ ಶಕ್ತಿ**

ಹಿಂದುಸ್ತಾನ್ ಲೀವರ್ ಅವರ ಉತ್ಪನ್ನ, ತಯಾರಿಕೆ. — ಲಿಂಟಾಸ್.RIN.23-203 KN

ದೀಪಾವಳಿಯು ಸರ್ವರಿಗೂ ಸುಖ ಮತ್ತು ಸಮೃದ್ಧಿದಾಯಕವಾಗಲಿ !



# ದಿ ರತ್ನಾಕರ ಬ್ಯಾಂಕ ಲಿಮಿಟೆಡ್

ಶಾಹುಪುರಿ. ಕೊಲ್ಹಾಪೂರ-416001.

" ರತ್ನಾಕರ " ಎಂದರೆ " ಸಮುದ್ರ "



| ಹೌದು! ನಮ್ಮ 'ರತ್ನಾಕರ' ಬ್ಯಾಂಕ ಕೂಡ ತನ್ನ ಹೆಸರನ್ನು ಸಾರ್ಥಕ ಗೊಳಿಸುತ್ತದೆ | ಅದು ತನ್ನ ವೃಷ್ಟಿಯಿಂದ ಜನತೆಗೆ ಆಪತ್ಕಾಲದ ಪರಿಹಾರ ಒದಗಿಸುತ್ತದೆ |
|---|---|

★ ನಮ್ಮ ವಿವಿಧ ಯೋಜನೆಗಳು ನಿರ್ಗತಿಕ ಜನರಿಗೆ ಲಾಭ ಪ್ರದ ವೃಷ್ಟಿಯನ್ನೇ ಕರೆಯುತ್ತದೆ ಮತ್ತು ಅವರ ಅಭಿವೃದ್ಧಿಗ ಕಾರಣವಾಗುತ್ತದೆ.

★ ನಾವು ನಮ್ಮ ೪೦ ಶಾಖೆಗಳ ಮುಖಾಂತರ (ಅದರಲ್ಲಿ ಅನೇಕ ಶಾಖೆಗಳು ಈ ಮೊದಲು ಯಾವದೇ ಬ್ಯಾಂಕಿಂಗ್ ಸೌಕರ್ಯವಿಲ್ಲದ ಕೇಂದ್ರಗಳಲ್ಲಿವೆ) ಸೇವೆ ಸಲ್ಲಿಸುತ್ತಿದ್ದೇವೆ.

★ ದಕ್ಷ ಸೇವೆಯೇ ನಮ್ಮ ಧ್ಯೇಯ ! ನಮ್ಮ ೪೦ ಶಾಖೆಗಳಲ್ಲಿ ಯಾವದೇ ಒಂದು ಶಾಖೆಗೆ ತಮಗೆ ಸುಸ್ವಾಗತ- ಅಲ್ಲಿ 'ಠೇವಣಿ' ಹಾಗೂ 'ಸಾಲಗಳ' ಬಗ್ಗೆ ಚರ್ಚಿಸಬಹುದು.

ಮಹಾರಾಷ್ಟ್ರ .... ೩೫ ಶಾಖೆಗಳು      ಕರ್ನಾಟಕ .... ೫ ಶಾಖೆಗಳು

ವ್ಹಿ. ವ್ಹಿ. ಬಾಪಟ
ಚೇರಮನ್ ಮತ್ತು ಚೀಫ್ ಎಗ್ಸಿಕ್ಯೂಟಿವ್ಹ ಆಫೀಸರ

## Our Hearty Greetings to All

PHONE-2432

Kleenone

SALES & SERVICE

**HUBLI ENTERPRISES**

ULLAGADDIMATH ROAD, HUBLI.

Prop: S. M. ULLAGADDIMATH



ತಂತಿ : " ಅನುಪಮಾ "

ಫೋನ : 22834 } 6 ಲೈನುಗಳು

ನಮ್ಮ ಪ್ರೋತ್ಸಾಹಕರೆಲ್ಲರಿಗೂ

ದೀಪಾವಳಿಯ ಶುಭಾಶಯಗಳು !

# ಹೊಟೆಲ್ ಅನುಪಮ



ಆಧುನಿಕ ಪದ್ಧತಿಯಲ್ಲಿ

ನಿರ್ಮಿತವಾದ

'ಅನುಪಮ' ಹೋಟೆಲ್

ಸ್ಟೇಶನ್ ರೋಡ್ ಬೆಳಗಾವಿ

ವಸತಿ, ಊಟ, ಉಪಹಾರ ಗೃಹ, ಶುಚಿ-ರುಚಿಕರ ಸಸ್ಯಾಹಾರ, ಆದರದ ಸೇವೆ

★★ ★★ ★★ ★★

ಅತ್ಯಂತ ರುಚಿಕರ ಮಾಂಸಾಹಾರಿ ಭಕ್ಷ್ಯ-ಭೋಜ್ಯಗಳಿಗಾಗಿ

ಈಗ ಪ್ರತ್ಯೇಕ ವಿಭಾಗ **ಗುಲ್‌ಮೋಹರ**

ನಿಮ್ಮ ನಿರಂತರ ಪ್ರೋತ್ಸಾಹವನ್ನು ಕೋರುತ್ತೇವೆ.

★ ಬೆಳಗಾವಿಯಲ್ಲಿ ಲಿಫ್ಟ ಸೌಕರ್ಯವುಳ್ಳ ಪ್ರಪ್ರಥಮ ಹೊಟೆಲ್



EARNING FOREIGN EXCHANGE FOR THE COUNTRY TO THE TUNE OF Rs. 5- CRORES PER ANNUM

## Our Humble Contribution to the Nation's Economy

★ Sandur Manganese Ore is well known for its quality and consistency throughout the world.

★ Export Sandur A, B and C grades of Manganese Ore.

★ Producers of quality 'LOW PHOS. PIG IRON.'

★ Now introducing quality LOW ALLUMINIUM FERRO SILICON.




11

# The Sandur Manganese & Iron Ores Limited

Registered Office :
"LOHADRI BHAVAN" Yeshwantnagar- 583124
Via SANDUR (KARNATAKA)

MINES :
DEOGIRI - 583112
Via Sandur.

FACTORY :
VYASANKERE-583201.
Near Hospet (KARNATAKA)

Phone : No. **33** (Sandur)

TELEX :
BANGALORE BG 427

GRAMS:
'SMIORE' Sandu

**SMIORE :** WELL KNOWN FOR QUALITY AND RELIABILITY

